

# ಇ.ಎಂ.ಎಸ್. ಸರ್ಕಾರದ ವಜಾವೂ

# ವಿಮೋಚನಾ ಸಮರವೆಂಬ ಪಿತೂರಿಯೂ







ಮೂಲ :
ಡಾ. ಪಿ.ಎಂ. ಸಲೀಂ

ಅನುವಾದ:
ಕೆ. ಪ್ರಭಾಕರನ್

# ಇ.ಎಂ.ಎಸ್. ಸರ್ಕಾರದ ವಜಾವೂ ವಿಮೋಚನಾ ಸಮರವೆಂಬ ಪಿತೂರಿಯೂ

ಡಾ. ಪಿ.ಎಂ. ಸಲಿಂ

ಅನುವಾದ
ಕೆ. ಪ್ರಭಾಕರನ್



**E.M.S. Sarkarada Vajaavoo Vimochana Samaravemba Pitooriyoo :** Kannada translation of 'Communist Bharanavum Vimochana Samaravum'

Written by Dr. P M Salim (Published by Kerala State Institute of Languages)

Translated by K Prabhakaran

Published by Kriya Madhyama Pvt. Ltd.



Edition : I
First Impression : 15.12.2022
ISBN : 978-93-91909-08-6
Pages : 400

Price : Rs.480/-

| | | |
|---|---|---|
| Paper | : | Demi 1/8, 70 GSM NS |
| Cover Page | : | Artboard 300GSM |
| Copies | : | 1000 |
| Cover Page Design | : | Ramu M |
| *Photos and Cartoons used in the book* | | From the original publication: *Communist Bharanavum Vimochana Samaravum* |

Author : K Prabhakaran
'Krishnammal',
Near Ganapati Temple, Nagarajapura Layout,
Ashokanagara, Shivamogge - KARNATAKA
PIN - 577205

Publisher and Distributor : Kriya Madhyama Pvt. Ltd.
37/A, 4th Cross, Mahalakshmi Layout
Bengaluru - 560086
Email : kriyamadhyama@gmail.com
kmpusthakapreethi@gmail.com
Phone : 9036082005, 080-23494488

Printers : Kriya
No.40/5, 2nd B Main, 16th Cross,
Sampangirama Nagara
Bengaluru - 560027

1957ರಲ್ಲಿ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷವು ಜಗತ್ತಿನಲ್ಲೇ ಮೊದಲ ಬಾರಿ ಬಹುಮತ ಪಡೆದು ಚುನಾಯಿತವಾದ ಸರಕಾರ ರಚಿಸಿ ಇತಿಹಾಸ ಸೃಷ್ಟಿಸಿತ್ತು. ಇ.ಎಂ. ಎಸ್. ನಂಬೂದಿರಿಪಾದ್ ನಾಯಕತ್ವದ ಈ ಸರಕಾರ ಭೂಸುಧಾರಣೆ, ಶಿಕ್ಷಣದ ಹಕ್ಕು ಮುಂತಾದ ಹಲವು ಜನಪರ ಕಾರ್ಯಕ್ರಮಗಳನ್ನು ಜಾರಿಗೊಳಿಸಿತು. ಆದರೆ ಇನ್ನಷ್ಟು ಜನಪರ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಮೊದಲೇ ಈ ಸರಕಾರವನ್ನು ಅತ್ಯಂತ ಪ್ರಜಾಪ್ರಭುತ್ವ-ವಿರೋಧಿ ರೀತಿಯಲ್ಲಿ ಉರುಳಿಸಲಾಯಿತು ಎಂಬುದು ಅಷ್ಟೇನೂ ಇತಿಹಾಸ ಪ್ರಸಿದ್ಧವಾಗಿಲ್ಲ. ಕೇರಳದ ಭೂಮಾಲಕರು, ಎಸ್ಟೇಟ್ ಮಾಲಕರು ಖಾಸಗಿ ಶಿಕ್ಷಣ ಸಂಸ್ಥೆಗಳು, ಕ್ರಿಶ್ಚಿಯನ್ ಮುಸ್ಲಿಂ ಧಾರ್ಮಿಕ ಸಂಘಟನೆಗಳು, ಪ್ರಬಲ ಜಾತೀಯ ಸಂಘಟನೆಗಳು, ಭಾರತದ ಪ್ರಮುಖ ಆಳುವ ಪಕ್ಷವಾಗಿದ್ದ ಕಾಂಗ್ರೆಸ್, ಇತರ ರಾಜಕೀಯ ಪಕ್ಷಗಳು, ಅಮೆರಿಕನ್ ಮತ್ತಿತರ ಸಾಮ್ರಾಜ್ಯಶಾಹಿ ದೇಶಗಳ ಸರಕಾರಗಳು – ಹೀಗೆ ಹಲವು ಶಕ್ತಿಗಳ ಕೂಟ ಇದನ್ನು ಮಾಡಿತು ಎಂಬುದೂ ಅಷ್ಟೇನೂ ಜನಜನಿತವಾಗಿಲ್ಲ.

ಇದಕ್ಕಾಗಿ ಈ ಶಕ್ತಿಗಳ ಕೂಟ ಸರಕಾರದ ವಿರುದ್ಧ ಹಿಂಸಾತ್ಮಕ ಚಳುವಳಿ ನಡೆಸಿತು. ರಾಜ್ಯದ, ದೇಶದ, ಅಂತರರಾಷ್ಟ್ರೀಯ ಪಟ್ಟಭದ್ರ ಹಿತಾಸಕ್ತಿಗಳ ರಕ್ಷಣೆಗೆ ಮತ್ತು ಸಾಮಾನ್ಯ ಜನತೆಯ ಹಿತಾಸಕ್ತಿಗಳ ಪರ ಸರಕಾರದ ಮಧ್ಯಪ್ರವೇಶವನ್ನು ತಡೆಯುವ ಈ ಚಳುವಳಿಗೆ 'ವಿಮೋಚನ ಸಮರಂ' ಎಂದು ಕರೆದದ್ದಕ್ಕಿಂತ ದೊಡ್ಡ ವಿಡಂಬನೆ ಬೇರಿಲ್ಲ. ಆದರೂ ಕೊನೆಗೂ ಈ 'ಸಮರಂ'ನಿಂದ ಸಾಧಿಸಲಾಗದ್ದನ್ನು 1959ರಲ್ಲಿ ನೆಹರೂ ಸರಕಾರದ ನಾಯಕತ್ವದ ಪ್ರಭುತ್ವ ತನ್ನ ಅಧಿಕಾರದ ದುರ್ಬಳಕೆ ಮಾಡಿ ವಜಾ ಮಾಡುವ ಮೂಲಕ ಸಾಧಿಸಿತು. ಇದು ರಾಜ್ಯಗಳ ಸ್ವಯಮಾಡಳಿತದ, ಫೆಡೆರಲ್ ವ್ಯವಸ್ಥೆಯ ಮೇಲಿನ ಮೊದಲ ದಾಳಿಯೂ ಆಗಿತ್ತು. ಇದು ಈಗಲೂ ಇನ್ನೂ ಗಂಭೀರ ಸ್ವರೂಪದಲ್ಲಿ ಮುಂದುವರೆಯುತ್ತಿರುವ ಇಂತಹ ದಾಳಿಗಳ ಆರಂಭವೂ ಆಗಿತ್ತು.

ಕೇರಳದ 'ವಿಮೋಚನ ಸಮರಂ'ನ ಇತಿಹಾಸದ ಕುರಿತು ಮಲಯಾಳಂ ಬಿಟ್ಟರೆ ಬೇರೆ ಭಾಷೆಗಳಲ್ಲಿ (ಬಹುಶಃ ಇಂಗ್ಲೀಷಿನಲ್ಲೂ) ವಿವರವಾದ ದಾಖಲೆಗಳು ಇಲ್ಲ. ಮಲಯಾಳಂನಲ್ಲೂ ಹಲವು ಪುಸ್ತಕಗಳು, ಲೇಖನ, ದಾಖಲೆಗಳಲ್ಲಿ ಈ ಇತಿಹಾಸ ಬಹುಶಃ ಚದುರಿ ಹೋಗಿದೆ. ಡಾ.ಪಿ.ಎಂ. ಸಲೀಂ ಅವರ ಪ್ರಸ್ತುತ ಕೃತಿ ಬಹುಶಃ ಮಲಯಾಳಂನಲ್ಲೂ ಈ ಕುರಿತು ಪ್ರಕಟವಾದ ಒಂದು ಸಮಗ್ರ ಕೃತಿ. ಈ ಕೃತಿ ಹಿಂದೆ ಲಭ್ಯವಿದ್ದ ಎಲ್ಲವನ್ನೂ ಕ್ರೋಢೀಕರಿಸಿ, ಇನ್ನಷ್ಟು ಆಕರಗಳಿಂದ ಮಾಹಿತಿ ಸಂಗ್ರಹಿಸಿ ಕೇರಳದ 'ವಿಮೋಚನ ಸಮರಂ' ಕುರಿತು ಒಂದು ಸಮಗ್ರ ಕಥನ ಕಟ್ಟಿ ಕೊಡುತ್ತದೆ. ಇದು ಪಿ.ಎಚ್.ಡಿ ಪ್ರಬಂಧವಾದ್ದರಿಂದ ಇದನ್ನು ಅತ್ಯಂತ ವಸ್ತುನಿಷ್ಠವಾಗಿ ಮಾಡಲಾಗಿದೆ. ಹಲವು ಪುಟಗಳಷ್ಟು ಇರುವ ಉಲ್ಲೇಖನ ಗ್ರಂಥ ಮತ್ತು ಪತ್ರಿಕೆಗಳ ಪಟ್ಟಿಯೇ ಇದನ್ನು

ರುಜುವಾತುಗೊಳಿಸುತ್ತದೆ. ಮಲಯಾಳಂನಲ್ಲಿ ಈ ಪುಸ್ತಕದ ತಲೆಬರಹ 'ಕಮ್ಯುನಿಸ್ಟ್ ಭರಣವುಂ, ವಿಮೋಚನ ಸಮರವುಂ'.

ಇದನ್ನು ಮಲಯಾಳಂನಲ್ಲಿ ಅಲ್ಲಿನ 'ಕೇರಳ ರಾಜ್ಯ ಭಾಷಾ ಸಂಸ್ಥೆ' ಪ್ರಕಟಿಸಿದೆ. ಇಂತಹ ಕೃತಿಯನ್ನು ರಚಿಸಿದ ಮತ್ತು ಕನ್ನಡಕ್ಕೆ ಅನುವಾದ ಮಾಡಲು ಅನುಮತಿ ಮಾತ್ರವಲ್ಲ ಎಲ್ಲ ಬಗೆಯ ಪ್ರೋತ್ಸಾಹವಿತ್ತ ಡಾ.ಪಿ.ಎಂ. ಸಲೀಂ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಇಂತಹ ದೊಡ್ಡ ವಿದ್ವತ್ಪೂರ್ಣ ಕೃತಿಯನ್ನು ಕನ್ನಡಕ್ಕೆ ಅನುವಾದಿಸುವುದು ಸುಲಭದ ಕೆಲಸವಲ್ಲ. ಈ ಕೆಲಸವನ್ನು ಸಮರ್ಥವಾಗಿಯೂ ಅತ್ಯಂತ ಶ್ರದ್ಧೆಯಿಂದಲೂ ಮಾಡಿದ ಕೆ. ಪ್ರಭಾಕರನ್ ಅವರಿಗೂ ನಾವು ಆಭಾರಿಯಾಗಿದ್ದೇವೆ. ಕನ್ನಡದಲ್ಲಿ ಈ ಪುಸ್ತಕವನ್ನು 'ಇ.ಎಂ.ಎಸ್ ಸರಕಾರದ ವಜಾವೂ, ವಿಮೋಚನಾ ಸಮರವೆಂಬ ಪಿತೂರಿಯೂ' ಎಂದು ಹೆಸರಿಸಿದ್ದೇವೆ.

1959ರಲ್ಲಿ ಇ.ಎಂ.ಎಸ್ ಸರಕಾರದ ವಜಾಕ್ಕೆ ಕಾರಣವಾದ ವಿಮೋಚನಾ ಸಮರವೆಂಬ ಪಿತೂರಿಯ ಇತಿಹಾಸವನ್ನು ಕನ್ನಡದ ಓದುಗರು ಓದಿ ಅರ್ಥ ಮಾಡಿಕೊಳ್ಳಲು ಕೇರಳ, ಭಾರತ ಮತ್ತು ಅಂತರರಾಷ್ಟ್ರೀಯ ಐತಿಹಾಸಿಕ ಹಿನ್ನೆಲೆಯನ್ನು ತಿಳಿಯುವುದು ಅಗತ್ಯ. ಹಿರಿಯ ಪ್ರಗತಿಪರ ಲೇಖಕ, ಚಿಂತಕ ಜಿ.ಎನ್. ನಾಗರಾಜ್ ತಮ್ಮ ಆಸಕ್ತಿಕಾರಕವಾದ ಶ್ರೀಮಂತವಾದ ದೀರ್ಘ ಮುನ್ನುಡಿಯ ಮೂಲಕ ಇದನ್ನು ಒದಗಿಸಿದ್ದಾರೆ. ಕಮ್ಯುನಿಸ್ಟ್ ಚಳುವಳಿ ಶುರುವಾದಾಗಿನಿಂದಲೂ ಅದರ ಜಾಗತಿಕ ಪ್ರಸಾರ, ಸಮಾಜದಲ್ಲಿ ಅದರ ವಿಸ್ತಾರವಾಗುತ್ತಿದ್ದ ಪಾತ್ರವನ್ನು ಹೊಸಕಿ ಹಾಕಲು ಚರ್ಚ್, ಕಾರ್ಪೊರೆಟ್ ಬಂಡವಾಳಶಾಹಿ ಮತ್ತಿತರ ಸಾಮಾಜಿಕ ಪ್ರತಿಗಾಮಿ ಶಕ್ತಿಗಳ 'ಪವಿತ್ರ ಕೂಟ' ಬೇರೆ ಬೇರೆ ದೇಶ-ಕಾಲಗಳಲ್ಲಿ ರೂಪ ತಾಳುತ್ತಾ, ಕೇರಳದ ಕಮ್ಯುನಿಸ್ಟ್ ಸರಕಾರವನ್ನು ಉರುಳಿಸುವುದು ಮಾತ್ರವಲ್ಲ ಇಂದಿಗೂ ಹೇಗೆ ಸಕ್ರಿಯವಾಗಿದೆ ಎಂಬುದನ್ನು ತೋರಿಸುತ್ತಾರೆ. ಕೇರಳದ ಕಮ್ಯುನಿಸ್ಟ್ ಸರಕಾರ ಉರುಳಿಸಿದಂತೆ, ಅದೇ ಸಮಯದ ಸುತ್ತಮುತ್ತ ಕಮ್ಯುನಿಸ್ಟ್ ಶಕ್ತಿಗಳು ಬಲವಾಗಿದ್ದ ಜಗತ್ತಿನ ಹಲವು ಕಡೆ (ಇಟಲಿ, ಇಂಡೋನೇಶ್ಯಾ, ವಿಯೇಟ್ನಾಂ, ಕೊರಿಯಾ, ಕಾಂಗೋ ಇತ್ಯಾದಿ) ಇಂತಹುದೇ ಪಿತೂರಿಗಳ ಕಥನವನ್ನು ಮಂಡಿಸುತ್ತಾ, ಜಿ.ಎನ್.ನಾಗರಾಜ್ ಕೇರಳದ ವಿಮೋಚನಾ ಸಮರಂ ನ ಜಾಗತಿಕ ಸಂದರ್ಭವನ್ನು ಮನದಟ್ಟು ಮಾಡುತ್ತಾರೆ. ಇ.ಎಂ.ಎಸ್ ಸರಕಾರದ ವಜಾ ನಂತರ ಕೇರಳ, ಪ.ಬಂಗಾಳ, ತ್ರಿಪುರಾ ಮುಂತಾದ ಕಡೆಯೂ ಕಮ್ಯುನಿಸ್ಟರನ್ನು ಮಟ್ಟ ಹಾಕಲು 'ಪವಿತ್ರ ಕೂಟ' ನಡೆಸಿದ ಪಿತೂರಿಗಳು, ಅದನ್ನು ಕಮ್ಯುನಿಸ್ಟ್ ಶಕ್ತಿಗಳು ಎದುರಿಸಿದ ಬಗೆಯನ್ನು ವಿವರಿಸಿ ಪುಸ್ತಕವನ್ನು ಇನ್ನಷ್ಟು ಸಮಗ್ರ ಹಾಗೂ ಪ್ರಸ್ತುತಗೊಳಿಸುತ್ತಾರೆ. ಇಂತಹ ಬೆಲೆಬಾಳುವ ಮುನ್ನುಡಿ ಬರೆದ ಜಿ.ಎನ್. ನಾಗರಾಜ್ ಅವರಿಗೂ ನಾವು ಆಭಾರಿಯಾಗಿದ್ದೇವೆ.

ಎಂದಿನಂತೆ ಪುಸ್ತಕ ಮುಖಪುಟ ವಿನ್ಯಾಸ ಮಾಡಿದ ಎಂ.ರಾಮು ಮತ್ತು ಪುಸ್ತಕದ ಅಂದವಾದ ಮುದ್ರಣ ಮಾಡಿದ ಕ್ರಿಯಾದ ಚಂದ್ರು ಮತ್ತು ಸಂಗಾತಿಗಳನ್ನು ಮರೆಯುವುದಾದರೂ ಹೇಗೆ?

# ಮುನ್ನುಡಿ

## ಭಯ, ಭಯ, ಭಯ.. .. .. ಕಮ್ಯುನಿಸಮ್ ಎಂದರೇ ಭಯ. ಕಮ್ಯುನಿಸ್ಟ್ ಸರ್ಕಾರವೆಂದರೆ ಭಯ...!!!

"ಭಾರತದ ಒಂದು ರಾಜ್ಯ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಚುನಾವಣೆಯ ಮೂಲಕ ಅಧಿಕಾರ ಪಡೆದಿದೆಯಂತೆ"

ಇದು 1957ರ ಏಪ್ರಿಲ್ 5 ರಂದು ಕೇರಳದಲ್ಲಿ ಇಎಂಎಸ್ ನಂಬೂದ್ರಿಪಾದ್ ನಾಯಕತ್ವದಲ್ಲಿ ಕಮ್ಯುನಿಸ್ಟ್ ಪಕ್ಷ ಅಧಿಕಾರ ವಹಿಸಿಕೊಂಡ ನಂತರದಲ್ಲಿ ವಿಶ್ವಾದ್ಯಂತ ದೊಡ್ಡ ಸುದ್ದಿ. ಒಂದು ಕಡೆ ಮಹದಾಶ್ಚರ್ಯದ ಜೊತೆಗೆ ಸಂತೋಷ. ಮತ್ತೊಂದು ಕಡೆ ಆಶ್ಚರ್ಯದ ಜೊತೆಗೆ ಆಘಾತ, ಭಯ. ಆದರೆ ಎಲ್ಲ ದೇಶಗಳಲ್ಲಿ ಚರ್ಚೆ – ಈ ಕಡೆ ಸಮಾಜವಾದಿ ರಾಷ್ಟ್ರಗಳಲ್ಲಿ ಮತ್ತು ವಿಶ್ವಾದ್ಯಂತದ ಕಮ್ಯುನಿಸ್ಟ್ ಪಕ್ಷಗಳಲ್ಲಿ, ವಿಶ್ವದೆಲ್ಲೆಡೆಯ ಪ್ರಜ್ಞಾವಂತರ ನಡುವೆ ಆಶ್ಚರ್ಯ, ಸಂತೋಷದ ಜೊತೆಗೆ ಚರ್ಚೆ. ಆ ಕಡೆ ಅಮೇರಿಕ, ಯುರೋಪುಗಳಲ್ಲಿ ಪ್ರಜಾಪ್ರಭುತ್ವದ ಹೆಸರಿನಡಿ ಆಳುವ ಕಾರ್ಪೊರೇಟ್ ಪ್ರಭುತ್ವಗಳಲ್ಲಿ, ದಶಕ ಕಾಲ ತುಂಬಿದ್ದ ಸ್ವತಂತ್ರ ಭಾರತದ ಆಳುವವರ ನಡುವೆ ಭಯ, ಆತಂಕಗಳಿಂದ ಕೂಡಿದ ಚರ್ಚೆ. ಆಗತಾನೇ ಸ್ವಾತಂತ್ರ್ಯ ಪಡೆದುಕೊಂಡಿದ್ದ, ಪಡೆದುಕೊಳ್ಳುವ ದಾರಿಯಲ್ಲಿದ್ದ ಹಿಂದುಳಿದ ದೇಶಗಳಲ್ಲಿ ಕುತೂಹಲದ ಚರ್ಚೆ. ಎಲ್ಲ ಕಡೆ ಚರ್ಚೆಯೋ ಚರ್ಚೆ– ರಾಜಕೀಯ ಚರ್ಚೆ, ಸೈದ್ಧಾಂತಿಕ ಚರ್ಚೆ, ವಿಶ್ವ ವಿದ್ಯಾಲಯಗಳ ಮೊಗಸಾಲೆಗಳಲ್ಲಿ, ಅಧಿಕಾರಸ್ಥರ ಕೂಟಗಳಲ್ಲಿ, ಪ್ರಜ್ಞಾವಂತರ ಸಭೆಗಳಲ್ಲಿ ಎಲ್ಲ ಕಡೆ ಚರ್ಚೆ, ಸಂವಾದಗಳು.

ಅಲ್ಲಿಯವರೆಗೆ ಜಗತ್ತಿನಲ್ಲಿ ಎಲ್ಲಿಯೂ ಕಮ್ಯುನಿಸ್ಟ್ ಪಕ್ಷವೊಂದು ಚುನಾವಣೆಯ ಮೂಲಕ ಅಧಿಕಾರಕ್ಕೆ ಬಂದಿರಲಿಲ್ಲ. ಕೇರಳದಲ್ಲಿ ಅದು ಹೇಗೆ ಸಾಧ್ಯವಾಯಿತು ಎಂಬ ಚರ್ಚೆ.

ಅಮೇರಿಕ, ಯುರೋಪುಗಳ ಕಾರ್ಪೊರೇಟ್ ಪ್ರಭುಗಳಿಗೆ ಆಶ್ಚರ್ಯವಾಗುವುದು ಸಹಜ. ಆದರೆ ಆಘಾತ, ಭಯ, ಆತಂಕಗಳು ಉಂಟಾದವು. ಅಷ್ಟೇ ಅಲ್ಲ ಕ್ಯಾಥೋಲಿಕ್ ಚರ್ಚ್‌ನ ಪೋಪರೂ ಸೇರಿದಂತೆ ಕೇರಳದ ಧರ್ಮಾಧಿಕಾರಿಗಳಿಗೆ, ಭಾರತದಲ್ಲಿ ಅಂದು ಆಳುತ್ತಿದ್ದ ಕಾಂಗ್ರೆಸ್‌ನ ನಾಯಕರಿಗೆ, ಕೇರಳದ ಪ್ಲಾಂಟೇಷನ್ ಒಡೆಯರಿಗೆ, ದೊಡ್ಡ ದೊಡ್ಡ ಭೂಮಾಲಿಕರಿಗೆ, ಖಾಸಗಿ ಶಿಕ್ಷಣ ಸಂಸ್ಥೆಗಳ ಒಡೆಯರಿಗೆ ಇವರಿಗೆಲ್ಲ ಭಯ ಆತಂಕಗಳು ಉಂಟಾದವು. ಇದೆಲ್ಲದರ ಫಲವಾಗಿ ಪ್ರಜಾಪ್ರಭುತ್ವ ತತ್ವಗಳಿಗೆ ಅತ್ಯಂತ ಬದ್ಧರೆಂದು ಸಾರಿಕೊಳ್ಳುತ್ತಿದ್ದ ಪ್ರಧಾನಿ ನೆಹರೂ ಅತ್ಯಂತ ಪ್ರಜಾಪ್ರಭುತ್ವ ಬದ್ಧವಾಗಿ

ಆಯ್ಕೆಯಾದ ಭಾರತದ ಮೊದಲ ಕಾಂಗ್ರೆಸ್ಸೇತರ ಸರ್ಕಾರವನ್ನು ವಜಾ ಮಾಡಿದರು. ಈ ಇಡೀ ಪ್ರಕ್ರಿಯೆಯ ಚಿತ್ರಣವನ್ನು ಈ ಪುಸ್ತಕದ ಲೇಖಕರೂ ಸಂಶೋಧಕರೂ ಆಗಿರುವ ಡಾ.ಪಿ.ಎಂ. ಸಲೀಂ ಸಂಶೋಧಕರು ಈ ಪುಸ್ತಕದಲ್ಲಿ ವಿವರವಾಗಿ ಮಂಡಿಸಿದ್ದಾರೆ.

**ವಿಶ್ವದ ಹಾಗೂ ಭಾರತದ ಹಲವು ಶಕ್ತಿಗಳಿಗೆ ಇಂತಹ ಭಯ ಏತಕ್ಕೆ?**

ಈ ಭಯ ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರ ರಚಿಸಿದ ಅಂದಿನದಲ್ಲ. ಇಂದಿನದೂ ಅಲ್ಲ ಅದಕ್ಕೆ ಒಂದು ದೊಡ್ಡ ಇತಿಹಾಸವೇ ಇದೆ.

ವಿಶ್ವದೆಲ್ಲ ಆಳುವವರಿಗೆ, ಧಾರ್ಮಿಕ ಪ್ರಭುಗಳಿಗೆ ಆಯಾ ದೇಶಗಳಲ್ಲಿ, ಪ್ರದೇಶಗಳಲ್ಲಿ ಕಮ್ಯುನಿಸ್ಟ್ ಪಕ್ಷ ಆರಂಭವಾಗುವ ಮೊದಲ ಸೂಚನೆ ಕಂಡ ಕೂಡಲೆ ಭಯ ಕಾಡಿದೆ, ಕಾಡುತ್ತಲೇ ಇದೆ ಎಂಬುದನ್ನು ವಿಶ್ವದ ರಾಜಕೀಯ ಇತಿಹಾಸ ದಾಖಲಿಸಿದೆ. ಕಮ್ಯುನಿಸ್ಟ್ ಪ್ರಣಾಳಿಕೆ ಪ್ರಕಟವಾಗುವುದಕ್ಕೆ ಎರಡು ವರ್ಷ ಮೊದಲೇ 1846ರಲ್ಲಿ ಪೋಪ್ ಪಯಸ್ IX ಕಮ್ಯುನಿಸ್ಟ್ ಚಿಂತನೆಯ ಬಗ್ಗೆ ಕೆಂಡ ಕಾರಿರುವುದನ್ನು ದಾಖಲಿಸಲಾಗಿದೆ.

ಯುರೋಪಿನಲ್ಲೂ, ವಿಶ್ವದ ಹಲವು ದೇಶಗಳಲ್ಲಿ 19ನೆಯ ಶತಮಾನದ ಕೊನೆಯ ಭಾಗದಿಂದ ಇಲ್ಲಿಯವರೆಗೆ ಕಮ್ಯುನಿಸ್ಟರನ್ನು ಗುರಿ ಮಾಡಿ ನಡೆದ ಕಿರುಕುಳ, ಗಡಿಪಾರು, ಹಿಂಸೆ, ಬಂಧನ, ಕೊಲೆಗಳು ಹಲವು ಹತ್ತು ಲಕ್ಷ ಸಂಖ್ಯೆಯನ್ನು ದಾಟುತ್ತವೆ.

ಈ ಘೋರ ಸಂಗತಿಗಳು ಒಂದು ಮುಖ್ಯ ವಿಷಯವನ್ನು ಸ್ಪಷ್ಟಪಡಿಸುತ್ತವೆ.

ಅಂದು ಚರ್ಚ್‌ಗೆ, ಪ್ರಭುತ್ವಗಳಿಗೆ ವಿಜ್ಞಾನಿಗಳನ್ನು ಕಂಡರೆ ಬಹಳ ಭಯ ಉಂಟಾಗಿತ್ತು. ಗೆಲಿಲಿಯೋ ಸೇರಿದಂತೆ ಹಲವು ವಿಜ್ಞಾನಿಗಳನ್ನು ಶಿಕ್ಷಿಸಿದರು. ಕೆಲವರನ್ನು ಬಹಿರಂಗವಾಗಿ ಸುಟ್ಟರು. ಇಂದು ಮಾರ್ಕ್ಸ್‌ವಾದ ನೀಡಿದ ಸಮಾಜದ ರಚನೆಯ ವಿಜ್ಞಾನದ ಅರಿವು ಪ್ರಜಾಪ್ರಭುತ್ವದ ಮುಸುಕಿನ ಕಾರ್ಪೊರೇಟ್ ಪ್ರಭುತ್ವಗಳಿಗೆ ನಡುಕ ಹುಟ್ಟಿಸುತ್ತಿದೆ. ವಿಶ್ವದ ಮೇಲಿನ ತಮ್ಮ ಹಿಡಿತವನ್ನು ಕಿತ್ತೆಸೆಯುತ್ತದೆ ಎಂಬ ಭಯ ಅವರನ್ನು ಅನುದಿನವೂ ಕಾಡುತ್ತಿದೆ. ಚರ್ಚ್‌ಗೆ ದೊಡ್ಡ ಸವಾಲಾಗಿದೆ.

ಕ್ರಾಂತಿಕಾರಿ ಯುದ್ಧದಿಂದ ಮಾತ್ರ ಅಧಿಕಾರವನ್ನು ಹಿಡಿದವರು ಪ್ರಜಾಪ್ರಭುತ್ವವೆಂಬ ಹೊಸ ಮಾರ್ಗವನ್ನೂ ಪರಿಣಾಮಕಾರಿಯಾಗಿ ಬಳಸುವುದನ್ನು ಸಾಧಿಸಿಬಿಟ್ಟರೆ ಎಂಬ ಭಯ ವಿಶ್ವದ ಕಾರ್ಪೊರೇಟ್ ಪ್ರಭುತ್ವಗಳು ಮತ್ತು ಬಲಾಢ್ಯ ಕಂಪನಿಗಳ ಮಾಲೀಕರನ್ನು ಕಾಡತೊಡಗಿದೆ. ಭಾರತದಲ್ಲಿ ಅಂದು ಅಧಿಕಾರದ ಗುತ್ತಿಗೆ ಹಿಡಿದಿದ್ದ ಕಾಂಗ್ರೆಸ್ ನಾಯಕರಲ್ಲಿನ ಆತಂಕಕ್ಕೆ ಸಕಾರಣವಾಗಿತ್ತು. ಸ್ವಾತಂತ್ರ್ಯ ಚಳುವಳಿಯ ಏಕೈಕ ವಾರಸುದಾರರೆಂಬಂತೆ, ತಮಗಾರೂ ಎದುರಾಳಿಗಳೇ ಇಲ್ಲವೆಂಬಂತೆ ಬೀಗುತ್ತಿದ್ದ ಕಾಂಗ್ರೆಸ್‌ಗೆ 1952ರ ಮೊದಲ ಚುನಾವಣೆಯ ಫಲಿತಾಂಶವೇ ಅವರಲ್ಲಿ ಆತಂಕ

ಮೂಡಿಸಿತ್ತು. ಸ್ವಾತಂತ್ರ್ಯದ ಹುಮ್ಮಸ್ಸಿನ ನಡುವೆಯೂ ಒಟ್ಟು ಮತದಾನದಲ್ಲಿ ಕೇವಲ ಶೇ.45ರಷ್ಟು ಮತಗಳು ಮಾತ್ರ ದೊರೆತಿದ್ದವು. ಮೂರು ರಾಜ್ಯಗಳಲ್ಲಿ ಬಹುಮತ ದೊರೆಯಲಿಲ್ಲ. ಅವುಗಳಲ್ಲಿ ಮದ್ರಾಸ್ ಪ್ರಾಂತ್ಯ ಮತ್ತು ತಿರುವಾಂಕೂರು ಕೊಚಿನ್ ಎಂಬ ಎರಡು ರಾಜ್ಯಗಳಲ್ಲಿ (ಭಾಷಾವಾರು ಪ್ರಾಂತ್ಯ ರಚನೆಯ ಪೂರ್ವದ ರಾಜ್ಯಗಳು) ಕಮ್ಯುನಿಸ್ಟ್ ಪಕ್ಷ ಅಧಿಕಾರ ಗಳಿಸುವುದಕ್ಕೆ ಸಮೀಪ ಸ್ಥಾನದಲ್ಲಿತ್ತು.

ಕಾಂಗ್ರೆಸ್ ಪಕ್ಷ ರಾಜ್ಯಪಾಲರನ್ನು ದುರುಪಯೋಗ ಮಾಡಿ ಕಮ್ಯುನಿಸ್ಟ್ ಪಕ್ಷಕ್ಕೆ ಅಧಿಕಾರವನ್ನು ತಪ್ಪಿಸಿತು. ನಂತರ ಪಕ್ಷಾಂತರವೆಂಬ ನಿರ್ಲಜ್ಜ ಅಕ್ರಮಕ್ಕೆ ನಾಂದಿ ಹಾಡಿತು. ಇದರಲ್ಲಿಯೂ ಕಾಂಗ್ರೆಸ್ ಗೆ ಕಮ್ಯುನಿಸ್ಟ್ ಪಕ್ಷದ ಬಗೆಗಿರುವ ಭಯ ಎದ್ದು ಕಾಣುವಂತಾಯಿತು. ಕಾಂಗ್ರೆಸ್ ಬಹುಮತ ಗಳಿಸದ ಮೂರನೇ ರಾಜ್ಯ ಪೆಪ್ಸುವಿನಲ್ಲಿ ಅಕಾಲಿ ದಳ ಅಧಿಕಾರ ಪಡೆಯಲರ್ಹವಾಗಿತ್ತು. ಅದಕ್ಕೆ ಸರ್ಕಾರ ಮಾಡಲು ಅವಕಾಶ ಮಾಡಿಕೊಡಲಾಯಿತು. ಆದರೆ ಮದ್ರಾಸ್‌ನಲ್ಲಿ ಕಮ್ಯುನಿಸ್ಟ್ ಪಕ್ಷವೂ ಮುಖ್ಯವಾಗಿದ್ದ ಮೈತ್ರಿಕೂಟ ಅಧಿಕಾರಕ್ಕೆ ನ್ಯಾಯಬದ್ಧವಾದ ಹಕ್ಕುದಾರನಾಗಿತ್ತು. ತಿರುವಾಂಕೂರು-ಕೊಚಿನ್ ರಾಜ್ಯದಲ್ಲಿ ಸರ್ಕಾರವನ್ನು ರಚಿಸಲು ಕಮ್ಯುನಿಸ್ಟ್ ಪಕ್ಷ ನೇತೃತ್ವದ ಮೈತ್ರಿಕೂಟಕ್ಕೇ ಅವಕಾಶ ನೀಡಬೇಕಾಗಿತ್ತು. ಅದನ್ನು ವಂಚಿಸಲಾಯಿತು. ಆಗಲೇ ಕಮ್ಯುನಿಸ್ಟ್ ಪಕ್ಷದ ಬಗ್ಗೆ ಕಾಂಗ್ರೆಸ್ ಮತ್ತಿತರ ಆಳುವ ವರ್ಗದ ಪಕ್ಷಗಳ ಆತಂಕ ಮತ್ತಷ್ಟು ಹೆಚ್ಚಾಯಿತು.

ಕಮ್ಯುನಿಸ್ಟ್ ಪಕ್ಷಗಳ ಜನ ಬೆಂಬಲವನ್ನು ಕುಗ್ಗಿಸಲು 1955ರಲ್ಲಿ ಆವಡಿ ಕಾಂಗ್ರೆಸ್ ಮಹಾಧಿವೇಶನದಲ್ಲಿ ಸಮಾಜವಾದಿ ರೂಪದ ಸಮಾಜದ ಘೋಷಣೆ, ಭೂ ಸುಧಾರಣೆ ಮೊದಲಾದ ಎಡ ಪಂಥೀಯ ಕಾರ್ಯಕ್ರಮವನ್ನು ಎರಡನೇ ಚುನಾವಣೆಗೆ ಮೊದಲು ಮುಂದಿಟ್ಟರೂ ಕೂಡಾ ಕೇರಳದಲ್ಲಿ ಕಾಂಗ್ರೆಸ್‌ನ ಪ್ರಥಮ ನಿರ್ಣಾಯಕ ಸೋಲನ್ನು ತಪ್ಪಿಸಿಕೊಳ್ಳುವುದಾಗಲಿಲ್ಲ. ಕಮ್ಯುನಿಸ್ಟ್ ಪಕ್ಷ ಆಡಳಿತದ ಚುಕ್ಕಾಣಿ ಹಿಡಿಯುವುದನ್ನು ತಪ್ಪಿಸಲಾಗಲಿಲ್ಲ.

ಈ ಹಿನ್ನೆಲೆಯಲ್ಲಿ ಭಾಷಾವಾರು ರಾಜ್ಯ ರಚನೆಯ ನಂತರ ದೇಶದ ಮೊದಲ ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ಕಾಂಗ್ರೆಸ್‌ನಲ್ಲಿ ಮೂಡಿದ ಭಯ, ಆತಂಕಗಳನ್ನು ಗಮನಿಸಬೇಕು.

ಕಾಂಗ್ರೆಸ್‌ನ ಈ ಭಯ ಜೊತೆಗೆ ಕ್ಯಾಥೊಲಿಕ್ ಧರ್ಮಾಧಿಕಾರಿಗಳಿಗೆ ಕಮ್ಯುನಿಸಮ್ ಬಗ್ಗೆ ಇರುವ ಭಯ ಹುತ್ತು ದ್ವೇಷ ಜೊತೆಗೆ ಅನೇಕ ಸ್ಥಳೀಯ, ರಾಷ್ಟ್ರೀಯ, ಅಂತರ ರಾಷ್ಟ್ರೀಯ ಶಕ್ತಿಗಳು ಜೊತೆಗೂಡಿ ಕೇರಳದ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯಲು ಇನ್ನಿಲ್ಲದ ಪ್ರಯತ್ನ ನಡೆಸಿದವು.

ಕೃತಿಯಲ್ಲಿ ಈ ಪ್ರಕ್ರಿಯೆಗಳನ್ನು ವಸ್ತುನಿಷ್ಠವಾಗಿ ವಿವರಿಸಲಾಗಿದೆ ಮತ್ತು ವಿಶ್ಲೇಷಿಸಲಾಗಿದೆ. ಕೃತಿಕಾರರಾದ ಪಿ.ಎಂ. ಸಲೀಂರವರು ತಮ್ಮ ಪಿಎಚ್‌ಡಿ ಪದವಿಗಾಗಿ ನಡೆಸಿದ ಸಂಶೋಧನೆಯ ಫಲ ಈ ಕೃತಿ. ಇಂದಿನ ಹಲವು ವಿಶ್ವ ವಿದ್ಯಾಲಯಗಳ

ಪಿಎಚ್‌ಡಿ ಪ್ರಬಂಧಗಳ ದುಸ್ಥಿತಿ, ಅವುಗಳಲ್ಲಿ ಎದ್ದು ಕಾಣುವ ಕೊರತೆಗಳಿಂದ ಮುಕ್ತವಾದ ಸಂಶೋಧನೆಯಾಗಿದೆ. ಶ್ರಮ ಪೂರಿತವಾದ ಆಕರಗಳ ಅಧ್ಯಯನ, ವಸ್ತುನಿಷ್ಠ ವಿಶ್ಲೇಷಣೆಯಿಂದ ಈ ಸಂಶೋಧನೆ ಬಹಳ ಉಪಯುಕ್ತವಾದ ಕೃತಿಯಾಗಿದೆ.

**ಈ ಕೃತಿಯಲ್ಲಿ**

ಈ ಕೃತಿ ಒಂಬತ್ತು ಅಧ್ಯಾಯಗಳಲ್ಲಿ ವಿಂಗಡಿತವಾಗಿದೆ. ಇದರಲ್ಲಿ ಎರಡು ಮುಖ್ಯ ಭಾಗಗಳನ್ನು ಗುರುತಿಸಬಹುದು. ಒಂದನೆಯದು, ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರ ರಚನೆಯಾದ ಸನ್ನಿವೇಶ ಮತ್ತು ಸರ್ಕಾರದ ಜನಪರ ಸಾಧನೆಗಳು. ಎರಡನೆಯದು, ಕಮ್ಯುನಿಸ್ಟರ ಬೆಳವಣಿಗೆಯೊಂದಿಗೇ ಬೆಳೆಯಲಾರಂಭಿಸಿದ ಕಮ್ಯುನಿಸ್ಟ್ ವಿರೋಧ, ಸರ್ಕಾರ ರಚನೆಯಾದ ನಂತರ ನಡೆದ ವಿಮೋಚನಾ ಸಮರವೆಂಬ ಹೆಸರಿನ ಕುತಂತ್ರ ಮತ್ತು ಸರ್ಕಾರವನ್ನು ಕಿತ್ತೊಗೆದದ್ದು. ಕೇರಳದಲ್ಲಿ ಕಮ್ಯುನಿಸ್ಟ್ ಚಳುವಳಿ ಮತ್ತು ಪಕ್ಷದ ಬೆಳವಣಿಗೆ, ಚುನಾವಣೆಯನ್ನು ಗೆಲ್ಲಲು ಕಾರಣಗಳು ಇವು ಹಿನ್ನೆಲೆಯಾಗಿ ಮೂಡಿವೆ. ಕಮ್ಯುನಿಸ್ಟ್ ಸರ್ಕಾರ ದೇಶದಲ್ಲಿ ಅನುಸರಿಸಿದ ಆಡಳಿತದ ಹೊಸ ಮಾರ್ಗ, ಅದರ ನೀತಿಗಳು, ಆಡಳಿತ ವಿಧಾನ, ಕಾರ್ಯಕ್ರಮಗಳು, ಕಾನೂನುಗಳು, ಸಾಮಾನ್ಯ ಜನರ ಮೇಲೆ, ವಿವಿಧ ಶೋಷಕ ವರ್ಗಗಳ ಮೇಲೆ ಅವುಗಳ ಪರಿಣಾಮವನ್ನು ನಾಲ್ಕನೇ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಸಾಮಾನ್ಯವಾಗಿ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ಕೆಲಸದ ಬಗ್ಗೆ ಹೆಚ್ಚಿನವರಿಗೆ ಗೊತ್ತಿರುವುದು ಭೂ ಸುಧಾರಣೆಗಳು ಮತ್ತು ಶಿಕ್ಷಣ ಸಂಸ್ಥೆಗಳ ಬಗೆಗಿನ ಕಾನೂನು ಮಾತ್ರ. ಉಳಿದ ಅನೇಕ ಪ್ರಮುಖ ಕ್ರಮಗಳು ಉಳಿದವರಿಗಿರಲಿ ಕಮ್ಯುನಿಸ್ಟರಿಗೂ ಗೊತ್ತಿಲ್ಲ. 20ನೇ ಶತಮಾನದ 70ರ ದಶಕದಿಂದೀಚೆಗಿನ ತಲೆಮಾರಿಗೆ ಇವುಗಳ ಅರಿವಿಲ್ಲ. ಮೊತ್ತ ಮೊದಲ ಬಾರಿಗೆ ಮೊದಲ ಕೇರಳ ಸರ್ಕಾರದ ಧೋರಣೆಗಳು, ಕ್ರಮಗಳು, ಅವುಗಳ ಪರಿಣಾಮಗಳು, ಈ ಕೃತಿಯಲ್ಲಿ ಸವಿವರವಾಗಿ ಬಂದಿವೆ. ಈ ಅಧ್ಯಾಯವನ್ನು ಎಲ್ಲರೂ ಗಮನ ನೀಡಬೇಕು.

**ಮೊದಲ ಭೂಸುಧಾರಣೆ**

ಇಂತಹ ಕ್ರಮಗಳಲ್ಲಿ ಮುಖ್ಯವಾಗಿ ಪ್ರಮಾಣ ವಚನ ಸ್ವೀಕರಿಸಿದ ಒಂದೇ ವಾರದಲ್ಲಿ ಕೃಷಿ ಭೂಮಿಯ ಗೇಣಿದಾರ, ಗುತ್ತಿಗೆದಾರ, ಪಾಲುದಾರ ರೈತರನ್ನು ಹಾಗೂ ಭೂಮಾಲಕರ ಜಮೀನಿನಲ್ಲಿ ವಾಸ ಮಾಡುತ್ತಿರುವ ಜೀತಗಾರ, ಕೂಲಿಕಾರ ಹಾಗೂ ಗೇಣೀದಾರರುಗಳನ್ನು ಒಕ್ಕಲೆಬ್ಬಿಸಬಾರದು ಎಂದು ತುರ್ತಾಗಿ ಸುಗ್ರೀವಾಜ್ಞೆಯ ಮೂಲಕ ತಂದ ಕಾನೂನು. ಸಾಮಾನ್ಯವಾಗಿ ಕಮ್ಯುನಿಸ್ಟ್ ಪಕ್ಷಗಳು ಯಾವುದೇ ಕಾನೂನು ಶಾಸಕಾಂಗ ಅಥವಾ ಸಂಸತ್ತಿನ ಅನುಮೋದನೆಯ ಮೂಲಕವೇ ಜಾರಿಗೆ ತರಬೇಕೆಂದು ಪ್ರತಿಪಾದಿಸುತ್ತವೆ. ಸುಗ್ರೀವಾಜ್ಞೆಗಳನ್ನು ವಿರೋಧಿಸುತ್ತವೆ. ಆದರೆ ಈ

ವಿಷಯದಲ್ಲಿ ಸುಗ್ರೀವಾಜ್ಞೆಯ ದಾರಿ ಹಿಡಿದದ್ದು ಈ ವಿಷಯದ ತುರ್ತನ್ನು ಎತ್ತಿ ತೋರಿಸುತ್ತದೆ.

ಏನಿದರ ತುರ್ತು? ಸಮಗ್ರ ಭೂಸುಧಾರಣಾ ಕಾನೂನು ರೂಪಿಸುವುದಕ್ಕೆ, ವಿವಿಧ ಸರ್ಕಾರದ ಹಾಗೂ ಶಾಸಕಾಂಗದ ಸಮಿತಿ ಮತ್ತು ಅಂತಿಮವಾಗಿ ಶಾಸಕಾಂಗದ ಅಂಗೀಕಾರ ಮತ್ತು ರಾಜ್ಯಪಾಲರ ಅಂಕಿತವಾಗಿ ಜಾರಿಗೆ ಬರಲು ಸಾಕಷ್ಟು ಕಾಲ ಹಿಡಿಯುತ್ತದೆ. ಆ ವೇಳೆಗಾಗಲೇ ಭೂಮಾಲಕರು ಬಹಳಷ್ಟು ಗೇಣೀದಾರರನ್ನು ಒಕ್ಕಲೆಬ್ಬಿಸಿ ಅವರು ತಲೆ ತಲಾಂತರದಿಂದ ಬೇಸಾಯ ಮಾಡುತ್ತಾ ಬಂದಿರುವ ಭೂಮಿಯನ್ನು ಕಿತ್ತುಕೊಳ್ಳುತ್ತಾರೆ ಎಂಬುದೊಂದು ಕಟು ವಾಸ್ತವ.

ಇದು ಕೇರಳದ ರೈತ ಸಂಘದ ಹಾಗೂ ಅಖಿಲ ಭಾರತ ಕಿಸಾನ್ ಸಭಾದ ನಾಯಕರೂ ಆಗಿದ್ದ ನಂಬೂದರಿಪಾದ್ರವರಿಗೆ ಚೆನ್ನಾಗಿ ತಿಳಿದಿತ್ತು. 1952 ರ ನಂತರ ದೇಶದ ವಿವಿಧ ರಾಜ್ಯಗಳಲ್ಲಿ ಕಾಂಗ್ರೆಸ್ ರಾಜ್ಯ ಸರ್ಕಾರಗಳು ಜಾರಿಗೆ ತಂದ ಭೂ ಸುಧಾರಣಾ ಕಾನೂನುಗಗಳು ಆ ಸರ್ಕಾರಗಳಲ್ಲಿ ಅಧಿಕಾರ ಯಾರ ಹಿಡಿತದಲ್ಲಿದೆ ಎಂಬುದಕ್ಕೆ ಕನ್ನಡಿ ಹಿಡಿದವು. ಗೇಣಿದಾರರ ಹಕ್ಕಿನ ರಕ್ಷಣೆಯ ಹೆಸರಿನಲ್ಲಿ ಭೂ ಒಡೆಯರು ಗೇಣಿದಾರರನ್ನು ಹೊರಗೆ ಹಾಕಿ ತಮ್ಮ ಸ್ವಂತ ಸಾಗುವಳಿಗೆಂದು ಅವರ ಕೃಷಿಗೊಳಪಟ್ಟ ಭೂಮಿಯನ್ನು ಕಿತ್ತುಕೊಳ್ಳಲು ಅವಕಾಶ ನೀಡಿದವು. ಉಳಿದ ಭೂಮಿಯಲ್ಲಿದ್ದ ಗೇಣೀದಾರರಿಗಷ್ಟೇ ಕಾನೂನಿನ ರಕ್ಷಣೆ.

ಇಂತಹ ಕಾನೂನುಗಳು ಜಾರಿಗೆ ಬಂದ ಕೂಡಲೇ ಇಡೀ ದೇಶಾದ್ಯಂತ ಕೋಟ್ಯಾಂತರ ಗೇಣಿದಾರರನ್ನು ಹೊರಹಾಕಿ ಭೂಮಿ ವಶ ಪಡಿಸಿಕೊಳ್ಳುವ ಭೂಮಾಲಕರ ಒಂದು ದೊಡ್ಡ ಆಂದೋಲನವೇ ನಡೆದು ಹೋಯಿತು. ಒಂದೆರಡು ವರ್ಷಗಳಲ್ಲಿ ಕೋಟ್ಯಾಂತರ ಜಮೀನು ಬಡ ಗೇಣಿದಾರರ ಕೈ ಬಿಟ್ಟು ಭೂಮಾಲಕರ ಕೈ ಸೇರಿತು.

ಇದಕ್ಕೆ ಕರ್ನಾಟಕ ರಾಜ್ಯ ಒಂದು ಜ್ವಲಂತ ಉದಾಹರಣೆ. ಈ ಮುನ್ನುಡಿಯನ್ನು ಬರೆಯುತ್ತಿರುವಾಗ ನಮ್ಮ ಮನೆಯ ಸುತ್ತ ರಾಯಚೂರು ಜಿಲ್ಲೆಯ ಕೂಲಿಕಾರರು ಬೆಂಗಳೂರಿನ ಚರಂಡಿಗಳ ದುರಸ್ತಿ ಮಾಡುತ್ತಿದ್ದಾರೆ. ಈ ಕೂಲಿಕಾರರೂ, ಬೆಂಗಳೂರಿನ ತುಂಬೆಲ್ಲ ಹರಡಿರುವ ಗುಲ್ಬರ್ಗ ಕಾಲನಿಗಳೆಂಬ ಹೆಸರಿನ ಸ್ಲಂಗಳಲ್ಲಿ ವಾಸ ಮಾಡುವ ಲಕ್ಷಾಂತರ ಕೂಲಿಕಾರರು ಹೈದರಾಬಾದ್ ಕರ್ನಾಟಕ ಮತ್ತು ಮುಂಬಯಿ ಕರ್ನಾಟಕದ ಕೆಲವು ಜಿಲ್ಲೆಗಳಿಂದ ಬಂದವರು. ಇವರು ಕರ್ನಾಟಕದ ಮಂಗಳೂರು, ಉಡುಪಿಯಲ್ಲಿ, ಗೋವಾ, ಮಹಾರಾಷ್ಟ್ರ, ಕೇರಳಗಳಿಗೂ ವಲಸೆ ಹೋಗುವರು. ಈ ಎಲ್ಲ ಕೂಲಿಕಾರರ ತಾತ, ಮುತ್ತಾತ, ಅಜ್ಜಿಯರು ಸ್ವಾತಂತ್ರ್ಯ ಪೂರ್ವದಲ್ಲಿ ಗೇಣಿದಾರ ರೈತರಾಗಿ ಬದುಕುತ್ತಿದ್ದವರು. ಮೇಲೆ ಹೇಳಿದ ಗೇಣಿ ಕಾನೂನುಗಳ ಫಲವಾಗಿ ಹೊರಹಾಕಲ್ಪಟ್ಟವರು. ಈ ಭಾಗದ ಕೆಲವು ಕಾದಂಬರಿ ಮತ್ತು ಕತೆಗಳಲ್ಲಿ ಈ ದುಷ್ಪ

ಪ್ರಕ್ರಿಯೆಯ ಒಡಲು ಮಿಡಿವ ಚಿತ್ರಗಳಿವೆ. ಇಂತಹುದೊಂದು ಕತೆ 'ತಾಯಿ ಸಾಹೇಬ' ಎಂಬ ಸಿನೆಮಾ ಕೂಡಾ ಆಗಿದೆ.

ಭೂಮಾಲಕ ಸರ್ಕಾರಗಳಿಂದ ನಡೆದ ಗೇಣೀದಾರರ ಮೇಲೆ ಎರಗಿದ ತಿರುವು ಮುರುವಾದ ವರ್ಗ ಸಂಘರ್ಷದ ವಿರುದ್ಧವಾಗಿ ಅಖಿಲ ಭಾರತ ಕಿಸಾನ್ ಸಭಾ 1954ರ ಮೋಗಾ ಮಹಾಧಿವೇಶನದಲ್ಲಿ

> "ನೀವು ಉಳುವ ಭೂಮಿಗೆ ಅಂಟಿಕೊಳ್ಳಿರಿ. ಹೊರ ಹಾಕುವುದರ ವಿರುದ್ಧ ಸೆಣೆಸಿರಿ. ಹೊರ ಹಾಕಲ್ಪಟ್ಟ ಭೂಮಿಯನ್ನು ಮರಳಿ ವಶ ಪಡಿಸಿಕೊಳ್ಳಿ."

ಎಂಬ ಕಾಳಗದ ಕರೆ ನೀಡಿತು. ಅದರ ಅಂಗವಾಗಿ ದೇಶಾದ್ಯಂತ ಗೇಣಿದಾರ ದಿನ, ಒಕ್ಕಲೆಬ್ಬಿಸುವುದರ ವಿರುದ್ಧ ಸಪ್ತಾಹ ಮೊದಲಾದ ಕಾರ್ಯಕ್ರಮಗಳು ಜರುಗಿದವು. ಈ ಸಂದರ್ಭದಲ್ಲಿ ಇಎಂಎಸ್‌ರವರು ಕಿಸಾನ್ ಸಭಾಕ್ಕಾಗಿ ಬರೆದ ಒಂದು ಕಿರು ಹೊತ್ತಿಗೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ, ಅದರ ಮಂತ್ರಿ ಶಾಸಕ, ಸಂಸದರುಗಳಿಗೆ, ಭೂ ಸುಧಾರಣಾ ಕಾನೂನು ರೂಪಿಸಿದ ಯೋಜನಾ ಆಯೋಗಕ್ಕೆ, ಭೂದಾನದ ಅಧ್ವರ್ಯು ವಿನೋಬಾ ಮತ್ತಿತರ ಭೂ ದಾನ ಚಳುವಳಿಯ ನಾಯಕರಿಗೆ,

> "ಗೇಣಿದಾರರಾದ ನಾವು ನಿಮ್ಮ ಕಾನೂನು ಮತ್ತು ಭೂದಾನಗಳ ಮೂಲಕ ನಾವೀಗ ಉಳುತ್ತಿರುವ ಎಷ್ಟು ಭೂಮಿಯನ್ನು ನಮ್ಮ ಕೈಯಲ್ಲಿ ಉಳಿಸುತ್ತೀರಿ ಎಂದು ಪರೀಕ್ಷೆ ಮಾಡುತ್ತೇವೆ. ಆದರೆ ಅದೇ ಸಮಯದಲ್ಲಿ ನೀವು ಉಳಿಸುತ್ತೀರಿ ಎಂದು ಕಾಯುತ್ತಾ ಕೂರುವುದಿಲ್ಲ. ನಾವು ಹೊರಹಾಕಿಸಿಕೊಳ್ಳುವುದಿಲ್ಲ"

ಎಂದು ಸವಾಲು ಹಾಕಿದರು.

ಕೇರಳದಲ್ಲಿ ಈ ಕರೆಯ ಮೇರೆಗೆ ಮಲಬಾರ್ ಪ್ರದೇಶದಿಂದ ಮತ್ತು ತಿರುವಾಂಕೂರು– ಕೊಚಿನ್ ಪ್ರದೇಶದಿಂದ ಒಟ್ಟು ಎರಡು ಜಾಥಾಗಳು ಸಂಘಟಿಸಲ್ಪಟ್ಟವು. ಮಲಬಾರ್‌ನ ಜಾಥಾ ಎಲ್ಲ ತಾಲ್ಲೂಕುಗಳನ್ನು ತಿರುಗಿದ ಜಾಥಾಗಳು ಲಕ್ಷಾಂತರ ಗೇಣೀದಾರ ಸಹಿ ಪಡೆದು ಮದ್ರಾಸಿಗೆ ಕಾಲ್ನಡಿಗೆಯಲ್ಲಿಯೇ ತೆರಳಿ ಅಲ್ಲಿಯ ಸರ್ಕಾರಕ್ಕೆ ಗೇಣೀದಾರರನ್ನು ಹೊರಹಾಕುವುದನ್ನು ತಡೆಯುವ ಕಾನೂನು ತನ್ನಿ ಎಂದು ಮನವಿ ನೀಡಿತು.

ಇದು ಈ ತುರ್ತು ಸುಗ್ರೀವಾಜ್ಞೆ ಹೊರಡಿಸಲು ಇದ್ದ ವರ್ಗ ಸಂಘರ್ಷದ ಹಿನ್ನೆಲೆ. ಕರ್ನಾಟಕದ ಭೂ ಸುಧಾರಣಾ ಕಾನೂನು ಕೇರಳಕ್ಕಿಂತಲೂ ಉತ್ತಮ ಎಂದು ಅರಸುರವರು ಮತ್ತವರ ಮಿತ್ರ ರಾಜಕಾರಣಿಗಳು ಮತ್ತು ವಿದ್ವಾಂಸರು ಜಂಭದಿಂದ ಕೊಚ್ಚಿಕೊಳ್ಳುತ್ತಾರೆ. ಆದರೆ ಯಾವುದೇ ಕಾನೂನಿನ ಶ್ರೇಷ್ಠತೆಯ ಮೌಲ್ಯ ಮಾಪನ ಮಾಡಬೇಕಾದ್ದು ಅದರ ಫಲದಿಂದಲೇ ಹೊರತು ಅದರಲ್ಲಿರುವ ವಾಕ್ಯಗಳಿಂದಲ್ಲ. ಕೇರಳದ ಈ ಸುಗ್ರೀವಾಜ್ಞೆಯ ಫಲವೆಂದರೆ ಮುಂದೆ ರಾಜ್ಯದ ಕಾಂಗ್ರೆಸ್, ಪಿ.ಎಸ್.ಪಿ ಮೊದಲಾದ ಭೂಸುಧಾರಣಾ ಪರ ಎಂದು ಘೋಷಿಸಿಕೊಳ್ಳುವ ಪಕ್ಷಗಳು, ಕೇರಳದ

ರಾಜ್ಯಪಾಲರು, ಸಮಾಜವಾದಿ ಸಮಾಜದ ನೀತಿಯನ್ನು ಘೋಷಿಸಿದ ನೆಹರೂರವರ ಕೇಂದ್ರ ಸರ್ಕಾರ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರ ತಂದ ಸಮಗ್ರ ಭೂ ಸುಧಾರಣಾ ಕಾನೂನಿಗೆ ಒಡ್ಡಿದ ಎಲ್ಲ ಅಡೆ ತಡೆಗಳು, ಅಂತಿಮವಾಗಿ ಈ ಸರ್ಕಾರದ ವಜಾ ಮೊದಲಾದ ಸಂಕಟಗಳನ್ನು ಎದುರಿಸಿ ಜಾರಿಗೆ ಬರುವವರೆಗೂ ಗೇಣಿ ಭೂಮಿ ಗೇಣಿದಾರರುಗಳ ಕೈಯಲ್ಲಿ ಉಳಿದಿತ್ತು. ಅವರು ಅಲ್ಲಿಯವರೆಗೂ ಅದರ ಫಸಲನ್ನು ಊಟ ಮಾಡಿದ್ದರು. ಕೊನೆಗೆ 'ಉಳುವವನೇ ಹೊಲದೊಡೆಯ' ಎಂಬ ಸ್ವಾತಂತ್ರ್ಯ ಚಳುವಳಿಯ ಘೋಷಣೆ ಕೇರಳದಲ್ಲಿ ಸಾಕಾರಗೊಂಡಿತು. ಆದರೆ ಕರ್ನಾಟಕದಲ್ಲಿ ಕಾಂಗ್ರೆಸ್ 1975 ರಲ್ಲಿ ಜಾರಿಗೆ ತಂದ ಬಹು ಪ್ರಗತಿಪರ ಭೂ ಸುಧಾರಣಾ ಕಾನೂನು ಬರುವ ವೇಳೆಗೆ ಅಂದಿನ ಮೂರು ಜಿಲ್ಲೆ ಹೊರತುಪಡಿಸಿ ಬಹಳಷ್ಟು ಗೇಣಿದಾರರು ಭೂಮಿಯ ಸ್ವಾಧೀನ ಕಳೆದುಕೊಂಡು ಗೇಣೀದಾರ ಎಂಬ ಸ್ಥಿತಿಯನ್ನು ಕಳೆದುಕೊಂಡು ಕೂಲಿಕಾರರಾಗಿ ಬಿಟ್ಟಿದ್ದರು. ಆ ಕಾನೂನಿನಡಿ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಸ್ವಲ್ಪ ಮಟ್ಟಿಗೆ ಶಿವಮೊಗ್ಗಗಳಲ್ಲಿ ಗೇಣಿದಾರರು ಭೂಮಿಯನ್ನು ಪಡೆದುಕೊಂಡಿದ್ದರೆ ಅದರ ಬಹುಭಾಗದ ಯಶಸ್ಸು ಅಖಿಲ ಭಾರತ ಕಿಸಾನ್ ಸಭಾದ ಕರೆ ಮತ್ತು ಅದರ ಜಾರಿಗೆ ಮಲಬಾರ್‌ನ ಭಾಗವಾಗಿದ್ದ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಪ್ರದೇಶಗಳಲ್ಲಿ ಕೇರಳ ಕರ್ಷಕ ಸಂಘಂನ ಹೋರಾಟಗಳು, ನಂತರ ಕರ್ನಾಟಕ ಪ್ರಾಂತ ರೈತ ಸಂಘದ ಹೋರಾಟಗಳ ಫಲ. ಉತ್ತರ ಕನ್ನಡ ಜಿಲ್ಲೆಯಲ್ಲಿ ಅದೇ ಕಿಸಾನ್ ಸಭಾದ ಕರೆಯಂತೆ ದಿನಕರ ದೇಸಾಯಿ ಮತ್ತು ಪಿಕಳೆಯವರು ಕೆಂಬಾವುಟದ ರೈತ ಸಂಘದ ಹೆಸರಿನಲ್ಲಿ ಹಾಗೂ ನಂತರ ಕರ್ನಾಟಕ ಪ್ರಾಂತ ರೈತ ಸಂಘದಿಂದ ನಡೆಸಿದ ಗೇಣಿದಾರರ ಹೋರಾಟದ ಫಲ. ಶಿವಮೊಗ್ಗದ ಕಾಗೋಡುವಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಹೋರಾಟದಿಂದ ಸ್ಫೂರ್ತಿ ಪಡೆದು ಆರಂಭವಾಗಿ ಮುಂದೆ ಗೋಪಾಲಗೌಡರು ಮತ್ತು ಲೋಹಿಯಾರ ನೇತೃತ್ವದಲ್ಲಿ ನಡೆದ ಹೋರಾಟ ಮತ್ತು ತೀರ್ಥಹಳ್ಳಿಯಲ್ಲಿ ಕರ್ನಾಟಕ ಪ್ರಾಂತ ರೈತ ಸಂಘದ ನಾಯಕರು ನಡೆಸಿದ ಹೋರಾಟಗಳ ಫಲ. ಈ ಹೋರಾಟಗಳ ಫಲವಾಗಿ ಬೇರೆ ಜಿಲ್ಲೆಗಳಂತೆ ಈ ಜಿಲ್ಲೆಗಳಲ್ಲಿ ಗೇಣಿದಾರರನ್ನು ಒಕ್ಕಲೆಬ್ಬಿಸಲಾಗಲಿಲ್ಲ ಮತ್ತು ಗೇಣಿದಾರರುಗಳಿಗೆ ಇವರು ಗೇಣಿದಾರರೆಂದು ಸಾಬೀತು ಮಾಡಲು ಗೇಣಿ ರಸೀದಿ ಅವರ ಕೈಯಲ್ಲಿತ್ತು.

### ಪಡಿತರ ವ್ಯವಸ್ಥೆ, ಮೀಸಲಾತಿ

ಅದರ ಜೊತೆಗೆ ಮುಖ್ಯವಾಗಿ ಹೆಸರಿಸಬೇಕಾದ್ದು ಆಹಾರ ವಸ್ತುಗಳ ಬೆಲೆ ನಿಯಂತ್ರಣ ಹಾಗೂ ಪಡಿತರ ವ್ಯವಸ್ಥೆ. ಇಂದಿಗೂ ದೇಶದಲ್ಲಿ ಅತ್ಯಂತ ಉತ್ತಮವೆಂದು ಹೆಸರಾದ್ದು ಕೇರಳದ ಪಡಿತರ ವ್ಯವಸ್ಥೆ. ಅದರ ಆರಂಭದ ಕ್ರಿಯೆಗಳು ನಡೆದದ್ದು ಮೊದಲ ಸರ್ಕಾರದ ಸಮಯದಲ್ಲಿ. ಈ ವ್ಯವಸ್ಥೆಯ ಹಿನ್ನೆಲೆಯಲ್ಲಿಯೂ ಎರಡನೇ ಮಹಾಯುದ್ಧ ಕಾಲದಿಂದ ನಿರಂತರವಾಗಿ ನಡೆದ ನಡೆದ ಆಹಾರ ಹೋರಾಟಗಳು

ಪಡೆದ ತೀವ್ರ ಸ್ವರೂಪ ಕಾರಣ. ಅಲ್ಲಿಯ ರೈತ ಸಂಘದ ನೇತೃತ್ವದಲ್ಲಿ ನಡೆದ ಆಹಾರದ ಹೋರಾಟಗಳಲ್ಲಿ ಹಲವರು ಹುತಾತ್ಮರಾಗಿರುವವರ ಸ್ಮಾರಕಗಳು ಮಲಬಾರ್ ಪ್ರದೇಶದಲ್ಲಿ ಎದ್ದು ಕಾಣುತ್ತವೆ.

ಮತ್ತೊಂದು ಕ್ರಮ ಹಿಂದುಳಿದವರಿಗೆ ಮೀಸಲಾತಿ. ದೊಡ್ಡ ಬಾಜಾ ಭಜಂತ್ರಿ, ಕಹಳೆಗಳೇನೂ ಇಲ್ಲದೆ ಆಡಳಿತ ಸುಧಾರಣೆಯ ಭಾಗವಾಗಿ ಹಿಂದುಳಿದವರಿಗೆ ಮೀಸಲಾತಿಯನ್ನು ಈ ಸರ್ಕಾರ ಜಾರಿಗೊಳಿಸಿತು. ಆಡಳಿತದಲ್ಲಿ ಜನರ ಭಾಗವಹಿಸುವಿಕೆಯನ್ನು ಹೆಚ್ಚಿಸಲು, ಅಧಿಕಾರಶಾಹಿಯ ಜನ ವಿರೋಧಿ ನಡತೆಯನ್ನು ನಿವಾರಿಸಲು ಎಲ್ಲ ಇಲಾಖೆಗಳಲ್ಲಿ ಜನತಾ ಸಮಿತಿಗಳನ್ನು ರೂಪಿಸಿತು. ಹೀಗೆ ಹಲವು ಕಾರ್ಯಕ್ರಮಗಳನ್ನು ಈ ಕೃತಿ ವಿವರಿಸಿದೆ.

ಅದೇ ಸಮಯದಲ್ಲಿ ಇಂತಹ ಒಂದು ಪಿಎಚ್.ಡಿ ಮಹಾ ಪ್ರಬಂಧದ ಚೌಕಟ್ಟಿನ ಮಿತಿಗಳು ಈ ಕೃತಿಯನ್ನು ಬಾಧಿಸಿವೆ. ಮುಖ್ಯವಾಗಿ ಈ ವಿಶ್ವ ಪ್ರಖ್ಯಾತ ವಿಜಯಕ್ಕೆ ಅಡಿಪಾಯವಾಗಿ ಕೃತಿಯಲ್ಲಿ ವಿವರಿಸಲಾದ ಹಲವು ಚಳುವಳಿಗಳ ಜೊತೆಗೆ ಒಕ್ಕಲೆಬ್ಬಿಸುವುದರ ವಿರುದ್ಧ ಮತ್ತು ಆಹಾರಕ್ಕಾಗಿ ನಡೆದ ತೀವ್ರ ವರ್ಗ ಸಂಘರ್ಷದ ವ್ಯಾಪಕತೆ ಇತ್ಯಾದಿ.

**ಮೊದಲ ಕಮ್ಯುನಿಸ್ಟ್ ಸರಕಾರದ ಮಹತ್ವ**

ಮುಖ್ಯವಾದ ಗಮನಿಸಬೇಕಾದ ಕೆಲವು ವಿಷಯಗಳು ಹೀಗಿವೆ. ಜಗತ್ತಿನಲ್ಲಿ ಇದೇ ಮೊತ್ತ ಮೊದಲ ಚುನಾಯಿತ ಕಮ್ಯುನಿಸ್ಟ್ ಸರ್ಕಾರ ಮಾತ್ರವಲ್ಲ, ಇದೇ ಮೊತ್ತ ಮೊದಲು ಬಂಡವಾಳಶಾಹಿ ಪ್ರಜಾಪ್ರಭುತ್ವದ ಅಡಿಯಲ್ಲಿನ ಮಿತಿಗೊಳಪಟ್ಟು ಕಾರ್ಯ ನಿರ್ವಹಿಸಿದ ಕಮ್ಯುನಿಸ್ಟ್ ಸರ್ಕಾರ. ಈ ಅಂಶ ಜನರ ಸಂಕಷ್ಟಗಳಿಗೆ ಸೂಕ್ತ ಪರಿಹಾರ ನೀಡುವಲ್ಲಿ ಬಹು ದೊಡ್ಡ ಮಿತಿಯನ್ನು ಹೇರುತ್ತದೆ. ಇದೇ ಕೃತಿಯಲ್ಲಿ ಹಲವು ಸಂದರ್ಭಗಳಲ್ಲಿ ವಿವರಿಸಿರುವಂತೆ ಕೇಂದ್ರ ಸರ್ಕಾರದ ಪರಮಾಧಿಕಾರ, ಅದು ಹೇರುವ ಮಿತಿಗಳು ಎದ್ದು ಕಾಣುತ್ತದೆ. ಆದರೆ ಕೃತಿಯಲ್ಲಿ ವಿವರಿಸಲಾಗಿರುವುದು ಅಲ್ಪ ಮಾತ್ರ. ಈ ಮಿತಿಗಳಿಲ್ಲದಿದ್ದರೆ ರಾಜ್ಯ ಸರ್ಕಾರದ ಹಣ ಸಂಪನ್ಮೂಲ ಸಂಗ್ರಹ ಹತ್ತಕ್ಕಿಂತ ಹೆಚ್ಚಾಗುವ ಸಾಧ್ಯತೆಗಳಿವೆ. ರಾಜ್ಯ ಸರ್ಕಾರವೇ ಒಂದು ಸಾರ್ವಜನಿಕ ಬ್ಯಾಂಕ್, ವಿಮೆ ಮೊದಲಾದವುಗಳನ್ನು ಸ್ಥಾಪಿಸಿ ರಾಜ್ಯದ ಬಡಜನರಿಗೆ, ಕುಶಲಕರ್ಮಿಗಳು, ಸಣ್ಣ ಮಧ್ಯಮ ಕೈಗಾರಿಕೆಗಳಿಗೆ ಬಂಡವಾಳ ಒದಗಿಸಬಹುದು. ರೈತರಿಗೆ, ಕುಶಲ ಕರ್ಮಿಗಳಿಗೆ ಮಾರುಕಟ್ಟೆ ಸೌಲಭ್ಯ ಒದಗಿಸುವುದರ ಜೊತೆಯಲ್ಲಿ ಗುತ್ತೇದಾರಿ ಕಂಪನಿಗಳ ಪ್ರವೇಶವನ್ನು ತಡೆಗಟ್ಟಬಹುದು. ವಿದೇಶಿ ಹಾಗೂ ದೇಶೀ ಕಾರ್ಪೊರೇಟ್‌ಗಳ ಪ್ಲಾಂಟೇಷನ್ಗಳನ್ನು ರಾಷ್ಟ್ರೀಕರಿಸಬಹುದು ಇತ್ಯಾದಿ. ಹಲವು ಕ್ರಮಗಳನ್ನು ಕೈಗೊಳ್ಳಲಾಗದೆ ಕೈ ಕೈ ಹಿಸುಕಿಕೊಳ್ಳುವ ಮತ್ತು ಅದರಿಂದಾಗಿ ಜನರ

ಸಂಕಟಗಳಿಗೆ ಪರಿಹಾರ ನೀಡಲಾಗದ ವೇದನೆಯನ್ನು ಜನರಿಗಾಗಿಯೇ ಬದುಕಿರುವ ಕಮ್ಯುನಿಸ್ಟ್ ನಾಯಕರು ಅನುಭವಿಸಬೇಕಾಯಿತು..

ಜಗತ್ತಿನಲ್ಲಿಯೇ ಮೊತ್ತ ಮೊದಲ ಬಾರಿ ಇಂತಹ ಇಕ್ಕಟ್ಟಿನಲ್ಲಿ ಕೆಲಸ ಮಾಡಿದ ಅನುಭವ ಅಪೂರ್ವವಾದದ್ದು. ಇದು ಮುಂದೆ ಸಿಪಿಎಂ ಪಕ್ಷದ ಕಾರ್ಯಕ್ರಮದ ಹಲವು ಅಂಶಗಳಿಗೆ ಆಧಾರವಾಯಿತು. ಮುಖ್ಯವಾಗಿ ಬಂಡವಾಳಶಾಹಿ ಪ್ರಜಾಪ್ರಭುತ್ವದಡಿಯಲ್ಲಿ ಸಿಪಿಎಂ ಯಾವ ಸಂದರ್ಭದಲ್ಲಿ ಸರ್ಕಾರದಲ್ಲಿ ಪಾಲ್ಗೊಳ್ಳಬೇಕು ಅಥವಾ ಬಾರದು ಎಂಬ ಬಗ್ಗೆ, ಹಾಗೇ ಭಾಗವಹಿಸುವ ಸಂದರ್ಭಗಳಲ್ಲಿ ಭಾಗವಹಿಸುವುದರಿಂದ ಕ್ರಾಂತಿಕಾರಿ ಪ್ರಕ್ರಿಯೆಗೆ ಆಗುವ ಪ್ರಯೋಜನ ಏನು ಮತ್ತು ಅದರ ಬಗೆಗಿನ ವರ್ಗ ಪ್ರಜ್ಞೆಯ ಅರಿವಿನ ಬಗ್ಗೆ. ಮುಂದೆ ಕರ್ನಾಟಕವೂ ಸೇರಿದಂತೆ ಹಲವು ರಾಜ್ಯಗಳಲ್ಲಿ ಸರ್ಕಾರಗಳಲ್ಲಿ ಭಾಗವಹಿಸಲು ಆಹ್ವಾನ ಮತ್ತು ಅವಕಾಶ ಬಂದಾಗ ಅದನ್ನು ನಿರಾಕರಿಸುವ ದಿಟ್ಟ ನಿಲುವು ಕೈಗೊಳ್ಳಲು ಸಾಧ್ಯ ಮಾಡಿದ್ದು ಈ ಅನುಭವ. ಇದು ಜ್ಯೋತಿ ಬಸುರವರ ಪ್ರಧಾನಿ ಹುದ್ದೆಯ ಅವಕಾಶದ ಸಂದರ್ಭಕ್ಕೂ ಭಾಗಶಃ ಅನ್ವಯಿಸುತ್ತದೆ. ಈ ಅನುಭವ ಭಾರತದಲ್ಲಿ ಮುಂದೆ ಸಿಪಿಎಂ ಭಾಗವಹಿಸಿದ, ನೇತೃತ್ವ ನೀಡಿದ ಪ.ಬಂಗಾಲ, ತ್ರಿಪುರಾಗಳ ಎಡ ರಂಗ ಸರ್ಕಾರಗಳಿಗೂ ಮಾರ್ಗದರ್ಶಿಯಾಯಿತು. ಇಂದು ಈ ಎಲ್ಲ ಎಡಪಂಥೀಯ ಸರ್ಕಾರಗಳ ಒಟ್ಟಾರೆ ಅನುಭವ ಮಾರ್ಕ್ಸ್ವಾದಕ್ಕೆ ಒಂದು ಕೊಡುಗೆಯಾಗಿದೆ. ಜಗತ್ತಿನ ವಿವಿಧ ಕಮ್ಯುನಿಸ್ಟ್ ಪಕ್ಷಗಳೂ ಕೂಡಾ ಇದನ್ನು ಮಾನ್ಯ ಮಾಡಿವೆ.

ಎಡರಂಗ ಸರ್ಕಾರದ ಜನಪರ ಧೋರಣೆ ಮತ್ತು ಕಾರ್ಯಕ್ರಮಗಳ ಪರಿಣಾಮಗಳು ಕೇರಳದಲ್ಲಿ ಪ್ರತಿಗಾಮಿ ಶಕ್ತಿಗಳ ಆಸ್ತಿ, ಸಂಪತ್ತು ಗಳಿಕೆಗೆ ಹಾನಿ ಮಾಡಿದವು. ಅವರನ್ನು ಈ ಸರ್ಕಾರವನ್ನು ಕಿತ್ತೊಗೆಯಲೇ ಬೇಕೆಂಬ ದೃಢ ಸಂಕಲ್ಪಕ್ಕೆ ದೂಡಿದವು ಎಂಬುದನ್ನು ಈ ಕೃತಿ ಎತ್ತಿ ತೋರಿಸುತ್ತದೆ.

### ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯಲು 'ಪವಿತ್ರ' ಕೂಟ

ಕಮ್ಯುನಿಸ್ಟ್ ಪಕ್ಷವೊಂದು ಇನ್ನೂ ಕಣ್ಣು ಬಿಡುವ ಮೊದಲೇ ಕಮ್ಯುನಿಸಮ್ ಎಂಬ ಪೆಡಂಭೂತವನ್ನು ಎದುರಿಸಲು ಧರ್ಮಾಧಿಕಾರಿ ಪೋಪ್ ಮತ್ತು ಮಹಾ ಸಾಮ್ರಾಟರುಗಳು ಮತ್ತು ಇತರ ಹಲವರು ಸೇರಿದ ಪವಿತ್ರ ಕೂಟದ ಬಗ್ಗೆ 1848 ರಲ್ಲಿ ಕಮ್ಯುನಿಸ್ಟ್ ಪ್ರಣಾಳಿಕೆ ಪ್ರಸ್ತಾಪ ಮಾಡಿದೆ. ಆದೇ ರೀತಿ ಕೇರಳದಲ್ಲಿ ಶೋಷಿತ ಜನರಿಗೆ ಕಮ್ಯುನಿಸ್ಟ್ ಸಿದ್ಧಾಂತ, ಪಕ್ಷ, ಚಳುವಳಿಗಳ ಬಗೆಗಿನ ಸೆಳೆತವನ್ನು ತಪ್ಪಿಸಲು ಮತ್ತು ಅದರ ಫಲವಾದ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯಲು ಮತ್ತೊಂದು ಪವಿತ್ರ ಕೂಟ ರಚನೆಯಾಯಿತು. ಪವಿತ್ರ ಪೋಪರ ಕೇರಳದ ಧರ್ಮಾಧಿಕಾರಿಗಳು ಒಂದೊಂದು ಇಟ್ಟಿಗೆಯನ್ನೂ ಬಹು ಶ್ರಮದಿಂದ ಕೂಡಿಸಿ ಕಟ್ಟಿದ ಪವಿತ್ರ ಕೂಟ ಇದು.

ಶೋಷಿತರು ಆಯ್ಕೆ ಮಾಡಿದ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯಲು ನಿರ್ಮಾಣವಾದ ಪವಿತ್ರ ಕೂಟದಲ್ಲಿ ಕೇರಳದ ಮಹಾ ಶೋಷಕರ ವಿವಿಧ ಬಗೆಗಳು ಇರಲೇಬೇಕಲ್ಲವೇ! ಆದರೆ ಕೇರಳದ ಶೋಷಕರನ್ನು ಬಡಿದೆಬ್ಬಿಸಿದವರು, ಆರಂಭದಿಂದ ಕೊನೆಯವರೆಗೆ ಈ ಪವಿತ್ರ ಕೂಟದ ಭಾಗವಾದವರು ರಾಷ್ಟ್ರ ಮಟ್ಟದ ಹಾಗೂ ಅಂತರ ರಾಷ್ಟ್ರ ಮಟ್ಟದ ಬೃಹತ್ ಶೋಷಕ ಅಧಿಪತಿಗಳು. ಕಮ್ಯುನಿಸ್ಟ್ ಸರ್ಕಾರ ತರಲು ಪ್ರಯತ್ನಿಸಿದ ಭೂ ಸುಧಾರಣೆಯ ಹಾಗೂ ಶಿಕ್ಷಕರ ಹಕ್ಕುಗಳ ಕಾನೂನು, ಲೋಕೋಪಯೋಗಿ ಕೆಲಸಗಳಲ್ಲಿ ಕಂಟ್ರಾಕ್ಟರ್ಗಳನ್ನು ಕಿತ್ತೊಗೆದದ್ದು, ಹಿಂದುಳಿದವರಿಗೆ ಮೀಸಲಾತಿ ಮೊದಲಾದ ಕ್ರಮಗಳು ಕೇರಳದ ಕ್ಯಾಥೊಲಿಕ್ ಕ್ರಿಶ್ಚಿಯನ್ ಪ್ಲಾಂಟೇಷನ್ ಮಾಲೀಕರು, ಇತರ ವ್ಯಾಪಾರ, ವ್ಯವಹಾರಗಳ ಒಡೆಯರು, ನಂಬೂದಿರಿ, ನಾಯರ್ ಭೂಮಾಲಕ ಧಣಿಗಳು, ಮುಸ್ಲಿಂ ಭೂಮಾಲಕ ಮತ್ತು ವ್ಯವಹಾರಗಳ ಒಡೆಯರುಗಳ ಸ್ವಾರ್ಥಕ್ಕೆ ಬಾಧಕವಾಯಿತು.

ಶೋಷಕ ವರ್ಗಗಳ ಈ ವಿವಿಧ ವಿಭಾಗಗಳ ನೇತಾರರು ಮತ್ತು ಮುಖವಾಣಿಯಾಗಿ ಮುಂಚೂಣಿಯಲ್ಲಿ ನಿಂತವರು ಒಂದು ಕಡೆ ಅವರ ಧರ್ಮಗಳ ಅಧಿಕಾರಿಗಳು, ಜಾತಿ ಸಂಘಟನೆಗಳು. ಮತ್ತೊಂದು ಕಡೆ ಈ ಶೋಷಕ ವಿಭಾಗಗಳ ರಾಜಕೀಯ ಪಕ್ಷಗಳು. ಶತ ಶತಮಾನಗಳ ಹಿಂದುಳಿದ ವಿಚಾರಗಳ ಮೊತ್ತವಾದ ಚರ್ಚ್ ಮತ್ತು ಮಸೀದಿಗಳ ಬಿಷಪ್, ಪಾದ್ರಿ ಮತ್ತು ಮೌಲ್ವಿಗಳು, ನಾಯರ್ ಸರ್ವೀಸ್ ಸೊಸೈಟಿ, ಎಸ್.ಎನ್.ಡಿ.ಪಿ ಮೊದಲಾದ ಸಂಘಟನೆಗಳು. ಈ ಸನಾತನ ಚಿಂತನೆಯ ಜೊತೆಗೆ ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆಯ ಭಾಗವಾದ ರಾಜಕೀಯ ಪಕ್ಷಗಳಾದ ಕಾಂಗ್ರೆಸ್, ಮುಸ್ಲಿಂ ಲೀಗ್, ಪಿಎಸ್.ಪಿ ಇತ್ಯಾದಿಗಳ ನಾಚಿಕೆಗೇಡು ಸಂಚು ಕೂಟ.

ಈ ರಾಜಕೀಯ ಕೂಟದ ನೇತಾರರು ಭಾರತವಿಡೀ ತನ್ನದೇ ಏಕ ಚಕ್ರಾಧಿಪತ್ಯ ಎಂದು ಭಾವಿಸಿದ್ದ, ದೇಶವನ್ನಾಳುತ್ತಿದ್ದ ಕಾಂಗ್ರೆಸ್‌ನ ಅಖಿಲ ಭಾರತ ನಾಯಕತ್ವ, ಕೇಂದ್ರ ಸರ್ಕಾರದ ಮಂತ್ರಿ ಮಾನ್ಯರುಗಳು ಮುಖ್ಯವಾಗಿ ಗೃಹಮಂತ್ರಿ ಮತ್ತವರ ಗೂಢಚರ್ಯೆ ವಿಭಾಗ. ಕಾಂಗ್ರೆಸ್ ಪಕ್ಷದ ಕೂಟದ ಭಾಗವೆಂಬಂತೆ ಕೆಲಸ ಮಾಡುತ್ತಾ ಸಂವಿಧಾನವನ್ನು ದುರುಪಯೋಗಪಡಿಸಿಕೊಂಡ ಸಂವಿಧಾನಾಧಿಕಾರಿ ರಾಜ್ಯಪಾಲ ಮತ್ತು ರಾಷ್ಟ್ರಪತಿ. ಈ ಪ್ರಜಾಪ್ರಭುತ್ವ ವಿರೋಧಿ ಕುಕೃತ್ಯಗಳಿಗೆ ತಮ್ಮ ಅಂಗಿಕಾರ ಮುದ್ರೆ ಒತ್ತಿದ ಮಹಾನ್ ಪ್ರಜಾಪ್ರಭುತ್ವವಾದಿ ಎಂದು ಪ್ರಸಿದ್ಧಿ ಪಡೆದ ಪ್ರಧಾನಿ ನೆಹರೂ.

ರಾಜ್ಯದೊಳಗಿನ ಈ ಪವಿತ್ರ ಕೂಟಕ್ಕೆ ಪರಮ ಪಾವಿತ್ರ್ಯತೆಯ ಮೆರಗು ನೀಡಿದ್ದು ಮಾತ್ರವಲ್ಲ ಕಮ್ಯುನಿಸ್ಟರನ್ನು ಹೇಗೆ ಎದುರಿಸಬೇಕೆಂಬ ಕುತಂತ್ರಗಾರಿಕೆ ರೂಪಿಸಿದ್ದು, ಅದಕ್ಕೆ ಬೇಕಾದ ಕುವಿಚಾರಗಳ, ಸುಳ್ಳುಗಳ ತಾತ್ವಿಕ ಸಾಹಿತ್ಯ ಒದಗಿಸಿದ್ದು, ಹಣದ ಹೊಳೆ ಹರಿಸಿದ್ದು ಕ್ರಿಶ್ಚಿಯನ್ನರ ಪರಮೋಚ್ಚ ಧರ್ಮ ಸ್ಥಾನ, ವಿಶ್ವದ ಅತಿ ಬಲಿಷ್ಠ ಕ್ಯಾಥೊಲಿಕ್ ಧಾರ್ಮಿಕ ಸಾಮ್ರಾಜ್ಯ.

ಆದರೆ ಈ ಪವಿತ್ರ ಕೂಟಕ್ಕೆ ಪೋಪ್ ಜೊತೆಗೊಬ್ಬ ಝಾರ್ನಂತಹ ಬೃಹತ್ ಪ್ರಭುತ್ವ ಇಲ್ಲದಿದ್ದರೆ ಹೇಗೆ? ವಿಶ್ವದ ಅತಿದೊಡ್ಡ ಧಾರ್ಮಿಕ ಸಾಮ್ರಾಜ್ಯ ಸೇರಿದೆ ಎಂದ ಮೇಲೆ ಅತಿ ದೊಡ್ಡ ರಾಜಕೀಯ ಹಾಗೂ ಆರ್ಥಿಕ ಸಾಮ್ರಾಜ್ಯ ಸೇರದಿದ್ದರೆ ಹೇಗೆ?

ಅಮೇರಿಕ ಮತ್ತು ಅದರ ಕಾರ್ಪೊರೇಟ್ ದೊರೆಗಳು ಎಲ್ಲರಿಗಿಂತ ಮೊದಲು ವಿಶ್ವ ಮಟ್ಟದಲ್ಲಿ ಪವಿತ್ರ ಕೂಟದ ರಚನೆಯ ಕೇಂದ್ರವಾಗಿದ್ದರು. ವಿಶ್ವಾದ್ಯಂತ ಕಮ್ಯುನಿಸ್ಟ್ ಪೆಡಂಭೂತದ ಉಚ್ಚಾಟನೆಯ ಭಾಗವಾಗಿ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯುವ ಪ್ರಯತ್ನದಲ್ಲಿಯೂ ಮುಖ್ಯ ಪಾತ್ರ ವಹಿಸಿದ್ದರು.

## ಅಮೇರಿಕವೆಂಬ ಸಾಮ್ರಾಜ್ಯ ಮತ್ತು ಅದರ ಪಾತ್ರದ ಹಲವು ಆಯಾಮಗಳು

ರಶ್ಯನ್ ಕ್ರಾಂತಿಯ ನಂತರ, ಅಮೇರಿಕದಲ್ಲಿ ಕಮ್ಯುನಿಸಂ ಪೆಡಂಭೂತದ ಭಯ ಯಾವ ಪರಿ ಕಾಡಿತೆಂದರೆ ಅಮೇರಿಕದ ಪ್ರಜೆಗಳಲ್ಲಿ ಅಲ್ಪ ಸ್ವಲ್ಪ ಪ್ರಗತಿಪರ ಧೋರಣೆ, ಉದಾರವಾದಿ ಪ್ರಜಾಪ್ರಭುತ್ವೀಯ ಚಿಂತನೆಯವರನ್ನೂ ಬಿಡದೆ ಜೈಲಿಗಟ್ಟುವುದು ಕಿರುಕುಳ ನೀಡುವುದು ಮಾಡಲಾಯಿತು. 1919–20 ರ ಅವಧಿಯನ್ನು ಮೊದಲನೆಯ ರೆಡ್ ಸ್ಕೇರ್ (ಕೆಂಪು ಭೀತಿ) ಎಂದು ಎರಡನೆ ಮಹಾಯುದ್ಧದ ರಷ್ಯನ್ ಸೇನೆಯ ವಿಜಯದ ನಂತರ 1945–60 ರ ಅವಧಿಯನ್ನು ಎರಡನೆಯ ರೆಡ್ ಸ್ಕೇರ್ ಅಥವಾ ಮೆಕಾರ್ಥಿಯಿಸಂ ಎಂದು ಗುರುತಿಸಲಾಗಿದೆ. ಇದರ ಭಾಗವಾಗಿ ಜಗತ್ ಪ್ರಸಿದ್ಧ ನಟ ಚಾರ್ಲಿ ಚಾಪ್ಲಿನ್, ಪಾಲ್ ರಾಬ್ಸನ್ ಮೊದಲಾದವರೂ ಸೇರಿದಂತ 300 ಕ್ಕೂ ಹೆಚ್ಚಿನ ಹಾಲಿವುಡ್ ಕಲಾವಿದರು, ಬರಹಗಾರರನ್ನು ನಿಷೇಧಕ್ಕೊಳಪಡಿಸಲಾಯಿತು.

ಎರಡನೇ ಮಹಾಯುದ್ಧದ ನಂತರ ವಿವಿಧ ದೇಶಗಳು ಕಮ್ಯುನಿಸ್ಟ್ ಆಗಿ ರಾತ್ರೋ ರಾತ್ರಿ ಬದಲಾಗಿ ಬಿಡುವುದೇನೋ ಎಂಬ ಭಯ ಅಮೇರಿಕದ ಆಳುವವರನ್ನು ಕಾಡತೊಡಗಿತು. ಅದರ ಫಲವಾಗಿ ಯುರೋಪಿನಲ್ಲಿ ಕಮ್ಯುನಿಸ್ಟ್ ಪ್ರಭಾವ ಮತ್ತಷ್ಟು ಹಬ್ಬುವುದನ್ನು ತಡೆಗಟ್ಟಲು ಒಂದು ಕಡೆ ನ್ಯಾಟೋ ಎಂಬ ಮಿಲಿಟರಿ ಕೂಟವನ್ನು ರಚಿಸಲಾಯಿತು. ಕಮ್ಯುನಿಸ್ಟ್ ಪಕ್ಷಗಳ ಸರ್ಕಾರಗಳು ಕೈಗೊಂಡ ಕ್ರಾಂತಿಕಾರಿ ಜನಪರ ಕ್ರಮಗಳ ಜನರು ಆಕರ್ಷಿತರಾಗುವುದನ್ನು ತಪ್ಪಿಸಲು ಅಮೇರಿಕ ಸರ್ಕಾರ ಮಾರ್ಷಲ್ ಪ್ಲಾನ್ ಎಂಬುದರ ಮೂಲಕ ಬಿಲಿಯಗಟ್ಟಲೆ ಡಾಲರ್ಗಳ ಧನಸಹಾಯ ಮಾಡಿತು. ಸರ್ಕಾರದ ಭಾಗೀದಾರರಾಗಿದ್ದ ಕಮ್ಯುನಿಸ್ಟ್ ಪಕ್ಷಗಳನ್ನು ಹೊರಹಾಕಿದರೆ ಮಾತ್ರ ಮಾರ್ಷಲ್ ಪ್ಲಾನ್ ನೆರವನ್ನು ನೀಡಲಾಗುವುದೆಂದು ಫ್ರಾನ್ಸ್ ಮತ್ತು ಇಟಲಿ ಸರ್ಕಾರಗಳಿಗೆ ವಿಧಿಸಲಾಯಿತು.

1949ರಲ್ಲಿ ಚೀನಾದ ಕ್ರಾಂತಿಯಾದ ಮೇಲಂತೂ ಅಮೇರಿಕದ ಮತ್ತು ಯುರೋಪಿನ ವಸಾಹತುಶಾಹಿ ದೇಶಗಳ ಸರ್ಕಾರಗಳು ಮತ್ತು ಬೃಹತ್ ಕಾರ್ಪೊರೇಟ್‌ಗಳಿಗೆ ಕಮ್ಯುನಿಸ್ಟ್ ಪೆಡಂಭೂತದ ಭಯ ತಾರಕಕ್ಕೇರಿತು. ಚೀನಾದ ಕ್ರಾಂತಿಯ ಜೊತೆ ಜೊತೆಗೆ

ವಿಯೆಟ್ನಾಂ ಮತ್ತು ಕೊರಿಯಾಗಳ ಕ್ರಾಂತಿಗಳು ಇವರುಗಳಿಗೆ ಹುಚ್ಚು ಹಿಡಿಸಿದವು. ಒಂದು ಕಡೆ ಕೊರಿಯಾ ಮತ್ತು ವಿಯೆಟ್ನಾಂ ಮೇಲೆ ಯುದ್ಧವನ್ನೇ ಸಾರಲಾಯಿತು. ಮತ್ತೊಂದು ಕಡೆ ಏಷ್ಯಾದ ಇತರ ದೇಶಗಳನ್ನು ಒಳಗೊಳ್ಳಲು ಸೀಟೊ ಮತ್ತು ಸೆಂಟೊ ಎಂಬ ಮಿಲಿಟರಿ ಕೂಟಗಳನ್ನು ರಚಿಸಿತು.

ಈ ಎಲ್ಲ ಬೆಳವಣಿಗೆಗಳ ಜೊತೆಗೆ ಎರಡನೇ ಮಹಾಯುದ್ಧದ ಸಮಯದಲ್ಲಿ ತೀವ್ರಗೊಂಡ ಸಂಕಟಗಳ ಹಿನ್ನೆಲೆಯಲ್ಲಿ ಭಾರತದ ಹಲವು ರಾಜ್ಯಗಳಲ್ಲಿ ಗೇಣೀದಾರ ರೈತರ ಸಂಘರ್ಷಗಳು ಭುಗಿಲೆದ್ದವು. ಪಶ್ಚಿಮ ಬಂಗಾಳದ ತೇಭಾಗ, ಅಸ್ಸಾಂನ ಸುವರ್ಣ ಕಣಿವೆ, ಪಂಜಾಬ್ ನ ಆಧಿ ಭಾಗ್, ಮಹಾರಾಷ್ಟ್ರದ ವಾರಲೀಯರ, ಕೇರಳದ ಮಲಬಾರ್ ಪ್ರದೇಶದ ತಮಿಳುನಾಡಿನ ತಂಜಾವೂರ್ ಹೋರಾಟಗಳು ಬ್ರಿಟಿಷರ ಆಳ್ವಿಕೆಗೇ ಬೆದರಿಕೆಯುಂಟು ಮಾಡಿದವು. ತೆಲಂಗಾಣ ರೈತರ ಸಶಸ್ತ್ರ ಹೋರಾಟ ಮೂರು ಜಿಲ್ಲೆಗಳಿಗೆ ಹಬ್ಬಿ ಹತ್ತಾರು ಲಕ್ಷ ಎಕರೆಯನ್ನು ಗೇಣಿದಾರರು ವಶಪಡಿಸಿಕೊಂಡು ಗ್ರಾಮ ಸಮಿತಿಗಳ ಮೂಲಕ ಆಡಳಿತ ನಡೆಸಿದರು. ಈ ಹೋರಾಟ ಮತ್ತು ಇತರ ಹೋರಾಟದ ವರದಿಗಳು ಭಾರತವೂ ಚೀನಾದ ದಾರಿ ಹಿಡಿಯುತ್ತಿದೆ ಎಂಬ ಭಯವನ್ನು ಅಮೇರಿಕ, ಬ್ರಿಟನ್‌ಗಳಿಗೆ ಹುಟ್ಟಿಸಿದವು. ಏನಾದರೂ ಮಾಡಿ ಭಾರತವನ್ನು, ಇತರ ದೇಶಗಳನ್ನು ಕಮ್ಯುನಿಸ್ಟ್ ವಶವಾಗಲು ಬಿಡದೆ ಉಳಿಸಿಕೊಳ್ಳಬೇಕು ಎಂಬ ತಹ ತಹ ಅಮೇರಿಕದ ಸರ್ಕಾರ ಮತ್ತು ಆಳುವವರಲ್ಲಿ ಮೂಡಿತು. ಈ ಗುರಿ ಸಾಧನೆಗಾಗಿ ಅವರು ಹಲವು ಆಯಾಮಗಳ ತಂತ್ರಗಳನ್ನು ಹೆಣೆದರು. ವಿವಿಧ ಬಗೆಯ ಕ್ರಮಗಳನ್ನು ಕೈಗೊಂಡರು. ಸಿಐಎ ರಹಸ್ಯ ದಾಖಲೆಗಳು ಈ ಕುರಿತ ಹಲವು ಸತ್ಯಗಳನ್ನು ತೆರೆದಿಟ್ಟಿವೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು:

1. ಅಮೇರಿಕ, ಬ್ರಿಟನ್ ಮೊದಲಾದ ಸರ್ಕಾರಗಳ ನೇರ ರಾಜಕೀಯ, ಆರ್ಥಿಕ ಕ್ರಮಗಳು,
2. ಅಮೇರಿಕದ ಬೃಹತ್ ಕಾರ್ಪೊರೇಟ್‌ಗಳು ಸ್ಥಾಪಿಸಿದ ಸೇವೆಯ ಹೆಸರಿನ ಫೌಂಡೇಷನ್ ಗಳೆಂಬ ಸಂಸ್ಥೆಗಳ ಯೋಜನೆಗಳು, ಸಹಾಯಗಳು
3. ಅಮೇರಿಕದ ವಿಶ್ವ ವಿದ್ಯಾಲಯಗಳ ಸಂಶೋಧನೆಯ ಹೆಸರಿನ ಯೋಜನೆಗಳು
4. ವಿವಿಧ ಕ್ರಿಶ್ಚಿಯನ್ ಪಂಥಗಳ ಚರ್ಚ್ ಗಳ ಮೂಲಕ ಹಲವು ತೆರನ ಪ್ರಚಾರ, ಪ್ರತಿಭಟನೆ ಮತ್ತಿತರ ಕ್ರಮಗಳು
5. ಪತ್ರಿಕೆಗಳ ಮೂಲಕ ಕಮ್ಯುನಿಸ್ಟರ ವಿರುದ್ಧ ಅಪಪ್ರಚಾರಕ್ಕೆ ಪತ್ರಕರ್ತರು, ಸಂಪಾದಕರಿಗೆ ಲಂಚ ಮತ್ತು ಸವಲತ್ತುಗಳ ಆಸೆ
6. ಕಮ್ಯುನಿಸ್ಟರನ್ನು ಸೋಲಿಸಲು ರಾಜಕೀಯ ಪಕ್ಷಗಳಿಗೆ ಸಲಹೆ, ಧನ ಸಹಾಯ, ಪಕ್ಷಗಳ ವ್ಯಕ್ತಿಗಳಿಗೆ ಲಂಚ, ಸವಲತ್ತುಗಳ ಆಸೆ.
7. ಸರ್ಕಾರ ಮತ್ತಿತರ ಸಂಸ್ಥೆಗಳ ಅಧಿಕಾರಿಗಳು, ವಿವಿಗಳ ಪ್ರಾಧ್ಯಾಪಕರಿಗೆ ಲಂಚ, ಆಸೆಗಳು

8. ಅಮೇರಿಕದ ಕುಪ್ರಸಿದ್ಧ ಗೂಢಚರ್ಯೆ ಸಂಸ್ಥೆ ಸಿಐಎನಿಂದ ಕಮ್ಯುನಿಸ್ಟರು, ಅವರ ಎಲ್ಲ ಚಟುವಟಿಕೆಗಳ ಬಗ್ಗೆ ವ್ಯಾಪಕ ಮಾಹಿತಿ ಸಂಗ್ರಹಣೆ. ಸರ್ಕಾರಗಳಿಗೆ, ಗೂಢಚರ್ಯೆ ಸಂಸ್ಥೆಗಳು, ಸೈನ್ಯ, ಕಮ್ಯುನಿಸ್ಟ್ ವಿರೋಧಿ ರಾಜಕೀಯ ವಕ್ತಿಗಳಿಗೆ ಕಮ್ಯುನಿಸ್ಟರ ಮೇಲೆ ಕ್ರಮ ಜರುಗಿಸಲು, ಕೊಲ್ಲಲು ಪಟ್ಟಿ ನೀಡಿಕೆ.
9. ಸಾಧ್ಯವಾದ ಕಡೆಗಳಲ್ಲಿ ದಂಗೆ ಎಬ್ಬಿಸುವ ಪ್ರಯತ್ನಗಳು,
10. ಆರಿಸಿದ ವ್ಯಕ್ತಿಗಳ ಹಾಗೂ ಸಾಮೂಹಿಕ ಕೊಲೆಗಳು.

ಇವುಗಳಲ್ಲಿ ಹಲವನ್ನು ಫಿಲಿಪ್ಪೀನ್ಸ್, ಇರಾನ್. ಶ್ರೀಲಂಕಾ, ಇಂಡೋನೇಶ್ಯಾಗಳಲ್ಲಿ ಅಕ್ಷರಶಃ ಅನುಸರಿಸಲಾಯಿತು. ಇಂಡೋನೇಶ್ಯಾದಲ್ಲಿ ಕಮ್ಯುನಿಸ್ಟ್ ಪಕ್ಷ ಭಾಗವಾಗಿದ್ದ ಸರಕಾರವನ್ನು 1965–66 ರಲ್ಲಿ ಮಿಲಿಟರಿ ದಂಗೆ ಎಬ್ಬಿಸಿ ಉರುಳಿಸಿ, ಐದು ಲಕ್ಷಕ್ಕೂ ಹೆಚ್ಚು ಕಮ್ಯುನಿಸ್ಟರನ್ನು ಸಾಮೂಹಿಕವಾಗಿ ದಾರುಣವಾಗಿ ಕೊಲೆ ಮಾಡಲಾಯಿತು. ಮೂವತ್ತು ವರ್ಷಗಳ ಕಾಲದ ಮಿಲಿಟರಿ ಸರ್ವಾಧಿಕಾರ ಹೇರಲಾಯಿತು. ಇದು ಜಗತ್ತಿನ ಆಧುನಿಕ ಇತಿಹಾಸದಲ್ಲಿ ಅತ್ಯಂತ ಬರ್ಬರ ಕೃತ್ಯ ಎಂದು ಕುಪ್ರಸಿದ್ಧವಾಗಿದೆ. ಭಾರತದಲ್ಲಿ ಕಮ್ಯುನಿಸಮ್ ಮತ್ತು ಕಮ್ಯುನಿಸ್ಟರ ವಿರುದ್ಧ ಅಮೇರಿಕ ಏನೆಲ್ಲ ಕ್ರಮಗಳನ್ನು ಕೈಗೊಂಡಿತು ಎಂಬುದಕ್ಕೆ ಇವು ಹಿನ್ನೆಲೆಯನ್ನು ಒದಗಿಸುತ್ತವೆ.

### ಭಾರತದಲ್ಲಿ ಅಮೇರಿಕದ ಬಹುಮುಖಿ ಕ್ರಮಗಳು:

1949 ರಲ್ಲಿ ಚೀನಾದ ಕ್ರಾಂತಿಯಾದ ಕೂಡಲೇ, ಭಾರತ ಸರ್ಕಾರಕ್ಕೆ ಅಭಿವೃದ್ಧಿಗೆ ಸಂಬಂಧಿಸಿ ಸಲಹೆಗಳನ್ನು ಮತ್ತು ಒಂದಷ್ಟು ತುರ್ತು ನೆರವನ್ನು ನೀಡಬೇಕು ಎಂಬುದು ಕಾರ್ಪೊರೇಟ್‌ಗಳು ಮತ್ತು ಸರ್ಕಾರ ಎರಡೂ ತೀರ್ಮಾನಕ್ಕೆ ಬಂದವು. ಅಮೇರಿಕದ ಸರ್ಕಾರವೇ ನೇರವಾಗಿ ತೊಡಗುವ ಬದಲು ಖಾಸಗಿ ಸೇವಾ ಸಂಸ್ಥೆಗಳ ಹೆಸರಿನಲ್ಲಿ ಕೆಲಸ ಮಾಡಬೇಕು ಎಂದು ನಿರ್ಧರಿಸಿದವು. ಭಾರತವನ್ನು ಕಮ್ಯುನಿಸ್ಟ್ ವಿಮುಕ್ತಗೊಳಿಸುವಲ್ಲಿ ಪರಸ್ಪರ ಅಪೂರ್ವ ಸಹಕಾರ ಮತ್ತು ಜಂಟಿ ಸಂಚಿನ ಯೋಜನೆ ಈ ಕಾರ್ಪೊರೇಟ್- ಸಿಐಎ ಕೂಟದ ಮುಂದಿನ ಹೆಜ್ಜೆ. ಭಾರತದ ಯೋಜನಾ ಆಯೋಗ, ಸಾಮಾಜಿಕ ಆರ್ಥಿಕ ಸಂಶೋಧನಾ ಸಂಸ್ಥೆಗಳು, ವಿಶ್ವ ವಿದ್ಯಾಲಯಗಳ ಮೂಲಕ ಪ್ರಭಾವ ಬೀರಲು ಪ್ರಯತ್ನಿಸಿದವು. ಪಂಚವಾರ್ಷಿಕ ಯೋಜನೆಗಳ ಹಳಿ ತಪ್ಪಿಸಲು ಪ್ರಯತ್ನಿಸಿದವು.

ಈ ಕೇರಳ ಕಮ್ಯುನಿಸ್ಟ್ ಸರ್ಕಾರದ ಒಂದು ಬಹು ಮುಖ್ಯ ಕಾರ್ಯಕ್ರಮವಾದ ಭೂ ಸುಧಾರಣೆಯನ್ನು ಅಂಚಿನಲ್ಲಿಡುವ ಕಮ್ಯುನಿಟಿ ಡೆವಲಪ್ಮೆಂಟ್ ಪ್ರಾಜೆಕ್ಟ್ ಸಿಡಿಪಿ ಮತ್ತು ತಂತ್ರಜ್ಞಾನಕ್ಕೆ ಪ್ರಾಧಾನ್ಯತೆ ನೀಡುವ ಹಸಿರು ಕ್ರಾಂತಿಯ ಕಾರ್ಯಕ್ರಮಗಳನ್ನು ಈ ಕೂಟವು ಮುಂದಿಟ್ಟಿತು. ಇದೇ ಸಂದರ್ಭದಲ್ಲಿ ಕಾಂಗ್ರೆಸ್ ತೀವ್ರ ಭೂ ಸುಧಾರಣೆಗೆ ಬದಲಾಗಿ ವಿನೋಬಾ ಭಾವೆಯವರ ಮೂಲಕ ಭೂದಾನದ ಅತ್ಯಂತ ಅಪ್ರಾಯೋಗಿಕ,

ಅಪ್ರಯೋಜಕ ಮತ್ತು ಭೂಮಾಲಕರನ್ನು ಬಚಾವು ಮಾಡುವ ಕಾರ್ಯಕ್ರಮವನ್ನು ಜಾರಿಗೆ ತರಲು ಪ್ರಯತ್ನಿಸಿತು.

ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಕೇರಳದಲ್ಲಿ ಎಬ್ಬಿಸಿದ ವಿಮೋಚನಾ ಸಮರದ ಮುಖ್ಯ ಹೂರಣ ಭೂಸುಧಾರಣೆಯ ವಿರೋಧವೇ ಆಗಿತ್ತು. ರಾಷ್ಟ್ರಪತಿಗಳ ಅಂಗೀಕಾರದ ನೆಪವೊಡ್ಡಿ ದೆಹಲಿಗೆ ಕಳಿಸಿದ ಭೂಸುಧಾರಣಾ ಮಸೂದೆಗೆ ರಾಷ್ಟ್ರಪತಿಗಳ ಅಂಗೀಕಾರ ವಿಳಂಬಿಸಲಾಯಿತು. ಕೊನೆಗೆ ಈ ಕಾನೂನು ಅಂಗೀಕಾರ ಮಾಡುವ ಮೊದಲೇ ಕಮ್ಯುನಿಸ್ಟ್ ಸರ್ಕಾರವನ್ನು ವಜಾ ಮಾಡಲು ಕಾರಣವಾಯಿತು.

ಅಮೇರಿಕದ ಗುರಿ, ಭಾರತದ ಕಾಂಗ್ರೆಸ್ ಮತ್ತು ಅದರ ಸರ್ಕಾರದ ಉದ್ದೇಶ, ಕೇರಳದ ಪವಿತ್ರ ಕೂಟದ ಉದ್ದೇಶ ಏಕೀಭವಿಸಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಭಾರತದ ಸಾಹಿತಿ ಮತ್ತಿತರ ಬುದ್ಧಿ ಜೀವಿಗಳನ್ನು ಸೆಳೆಯಲು ಸಾಂಸ್ಕೃತಿಕ ಸ್ವಾತಂತ್ರ್ಯದ ಹೆಸರಿನಲ್ಲಿ ಕಾಂಗ್ರೆಸ್ ಫಾರ್ ಕಲ್ಚರಲ್ ಫ್ರೀಡಮ್ ಅನ್ನು 1950 ರಲ್ಲಿ ಸ್ಥಾಪಿಸಲಾಯಿತು. ಭಾರತದಲ್ಲಿ ಇದರ ಹಲವು ರಾಷ್ಟ್ರೀಯ ಸಮ್ಮೇಳನಗಳನ್ನು ನಡೆಸಲಾಯಿತು. ಇದರಲ್ಲಿ ಕ್ಯಾಥೋಲಿಕ್ ಪಾದ್ರಿ ಫಾದರ್ ವಡಕ್ಕನ್ರವರ ಪಾತ್ರವನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಈ ಸಂಸ್ಥೆಗೆ ಗೌರವಯುತ ಸ್ಥಾನ ನೀಡಲು ಜಯಪ್ರಕಾಶ ನಾರಾಯಣ್ (ಜೆಪಿ) ಯಂತಹವರನ್ನು ಭಾರತ ಪಾಕೀಸ್ತಾನ, ಲಂಕಾ ನೇಪಾಳ ಸೇರಿದ ದಕ್ಷಿಣ ಏಷ್ಯಾ ಸಮಿತಿಯ ಅಧ್ಯಕ್ಷರ ಸ್ಥಾನಕ್ಕೆ ಹಾಗೂ ವಿಶ್ವ ಮಟ್ಟದ ಸ್ಥಾನಕ್ಕೆ ನೇಮಿಸಲಾಯಿತು. ಸಮಾಜವಾದಿಯಾಗಿದ್ದ ಜೆಪಿ ಕೇರಳ ಪ್ರವಾಸ ಮಾಡಿ ಸರ್ಕಾರದ ವಿರುದ್ಧ ಹೇಳಿಕೆಗಳನ್ನು ನೀಡಿದರು. ಟಿಬೆಟ್ನಲ್ಲಿ ಸಿಐಎ ಪ್ರಚೋದಿತ ದಂಗೆಗೆ ಸಹಕಾರಿಯಾಗಿ ಕೆಲಸ ಮಾಡಿದರು.

ಈ ಸಂಘಟನೆಯ ಉದ್ದೇಶವೇ ಪ್ರಗತಿಪರ ಸಾಹಿತಿ, ಬುದ್ಧಿಜೀವಿಗಳನ್ನು ಕಮ್ಯುನಿಸ್ಟರ ವಿರೋಧಿ ರಂಗಕ್ಕೆ ಸೆಳೆಯುವುದಾಗಿತ್ತು. ಕೇರಳದಲ್ಲಿನ ಹಲವು ಸಾಹಿತಿ, ಪತ್ರಕರ್ತರನ್ನು ಸೆಳೆಯುವ ಮೂಲಕ ಸಿಐಎ ಉದ್ದೇಶ ಸಾಧನೆಯಾಯಿತೆಂಬುದನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ.

ಸಿಐಎ ಸ್ಥಾಪಿಸಿದ ಹಲವು ಡಮ್ಮಿ ಸಂಸ್ಥೆಗಳಿಗೂ ಲೆಕ್ಕವಿಲ್ಲ. ಇವುಗಳನ್ನು ತಮ್ಮ ಅಪಪ್ರಚಾರ, ದಂಗೆ ಮತ್ತಿತರ ಗುರಿ ಸಾಧನೆಗೆ ಉಪಯುಕ್ತರಾದವರಿಗೆ ಹಣ ವರ್ಗಾವಣೆ ಮಾಡಲು ಬಳಸಿಕೊಳ್ಳಲಾಗುತ್ತಿತ್ತು. ಮಾರಲ್ ರಿ ಆರ್ಮಮೆಂಟ್ ಎಂಬುದು ಅಂತಹುದೊಂದು ಹೆಸರು. ನಾಯರ್ ಸರ್ವೀಸ್ ಸೊಸೈಟಿ ಮೊದಲಾದ ಸಂಘಟನೆಗಳ ಮುಖ್ಯಸ್ಥರಿಗೆ ಇದರ ಮೂಲಕ ಹಣದ ಹೊಳೆ ಹರಿಸಲಾಯಿತು. ಅಷ್ಟೇ ಅಲ್ಲದೆ ಆಗಲೆ ಅಸ್ತಿತ್ವದಲ್ಲಿದ್ದ, ಸ್ವಲ್ಪ ಒಳ್ಳೆಯ ಹೆಸರು ಪಡೆದಿದ್ದ ಸಂಸ್ಥೆ, ಸಂಘಟನೆಗಳನ್ನೂ ದುರುಪಯೋಗ ಪಡಿಸಿಕೊಂಡಿತು.

ಸಿಐಎದ ಮತ್ತೊಂದು ಬಲವಾದ ರಂಗ ಪತ್ರಿಕೆಗಳು. ತಾನೇ ಹಲವು ಪತ್ರಿಕೆಗಳನ್ನು ಭಾರತವೂ ಸೇರಿದಂತೆ ವಿಶ್ವದ ಹಲವು ದೇಶಗಳಲ್ಲಿ ಆರಂಭಿಸಿದೆ. ಆಗಲೇ ಇರುವ ಪ್ರಮುಖ ಪತ್ರಿಕೆಗಳಿಗೆ ಹಣ ನೀಡಿ ಬುಟ್ಟಿಗೆ ಹಾಕಿಕೊಳ್ಳುವುದು, ಪತ್ರಕರ್ತರಿಗೆ ಆಸೆ, ಆಮಿಷಗಳನ್ನೊಡ್ಡುವುದು, ಅವರನ್ನು ತನ್ನ ಮಾಸಿಕ ಪೇರೋಲ್ ನಲ್ಲಿ ಸೇರಿಸಿಕೊಂಡು ಹಣ ನೀಡುವುದು ಹೀಗೆ ಅವರ ಕುತಂತ್ರಗಳು.

ಧರ್ಮವನ್ನು ದುರುಪಯೋಗ ಮಾಡಿಕೊಳ್ಳುವ ದುಷ್ಟ ಯೋಚನೆ ಮಾಡಲಾಯಿತು. ಕ್ಯಾಥೊಲಿಕ್ ಪಂಥ ಬಿಟ್ಟು ಉಳಿದನೇಕ ಕ್ರೈಸ್ತ ಪಂಥಗಳನ್ನೆಲ್ಲ ಒಟ್ಟಿಗೆ ಸೇರಿಸಿ ಒಂದು ವರ್ಲ್ಡ್ ಕೌನ್ಸಿಲ್ ಆಫ ಚರ್ಚಸ್ ಎಂಬ ಒಂದು ದೊಡ್ಡ ಸಂಸ್ಥೆ ಕಟ್ಟಿ ಅದನ್ನು ಕಮ್ಯುನಿಸ್ಟ್-ವಿರೋಧಿ ಚಟುವಟಿಕೆಗಳಿಗೆ ಬಳಸಲಾಯಿತು. ಸ್ವತಃ ಅಮೇರಿಕದ ವಿದೇಶಾಂಗ ಮುಖ್ಯಸ್ಥ ಡಲೆಸ್ ಇದನ್ನು ಸ್ಥಾಪಿಸುವ ಹಲವು ಸಭೆಗಳಲ್ಲಿ ಭಾಗವಹಿಸಿದ್ದನು.

ಕ್ಯಾಥೊಲಿಕ್ ಚರ್ಚ್ ಅಂತೂ ಕಮ್ಯುನಿಸ್ಟ್ ವಿರೋಧಿ ಕೃತ್ಯಗಳಲ್ಲಿ ವಿಶೇಷ ಪರಿಣತಿ ಪಡೆದಿತ್ತು. ಯುರೋಪಿನಲ್ಲಿ ಎಲ್ಲೆಲ್ಲಿ ಕಮ್ಯುನಿಸ್ಟ್ ಪಕ್ಷ ಬಲವಾಗತೊಡಗಿತ್ತೋ ಅಲ್ಲೆಲ್ಲಾ ಪಾದ್ರಿಗಳು ವಿಧ ವಿಧವಾದ ಸಂಘ, ಸಂಸ್ಥೆಗಳನ್ನು ಕಟ್ಟಿ ಯುವಕರು, ಮಹಿಳೆಯರನ್ನು, ರೈತ, ಕಾರ್ಮಿಕರನ್ನು ಸೆಳೆಯಲು, ದಂಗೆ ಎಬ್ಬಿಸಲು ಪ್ರಯತ್ನಿಸಿದ್ದರು.

> "ಕ್ರಿಶ್ಚಿಯನ್ ಧರ್ಮ ಅಪಾಯದಲ್ಲಿದೆ. ಬನ್ನಿ ಒಂದಾಗಿ. ಪ್ರಾಣ ಪಣಕ್ಕಿಟ್ಟು ಹೋರಾಡಬೇಕು"

ಎಂಬ ಘೋಷಣೆಗಳನ್ನು ನೀಡಿದರು. ಕೇರಳದಲ್ಲಿ ಈ ಪರಿಣತಿಯನ್ನು ಬಹಳ ದಕ್ಷತೆಯಿಂದ ಬಳಸಿರುವುದರ ಬಗ್ಗೆ ಈ ಪುಸ್ತಕದ ಲೇಖಕರು ಶ್ರಮ ವಹಿಸಿ ಮಾಹಿತಿ ಕಲೆ ಹಾಕಿದ್ದಾರೆ. ಕೇವಲ ಕ್ರಿಶ್ಚಿಯನ್ ಪಂಥಗಳು ಮಾತ್ರ ಅಲ್ಲದೆ ಇಸ್ಲಾಂ, ಬೌದ್ಧ ಮೊದಲಾದ ಜಗತ್ತಿನ ಮುಖ್ಯ ಧರ್ಮಗಳನ್ನೂ ಹೀಗೆ ದುರ್ಬಳಕೆ ಮಾಡಿಕೊಳ್ಳಲು ಸಿಐಎ ಹಲವು ಪ್ರಯತ್ನಗಳನ್ನು ಮಾಡಿದೆ. ಹೊಸ ಧಾರ್ಮಿಕ ಮುಖವಾಡಗಳನ್ನು ಹುಟ್ಟು ಹಾಕಲು ಪ್ರಯತ್ನಿಸಿದೆ. ಭಾರತದಲ್ಲಿ ಅಂತಹ ಹಲವು ದಿಢೀರ್ ಸಂತರ ಉಗಮವನ್ನು ಕಾಣುತ್ತಿದ್ದೇವೆ.

### ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಸಂಚಿನಲ್ಲಿ

ಮೊದಲೇ ಭಾರತ ಕಮ್ಯುನಿಸ್ಟ್ ಆಗಿ ಬಿಡಬಹುದು ಎಂಬ ಆತಂಕದಲ್ಲಿ ಮೇಲೆ ವಿವರಿಸಿದಂತೆ ತರಪರ ಕೆಲಸ ಮಾಡುತ್ತಿದ್ದವರಿಗೆ 1957 ರಲ್ಲಿ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಗೆದ್ದು ಅಧಿಕಾರಕ್ಕೆ ಬಂದಾಗ ಕನಸಿನಲ್ಲಿ ಕಾಣುತ್ತಿದ್ದ ಪೆಡಂಭೂತ ಇದ್ದಕ್ಕಿದ್ದಂತೆ ನೇರವಾಗಿ ಎದುರು ನಿಂತಂತಾಯ್ತು. ಕಮ್ಯುನಿಸ್ಟ್ ಸರ್ಕಾರವನ್ನು ಹೇಗಾದರೂ ಮಾಡಿ ಕಿತ್ತೆಸೆಯುವುದು ಅಂತರರಾಷ್ಟ್ರೀಯ ಮಟ್ಟದಲ್ಲಿ ರೂಪುಗೊಂಡಿದ್ದ ಈ ಪವಿತ್ರ ಕೂಟದ

ಒಂದು ಮುಖ್ಯ ಗುರಿಯಾಯ್ತು. ಅದರ ಭಾಗವಾಗಿ 1950 ರಿಂದಲೇ ಭಾರತದಲ್ಲಿ ರೂಪುಗೊಂಡಿದ್ದ ಅಮೇರಿಕದ ರಾಯಭಾರಿ, ಕಾರ್ಪೊರೇಟ್ ಫೌಂಡೇಶನ್ಗಳು, ವಿಶ್ವವಿದ್ಯಾಲಯ ಕೇಂದ್ರದ ಸಂಶೋಧಕರು, ಸಿಐಎ ಜಾಲ ಮೊದಲಾದವುಗಳು ಸೇರಿ ರಚಿಸಿಕೊಂಡಿದ್ದ ಪವಿತ್ರ ಕೂಟದ ಶಾಖೆಯನ್ನು ಕ್ರಿಯಾಶೀಲಗೊಳಿಸಲಾಯ್ತು.

ವಿಶ್ವ ಮಟ್ಟದ ಪವಿತ್ರ ಕೂಟ ಕೇರಳದಲ್ಲಿ ಪವಿತ್ರ ಕೂಟ ಕಟ್ಟಿದ ಬಗೆ, ಮತ್ತದರ ಕಾರ್ಯದ ಬಗ್ಗೆ ಪುಸ್ತಕದಲ್ಲಿ ವಿವರವಾಗಿ ಚಿತ್ರಿಸಲಾಗಿದೆ. ಈ ಕೂಟ ಕಟ್ಟುವ ಕ್ರಿಯೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದು ಕ್ಯಾಥೊಲಿಕ್ ಚರ್ಚ್ ಮತ್ತು ಕಾಂಗ್ರೆಸ್ ಎಂಬುದನ್ನು ವಿವರಿಸಿದೆ. ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆದ ಎರಡು ದಶಕಗಳ ನಂತರ ಬೆಳಕಿಗೆ ಬಂದದ್ದು ಅಮೇರಿಕದ ಸರ್ಕಾರದ ಪಾತ್ರ. 1973–75ರ ನಡುವೆ ಅಮೇರಿಕದ ರಾಯಭಾರಿಯಾಗಿದ್ದ ಡೇನಿಯಲ್ ಪ್ಯಾಟ್ರಿಕ್ ಮೊಯ್ನಿಹಾನ್ ತಮ್ಮ ಆತ್ಮಕತೆಯಲ್ಲಿ 1978 ರಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ವಜಾ ಮಾಡಿದ ಬಗೆಗಿನ ಎಲ್ಲ ವಿವಾದದ ಸದ್ದಡಗಿದ ಮೇಲೆ, ಕಾಂಗ್ರೆಸ್ ಸೋತು ಜನತಾ ಪಕ್ಷ ಅಧಿಕಾರಕ್ಕೆ ಬಂದ ಮೇಲೆ ಬಹಳ ತಣ್ಣಗೆ ಬರೆಯುತ್ತಾರೆ:

> ನಾವು ಕೇವಲ ಎರಡು ಬಾರಿ, ಎರಡು ಬಾರಿ ಮಾತ್ರ ಒಂದು ರಾಜಕೀಯ ಪಕ್ಷಕ್ಕೆ ದುಡ್ಡು ಕೊಡುವಷ್ಟರ ಮಟ್ಟಿಗೆ ಭಾರತದ ರಾಜಕೀಯದಲ್ಲಿ ಮಧ್ಯಪ್ರವೇಶ ಮಾಡಿದ್ದೆವು. ಎರಡು ಬಾರಿಯೂ ಕೂಡಾ ರಾಜ್ಯ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷದ ಗೆಲುವಿನ ಸಾಧ್ಯತೆ ಎದುರಾಗಿರುವ ಸಂದರ್ಭದಲ್ಲಿ. ಒಮ್ಮೆ ಕೇರಳ, ಮತ್ತೊಮ್ಮೆ ಕಲಕತ್ತಾ ಇರುವ ಬಂಗಾಲದಲ್ಲಿ. ಎರಡು ಬಾರಿಯೂ ಕಾಂಗ್ರೆಸ್ ಪಕ್ಷಕ್ಕೆ, ಅವರದೇ ವಿನಂತಿಯ ಮೇರೆಗೆ. ಒಮ್ಮೆ ಕಾಂಗ್ರೆಸ್ ಪಕ್ಷದ ಅಧಿಕಾರಿಯಾಗಿದ್ದ ಶ್ರೀಮತಿ ಗಾಂಧಿಯವರಿಗೇ.

1957–59ರ ಕೇರಳ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ ರಾಯಭಾರಿಯಾಗಿದ್ದ ಎಲ್ವರ್ತ್ ಬಂಕರ್ ಎಂಬುವರು ನಂತರ ಮೆತ್ತಗೆ ವಿಡಿಯೋ ಒಂದರಲ್ಲಿ ಬಾಯಿ ಬಿಡುತ್ತಾರೆ, ಹೌದು ತಾನೇ ಈ ದಂಗೆಗೆ ದುಡ್ಡು ಕೊಟ್ಟಿದ್ದೇನೆಂದು.

ಪ.ಬಂಗಾಲದಲ್ಲಿ 1967 ರಲ್ಲಿ ಆಗಿನ ಕಾಂಗ್ರೆಸ್ ಸರ್ಕಾರ ಸೋಲುತ್ತದೆಂದು ಸಿಐಎ ಮತ್ತು ರಾಯಭಾರ ಕಛೇರಿಗೆ ಖಚಿತವಾದಾಗ ನೇರವಾಗಿ ಕಾಂಗ್ರೆಸ್‌ಗೆ ಹಣ ನೀಡಿದ್ದಲ್ಲದೆ ಫೋರ್ಡ್ ಫೌಂಡೇಶನ್ ಕಲಕತ್ತಾ ನಗರದ ಅಭಿವೃದ್ಧಿಯ ಹೆಸರಿನಲ್ಲಿ ಹೊಸ ಯೋಜನೆ ಆರಂಭಿಸಿ ಯಥೇಚ್ಛವಾಗಿ ಹಣ ನೀಡಿತು. ನಂತರ ಸಿಪಿಎಂ ಪಕ್ಷದ ಮೈತ್ರಿಯ ಸರ್ಕಾರ ಅಧಿಕಾರಕ್ಕೆ ಬಂದಾಗ ಈ ಯೋಜನೆಯ ಹಲವು ಜನವಿರೋಧಿ ಅಂಶಗಳ ಬಗ್ಗೆ ಆಗಿನ ಸಮ್ಮಿಶ್ರ ಸರ್ಕಾರ ಆಕ್ಷೇಪಣೆ ತೆಗೆಯಿತು. ಜೊತೆಗೆ ಭೂಸುಧಾರಣೆ ಮಾಡಲು ಭೂ ಮಾಲಕರ ಹೆಚ್ಚುವರಿ ಭೂಮಿಯನ್ನು ರೈತರು ವಶ ಪಡಿಸಿಕೊಂಡರು. ಈ ಹಿನ್ನೆಲೆಯಲ್ಲಿ ಸಿಪಿಎಂ ಸೇರಿದ್ದ ಮೈತ್ರಿ ಸರ್ಕಾರವನ್ನು ಕಾಂಗ್ರೆಸ್‌ನ ಇಂದಿರಾಗಾಂಧಿ ನೇತೃತ್ವದ ಕೇಂದ್ರ ಸರ್ಕಾರ ವಜಾ ಮಾಡಿತು. ಕೊನೆಗೆ ರಾಷ್ಟ್ರಪತಿಗಳ ಆಡಳಿತದಲ್ಲಿ

ಮಿಲಿಟರಿ ಬಳಕೆ, ಬಹು ಕುಖ್ಯಾತ ಚುನಾವಣಾ ಅಕ್ರಮಗಳ ಮೂಲಕ ಕಾಂಗ್ರೆಸ್ ಗೆದ್ದು ಅರೆ ಫ್ಯಾಸಿಸ್ಟ್ ಭಯೋತ್ಪಾದಕ ಆಡಳಿತ ನಡೆಸಿತು. ಈ ಅವಧಿಯಲ್ಲಿ ಒಂದು ಸಾವಿರಕ್ಕೂ ಹೆಚ್ಚು ಸಿಪಿಎಂ ಸದಸ್ಯರನ್ನು ಕೊಲ್ಲಲಾಯಿತು. ಲಕ್ಷಕ್ಕೂ ಹೆಚ್ಚು ಜನ ಕಾರ್ಯಕರ್ತರು ಮನೆ ಮಠ ಬಿಟ್ಟು ಆರು ವರ್ಷಗಳ ಕಾಲ ದೂರ ಇರಬೇಕಾಯಿತು. ಇದೇ ಅವಧಿಯಲ್ಲಿ ಫೋರ್ಡ್ ಫೌಂಡೇಶನ್ ಕಲ್ಕತ್ತಾ ಅಭಿವೃದ್ಧಿ ಯೋಜನೆಯನ್ನು ತಮ್ಮಿಚ್ಛೆ ಬಂದಂತೆ ಕಾರ್ಯಗತ ಮಾಡಲು ಅವಕಾಶವಾಯಿತೆಂದು ಅದರ ಅಧಿಕಾರಿಗಳು ಬರೆಯುತ್ತಾರೆ.

ಈ ಎಲ್ಲ ಮಾಹಿತಿಯಿಂದ ಆಗ ಅಮೇರಿಕದ ಸರ್ಕಾರ ಮತ್ತು ರಾಯಭಾರ ಕಛೇರಿ ಏನೆಲ್ಲ ಮಾಡಿರಬಹುದೆಂಬುದರ ಸಣ್ಣ ಸೂಚನೆ ಸಿಗುತ್ತದೆ. ಅದರ ಪೂರ್ಣ ಪ್ರಮಾಣದ ಚಟುವಟಿಕೆ ಹೇಗಿರಬಹುದೆಂಬುದರ ಬಗ್ಗೆ ಕಲ್ಪನೆ ಮಾಡಿಕೊಳ್ಳಲು ಸಾಧ್ಯವಾಗುವುದು ಇತರ ದೇಶಗಳಲ್ಲಿ ಅಮೇರಿಕ ಮತ್ತು ಅದರ ಸಾಧನ ಸಿಐಎ ಅಲ್ಲಿಯ ಪ್ರಜಾಪ್ರಭುತ್ವವನ್ನು ವಿರೂಪಗೊಳಿಸಲು ಏನೆಲ್ಲಾ ಕುಕಾರ್ಯ ನಡೆಸಿದೆ ಎಂಬ ಮಾಹಿತಿ ಗೊತ್ತಾದಾಗ.

ವಿಶ್ವಾದ್ಯಂತ 1950 ರ ದಶಕದಲ್ಲಿ ಅಮೇರಿಕದ ಸರ್ಕಾರ ರಾಯಭಾರ ಕಚೇರಿಗಳು ಹಾಗೂ ಸಿಐಎ ಮೂಲಕ ಇಷ್ಟೆಲ್ಲ ನಡೆಸುತ್ತಿರುವಾಗ ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ಬಹಳ ಆತಂಕಗೊಂಡಿದ್ದ ಅಮೇರಿಕ ಏನೆಲ್ಲ ಮಾಡಿರಬೇಕೆಂಬುದನ್ನು ಊಹಿಸಿಕೊಳ್ಳಿ.

ಭಾರತದಲ್ಲಿ ಸಿಐಎ ನಡೆಸಿದ ಕುತಂತ್ರಗಳು, ಮೇಲೆ ಹೇಳಿದಂತೆ ಫೋರ್ಡ್ ಫೌಂಡೇಶನ್ ಮತ್ತು ವಿಶ್ವವಿದ್ಯಾಲಯಗಳ ಮೂಲಕ ಅದು ವ್ಯವಹರಿಸಿದ್ದು, ಸಾಂಸ್ಕೃತಿಕ ಸ್ವಾತಂತ್ರ್ಯದ ಸಂಘಟನೆಯ ಸ್ವರೂಪ ಇವೆಲ್ಲಾ ಮುಂದೊಂದು ದಿನ ಅಮೇರಿಕದ ಪತ್ರಿಕೆಗಳ ಮೂಲಕ ಬಹಿರಂಗಗೊಂಡವು. ಆಗ ಭಾರತದಲ್ಲಿ ಬಹು ದೊಡ್ಡ ಕೋಲಾಹಲ ಉಂಟಾಯಿತು.

ಅದರಲ್ಲಿ ಬಯಲಿಗೆ ಬಂದ ಒಂದು ಮುಖ್ಯ ಅಂಶವೆಂದರೆ ಭಾರತದ ಸ್ವಾವಲಂಬೀ ಕೈಗಾರಿಕೀಕರಣವನ್ನು ಈ ಸಿಐಎ ಸಂಶೋಧಕರು ದಾರಿ ತಪ್ಪಿಸಲು, ನಿರಂತರವಾಗಿ ಅಮೇರಿಕನ್ ಕೈಗಾರಿಕೆಗಳ ವಸಾಹತಾಗಿಸಲು ಮಾಡಿದ ಪ್ರಯತ್ನ. ಯೋಜನಾ ಆಯೋಗ ಈ 'ಸಂಶೋಧಕ' ರೊಂದಿಗೆ ತನ್ನೆಲ್ಲಾ ಸಂಬಂಧ ಕಡಿದುಕೊಂಡಿತು. ಭಾರತದ ಸಂಶೋಧನಾ ಸಂಸ್ಥೆಗಳೂ ದೂರ ಇಟ್ಟವು. ಕೊನೆಗೆ ಈ ಸಂಸ್ಥೆ ಭಾರತದಿಂದ ಕಾಲ್ತೆಗೆಯಿತು. ಮತ್ತೆ ಈ ಕಡೆ ಮುಖ ಮಾಡಲಿಲ್ಲ.

ಆದರೆ ಫೋರ್ಡ್ ಸೇರಿದಂತೆ ಕಾರ್ಪೊರೇಟ್ ಫೌಂಡೇಶನ್‌ಗಳು ಅಂದಿನಿಂದ ಇಂದಿನಿಂದ ಹಲವು ಯೋಜನೆಗಳಿಗೆ, ಸಂಶೋಧನಾ ಸಂಸ್ಥೆಗಳಿಗೆ ನಿಧಿ ಒದಗಿಸುತ್ತಾ, 'ಸಲಹೆ' ನೀಡುತ್ತಾ ಉಸ್ತುವಾರಿ ಮಾಡುತ್ತಾ ತಮ್ಮ ಹಸ್ತಕ್ಷೇಪ ನಡೆಸಿವೆ. ಈ

ಸಂಶೋಧನೆಗಳು ಭಾರತದಲ್ಲಿನ ಬಡತನ, ನಿರುದ್ಯೋಗ, ಜಾತಿ ವ್ಯವಸ್ಥೆ ಕೋಮುವಾದ ಮುಂತಾದ ಸಮಸ್ಯೆಗಳಿಗೆ ಹೊಸ ಹೊಸ ಥಿಯರಿಗಳನ್ನು ಹೊಸೆಯುತ್ತಾ ಭಾರತದ ವಿದ್ವಾಂಸರು, ಸಾಹಿತಿಗಳು, ಇತರ ಬುದ್ಧಿ ಜೀವಿಗಳನ್ನು ದಾರಿ ತಪ್ಪಿಸುವ ಕೆಲಸವನ್ನು ನಿರಂತರವಾಗಿ ಮಾಡುತ್ತಿವೆ. ಕರ್ನಾಟಕದಲ್ಲೂ ಅಂತಹ ಹಲವು ಅಮೇರಿಕ ಯುರೋಪಿನ ಕಾರ್ಪೊರೇಟ್ಗಳ ಹಣದ ಸ್ವಯಂ ಸೇವಾ ಸಂಸ್ಥೆಗಳು ವಿವಿಧ ರಂಗಗಳಲ್ಲಿ ಸ್ಥಾಪನೆಯಾಗಿವೆ. ಸಾಂಸ್ಕೃತಿಕ ರಂಗದ ಮೂಲಕ ಸಾಹಿತಿಗಳು, ವಿಚಾರಶೀಲರನ್ನು ಸೆಳೆಯಲು ಪ್ರಯತ್ನಿಸುತ್ತಿವೆ.

ಭಾರತದ ತುರ್ತು ಪರಿಸ್ಥಿತಿಗೆ ವಿಶ್ವ ಬ್ಯಾಂಕ್ ಬಹು ದೊಡ್ಡ ಆರ್ಥಿಕ ಬೆಂಬಲ ನೀಡಿದ ನಂತರ ಮತ್ತು 1980 ರಲ್ಲಿ ಐಎಂಎಫ್ ಶರತ್ತುಗಳಿಗೆ ತಲೆಬಾಗಿ ದೊಡ್ಡ ಮೊತ್ತದ ಸಾಲ ಪಡೆದ ನಂತರ ಪರಿಸ್ಥಿತಿ ಪೂರ್ಣ ಬದಲಾಯಿತು. ವಿಶ್ವ ಬ್ಯಾಂಕ್ನ ಉತ್ತೇಜನ ಮತ್ತು ಉಸ್ತುವಾರಿಯಲ್ಲಿ ಅಮೇರಿಕ, ಯುರೋಪಿನ ಹಲವು ಕಾರ್ಪೊರೇಟ್ ಫೌಂಡೇಶನ್ಗಳು ಭಾರತದಲ್ಲಿ ಹತ್ತಾರು ಸಾವಿರ ಹೊಸ ಹೊಸ ಸರ್ಕಾರೇತರ ಸಂಸ್ಥೆಗಳ ಆರಂಭಕ್ಕೆ ಹಣ ಹರಿಸಿದವು. ಕಮ್ಯುನಿಸ್ಟ್ ಮತ್ತು ಎಡ ಚಳುವಳಿಗಳನ್ನು ದುರ್ಬಲಗೊಳಿಸುವುದೇ ಇವುಗಳ ಒಂದು ಮುಖ್ಯ ಗುರಿಯಾಗಿತ್ತು. ಕಮ್ಯುನಿಸ್ಟ್ ಚಳುವಳಿ ನೆಲೆಯನ್ನು ಸ್ಥಾಪಿಸಿರುವ ಪ್ರದೇಶಗಳೇ ಹೆಚ್ಚು ಸಂಖ್ಯೆಯಲ್ಲಿ ಇವುಗಳ ಸ್ಥಾಪನೆ, ಹಣದ ಹರಿವು ಮತ್ತು ಕಾರ್ಯ ಚಟುವಟಿಕೆಗಳ ಗುರಿಯಾಗಿದ್ದವು. ಎಡ ಚಳುವಳಿಗಳ, ಎಡ ಚಿಂತನೆಯನ್ನು ಮೈಗೂಡಿಸಿಕೊಳ್ಳುತ್ತಿದ್ದ ಸಾಮಾಜಿಕ ಚಳುವಳಿಗಳ ಒಳಗೆ ತೂರುವುದೂ ಕೂಡಾ ಒಂದು ಉದ್ದೇಶವಾಗಿತ್ತು.

1991 ರಲ್ಲಿ ಜಾಗತೀಕರಣ, ಖಾಸಗೀಕರಣ ನೀತಿಗಳ ಉದ್ಘಾಟನೆಯ ನಂತರ ಮತ್ತು ಸೋವಿಯತ್ ಮತ್ತು ಇತರ ಸಮಾಜವಾದಿ ದೇಶಗಳ ಕುಸಿತದ ನಂತರವಂತೂ ದೇಶೀ, ವಿದೇಶಿ ಫೌಂಡೇಶನ್‌ಗಳು ಬಹಳ ಕ್ರಿಯಾಶೀಲವಾದವು.

ಹೀಗೆ ವಿವಿಧ ರೀತಿಯ ಕಮ್ಯುನಿಸ್ಟ್ ವಿರೋಧಿ ಕ್ರಮಗಳ ಪರಿಸರವನ್ನು ಇಂದು ಕಮ್ಯುನಿಸ್ಟ್ ಚಳುವಳಿಗಳು ಮತ್ತು ಸರ್ಕಾರಗಳು ಎದುರಿಸಬೇಕಾಗಿದೆ.

**ಸರ್ಕಾರದ ವಜಾ ನಂತರ ಬೆಳೆದ ಕಮ್ಯುನಿಸ್ಟ್ ಚಳುವಳಿ**

1959ರ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಜಾ ನಂತರ ಅಮೇರಿಕದ ಸರ್ಕಾರ ಮತ್ತು ಕಾರ್ಪೊರೇಟ್‌ಗಳಲ್ಲಿ ಹಾಗೂ ಕ್ಯಾಥೊಲಿಕ್ಕರಲ್ಲಿ ಭಾರತದಲ್ಲಿ ಕಮ್ಯುನಿಸ್ಟರನ್ನು ಅಡಗಿಸಿ ಬಿಟ್ಟೆವು ಎಂಬ ಸಾಧನೆಯ ಹರುಷ ತುಂಬಿ ತುಳುಕಿತ್ತೇನೋ ಗೊತ್ತಿಲ್ಲ. ಆದರೆ ಮುಂದೇನಾಯಿತು?

ಸರ್ಕಾರ ವಜಾ ಆದ ಮೇಲೆ 1960 ರಲ್ಲಿ ಮತ್ತೆ ರಾಷ್ಟ್ರಪತಿ ಆಡಳಿತವೆಂಬ ಅಪ್ರತ್ಯಕ್ಷ ಕಾಂಗ್ರೆಸ್ ಆಡಳಿತದ ಹಿಡಿತದಲ್ಲಿ ಅಕ್ರಮಗಳನ್ನು ಎಸಗಿದರೂ ಕಮ್ಯುನಿಸ್ಟ್

ಪಕ್ಷ ಶೇ.39.0 ರಷ್ಟು ಮತಗಳನ್ನು ಪಡೆದು 1957 ಕ್ಕಿಂತ ಶೇ. 3.72 ಹೆಚ್ಚು ಮತಗಳನ್ನು ಗಳಿಸಿತು. ಕಮ್ಯುನಿಸ್ಟ್ ಬೆಂಬಲಿತ ಸ್ವತಂತ್ರ ಅಭ್ಯರ್ಥಿಗಳೂ ಸೇರಿದರೆ ಶೇ. 43.7 ಮತಗಳನ್ನು ಪಡೆಯಿತು. 1957ಕ್ಕಿಂತ ಭಿನ್ನವಾಗಿ ಉಳಿದೆಲ್ಲ ಪಕ್ಷಗಳೂ ಒಟ್ಟಾಗಿ ವಿಮೋಚನಾ ಸಮರದ ಶೋಷಕ ಮೈತ್ರಿಕೂಟ ರಚಿಸಿ ಕಮ್ಯುನಿಸ್ಟರ ವಿರುದ್ಧ ಸ್ಪರ್ಧಿಸಿದ್ದರಿಂದ ಭಾರತದ ಚುನಾವಣಾ ಪದ್ಧತಿಯ ವೈಚಿತ್ರ್ಯದ ಕಾರಣ ಸ್ಥಾನಗಳ ಸಂಖ್ಯೆ ಕಡಿಮೆಯಾಯಿತು.

ಈ ಚುನಾವಣೆಗಳಾದ ಎರಡೇ ವರ್ಷದಲ್ಲಿ ನಡೆದ 1962 ರ ಲೋಕಸಭಾ ಚುನಾವಣೆಯಲ್ಲಿ ಕಮ್ಯುನಿಸ್ಟರ ಮತ ಬೆಂಬಲದ ಪ್ರಮಾಣ ಮತ್ತೆ ಶೇ.7 ರಷ್ಟು ಹೆಚ್ಚಿತು. ಕಮ್ಯುನಿಸ್ಟ್ ಪಕ್ಷದ ಮತ್ತು ಅದರ ಬೆಂಬಲಿತ ಅಭ್ಯರ್ಥಿಗಳು 9 ಸ್ಥಾನ ಪಡೆದರು. ಈ ಬಾರಿ ಕಮ್ಯುನಿಸ್ಟರ ಜೊತೆಗಿದ್ದ ಆರೆಸ್ಪಿಗೆ 1 ಸ್ಥಾನ ಸೇರಿದರೆ ಒಟ್ಟು 18 ಸ್ಥಾನಗಳಲ್ಲಿ 10 ಸ್ಥಾನ ಕಮ್ಯುನಿಸ್ಟ್ ಮೈತ್ರಿ ಕೂಟಕ್ಕೆ. ಕಾಂಗ್ರೆಸ್ ಕೂಟಕ್ಕೆ ಕೇವಲ 6 ಸ್ಥಾನಗಳು ಮಾತ್ರ

ಕಾಂಗ್ರೆಸ್ ನೇತೃತ್ವದ ಸಮ್ಮಿಶ್ರ ಸರ್ಕಾರ ಪೂರ್ಣಾವಧಿಯನ್ನೇನೂ ಪೂರೈಸಲಿಲ್ಲ. ದುಡಿವ ಜನರು ಎತ್ತುತ್ತಿದ್ದ ಬದುಕಿನ ಪ್ರಶ್ನೆಗಳಿಗೆ ಪರಿಹಾರ ನೀಡಲಾಗದೆ ಮಧ್ಯದಲ್ಲಿಯೇ ಕುಸಿದು ಬಿದ್ದಿತು. 126 ಒಟ್ಟು ಸ್ಥಾನಗಳಲ್ಲಿ 94 ಸದಸ್ಯರ ಭಾರಿ ಬಹುಮತ ಇದ್ದರೂ ಸ್ವತಃ ಕಾಂಗ್ರೆಸ್ ಪಕ್ಷಕ್ಕೇ 63 ಸ್ಥಾನಗಳ ಮೂಲಕ ಸರಳ ಬಹುಮತ ಇದ್ದರೂ ಕೂಡಾ ಸರ್ಕಾರ ಅವಿಶ್ವಾಸ ನಿರ್ಣಯದಲ್ಲಿ ಸೋತು ಹೋಯಿತು.

1965 ರಲ್ಲಿ ಮತ್ತೆ ಮಧ್ಯಂತರ ಚುನಾವಣೆ. ಭಾರತ- ಚೀನಾ ಯುದ್ಧದ ನೆಪದಲ್ಲಿ ಸಾವಿರಾರು ಸಿಪಿಐಎಂ ನಾಯಕರು, ಕಾರ್ಯಕರ್ತರನ್ನು ಜೈಲಿಗೆ ಹಾಕಲಾಗಿತ್ತು. ಚುನಾವಣೆಗೆ ಸ್ಪರ್ಧಿಸಿದ 30 ಸಿಪಿಐಎಂ ಅಭ್ಯರ್ಥಿಗಳು ಜೈಲಿನೊಳಗೇ ಇದ್ದರು. ಅವರನ್ನು ಚುನಾವಣೆಗಳಲ್ಲಿ ಮತದಾರರಿಗೆ ಮುಖ ತೋರಿಸುವುದಕ್ಕೂ ಬಿಡದೆ ಪ್ರಜಾಪ್ರಭುತ್ವದ ಅಣಕ ಮಾಡಲಾಯಿತು. ಇಂತಹ ಪರಿಸ್ಥಿತಿಯಲ್ಲೂ ಬಂಧಿತರಲ್ಲಿ 29 ಜನರೂ ಸೇರಿದಂತೆ ಸಿಪಿಐಎಂ 40 ಸ್ಥಾನಗಳನ್ನು ಗೆದ್ದು ಅತಿ ಹೆಚ್ಚು ಸ್ಥಾನ ಪಡೆದ ಪಕ್ಷವಾಗಿ ಹೊರಹೊಮ್ಮಿತು. ಅದರ ಬೆಂಬಲ ಪಡೆದ 9 ಸದಸ್ಯರು ಮತ್ತು ಸಿಪಿಐಎಂ ನೇತೃತ್ವದ ಸರ್ಕಾರಕ್ಕೆ ಬೆಂಬಲ ನೀಡಿದ ಎಸ್‌ಎಸ್‌ಪಿ ಸೇರಿದಂತೆ ಬಹುಮತದ ಬೆಂಬಲ ಇದ್ದರೂ ಸರ್ಕಾರ ರಚಿಸಲು ಕಾಂಗ್ರೆಸ್‌ನ ಕೇಂದ್ರ ಸರ್ಕಾರ ಬಿಡಲಿಲ್ಲ. ಜನ ಮನ್ನಣೆ ಪಡೆದು ಚುನಾಯಿತರಾದವರನ್ನೂ ಬಂಧನದಿಂದ ಬಿಡುಗಡೆ ಮಾಡದ ಕಾರಣ ಸರ್ಕಾರದ ರಚನೆಯನ್ನು ಅಸಾಧ್ಯ ಮಾಡಲಾಯಿತು ಮತ್ತು ವಿಧಾನಸಭೆಯನ್ನು ವಿಸರ್ಜಿಸಲಾಯಿತು. ಪ್ರಜಾಪ್ರಭುತ್ವವನ್ನು ಮತ್ತೊಂದು ಬಾರಿ ಕೊಲೆ ಮಾಡಲಾಯಿತು.

1967 ರ ಮಹಾ ಚುನಾವಣೆಗಳಲ್ಲಿ ಸಿಪಿಐಎಂ ಮತ್ತು ಅದರ ಮೈತ್ರಿ ಗೆಲ್ಲುವುದು ಶತಃ ಸಿದ್ಧವೆಂದು ಶೋಷಕ ಕೂಟಕ್ಕೆ ಮನವರಿಕೆಯಾಯಿತು. ಮತ್ತೆ ಅಮೇರಿಕದ ಹಣದ ಹೊಳೆ ಹರಿಯಿತು. ಕ್ಯಾಥೊಲಿಕ್ ಬಿಷಪ್‌ಗಳು ಹಲವರು ನೇರಾ ನೇರಾ

ಚುನಾವಣಾ ಸಮರದಲ್ಲಿ ಕಾಂಗ್ರೆಸ್ ಬೆಂಬಲಕ್ಕಿಳಿದರು. ಕ್ಯಾಥೊಲಿಕರ ಪಕ್ಷವಾದ ಕೇರಳ ಕಾಂಗ್ರೆಸ್ ಅನ್ನೂ ಬಿಟ್ಟು ಕಾಂಗ್ರೆಸ್‌ಗೆ ಮತ ಚಲಾಯಿಸುವಂತೆ ಜಂಟಿ ಹೇಳಿಕೆಗಳನ್ನು ನೀಡಿದರು. ಆರ್ಚ್ ಬಿಷಪ್ ಕೂಡಾ ಬಹಿರಂಗವಾಗಿ ಕಾಂಗ್ರೆಸ್ ಬೆಂಬಲಿಸಿದರು. ಕೆಲವರು ಕಾಂಗ್ರೆಸ್ ಚುನಾವಣಾ ಪ್ರಚಾರದ ಸಭೆಗಳಲ್ಲಿಯೂ ಭಾಗವಹಿಸಿದರು. ಮುಸ್ಲಿಮರ ಧಾರ್ಮಿಕ ನಾಯಕ ತಂಗಳ್, ಜಮಾಯತ್ ಉಲ್ ಉಲೇಮಾದಂತಹ ಸಂಘಟನೆಗಳು 'ಮಸೀದಿಗಳನ್ನು ಮಾರ್ಕ್ಸ್‌ವಾದಿಗಳಿಂದ ರಕ್ಷಿಸಿ' ಎಂದು ಕರೆ ನೀಡಿದವು. ನಾಯರ್ ಭೂಮಾಲಕ ವರ್ಗಗಳ ನಾಯಕರು ಕಾಂಗ್ರೆಸ್ ಗೆಲ್ಲಿಸಲು ಕಟಿ ಬದ್ಧರಾಗಿ ನಿಂತರು.

ಅಮೇರಿಕದ ಹಣ, ಧರ್ಮ, ಜಾತಿಗಳ ಹಿಡಿತ ಮತ್ತು ಪ್ರಲೋಭನೆಗಳನ್ನು ಧಿಕ್ಕರಿಸಿ ಸಿಪಿಐಎಂ ನೇತೃತ್ವದ ಮೈತ್ರಿ ಶೇ. 53.85 ಮತದೊಂದಿಗೆ 133 ಸ್ಥಾನಗಳಲ್ಲಿ 117 ಸ್ಥಾನಗಳನ್ನು ಪಡೆಯಿತು. ಕಾಂಗ್ರೆಸ್ ಕೇವಲ 9 ಸ್ಥಾನಗಳನ್ನು ಕೇರಳ ಕಾಂಗ್ರೆಸ್ 5 ಸ್ಥಾನಗಳನ್ನೂ ಪಡೆಯಿತು.

ನಂತರ ತುರ್ತು ಪರಿಸ್ಥಿತಿಯನ್ನು ಬಳಸಿ ಸಿಪಿಐಎಂ ಪಕ್ಷ ಹಾಗೂ ಜನ ಚಳುವಳಿಗಳನ್ನು ಹತ್ತಿಕ್ಕಲು ಹಲವು ದಮನಕಾರಿ ಕ್ರಮಗಳನ್ನು ಕೈಗೊಳ್ಳಲಾಯಿತು. ಈ ಅವಧಿಯ ವಿಕಾರಗಳ ವಿರುದ್ಧದ ಬಲವಾದ ಹೋರಾಟಗಳ ನಂತರ 1980 ರಲ್ಲಿ ಕೇರಳದ ರಾಜಕೀಯ ಒಂದು ರೀತಿ ಸ್ಥಿರತೆಯನ್ನು ಪಡೆದುಕೊಂಡಿತು. ಸಿಪಿಐಎಂ ನೇತೃತ್ವದಲ್ಲಿ ಎಡಪಂಥೀಯ ಪ್ರಜಾಪ್ರಭುತ್ವ ರಂಗ ಮತ್ತು ಕಾಂಗ್ರೆಸ್ ನೇತೃತ್ವದ ಜಾತಿವಾದಿ, ಧಾರ್ಮಿಕ ಮೂಲಭೂತವಾದಿ ಪಕ್ಷಗಳ ಸಂಯುಕ್ತ ಪ್ರಜಾಪ್ರಭುತ್ವ ರಂಗ (ಯುಡಿಎಫ್) ರೂಪುಗೊಂಡವು. 1959 ರ ವರ್ಗ ಸಂಘರ್ಷ ಈ ರೀತಿಯ ರಾಜಕೀಯ ರೂಪವನ್ನು ಪಡೆದುಕೊಂಡಿತು. ನಂತರದ ನಾಲ್ಕು ದಶಕಗಳ ಕಾಲ ಎಲ್ಡಿಎಫ್ ಮತ್ತು ಯುಡಿಎಫ್‌ಗಳು ಒಂದರ ನಂತರ ಇನ್ನೊಂದು ಅವಧಿಗೆ ಆಯ್ಕೆಯಾಗುತ್ತಾ ಬಂದವು. ಅವೆರಡರ ನಡುವೆ ಮತಗಳ ಅಂತರ ಇಡೀ ರಾಜ್ಯದಲ್ಲಿ ಕೇವಲ ಒಂದೆರಡು ಶೇಕಡಾಕ್ಕೆ ಸೀಮಿತವಾಗಿತ್ತು. ಒಂದು ಕ್ಷೇತ್ರದಲ್ಲಿ ಕೆಲವೇ ನೂರು ಮತಗಳ ಅಂತರದಲ್ಲಿ ಸೋಲು ಗೆಲುವು ನಿರ್ಧಾರವಾಗುತ್ತಿತ್ತು.

ದೇಶದಲ್ಲೇ ಅತಿ ಹೆಚ್ಚಿನ ಅಲ್ಪ ಸಂಖ್ಯಾತರ ಮತಗಳಿರುವ ರಾಜ್ಯವಾಗಿರುವ ಸನ್ನಿವೇಶದಲ್ಲಿ ಈ ಮತಗಳ ಮೇಲಿನ ಚರ್ಚ್ ಮಸೀದಿಗಳ ಧರ್ಮಾಧಿಕಾರಿಗಳ ಹಿಡಿತ ಮುಖ್ಯ ಪಾತ್ರ ವಹಿಸುತ್ತಾ ಬಂದಿದೆ. ಈ ಧರ್ಮಾಧಿಕಾರಿಗಳ ಮೂಲಕ ವಿದೇಶಿ ಸರ್ಕಾರಗಳು ಮತ್ತು ವಿದೇಶಿ ಕಾರ್ಪೊರೇಟ್ ಶಕ್ತಿಗಳು ಆಟವಾಡುತ್ತಿವೆ.

1980ರಲ್ಲಿ ರಚನೆಯ ನಂತರದ ಈ ನಾಲ್ಕು ದಶಕಗಳಲ್ಲಿ ಆರು ಬಾರಿ ಎಡ ಪ್ರಜಾಪ್ರಭುತ್ವ ರಂಗ ಚುನಾಯಿತವಾಗಿ ಸರ್ಕಾರ ನಡೆಸಿದೆ. ಸರ್ಕಾರಗಳು ಐದು ವರ್ಷಕ್ಕೊಮ್ಮೆ ಬದಲಾಗುವ ಪರಿಸ್ಥಿತಿಯಿಂದಾಗಿ ಎಲ್‌ಡಿಎಫ್ ಸರ್ಕಾರಗಳು

ಅಧಿಕಾರದಲ್ಲಿದ್ದಾಗ ಭೂಸುಧಾರಣೆ, ದುಡಿಯುವವರ ವೇತನ, ಪಡಿತರ ಕ್ರಮಗಳನ್ನು ಕೈಗೊಳ್ಳುವುದು, ಖಾಸಗಿ ಶಿಕ್ಷಣಕ್ಕೆ ಕಡಿವಾಣ ಹಾಕುವುದು ಯುಡಿಎಫ್ ಅಧಿಕಾರಕ್ಕೆ ಬಂದಾಗ ಇಂತಹ ಅನೇಕ ಕಾರ್ಯಕ್ರಮಗಳ ನಿಲುಗಡೆ ಅಥವಾ ಹಿನ್ನಡೆಯಾಗುವುದು ಮತ್ತೆ ಎಡ ಸರ್ಕಾರ ಆಯ್ಕೆಯಾದಾಗ ಅವುಗಳನ್ನು ಮುಂದುವರೆಸಿ ಉತ್ತಮಗೊಳಿಸಿವುದು ಹೀಗೆ ರಾಜ್ಯದ ಜನತೆಯ ಬದುಕು ಮತ್ತು ಅಭಿವೃದ್ಧಿ ಅತ್ತಿತ್ತ ತೂಗಾಡುತ್ತಾ ಸಾಗುವ ಪರಿಸ್ಥಿತಿ ಉಂಟಾಯಿತು.

ಈ ಅತಂತ್ರ ಪರಿಸ್ಥಿತಿಯಲ್ಲೂ ಸಿಕ್ಕ ಅವಕಾಶಗಳ ಬಳಸಿಕೊಂಡು ಹಲವು ವಿಷಯಗಳಲ್ಲಿ ದೇಶದಲ್ಲೆಲ್ಲಾ ಹೆಸರಾಗುವಂತಹ ಆಡಳಿತವನ್ನು ಎಲ್‌ಡಿಎಫ್ ಸರ್ಕಾರಗಳು ನೀಡಿದವು. ಅವುಗಳಲ್ಲಿ ರಾಜ್ಯ ಮಟ್ಟದಲ್ಲಿ ಭೂ ಸುಧಾರಣೆ ಜಾರಿ ಮತ್ತು ವಿಮರ್ಶೆಗೆ ಒಂದು ಮಂಡಳಿಯ ಮೂಲಕ ಪರಿಣಾಮಕಾರಿ ಜಾರಿ, ವ್ಯಾಪಕ ಪಡಿತರ ಪದ್ಧತಿ –ಮಾಮೂಲಿನ ಅಕ್ಕಿ ಸಕ್ಕರೆಗೆ ಸೀಮಿತವಾಗದೆ ಆಹಾರ ಧಾನ್ಯಗಳ ಜೊತೆಗೆ ಬೇಳೆಗಳು, ಬೇಳೆಕಾಳುಗಳು, ಅಡಿಗೆ ಎಣ್ಣೆ, ಮೆಣಸಿನಕಾಯಿ ಮೊದಲಾದ ಲವಾಜಮೆ ಇವುಗಳನ್ನು ಕಡಿಮೆ ಬೆಲೆಗೆ ನೀಡುವುದು ಓಣಂ, ಬಕ್ರೀದ್, ಕ್ರಿಸ್ಮಸ್ ಹಬ್ಬಗಳಲ್ಲಿ ಹಬ್ಬಗಳಿಗಾಗಿಯೇ ವಿಶೇಷ ಪಡಿತರ ನೀಡಿಕೆಗಳಿಂದಾಗಿ ಬೆಲೆ ಏರಿಕೆಯನ್ನು ನಿಯಂತ್ರಣಕ್ಕೆ ತರಲು ಸಾಧ್ಯವಾಯಿತು. ಅಧಿಕಾರ ವಿಕೇಂದ್ರೀಕರಣ, ಜನರೇ ರೂಪಿಸುವ ಯೋಜನೆ, ಎಲ್ಲ ರಂಗಗಳನ್ನು ವ್ಯಾಪಿಸಿದ ಸಹಕಾರಿ ವ್ಯವಸ್ಥೆಯ ಜಾಲ ಎಲ್‌ಡಿಎಫ್‌ನ ಬಹಳ ಪ್ರಸಿದ್ಧಿ ಪಡೆದ ಮತ್ತೆ ಕೆಲವು ಯೋಜನೆಗಳು.

ಇತ್ತೀಚೆಗಿನ ಎಲ್‌ಡಿಎಫ್ ಸರ್ಕಾರ ಸರ್ಕಾರಿ ಶಾಲೆಗಳು, ಸಾರ್ವಜನಿಕ ಕೈಗಾರಿಕೆಗಳ ಉತ್ತಮೀಕರಣ, ಎರಡು ವರ್ಷ ಕಾಡಿದ ಮಹಾ ಪ್ರವಾಹ ಕೇರಳದ ಜನರ ಮನ ಸೆಳೆಯಿತು. ಜನಪರ ಕೋವಿಡ್ ನಿರ್ವಹಣೆಯಂತೂ ವಿಶ್ವದ ಗಮನ ಸೆಳೆದದ್ದು ಒಂದು ದಾಖಲೆ. ಇದರಿಂದಾಗಿ ಕೇರಳದ ಚುನಾವಣಾ ರಂಗದಲ್ಲಿ 2021ರಲ್ಲಿ ಎರಡನೇ ಬಾರಿಗೆ ಎಲ್‌ಡಿಎಫ್ ಮತ್ತೆ ಜಯ ಗಳಿಸಿದ್ದು ಮತ್ತೊಂದು ದಾಖಲೆ.

ಆದರೆ ಭಾರತದ ರಾಜಕೀಯ ಜನಪರತೆಗೆ ಅತ್ಯಂತ ಪ್ರತಿಕೂಲವಾಗಿದೆ. ಕೇಂದ್ರ ಸರ್ಕಾರ ಸರ್ವಾಧಿಕಾರಿ ಆರೆಸ್ಸೆಸ್– ಬಿಜೆಪಿಯ ಹಿಡಿತಕ್ಕೆ ಸಿಕ್ಕಿದೆ. ಅದು ರಾಜ್ಯಪಾಲರೂ ಸೇರಿದಂತೆ ತನ್ನ ಅಧೀನದ ಎಲ್ಲ ಸಂಸ್ಥೆಗಳನ್ನು ಬಳಸಿ ಕೇರಳ ಸರ್ಕಾರವನ್ನು ದಿನಂಪ್ರತಿ ಹಲವು ತೆರನಾಗಿ ಕಾಡತೊಡಗಿದೆ. ಆರೆಸ್ಸೆಸ್– ಬಿಜೆಪಿಯ ಕೋಮು ದ್ವೇಷ, ಹಿಂಸಾ ರಾಜಕಾರಣ ಕೇರಳದಲ್ಲಿ ಮುಸ್ಲಿಂ, ಕ್ರಿಶ್ಚಿಯನ್ ಸಮುದಾಯಕ್ಕೆ ಭಯವನ್ನುಂಟು ಮಾಡಿದೆ. ಇದು ಎಡಪಂಥೀಯ ಸರ್ಕಾರಕ್ಕೆ ಮತ್ತು ರಾಜಕಾರಣಕ್ಕೆ ದೊಡ್ಡ ಸವಾಲುಗಳನ್ನು ಒಡ್ಡಿದೆ.

ಹೊಸ ಪರಿಸ್ಥಿತಿಯಲ್ಲಿ ಹೊಸ ಪವಿತ್ರ ಕೂಟ ರಚನೆಯಾಗಿದೆ. ಮತ್ತಷ್ಟು ಬಲವಾಗಿ

ಕ್ರಿಶ್ಚಿಯನ್, ಮುಸ್ಲಿಂ ಧಾರ್ಮಿಕ ಶಕ್ತಿಗಳು, ಜಾತಿವಾದಿ ಸಂಘಟನೆಗಳು. ಇವುಗಳ ಜೊತೆಗೆ ಜೊತೆಗೆ ಹಿಂದೂ ಧಾರ್ಮಿಕ ದುರುಪಯೋಗ ಹೊಸತಾಗಿ ಸೇರಿದೆ. ದೇಶದ ಎರಡು ಮುಖ್ಯ ಕಾರ್ಪೊರೇಟ್ ಪರ ಪಕ್ಷಗಳಾದ ಬಿಜೆಪಿ ಮತ್ತು ಕಾಂಗ್ರೆಸ್ ಕಮ್ಯುನಿಸ್ಟ್ ನೇತೃತ್ವದ ಎಲ್.ಡಿ.ಎಫ್ ವಿರುದ್ಧ ಜೊತೆಗೂಡಿವೆ.

ಹೀಗೆ ಕಮ್ಯುನಿಸ್ಟರನ್ನು ಕಂಡರೆ ಬೃಹತ್ ಕಾರ್ಪೊರೇಟ್‌ಗಳಿಗಿರುವ ಭಯ ಅವರ ಸರಕಾರಗಳು ಮತ್ತು ಅವರ ನಿಯಂತ್ರಣದ ಮಾಧ್ಯಮ, ಬೌದ್ಧಿಕ ಸಂಸ್ಥೆಗಳು, ದೇಶದ ಒಳಗಿನ ಗುತ್ತೇದಾರಿ ಕಾರ್ಪೊರೇಟ್‌ಗಳ ಪಕ್ಷಗಳು ಕೂಡಾ ತಮ್ಮೆಲ್ಲ ಶಕ್ತಿ, ಸಾಮರ್ಥ್ಯವನ್ನು ವಿನಿಯೋಗಿಸಿ ಕಮ್ಯುನಿಸ್ಟ್ ಸರ್ಕಾರಗಳನ್ನು ಬೆಳೆಯಲು ಬಿಡದಂತೆ, ಗೆಲ್ಲಲಾಗದಂತೆ ಪ್ರಯತ್ನಗಳನ್ನು ನಡೆಸುತ್ತಿವೆ. ಕೇರಳದ ಶೋಷಕ ಶಕ್ತಿಗಳಿಗೆ ಅಪಾರ ಬಲ ತುಂಬುತ್ತವೆ. ಹೀಗೆ ಎಲ್ಲ ದಿಕ್ಕುಗಳಿಂದಲೂ ಕಮ್ಯುನಿಸ್ಟ್ ಸರ್ಕಾರವನ್ನು ಮುತ್ತುವ ಪವಿತ್ರ ಕೂಟಗಳು ಹೊಸ ಸನ್ನಿವೇಶಗಳಲ್ಲಿ ಹೊಸ ಹೊಸದಾಗಿ ರಚನೆಯಾಗುತ್ತಲೇ ಇವೆ. ವರ್ಗ ಸಂಘರ್ಷ ನಿರಂತರವಾಗಿದೆ. ಈ ಸಂದರ್ಭದಲ್ಲಿ ಈ ಕೃತಿಯು ಅತ್ಯಂತ ಪ್ರಸ್ತುತವಾಗಿದೆ.

ಬಹು ಶ್ರಮವಹಿಸಿ ಮಾಡಿದ ಸಂಶೋಧನೆಯನ್ನು ಲೇಖಕರು ಪುಸ್ತಕ ರೂಪದಲ್ಲಿ ತಂದದ್ದು ಕೇರಳದ ಜನರಿಗೆ ಮಾತ್ರವಲ್ಲ ಇಡೀ ದೇಶದ ಜನರಿಗೊಂದು ಉಪಕಾರ. ಲೇಖಕರು ಈ ಪುಸ್ತಕವನ್ನು ಸಂಶೋಧನಾ ಗ್ರಂಥಗಳ ಜಟಿಲ ಚೌಕಟ್ಟು, ಭಾಷೆಗಳಿಂದ ಬಿಡುಗಡೆಗೊಳಿಸಿ ಸಾಮಾನ್ಯ ಓದುಗರಿಗೆ ಸರಳವಾಗಿ ಮತ್ತು ಒಂದಷ್ಟು ಸಂಕ್ಷಿಪ್ತಗೊಳಿಸಿ ಬರೆದರೆ ಮತ್ತಷ್ಟು ಹೆಚ್ಚು ಪ್ರಯೋಜನಕಾರಿಯಾಗುತ್ತದೆಂದು ನನ್ನ ಅನಿಸಿಕೆ.

ಇಂತಹ ಸಂಶೋಧನಾ ಗ್ರಂಥವನ್ನು ಅನುವಾದ ಮಾಡುವುದು ಬಹಳ ಕಷ್ಟದ ಕೆಲಸ. ಅದನ್ನು ಆಸಕ್ತಿಯಿಂದ ಮತ್ತು ತಾಳ್ಮೆಯಿಂದ ಮಾಡಿದ ಕೆ.ಪ್ರಭಾಕರನ್ ಅವರಿಗೆ ಕನ್ನಡ ಓದುಗರ ಪರವಾಗಿ ವಂದನೆಗಳು.

**ಜಿ.ಎನ್.ನಾಗರಾಜ್**
ಮಾಜಿ ಸದಸ್ಯರು, ಸಿಪಿಐ(ಎಂ) ಕೇಂದ್ರಸಮಿತಿ
ಮಾಜಿ ಕಾರ್ಯದರ್ಶಿ, ಸಿಪಿಐ(ಎಂ) ಕರ್ನಾಟಕ ರಾಜ್ಯಸಮಿತಿ

## ಅನುವಾದಕರ ಮಾತು...

ಕೇರಳದ ಕಾಸರಗೋಡು ಜಿಲ್ಲೆಯ ಮಂಜೇಶ್ವರದ ಸಂಗಾತಿ ಜಯಾನಂದ್ ರವರು ಒಂದು ದಿನ ದೂರವಾಣಿ ಮೂಲಕ ಸಂಪರ್ಕಿಸಿ ಅವರ ಸಂಪರ್ಕದಲ್ಲಿರುವ ಮಂಜೇಶ್ವರದ ಗೋವಿಂದ ಪೈ ಸ್ಮಾರಕ ಕಾಲೇಜಿನ ಪ್ರಾಧ್ಯಾಪಕರಾದ ಡಾ. ಸಲೀಂ ಎನ್ನುವವರು ತಮ್ಮ ಪಿಎಚ್‌ಡಿ ಅಧ್ಯಯನಕ್ಕೆ ಸಿದ್ಧಪಡಿಸಿದ ಮಲಯಾಳಂ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿಕೊಡುವ ಬಗ್ಗೆ ವಿಚಾರಿಸಿದ್ದರು. ನಂತರ ಆ ಕೃತಿಯು 1957ರಲ್ಲಿ ಕೇರಳದಲ್ಲಿ ಐತಿಹಾಸಿಕವಾದ ಇಎಂಎಸ್ ನೇತೃತ್ವದ ಕಮ್ಯೂನಿಸ್ಟ್ ಸರ್ಕಾರದ ಸ್ಥಾಪನೆಯಾಗಿದ್ದರ ಬಗ್ಗೆಯೂ ನಂತರದಲ್ಲಿ ಆ ಸರ್ಕಾರವನ್ನು ಕೇಂದ್ರ ಸರ್ಕಾರ ವಜಾಗೊಳಿಸಿದ್ದರ ಬಗ್ಗೆಯೂ ನಡೆಸಿದ ಶ್ರಮದಾಯಕವಾದ ಒಂದು ಅಧ್ಯಯನವೇ ಈ ಕೃತಿ ಎನ್ನುವುದು ತಿಳಿದು ಬಂದಿದ್ದರ ಹಿನ್ನಲೆಯಲ್ಲಿ ಅದರ ಅನುವಾದ ಕಾರ್ಯವನ್ನು ಕೈಗೆತ್ತಿಕೊಂಡು ಅದನ್ನು ಪೂರ್ಣಗೊಳಿಸಿದ್ದೇನೆ. ಡಾ.ಸಲೀಂ ರವರು ನಡೆಸಿದ ಅಧ್ಯಯನವು ಬಹಳ ಶ್ರಮದಾಯಕವಾಗಿದ್ದು ಅದು ಇಂದಿನ ತಲೆಮಾರಿನ ಸಂಗಾತಿಗಳಿಗೆ ಕೇರಳದಲ್ಲಿ ನಡೆದ ಕಮ್ಯೂನಿಸ್ಟ್ ಚಳುವಳಿಯ ಒಂದು ಪ್ರಾಯೋಗಿಕ ವೀಕ್ಷಣೆಯನ್ನು ಅಥವಾ ದೃಷ್ಟಿಕೋನವನ್ನು ಒದಗಿಸುವಂಥದ್ದಾಗಿದೆ. ಕಮ್ಯುನಿಸ್ಟ್ ಸಿದ್ಧಾಂತವನ್ನು ವಿರೋಧಿಸುವ ಭರದಲ್ಲಿ ಶೈಕ್ಷಣಿಕ ಸಂಸ್ಥೆಗಳ ನೇತೃತ್ವವಹಿಸಿಕೊಂಡಿದ್ದ ಎಲ್ಲಾ ಮತೀಯ ಶಕ್ತಿಗಳು, ಎಲ್ಲಾ ಪಂಗಡಕ್ಕೆ ಸೇರಿದ ಜಾತೀಯ ಶಕ್ತಿಗಳು, ಎಸ್ಟೇಟ್ ಮಾಲೀಕರು, ಬಂಡವಾಳಶಾಹಿ ಪ್ರಭುಗಳು ಹೇಗೆ ತಮ್ಮ ಕರಾಳಮುಖವನ್ನು ಅನಾವರಣಗೊಳಿಸಿ, ಪ್ರಪಂಚದಲ್ಲೇ ಪ್ರಥಮ ಬಾರಿಗೆ ಪ್ರಜಾಪ್ರಭುತ್ವ ರೀತಿಯಡಿಯಲ್ಲಿ ನಡೆದ ಚುನಾವಣೆಯಲ್ಲಿ ಆಯ್ಕೆಯಾಗಿ ಬಂದ ಮೊದಲ ಸರ್ಕಾರವನ್ನು ಹೇಗೆ ಹಿಂಸಾತ್ಮಕವಾಗಿ, ಅಪಪ್ರಚಾರಗಳ ಮೂಲಕ ಅಪ್ರಜಾಸತ್ತಾತ್ಮಕವಾಗಿ ವಜಾಗೊಳಿಸಲಾಯಿತು ಎನ್ನುವುದನ್ನು ಎಲ್ಲಾ ಸಾಕ್ಷ್ಯಾಧಾರಗಳ ಮೂಲಕ ದೃಢಪಡಿಸುತ್ತಿದ್ದಾರೆ, ಡಾ ಸಲೀಂ.

ಕನ್ನಡದ ಓದುಗರಿಗೆ ಇದೊಂದು ರಾಜಕೀಯ ಶಾಸ್ತ್ರದ ಮತ್ತು ಇತಿಹಾಸದ ಅಧ್ಯಯನ ವಿಷಯವಾಗಿ ಕುತೂಹಲ ಮೂಡಿಸಬಹುದೆಂದು ನಾನು ಅಂದು ಕೊಂಡಿದ್ದೇನೆ.

ಸಂಗಾತಿ ಜಯಾನಂದ್‌ರವರಿಗೆ, ಅನುವಾದಕ್ಕೆ ಒಪ್ಪಿಗೆ ನೀಡಿದ ಲೇಖಕ ಡಾ. ಸಲೀಂ ಮತ್ತು ಪ್ರಕಾಶನ ಜವಾಬ್ದಾರಿಯನ್ನು ಹೊತ್ತ ಕ್ರಿಯಾ ಮಾಧ್ಯಮದ ಸಂಗಾತಿ ವಸಂತರಾಜ್‌ರವರಿಗೆ ಧನ್ಯವಾದಗಳು...

**ಕೆ. ಪ್ರಭಾಕರನ್**
ಶಿವಮೊಗ್ಗ

# ಉಲ್ಲೇಖ ಓದಲು ಸೂಚನೆ

ಮೂಲ ಪುಸ್ತಕವು ಸಂಶೋಧನಾ ಗ್ರಂಥವಾಗಿದ್ದರಿಂದ ಲೇಖಕರು ಪುಸ್ತಕದಲ್ಲಿ ಬರೆದಿರುವ ಪ್ರತಿಯೊಂದು ಹೇಳಿಕೆಗೂ ಪುರಾವೆ ರೂಪದಲ್ಲಿ ಈಗಾಗಲೇ ಪ್ರಕಟವಾಗಿರುವ ಗ್ರಂಥ, ಲೇಖನ, ಪತ್ರಿಕೆ ಅಥವಾ ತಾನೇ ಸ್ವತಃ ನಡೆಸಿದ ಸಂದರ್ಶನಗಳ ಉಲ್ಲೇಖವನ್ನೂ ಪಠ್ಯದಲ್ಲಿ ಅಲ್ಲಲ್ಲಿ ದಾಖಲಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಒಂದು ವಿಷಯದ ಪುರಾವೆ ಹಲವು ಮೂಲಗಳಿಂದ ಮತ್ತು ಹಲವು ವಿಷಯಗಳ ಪುರಾವೆ ಒಂದೇ ಮೂಲದಿಂದ ಪಡೆದುಕೊಂಡಿರುವ ಸಾಧ್ಯತೆ ಸಹಜವಾಗಿಯೇ ಹೆಚ್ಚಿನದಾಗಿರುತ್ತದೆ.

ಈ ಪುಸ್ತಕದಲ್ಲಿ ಒಂದೇ ಉಲ್ಲೇಖ ಹಲವು ಬಾರಿ ಬರುವುದರಿಂದಾಗಿ ಓದುಗರ ಅನುಕೂಲಕ್ಕಾಗಿ ಉಲ್ಲೇಖಗಳ ಮೂಲ ಗ್ರಂಥಗಳನ್ನು, ಪತ್ರಿಕೆಗಳನ್ನು ಪುಸ್ತಕದ ಕೊನೆಯಲ್ಲಿ ಉಲ್ಲೇಖಗಳು ಶೀರ್ಷಿಕೆಯಡಿಯಲ್ಲಿ ಪಟ್ಟಿ ಮಾಡಲಾಗಿದೆ. ಹಾಗೂ ಗ್ರಂಥವಾಗಿದ್ದರೆ ಪುಟ ಸಂಖ್ಯೆ, ಪತ್ರಿಕೆಯಾಗಿದ್ದರೆ ಪತ್ರಿಕೆ ಸಂಪುಟ, ಸಂಚಿಕೆ ಅಥವಾ ಪತ್ರಿಕೆಯ ದಿನಾಂಕವನ್ನು ಪಠ್ಯದ ನಡುವೆಯೇ ಪಟ್ಟಿಯಲ್ಲಿ ಕೊಟ್ಟ ಸಂಖ್ಯೆಯೊಂದಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರವನ್ನು ಕೊಡಲಾಗಿದೆ.

ಪಠ್ಯದ ಮಧ್ಯೆ ಬಂದಿರುವ (1:V1pXXXI) ಸ್ವರೂಪದ ಸಂಕೇತಾಕ್ಷರಗಳ ವಿವರಣೆ ಈ ರೀತಿಯಾಗಿದೆ.

- ಸಂಖ್ಯೆಯ ಮುಂದೆ ':' ಇದೆ ಎಂದಾದರೆ ಅದು ಉಲ್ಲೇಖಗಳ ಪಟ್ಟಿಯ ಕ್ರಮಸಂಖ್ಯೆಯಾಗಿರುತ್ತದೆ.
- V ಮುಂದಿನ ಸಂಖ್ಯೆಯು Volume(ಸಂಪುಟ)ನ ಸಂಖ್ಯೆಯನ್ನು ಪ್ರತಿನಿಧಿಸುತ್ತದೆ.
- p ಯ ಮುಂದೆ ಸಂಖ್ಯೆ ಇದೆ ಎಂದಾದರೆ ಅದು ಪುಟ ಸಂಖ್ಯೆಯಾಗಿರುತ್ತದೆ.
- ':' ನಂತರ 6 ಅಂಕಿಗಳು 99.99.99 ಸ್ವರೂಪದಲ್ಲಿದ್ದರೆ ಪ್ರಕಟಣೆಯು ನಿಯತಕಾಲಿಕೆಯಾಗಿರುತ್ತದೆ ಮತ್ತು ಈ ಸಂಖ್ಯೆಗಳು ದಿನಾಂಕವನ್ನು ಪ್ರತಿನಿಧಿಸುತ್ತದೆ.
- ಪುಟ ಸಂಖ್ಯೆಯ ಮುಂದಿನ ಅಥವಾ ದಿನಾಂಕದ ಮುಂದಿನ '–' ಚಿಹ್ನೆ 'ರಿಂದ' ಅನ್ನುವ ಅರ್ಥವನ್ನು ಕೊಡುತ್ತದೆ.

ಉದಾಹರಣೆಗಾಗಿ ಪಠ್ಯದಲ್ಲಿ ಬರುವ ಉಲ್ಲೇಖಗಳ ವಿವರಣೆ ಹೀಗಿವೆ,

(1:V1pXXXI)->

ಉಲ್ಲೇಖಗಳು ಕೋಷ್ಟಕದ ಕ್ರಮ ಸಂಖ್ಯೆ 1ರಲ್ಲಿರುವ ಪ್ರಕಟಣೆ(Documents of the Communist Movement in India)ಯ Volume (ಸಂಪುಟ) 1 ರಲ್ಲಿ Page No (ಪುಟ ಸಂಖ್ಯೆ) XXXI

(32:04.11.58)->

ಉಲ್ಲೇಖಗಳ–ಪಟ್ಟಿಯ ಕ್ರಮ ಸಂಖ್ಯೆ 32ರಲ್ಲಿರುವ ಪ್ರಕಟಣೆ (Periodicals: (Malayalam) Malayalam Manorama)Dated 04-11-1958

(58:p17;48:p11)->

ಉಲ್ಲೇಖಗಳು–ಕೋಷ್ಟಕದ ಕ್ರಮ ಸಂಖ್ಯೆ 58ರಲ್ಲಿರುವ ಪ್ರಕಟಣೆಯ ಪುಟ ಸಂಖ್ಯೆ17 ಹಾಗೂ 48 ರಲ್ಲಿರುವ ಪ್ರಕಟಣೆಯ ಪುಟ ಸಂಖ್ಯೆ 11

(39:25.02.42-25.03.42)->

ಉಲ್ಲೇಖಗಳ ಪಟ್ಟಿಯ ಕ್ರಮಸಂಖ್ಯೆ 39ರಲ್ಲಿರುವ ನಿಯತಕಾಲಿಕೆಯ ದಿನಾಂಕ 25.02.1942 ರಿಂದ 25–03–1942 ಸಂಚಿಕೆಗಳು

(1:p320-323;p407-413)->

ಉಲ್ಲೇಖಗಳು–ಕೋಷ್ಟಕದ ಕ್ರಮ ಸಂಖ್ಯೆ 1 ರಲ್ಲಿರುವ ಪ್ರಕಟಣೆಯ ಪುಟ ಸಂಖ್ಯೆ 320 ರಿಂದ 323 ಮತ್ತು ಪುಟ ಸಂಖ್ಯೆ 407 ರಿಂದ 413)

# ಪರಿವಿಡಿ

# ಲೇಖಕರ ಪ್ರಸ್ತಾವನೆ

ಐಕ್ಯಕೇರಳದ ಮೊದಲ ಸಾರ್ವತ್ರಿಕ ಚುನಾವಣೆಯ ಮೂಲಕ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಸರ್ಕಾರದ ರಚನೆಗೊಂಡಿದ್ದರ ಚಾರಿತ್ರಿಕ ಹಿನ್ನೆಲೆ ಮತ್ತು ಆ ಸರ್ಕಾರದ ವಿಸರ್ಜನೆಗೆ ದಾರಿಮಾಡಿಕೊಟ್ಟ ನಿಗೂಢ ಶಕ್ತಿಗಳನ್ನೂ ಅದರ ಹಿಂದೆ ಇದ್ದಂಥ ವಿವಿಧ ಅಂಶಗಳನ್ನೂ ವಿಶ್ಲೇಷಿಸುವುದು, ಈ ಅಧ್ಯಯನದ ಉದ್ದೇಶವಾಗಿದೆ. 1957ರಲ್ಲಿ ಕೇರಳದಲ್ಲಿ ಪ್ರಜಾಸತ್ತಾತ್ಮಕವಾಗಿ ಚುನಾಯಿತವಾದ ಇಎಂಎಸ್ ನಂಬೂದಿರಿಪಾಡ್ ಸರ್ಕಾರವನ್ನು ಕಿತ್ತೊಗೆಸೆಯುವುದಕ್ಕಾಗಿ, ಸಂಘಟಿಸಲಾದ ವಿಮೋಚನಾ ಹೋರಾಟ ಮತ್ತು ಅದರ ಮುಂದುವರಿದ ಭಾಗವಾಗಿ, ರಾಜ್ಯ ಸರ್ಕಾರವನ್ನು ವಿಸರ್ಜಿಸಲು ಕೇಂದ್ರ ಸರ್ಕಾರದ ನಡೆಸಿದ ಹಸ್ತಕ್ಷೇಪವು, ಸ್ವಾತಂತ್ರ್ಯಾನಂತರದ ಭಾರತದಲ್ಲಿನ ಅತ್ಯಂತ ಗಮನಾರ್ಹ ರಾಜಕೀಯ ಬೆಳವಣಿಗೆಗಳಲ್ಲೊಂದಾಗಿರುತ್ತದೆ. ಕೇರಳದಲ್ಲಿ, ರಾಷ್ಟ್ರೀಯ ಮಟ್ಟದಲ್ಲಿ, ಸಾಮಾಜಿಕ-ರಾಜಕೀಯ ಕ್ಷೇತ್ರಗಳಲ್ಲಿ ಬಿಸಿ ಬಿಸಿಯಾದ ಚರ್ಚೆಗಳು ಮತ್ತು ಸಂವಾದಗಳಿಗೆ ಇದೊಂದು ರೋಮಾಂಚನಕಾರಿ ವಿಷಯವಾಗಿ ಪರಿಣಮಿಸಿತು. ಎಂಥ ವಿರೋಧಾಭಾಸದ ಸಂಗತಿಯೆಂದರೆ, ಕೇರಳದ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದ ಅನೇಕರು ನಂತರ ಪಶ್ಚಾತಾಪ ಪಟ್ಟಿದ್ದರು. ಅಂತಹ ತಪ್ಪೊಪ್ಪಿಗೆಗಳ ಬಗ್ಗೆ, ನನ್ನ ಕಾಲೇಜು ಶಿಕ್ಷಣದ ಸಮಯದಲ್ಲಿ ನಾನು ಮಾಧ್ಯಮಗಳ ಮೂಲಕ ಓದಿ ತಿಳಿದುಕೊಂಡಾಗ, ನನ್ನಲ್ಲುಂಟಾದ ಬೌದ್ಧಿಕ ಕುತೂಹಲ, ಈ ಅಧ್ಯಯನಕ್ಕೆ ಪ್ರೇರಣೆ ನೀಡಿತು.

'ಸತ್ಯಾನಂತರ ಸಮಾಜ' (ಪೋಸ್ಟ್ ಟ್ರುತ್ ಸೊಸೈಟಿ) 'ಸತ್ಯಾನಂತರ ರಾಜಕೀಯ' (ಪೋಸ್ಟ್ ಟ್ರುತ್ ಪಾಲಿಟಿಕ್ಸ್/ಪೋಸ್ಟ್ ಫ್ಯಾಕ್ಚುವಲ್ ಪಾಲಿಟಿಕ್ಸ್/ಪೋಸ್ಟ್ ರಿಯಾಲಿಟಿ ಪಾಲಿಟಿಕ್ಸ್) ಮುಂತಾದ ಪರಿಕಲ್ಪನೆಗಳ ಆಧಾರದ ಮೇಲೆ, ಹೊಸ ಅಧ್ಯಯನ ವಿಧಾನಗಳು ಕೇವಲ ಇತ್ತೀಚೆಗಷ್ಟೆ, ಆರಂಭಗೊಂಡಿದ್ದು, ಶೈಕ್ಷಣಿಕವಾಗಿ ಗಮನ ಸೆಳೆದಿರುತ್ತದೆ. (ಆಕ್ಸ್‌ಫರ್ಡ್ ಶಬ್ದಕೋಶಗಳಲ್ಲಿ ಪೋಸ್ಟ್-ಟ್ರುತ್ ಪದವನ್ನು, ಅದರ 2016ನೇ ವ್ಯಾಖ್ಯಾನವಾಗಿ ಘೋಷಿಸಲಾಗಿತ್ತು). ಸತ್ಯಾನಂತರ ರಾಜಕೀಯದಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ವಸ್ತುನಿಷ್ಠ ವಾಸ್ತವಗಳಿಗೆ ದೊಡ್ಡ ಮಟ್ಟದ ಪ್ರಭಾವ ಬೀರಲು ಸಾಧ್ಯವಾಗುವುದಿಲ್ಲ. ಬದಲಾಗಿ, ವೈಯಕ್ತಿಕ ನಂಬಿಕೆಗಳು ಮತ್ತು ಭಾವನೆಗಳಿಗೆ ಪ್ರಾಮುಖ್ಯತೆ ನೀಡಿ, ಪುನರಾವರ್ತಿಸಿದ ಉದ್ದೇಶಪೂರ್ವಕ ಸುಳ್ಳುಗಳನ್ನು ಆಧರಿಸಿ, ಸಾರ್ವಜನಕ ರಾಜಕೀಯ ಪರಿಸ್ಥಿತಿಯನ್ನು ರೂಪಿಸಲಾಗುತ್ತಾ ಇತ್ತು. ಆ ಅರ್ಥದಲ್ಲಿ, ಕೇರಳದಲ್ಲಿ ಸತ್ಯಾನಂತರದ ರಾಜಕೀಯವನ್ನು ಪರಿಣಾಮಕಾರಿಯಾಗಿ ಪ್ರಯೋಗಕ್ಕೆ ಅಳವಡಿಸಕೊಳ್ಳತೊಡಗಿದ್ದು, 1957-59ರ ಇಎಂಎಸ್ ನಂಬೂದಿರಿಪಾಡ್ ಸರ್ಕಾರವನ್ನು ಕಿತ್ತೊಗೆಯಲು ಆಯೋಜಿಸಲಾದ ವಿಮೋಚನಾ ಹೋರಾಟದ ಮೂಲಕವಾಗಿತ್ತು. ಆಂದೋಲನವನ್ನು ಹೆಸರಿಸಲು ಬಳಸಲಾದ 'ವಿಮೋಚನಾ

ಹೋರಾಟ' ಎಂಬ ಪದವು, ಸಾಮಾನ್ಯ ಜನರ ಬಾಯಲ್ಲಿ ಉಳಿದುಹೋಗಿದ್ದರೂ, ಈ ಪದಪ್ರಯೋಗ ಪ್ರಸ್ತುತ ಆಂದೋಲನಕ್ಕೆ ಸಂಬಂಧಿಸಿದಂತೆ, ವಿಪರ್ಯಾಸವಾಗಿದ್ದರೂ ಆಳವಾದ ಚರ್ಚೆ ಮತ್ತು ಸಂಕೀರ್ಣ ಸಂವಾದಗಳಿಗೆ ಹೆಚ್ಚು ಪ್ರಸ್ತುತವೂ ಆಗಿರುತ್ತದೆ. ವಿಮೋಚನಾ ಹೋರಾಟಕ್ಕೆ ಸಮಾನ ಇಂಗ್ಲಿಷ್ ಪದ ಸೂಚಿಸುವುದೇನೆಂದರೆ, ದುಷ್ಟ ಶಕ್ತಿಗಳಿಂದ ವಿಮೋಚನೆ ಅಥವಾ ಮುಕ್ತಿ, ಎಂದು. ವಿಮೋಚನಾ ಹೋರಾಟ ಎಂದರೆ, ಅನ್ಯಾಯದ ಶಕ್ತಿಗಳಿಂದ ನಡೆದ ವಿಮೋಚನಾ ಹೋರಾಟವಾಗುತ್ತದೆ. ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ವಿಮೋಚನಾ ಹೋರಾಟದ ಅಧ್ಯಯನವು ಈ ಸಂದರ್ಭದಲ್ಲಿ ಕೆಲವು ಪ್ರಶ್ನೆಗಳನ್ನು ಎತ್ತುತ್ತದೆ. ಆಗ ಕೇರಳದಲ್ಲಿ ಯಾವ ರೀತಿಯ ಬಿಡುಗಡೆಯ ಅಗತ್ಯವಿತ್ತು...? ಇಎಂಎಸ್ ನಂಬೂದಿರಿಪಾಡ್ ನೇತೃತ್ವದ ಕೇರಳದ ಮೊದಲ ಜನಪ್ರಿಯ ಸರ್ಕಾರದ ವಿರುದ್ಧದ ಹಿಂಸಾತ್ಮಕ ಆಂದೋಲನವನ್ನು ಟೀಕಿಸಲು, 'ವಿಮೋಚನಾ ಹೋರಾಟ' ಎಂಬ ಪದ ಎಷ್ಟು ಸೂಕ್ತ...? ದುಡಿಯುವ ಮತ್ತು ಸಂಕಷ್ಟಪಡುತ್ತಿರುವ, ಜನಸಾಮಾನ್ಯರ ಜೀವನ ಮಟ್ಟವನ್ನು ಸುಧಾರಿಸುವ ಸದುದ್ದೇಶಗಳು ಆ ಆಡಳಿತಾತ್ಮಕ ಕ್ರಮಗಳಿಗೆ ಇದ್ದವು, ಎಂದು ಸರ್ಕಾರದ ನೀತಿಗಳು ಮತ್ತು ಕಾರ್ಯಕ್ರಮಗಳನ್ನು ಅವಲೋಕಿಸುವಾಗ ವ್ಯಕ್ತವಾಗುತ್ತದೆ. ಸರ್ಕಾರದ ಇಂಥ ಕಾರ್ಯಚಟುವಟಿಕೆಗಳನ್ನೇ ನಿಜವಾಗಿಯೂ ವಿಮೋಚನಾ ಕಾರ್ಯಕ್ರಮ ಎಂದು ಕರೆಯಬೇಕಾಗಿರುವುದು. 1958ರ ಜುಲೈ ತಿಂಗಳಿನಲ್ಲಿ, ಪನಂಬಿಳ್ಳಿ ಗೋವಿಂದ ಮೇನನ್, ತ್ರಿಶೂರ್‌ನಲ್ಲಿ ಸೀತಾರಾಮ್ ಮಿಲ್ ಆಂದೋಲನವನ್ನು ಬೆಂಬಲಿಸಿ ಭಾಷಣ ಮಾಡಿ, ಸರ್ಕಾರದ ವಿರುದ್ಧದ ಆಂದೋಲನವನ್ನು ಸೂಚಿಸುವಾಗ, ಈ ವಿಮೋಚನಾ ಹೋರಾಟ ಎನ್ನುವ ಪದಪ್ರಯೋಗ ನಡೆಸಿದ್ದರು. ಜಾತಿ/ಸಮುದಾಯಗಳ ಮುಖಂಡರು, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು, ರಾಜಕೀಯ ನಾಯಕರು, ಸ್ಥಳೀಯ ಭಾಷಾ ಪತ್ರಿಕೆಗಳು, ದೇಶೀಯ ಪತ್ರಿಕೆಗಳು, ಕಮ್ಯುನಿಸ್ಟ್ ಪಕ್ಷದ ನಿಯಂತ್ರಿತ ಪತ್ರಿಕೆ ಮುಂತಾದವುಗಳೆಲ್ಲವೂ ಇಎಂಎಸ್ ನಂಬೂದಿರಿಪಾಡ್ ನೇತೃತ್ವ ವಹಿಸಿದ್ದ ಮೊದಲ ಸರ್ಕಾರದ ವಿರುದ್ಧದ ಚಳುವಳಿಯನ್ನು ವಿವರಿಸಲು ಈ ಪದವನ್ನು ಯಥೇಚ್ಛವಾಗಿ ಬಳಸಲಾಯಿತು. ಸಾಂವಿಧಾನಿಕವಾಗಿ, ಪ್ರಜಾಸತ್ತಾತ್ಮಕವಾಗಿ, ಸ್ಥಾಪಿತವಾದ ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರ ಎನ್ನುವ ವಾಸ್ತವತೆಯ ವಿರುದ್ಧ, ಸಾಮಾನ್ಯವಾಗಿ ಇಎಂಎಸ್ ನಂಬೂದಿರಿಪಾಡ್‌ರವರ ನೇತೃತ್ವದಲ್ಲುಂಟಾದ, ಆ ಸರ್ಕಾರವು ಜಾರಿಗೆ ತರಲು ಪ್ರಯತ್ನಿಸಿದ ಮಾನವೀಯ, ಸಾಮಾಜಿಕ ನ್ಯಾಯ, ಸಮಾನತೆಯ ದಾರ್ಶನಿಕತೆಯ ದೃಷ್ಟಿಗಳನ್ನು ಆಧರಿಸಿದ ಆಡಳಿತ ಸುಧಾರಣೆಗಳ ವಿರುದ್ಧ, ವಿಶೇಷವಾಗಿ ಹುಟ್ಟಿಕೊಂಡ ಅಸಹಿಷ್ಣುತೆ, ರಾಜಕೀಯ ವಿರೋಧತ್ವ, ದ್ವೇಷ ಮುಂತಾದವುಗಳೆಲ್ಲವೂ ಒಟ್ಟಿಗೇ ಸೇರಿ ಉಂಟಾದ ಋಣಾತ್ಮಕ ರಾಜಕೀಯ ಚಿಂತನೆಯ ಪ್ರಚೋದನೆಗಳಿಂದಾಗಿ, ರೂಪುಗೊಂಡಿದ್ದು, ಜಾತಿ ಆಧಾರಿತ ಊಳಿಗಮಾನ್ಯ ಶ್ರೀಮಂತವರ್ಗದ, ಬಲಪಂಥೀಯ ರಾಜಕೀಯ ಪಕ್ಷಗಳು ಧಾರ್ಮಿಕ ಶಕ್ತಿಗಳು, ವಸಾಹತುಶಾಹಿ ಶೋಷಣಾ ವ್ಯವಸ್ಥೆಯ

ಗಣನೀಯ ಪ್ರಭಾವಗಳಿದ್ದ, ಧಾರ್ಮಿಕ ಶಕ್ತಿಗಳ, ಆಧ್ಯಾತ್ಮಿಕತೆಯ ಹೆಸರುಗಳ ಮಹತ್ವದ ಪ್ರಭಾವಗಳನ್ನೂ ಬಳಸಿಕೊಂಡು, 'ವಿಮೋಚನಾ ಹೋರಾಟ' ಎನ್ನುವ ಪದವು, ಸಾರ್ವಜನಿಕ ಪ್ರಜ್ಞೆಯಲ್ಲಿ ಹಾಗೆಯೇ ಕರಗಿ ಸೇರಿಕೊಂಡಿತು. ಭಿನ್ನವಾದ ವಿಷಯವಿರುವ ಒಂದು ಚಾರಿತ್ರಿಕ ಘಟನೆಯ, ಅದರ ವಿರುದ್ಧಾರ್ಥದಲ್ಲಿ ಪ್ರಖರ ಪ್ರಚಾರದಿಂದಾಗಿ ಗಳಿಸಿದ್ದರ ಉತ್ತಮ ಉದಾಹರಣೆಯಾಗಿದೆ, ಇದು. ಇದನ್ನು, ಐತಿಹಾಸಿಕವಾಗಿ ಸ್ಥಾಪಿಸಲು ಸಾಧ್ಯವಾಗಿದ್ದರಿಂದ, ಈ ಸಂಶೋಧನಾ ಗ್ರಂಥದಲ್ಲೂ ಪ್ರಸ್ತುತ ಪದಗುಚ್ಛವನ್ನೇ ಬಳಸಿಕೊಳ್ಳಲಾಗಿದೆ.

ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ರೂಪುಗೊಂಡಿದ್ದರ ಬಗ್ಗೆ ಮತ್ತು 1957ರವರೆಗಿನ ಅದರ ಚಟುವಟಿಕೆಗಳ ಬಗ್ಗೆ, ಸಂಕ್ಷಿಪ್ತವಾಗಿ ಪರಿಶೀಲಿಸಿಕೊಂಡು ಈ ಅಧ್ಯಯನವು ಪ್ರಾರಂಭವಾಗುತ್ತದೆ. ಇಎಂಎಸ್ ನಂಬೂದಿರಿಪಾಡ್‌ರವರ ನೇತೃತ್ವದಲ್ಲಿ ಸಚಿವ ಸಂಪುಟ ರಚನೆ, ಆ ಸರ್ಕಾರದ ಆಡಳಿತ ಸುಧಾರಣೆಗಳು, ಸರ್ಕಾರ ಮತ್ತು ಕಮ್ಯುನಿಸ್ಟ್ ವಿರೋಧಿ ಆಂದೋಲನಗಳು, ಜಾತಿ/ಸಮುದಾಯದ ಗುಂಪುಗಳ ಚಟುವಟಿಕೆಗಳು, ಸರ್ಕಾರದ ವಿಸರ್ಜನೆಗೆ ಕಾರಣವಾಗುವ ಕೇಂದ್ರದ ಹಸ್ತಕ್ಷೇಪ ಮುಂತಾದ ಕ್ರಮಾನುಗತ ಚಾರಿತ್ರಿಕ ಘಟನೆಗಳಿಗೆ ಅರ್ಹವಾದ ಪ್ರಾಮುಖ್ಯತೆಯೊಂದಿಗೆ ಮುಂದುವರಿದ ಸಂಗತಿಗಳನ್ನು ಪರಿಶೋಧನೆಗೆ ಒಳಪಡಿಸಲಾಗಿರುತ್ತದೆ. ಸಂಶೋಧನಾ ಅಧ್ಯಯನಕ್ಕಿರುವ ಸಂಕೀರ್ಣತೆಯನ್ನು ಪರಿಗಣಿಸಿಕೊಂಡು, ಪ್ರಾಥಮಿಕ ಉಪಲಬ್ಧಗಳನ್ನು ವಿಪುಲವಾಗಿ ಸಂಗ್ರಹಿಸಿ, ಅವುಗಳನ್ನು ಇಲ್ಲಿ ಬಳಸಿಕೊಳ್ಳಲಾಗಿರುತ್ತದೆ. ಸಮಕಾಲೀನ ಸುದ್ದಿಪತ್ರಿಕೆಗಳು, ನಿಯತಕಾಲಿಕಗಳು, ಕರಪತ್ರಗಳು, ದಾಖಲೆ ಮುಂತಾದವುಗಳು ಒದಗಿಸುವ ತಿಳುವಳಿಕೆಗಳು ನಿಜಕ್ಕೂ ಬಹಳಷ್ಟು ಉಪಯುಕ್ತಗಳಾಗಿದ್ದವು. ಮೂಲಭೂತ ಸಾಕ್ಷ್ಯಸಾಮಗ್ರಿಗಳು, ದಾಖಲೆಗಳು, ಅಧಿಕ ಪ್ರಮಾಣ ಮತ್ತು ವೈವಿಧ್ಯತೆಗಳಿಂದಾಗಿ, ಅವುಗಳ ಸೂಕ್ಷ್ಮ ಪರಿಶೋಧನೆಗಳಿಗಾಗಿ ಈ ಸಂಶೋಧಕ ಹೆಚ್ಚಿನ ಸಮಯವನ್ನು ವ್ಯಯಮಾಡಬೇಕಾಗಿ ಬಂದಿರುತ್ತದೆ. ಸಂಶೋಧನೆಗೆ ಅಳವಡಿಸಿಕೊಳ್ಳಲಾದ ಕೆಲವು ದಾಖಲೆಗನ್ನು ಸಂದರ್ಭಾನುಸಾರವಾಗಿ ಪ್ರಸ್ತುತಪಡಿಸಲಾಗಿದೆ.

ಈ ಗ್ರಂಥವನ್ನು ಆಧರಿಸಿದ ಸಂಶೋಧನಾ ಪ್ರಬಂಧವನ್ನು ತಯಾರಿಸುವಲ್ಲಿ ನನಗೆ ಅಪಾರವಾಗಿ ಸಹಾಯ ಮಾಡಿದ ಅನೇಕ ವ್ಯಕ್ತಿಗಳು ಮತ್ತು ಸಂಸ್ಥೆಗಳಿಗೆ ನಾನು ಋಣಿಯಾಗಿದ್ದೇನೆ, ಅವರೆಲ್ಲರ ಹೆಸರುಗಳನ್ನು ಇಲ್ಲಿ ನಮೂದಿಸುವುದು ತ್ರಾಸದಾಯಕ. ಆದಾಗ್ಯೂ ಈ ನಿಟ್ಟಿನಲ್ಲಿ ನನಗೆ ಹೆಚ್ಚಿನ ರೀತಿಯಲ್ಲಿ ಸಹಾಯ ಮಾಡಿದ ಕೆಲವು ವ್ಯಕ್ತಿಗಳಿಗಾದರೂ ನನ್ನ ಕೃತಜ್ಞತೆಯನ್ನು ವ್ಯಕ್ತಪಡಿಸದೇ ಹೋದಲ್ಲಿ ಅದು ನನ್ನ ಕಡೆಯಿಂದ ಆಗುವ ದೊಡ್ಡ ಪ್ರಮಾದವಾಗಿಬಿಡುತ್ತದೆ, ಎಂದು ನಾನು ಭಾವಿಸುತ್ತೇನೆ. ಇವರುಗಳಲ್ಲಿ ನನ್ನ ಪ್ರಥಮ ಗಣನೆ, ನನ್ನ ಈ ಸಂಶೋಧನೆಗೆ ಡಾ. ವಿ.ವಿ. ಕುಂಞಿಕೃಷ್ಣನ್‌ರವರು, ಮೇಲ್ವಿಚಾರಣೆಯನ್ನು ವಹಿಸುತ್ತಾ, ಸಾಕಷ್ಟು ಮಾರ್ಗದರ್ಶನ, ಪ್ರೋತ್ಸಾಹಗಳನ್ನು ನೀಡಿರುತ್ತಾರೆ. ಸಂಶೋಧನೆಗೆ ವಿಷಯವನ್ನು ಆಯ್ಕೆ ಮಾಡುವುದರಿಂದ ಆರಂಭಿಸಿ,

ಪ್ರಬಂಧಕ್ಕೆ ಅಂತಿಮ ರೂಪವನ್ನು ಕೊಡುವವರೆಗೂ ಬತ್ತದ ಚಿಲುಮೆಯಾಗಿ ವರ್ತಿಸಿ, ನನಗೆ ಪ್ರೋತ್ಸಾಹಿಸುತ್ತಾ, ತಮ್ಮ ಅಮೂಲ್ಯ ಸಹಕಾರವನ್ನು ನೀಡಿರುತ್ತಾರೆ.

ನನ್ನ ಸಂಶೋಧನೆಯ ವಿವಿಧ ಘಟ್ಟಗಳಲ್ಲಿ, ಅಮೂಲ್ಯವಾದ ಸಲಹೆ ಸೂಚನೆಗಳನ್ನು ನೀಡಿದ, ಖ್ಯಾತ ಚರಿತ್ರೆಯ ವಿದ್ವಾಂಸರಾದ ಪ್ರೊ. ಎಂ.ಜಿ.ಎಸ್. ನಾರಾಯಣರಿಗೂ ಡಾ. ಪಿ.ಪಿ.ಅಬ್ದುಲ್ ರಜ಼ಾಕ್‌ರಿಗೂ ಕೋಳ಼ಿಕೋಡ್ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಅಧ್ಯಾಪಕರಾಗಿದ್ದ ಡಾ. ಅಶೋಕನ್ ಮುಂಡೋನ್, ಡಾ. ಕೆ.ಎಂ. ಗಣೇಶ್, ಡಾ. ಕೆ.ಎಸ್. ಮಾಧವನ್ ಡಾ. ಮಾಹಿನ್, ಡಾ. ಹರಿದಾಸ್, ಡಾ. ಮುಜೀಬ್ ರಹಮಾನ್, ಡಾ. ವಿನೀತ್ ಮುಂತಾದ ವಿದ್ವಾಂಸ ಶ್ರೇಷ್ಠರೆಲ್ಲರಿಗೂ ಅವರು ನೀಡಿದ ಅಪ್ರತಿಮವಾದ ಸಲಹೆ ಸೂಚನೆ ಮತ್ತು ಬೆಂಬಲವನ್ನು ಪರಿಗಣಿಸಿ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇನೆ.

ತಲಶ್ಶೇರಿ ಬ್ರೆನ್ನನ್ ಕಾಲೇಜಿನ ಇತಿಹಾಸದ ಅಧ್ಯಾಪಕರಾಗಿಯೂ ತಿರುವನಂತಪುರಂ ವಿಶ್ವವಿದ್ಯಾಲಯ ಕಾಲೇಜು ಸೇರಿದಂತೆ ಸರ್ಕಾರಿ ಕಾಲೇಜುಗಳ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿದ ಪ್ರೊ. ಟಿ.ಪಿ. ನಳಿನಾಕ್ಷನ್‌ರೊಂದಿಗಿನ ಕೃತಜ್ಞತೆ ಮತ್ತು ಋಣದ ಮಾತುಗಳಿಂದ ವಿವರಿಸಲಸಾಧ್ಯವಾಗಿರುತ್ತದೆ. ಈ ಗ್ರಂಥದ ರಚನೆಗೆ ಅಳವಡಿಸಿಕೊಳ್ಳಲಾದ ಸಂಶೋಧನಾ ಪ್ರಬಂಧವನ್ನು ಇಂಗ್ಲಿಷ್‌ನಲ್ಲಿ ರಚಿಸಿದಾಗ ಅದರಲ್ಲಿದ್ದ ನ್ಯೂನ್ಯತೆಗಳನ್ನು ಪರಿಶೀಲಿಸಿ ಅಗತ್ಯವಾದ ಬದಲಾವಣೆಗಳನ್ನು ತರುವುದಕ್ಕೂ ಪ್ರಬಂಧದ ಪ್ರಮುಖ ಭಾಗಗಳನ್ನು ಅನುವಾದಿಸಿ ಪುಸ್ತಕ ರೂಪದಲ್ಲಿ ಪ್ರಕಾಶನಗೊಳಿಸುವುದಕ್ಕೂ ಒದಗಿಬಂದ ಸ್ನೇಹನಿಧಿ ಪ್ರೊ. ನಳಿನಾಕ್ಷನ್ ನೀಡಿದಂಥ ಕ್ರಿಯಾತ್ಮಕವಾದ ಸಲಹೆ ಸೂಚನೆಗಳಿಗೆ ಕೃತಜ್ಞತೆ ಮತ್ತು ಋಣಗಳ ಭಾಷೆಯ ಮೂಲಕ ವ್ಯಕ್ತಪಡಿಸಲಾಗಲೀ ಮರೆಯುವುದಕ್ಕಾಗಲೀ ಸಾಧ್ಯವಾಗುವಂಥದ್ದಲ್ಲ. ಕೇರಳ ಇತಿಹಾಸ ಸಂಶೋಧನಾ ಕೌನ್ಸಿಲಿನ ಡೈರೆಕ್ಟರಾಗಿ ಸೇವೆ ಸಲ್ಲಿಸಿದ, ಮಹಾತ್ಮ ಗಾಂಧಿ ವಿಶ್ವವಿದ್ಯಾಲಯದ ಡಾ. ಸನಲ್‌ಮೋಹನ್‌ರವರು ನನ್ನ ಸಂಶೋಧನೆಯ ದಿನಗಳ ಸಂದರ್ಭಗಳಲ್ಲಿ ನೀಡಿದಂಥ ನಿರಂತರ ಪ್ರೋತ್ಸಾಹ, ಕ್ರಿಯಾತ್ಮಕ ಸಲಹೆ, ಅವಲೋಕನ ಮುಂತಾದವುಗಳಿಗೂ ಸ್ಪಷ್ಟತೆಯನ್ನು ಉಂಟುಮಾಡುವುದಕ್ಕೆ ನೀಡಿದಂಥ ಬೌದ್ಧಿಕ ಬೆಂಬಲಕ್ಕೂ ನಾನು ಎಣೆಮೀರಿದ ಬಾಧ್ಯತೆಗಳನ್ನು ಹೊಂದಿರುತ್ತೇನೆ. ಅಧ್ಯಯನಕ್ಕೆ ಅಳವಡಿಸಿಕೊಂಡ ವಿವಿಧ ಕರಪತ್ರಗಳು, ನೋಟಿಸುಗಳು, ಡೈರಿಟಿಪ್ಪಣಿಗಳು, ಸಮಕಾಲೀನ ಪ್ರಕಟಣೆಗಳು ಸೇರಿದಂತೆ ಮೂಲಭೂತವಾದ ಬಹಳಷ್ಟು ಸಾಕ್ಷ್ಯಸಾಮಾಗ್ರಿಗಳು, ಅನುಕೂಲತೆಗಳನ್ನು ಒದಗಿಸಿದ ಆದರಣೀಯರಾದ ಪ್ರೊ. ಜೋಸೆಫ್ ಪುಲಿಕ್ಕುನೆಲ್ (ಓಶಾನಮೌಂಟ್, ಪಾಲಾ), ಶ್ರೀ ಕೆ.ಎಂ. ಚುಮ್ಮಾರ್ (ವೇಟಿಂಜಾನಂ, ಪಾಲಾ), ಶ್ರೀ ಎಂ.ಎ. ಜಾನ್ (ಕುರುವಿಲಜಾಡ್, ಕೊಟ್ಟಾಯಂ) ಮುಂತಾದವರನ್ನು ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತೇನೆ.

ಸಂಶೋಧನಾ ಅಧ್ಯಯನಕ್ಕೆ ಅಗತ್ಯವಿರುವ ಉಲ್ಲೇಖ (ರೆಫರೆನ್ಸ್) ಸೌಲಭ್ಯವನ್ನು ಪೂರೈಸಿದ ಗ್ರಂಥಪಾಲಕರೆಲ್ಲರಿಗೂ ಪುರಾತನ ದಾಖಲೆಪತ್ರಗಳನ್ನು ನಿರ್ವಹಣೆ ಮಾಡುವವರಿಗೂ ಅನಂತವಾದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ಮುಖ್ಯವಾಗಿ ನ್ಯಾಷನಲ್ ಆರ್ಕೈವ್ಸ್ ಆಫ್ ಇಂಡಿಯಾ (ನವದೆಹಲಿ), ನೆಹರು ಸ್ಮಾರಕ ವಸ್ತುಸಂಗ್ರಹಾಲಯ ಮತ್ತು ಗ್ರಂಥಾಲಯ (ನವದೆಹಲಿ), ಪಿ.ಸಿ. ಜೋಶಿ ಆರ್ಕೈವ್ಸ್ ಆನ್ ಕಾಂಟೆಂಪರರಿ ಹಿಸ್ಟರಿ (ಜೆಎನ್‌ಯು), ಅಜೋಯ್ ಭವನ (ಸಿಪಿಐ ಕೇಂದ್ರ ಪ್ರಧಾನ ಕಛೇರಿ, ನವದೆಹಲಿ), ತಮಿಳುನಾಡು ಆರ್ಕೈವ್ಸ್, ಕನ್ನಿಮಾರಾ ಲೈಬ್ರರಿ, ಎಗ್ಮೋರ್; ದಿ ಹಿಂದೂ, ಚೆನ್ನೈ, ಕೇರಳ ಸ್ಟೇಟ್ ಆರ್ಕೈವ್ಸ್, ಕೇರಳ ವಿಶ್ವವಿದ್ಯಾಲಯ ಲೈಬ್ರರಿ, ಕೇರಳ ಅಸೆಂಬ್ಲಿ ಲೈಬ್ರರಿ, ಸಿಡಿಎಸ್, ಎ.ಕೆ.ಜಿ. ಸೆಂಟರ್ ಲೈಬ್ರರಿ, ಎಂ.ಎನ್. ಸ್ಮಾರಕ (ತಿರುವನಂತಪುರಂ), ಎನ್‌ಎಸ್‌ಎಸ್ ಪ್ರಧಾನ ಕಛೇರಿ ಚಂಗನಾಶ್ಶೇರಿ, ಸಾರ್ವಜನಿಕ ಗ್ರಂಥಾಲಯ ಪೊನ್ನುಕ್ಕುನ್ನಂ, ಪ್ರಿಯದರ್ಶಿನಿ ಪಬ್ಲಿಕ್ ಲೈಬ್ರರಿ, ಪ್ರವಿತ್ತಾನಂ, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಕ್ರಿಶ್ಚಿಯನ್ ಸ್ಟಡೀಸ್, ಎಡಮಟ್ಟಂ, ಪಾಲಾ, ಮಲಯಾಳಂ ಮನೋರಮಾ, ದೀಪಿಕಾ, ಕೇರಳ ಸಾಹಿತ್ಯ ಅಕಾಡೆಮಿ–ತ್ರಿಶೂರ್, ಅಪ್ಪನ್ ತಂಪುರಾನ್ ಮ್ಯೂಸಿಯಂ (ತ್ರಿಶೂರ್), ಕೋಳ಼ಿಕ್ಕೋಡ್ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಗ್ರಂಥಾಲಯ, ಮಲಯಾಳಂ ವಿಭಾಗದ ಗ್ರಂಥಾಲಯ, ಸಿ.ಎಚ್. ಮುಹಮ್ಮದ್ ಕೋಯಾ ಲೈಬ್ರರಿ, ರಿಜಿನಲ್ ಆರ್ಕೈವ್ಸ್, ಕೋಳ಼ಿಕ್ಕೋಡ್, ಮಾತೃಭೂಮಿ–ಕೋಳ಼ಿಕೋಡ್, ಕಣ್ಣೂರು ವಿಶ್ವವಿದ್ಯಾಲಯದ ಗ್ರಂಥಾಲಯ, ಸರ್ ಸೈಯದ್ ಕಾಲೇಜು ಗ್ರಂಥಾಲಯ ತಳಿಪರಂಬ್, ಕೇರಳದ ಹಲವು ಜಿಲ್ಲೆಗಳ ಸ್ಥಳೀಯ ಗ್ರಂಥಾಲಯ ಮುಂತಾದವುಗಳ ಗ್ರಂಥಪಾಲಕರು ಮತ್ತು ಸಿಬ್ಬಂದಿಗಳ ಸಹಕಾರವನ್ನು ವಿಶೇಷವಾಗಿ ಸ್ಮರಿಸುತ್ತೇನೆ.

ಸಹೋದ್ಯೋಗಿಗಳು ಮತ್ತು ಸಹ–ಸಂಶೋಧಕರಾಗಿ ಬೆಂಬಲವನ್ನು ಒದಗಿಸಲಾದ ಅನೇಕ ಜನರಿದ್ದಾರೆ. ಎಲ್ಲರನ್ನೂ ಹೆಸರುಗಳನ್ನು ಹೇಳಿ ನೆನಪಿಸಿಕೊಳ್ಳುವುದು ಅಸಾಧ್ಯವಾಗಿದ್ದರೂ ಕ್ರಿಯಾತ್ಮಕವಾದ ಚರ್ಚೆಗಳ ಸಂದರ್ಭಗಳಲ್ಲಿ ಜೊತೆಗಿರುತ್ತಿದ್ದ ಪ್ರೊ. ಕೆ.ವಿ. ವಿನೋದಕುಮಾರ್, ಪ್ರೊ. ಸತೀಶ್ ಕೆ.ವಿ., ಡಾ. ಹರಿ ಕುರುಪ್, ಡಾ. ಪಿ ಗೋಪಿನಾಥನ್, ಡಾ. ಕೆ.ಪಿ. ರವಿ, ಡಾ. ಪಿ.ಎಂ. ಇಸ್ಮಾಯಿಲ್, ಟಿ.ಪಿ.. ಅಬ್ದುಲ್ ರಶೀದ್, ಪ್ರೊ. ಜಿ.ಓ. ಸಂತೋಷ್, ಪ್ರೊ. ರಾಜೀವನ್, ಡಾ. ಶಿವದಾಸನ್ ತಿರುಮಂಗಲತ್, ಡಾ. ಕೆ.ಟಿ. ಸೆಬಾಸ್ಟಿಯನ್, ಡಾ. ಎ. ವತ್ಸಲನ್, ಡಾ.ಪಿ. ಪ್ರಭಾಕರನ್, ಡಾ. ಸಿ. ಬಾಲನ್, ಡಾ. ಮುಹಮ್ಮದ್ ಮುಸ್ತಫಾ, ಡಾ. ಗಾಡ್ವಿನ್ ಸಾಮ್ರಾಜ್, ಡಾ. ಪಿ.ಆರ್. ಶಿಥೋರ್, ಡಾ. ಶಾನವಾಜ್ ಪಿ. ಎಚ್, ಪ್ರೊ. ಶಿಬುಕುಮಾರ್, ಡಾ.ಯು. ರಾಜೀವ್, ಡಾ. ವಿ.ಪಿ.ಪಿ. ಮುಸ್ತಫಾ ಮುಂತಾದವರ ಸ್ನೇಹಪರವಾದ ನೆರವಿನಿಂದಾಗಿ, ಅಧ್ಯಯನಕ್ಕೆ ಉತ್ತೇಜನ ದೊರೆತಿರುತ್ತದೆ.

ಅಧ್ಯಯನದ ಉದ್ದೇಶಕ್ಕಾಗಿ ವಿವರಗಳನ್ನು ಸಂಗ್ರಹಿಸಲು ಸಂಪರ್ಕಿಸಿದಾಗ

ಉತ್ಸಾಹ, ಪ್ರೋತ್ಸಾಹ, ಬೆಂಬಲವನ್ನು ಮತ್ತು ಆಶೀರ್ವಾದಗಳನ್ನು ನೀಡಿದಂಥ ಬಹಳಷ್ಟು ಮಹಾನ್ ವ್ಯಕ್ತಿಗಳಿಗೆ (ಅವರಲ್ಲಿ ಕೆಲವರು ನಮ್ಮನ್ನು ಅಗಲಿದ್ದಾರೆ) ಅನಂತವಾದ ಕೃತಜ್ಞತೆಗಳನ್ನು ಋಣಬಾಧ್ಯತೆಗಳನ್ನು ಇಲ್ಲಿ ದಾಖಲಿಸಬಯಸುತ್ತೇನೆ. ಕಮ್ಯುನಿಸ್ಟ್ ಪಕ್ಷದ ಸರ್ಕಾರದಲ್ಲಿ ನಿರ್ಣಾಯಕವಾದ ಸ್ಥಾನಗಳನ್ನು ಅಲಂಕರಿಸಿದ ಗೌರವಾನ್ವಿತ ನ್ಯಾಯಮೂರ್ತಿ ವಿ.ಆರ್. ಕೃಷ್ಣಯ್ಯರ್, ಕೆ.ಆರ್. ಗೌರಿಯಮ್ಮ, ಖ್ಯಾತ ವಿದ್ವಾಂಸರು, ಪ್ರಸಿದ್ಧ ಲೇಖಕರೊಂದಿಗೆ, ಸಾರ್ವಜನಿಕ ಕಾರ್ಯ ಕ್ಷೇತ್ರದಲ್ಲಿಯೂ ತಮ್ಮ ಅಮೂಲ್ಯ ಕೊಡುಗೆ ನೀಡಿದ ಪಿ ಗೋವಿಂದಪಿಳ್ಳ, ಎಂ.ಕೆ. ಸಾನುಮಾಸ್ತರ್, ಡಾ. ಎಂ.ಪಿ. ಪರಮೇಶ್ವರನ್, ಪ್ರೊ. ಸಾರಾಜೋಸೆಫ್, ಪ್ರಸಿದ್ಧ ರಾಜಕೀಯ ಕಾರ್ಯಕರ್ತರಾದ, ಎಂ.ಎ ಜಾನ್, ಲೋನಪ್ಪನ್ ನಂಬಾಡನ್, ಅಡ್ವೋಕೇಟ್ ಹಮೀದಲಿ ಶಂನಾಡ್ ಮುಂತಾದವರು ನೀಡಿದ ಅಮೂಲ್ಯವಾದ ಅನುಭವಸಾರಗಳಿಗಾಗಿ ಅವರ ಬಗೆಗಿರುವ ಗೌರವ ಮತ್ತು ಕೃತಜ್ಞತೆಯನ್ನು ನಾನು ಮರೆಯಲು ಸಾಧ್ಯವಿಲ್ಲ.

ಈ ಪುಸ್ತಕದಲ್ಲಿ ಭಾಷೆಗೆ ಸಂಬಂಧಿಸಿದ ಲೋಪ ದೋಷಗಳ ಪರಿಹಾರಕ್ಕಾಗಿ ಸೃಜನಾತ್ಮಕ ಸಲಹೆಗಳನ್ನು ನೀಡಿದ, ಕಾಲೇಜು ಶಿಕ್ಷಣ ಇಲಾಖೆ ಮಾಜಿ ಉಪನಿರ್ದೇಶಕರಾದ ಪ್ರೊ. ಕೆ. ಬಾಲನ್ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಬಿಡುವಿಲ್ಲದ ಭಾರೀ ಸಾರ್ವಜನಿಕ ಕೆಲಸಗಳ ನಡುವೆಯೂ ಈ ಭಾಷಾ ತಿದ್ದುಪಡಿಗಳಿಗೆ ಸಮಯವನ್ನು ಕಂಡುಕೊಂಡ ಸಂಸ್ಕೃತಿ ಕಾರ್ಯಕರ್ತ ಮತ್ತು ಸಂಶೋಧಕ ಡಾ. ವಿ.ಪಿ.ಪಿ. ಮುಸ್ತಫಾ ಅವರಿಗೆ ನನ್ನ ಪ್ರಾಮಾಣಿಕ ಧನ್ಯವಾದ ಮತ್ತು ಕೃತಜ್ಞತೆಗಳು. ಅವರ ಸಲಹೆ ಸೂಚನೆಗಳನ್ನು ಪಾಲಿಸಲು ನಾನು ನನ್ನ ಕೈಲಾದಷ್ಟು ಪ್ರಯತ್ನಿಸಿದ್ದರೂ ಇನ್ನೂ ಉತ್ತಮಗೊಳಿಸುವುದಕ್ಕೆ ಅವಕಾಶಗಳಿದ್ದವು ಎಂದೇ ನಾನು ಭಾವಿಸುತ್ತಿರುವುದು. ಓದುಗರೂ ಈ ಕೃತಿಯಲ್ಲಿ ಕಂಡು ಬರುವ ಲೋಪ ದೋಷಗಳನ್ನು ಎತ್ತಿ ತೋರಿಸುವುದನ್ನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ. ಸಂಶೋಧನಾ ಚಟುವಟಿಕೆಗಳಿಗೂ ಮಾಹಿತಿ ಸಂಗ್ರಹಣೆಗಳಿಗಾಗಿಯೂ ಮನೆ ಬಿಟ್ಟು ನಿರಂತರ ಪ್ರಯಾಣ ಮತ್ತು ಅಧ್ಯಯನದಲ್ಲಿ ತೊಡಗಿಕೊಂಡಿರುವಾಗ, ಕುಟುಂಬದವರಿಂದ ದೊರೆತ ಬೆಂಬಲ ನಿಜಕ್ಕೂ ಅಪಾರ. ಪತ್ನಿ ಹಜರಾಬೀವಿಯ ಮತ್ತು ಮಕ್ಕಳಾದ ಅನ್ಫಾಸ್ ಮತ್ತು ಅಮಲ್‌ರೂಸಿರವರ ತಾಳ್ಮೆ, ಎಲ್ಲ ರೀತಿಯ ಸಹಕಾರ, ನಿರಂತರ ಪ್ರೋತ್ಸಾಹ ಇದ್ದುದರಿಂದ ಈ ಕಾರ್ಯವನ್ನು ಪೂರ್ತಿಗೊಳಿಸಲು ಸಾಧ್ಯವಾಗಿರುತ್ತದೆ.

**ಡಾ. ಪಿ.ಎಂ. ಸಲೀಂ**

# ಟಿಪ್ಪಣಿ

ಐಕ್ಯಕೇರಳದ ರಾಜ್ಯ ಉದಯವಾದ ನಂತರ ಮೊದಲನೆಯ ಸಾರ್ವತ್ರಿಕ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದ ಸರ್ಕಾರವನ್ನು ಮುನ್ನಡೆಸಿದ ಕಮ್ಯುನಿಸ್ಟ್ ಪಕ್ಷದ ಐತಿಹಾಸಿಕ ಹಿನ್ನೆಲೆಯನ್ನು ಸಂಶೋಧನಾ ಆಸಕ್ತಿಯೊಂದಿಗೆ ಅರ್ಥಮಾಡಿಕೊಳ್ಳುವುದು ಮತ್ತು ಆ ಸರ್ಕಾರವನ್ನು ವಜಾಗೊಳಿಸಲು ನಡೆಸಿದ ಕುತಂತ್ರ ಮತ್ತು ಕುತ್ಸಿತ ಚಟುವಟಿಕೆಗಳ ಮೂಲಕ ದಾರಿ ಮಾಡಿಕೊಟ್ಟ ಶಕ್ತಿಗಳನ್ನು ವಿಶ್ಲೇಷಿಸಲು ಮತ್ತು ಮೌಲ್ಯಮಾಪನ ಮಾಡಲು ನಡೆಸಿದ ಬೌದ್ಧಿಕ ಕಸರತ್ತಿನ ಸಾಮರ್ಥ್ಯ ಪ್ರದರ್ಶನವಾಗಿದೆ, ಈ ಅಧ್ಯಯನ ಗ್ರಂಥ. ಕೇರಳದಲ್ಲಿ ಕಮ್ಯುನಿಸ್ಟ್ ಆಡಳಿತದ ಬಗ್ಗೆ ಅಸಹಿಷ್ಣುತೆಯ ಕಬ್ಬಿಣದ ಮರೆಯಲ್ಲಿ ನೆಲೆಗೊಂಡ ಸತ್ಯ ಮತ್ತು ಅಸತ್ಯಗಳನ್ನು ಬೀದಿಗಳಲ್ಲಿ ಹರಿದಾಡಲು ಕಾರಣವಾದ ಸತ್ಯೋತ್ತರ ರಾಜಕಾರಣದ ಬೇರುಗಳನ್ನು ಅನಾವರಣಗೈಯುವ ಮೊದಲ ಶೈಕ್ಷಣಿಕ ಅಧ್ಯಯನ ಇದಾಗಿರಬೇಕೆಂದು ಅನಿಸುತ್ತಿದೆ. 1957–59ರ ಇಎಂಎಸ್ ನಂಬೂದಿರಿಪಾಡ್ ಸರ್ಕಾರವನ್ನು ಕಿತ್ತೊಗೆಯುವುದಕ್ಕಾಗಿ ಕಟ್ಟಿ ಬೆಳೆಸಿದ ಹಿಂಸಾಚಾರಯುಕ್ತ ಆಂದೋಲನಕ್ಕೆ ವಿಮೋಚನಾ ಹೋರಾಟ ಎಂದು ಹೆಸರಿಸಿದ್ದಂತು, ವಿರೋಧಾಭಾಸವಲ್ಲದೆ ಮತ್ತೇನೂ ಅಲ್ಲ.

ಡಾ.ಪಿ.ಎಂ.ಸಲೀಂ ಅವರ ಈ ಅಧ್ಯಯನಗಳ ಸಂಶೋಧನೆಯ ಮಾರ್ಗದರ್ಶಿಯಾಗಿ ನನ್ನನ್ನು ಆಕರ್ಷಿಸಿದ ಮುಖ್ಯ ಸಂಗತಿ 'ವಿಮೋಚನಾ ಹೋರಾಟ'ವನ್ನು ಪ್ರತ್ಯೇಕ ಅಧ್ಯಯನ ವಿಷಯವನ್ನಾಗಿ ಮಾಡಲು ಈ ಯುವ ಇತಿಹಾಸಕಾರ ಅಳವಡಿಸಿಕೊಂಡ ಮಾರ್ಗವೆನ್ನುವುದು. ಕ್ಲೇಶಗಳೇ ತುಂಬಿಕೊಂಡ ವಾಸ್ತವಗಳ ಸಂಗ್ರಹಣೆಯಾಗಿರುತ್ತದೆ. ಈ ಸಂಶೋಧನಾ ಗ್ರಂಥವನ್ನು ಪರಿಶೀಲಿಸುವ ಯಾವುದೇ ವ್ಯಕ್ತಿಗೆ ಇದು ಅರ್ಥವಾಗಬಹುದು. ಸಂಪನ್ಮೂಲಗಳ ಸಮೃದ್ಧಿಯಿಂದಾಗಿ ಅಧ್ಯಯನವನ್ನು ನೀರಸಗೊಳಿಸುತ್ತದೆ ಎನ್ನುವ ಸಾಮಾನ್ಯ ಗ್ರಹಿಕೆಯಿಂದ ದೂರ ಸರಿದು, ಅಧ್ಯಯನವನ್ನು ಹೃದಯಸ್ಪರ್ಶಿಯನ್ನಾಗಿಯೂ ಚಾರಿತ್ರಿಕ ಬರವಣಿಗೆಯ ಲೋಕವನ್ನು ಹೇರಳವಾಗಿ ಶ್ರೀಮಂತಗೊಳಿಸುವಂಥದ್ದನ್ನಾಗಿಯೂ ಮಾಡುವ ಕೃತಿಯಿದು.

ಈ ಪ್ರಬಂಧವನ್ನು ಆಧರಿಸಿದ ಇಂಗ್ಲಿಷ್‌ನಲ್ಲಿರುವ ಸಂಶೋಧನಾ ಪ್ರಬಂಧವನ್ನು ಇಬ್ಬರು ಪ್ರಖ್ಯಾತ ಇತಿಹಾಸಕಾರರ ವರದಿಯ ಪ್ರಸ್ತುತತೆಯಿರುವ ಭಾಗವನ್ನು ಸಹ ದಾಖಲಿಸುವುದರಲ್ಲಿ ಯಾವುದೇ ಅನುಚಿತತೆ ಇರುತ್ತದೆ ಎಂದು ನಾನು ಭಾವಿಸುವುದಿಲ್ಲ. ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ಇತಿಹಾಸ ವಿಭಾಗದ ಪ್ರೊಫೆಸರೂ ಪ್ರಮುಖ ಇತಿಹಾಸಕಾರರೂ ಆದ ಸುಚೇತ ಮಹಾಜನ್‌ರವರು, ಪ್ರಸ್ತುತ ಸಂಶೋಧನಾ ಪ್ರಬಂಧವನ್ನು ಮೌಲ್ಯಮಾಪನ ಮಾಡಿ ನೀಡಿದ ವರದಿಯಲ್ಲಿ, ಸಂಶೋಧಕರು ಅಳವಡಿಸಿಕೊಂಡ ಅಥವಾ ಉಪಯೋಗಿಸಿಕೊಂಡ ಉಪಲಬ್ಧಗಳ ವೈಶಿಷ್ಟ್ಯತೆಯನ್ನೂ ಪ್ರಸ್ತುತತೆಯನ್ನೂ ದಾಖಲಿದ್ದಾರೆ.

ಕಮ್ಯುನಿಸ್ಟ್ ಚಳುವಳಿ ಮತ್ತು ಪಕ್ಷದ ನೇತೃತ್ವದ ಸರ್ಕಾರವನ್ನು ಧ್ವಂಸಗೊಳಿಸಲು ಕೇರಳದಲ್ಲಿ ರೂಪುಗೊಂಡ ಕಮ್ಯುನಿಸ್ಟ್ ವಿರೋಧಿ ಚಳುವಳಿಯ ಮೂಲಗಳಿಂದ ದೊರಕಿದ ಮಾಹಿತಿಗಳನ್ನು ಇಲ್ಲಿ ದಾಖಲಿಸಿರುವ ಸಂಗತಿ ಸ್ವಾರಸ್ಯಕರವಾಗಿದ್ದು, ವಾಸ್ತವಿಕವೂ ಆಗಿರುತ್ತದೆ, ಎಂದು ಸುಚೇತ ಮಹಾಜನ್ ಅಭಿಪ್ರಾಯಪಡುತ್ತಾರೆ. ಕೇರಳದಲ್ಲಿ ಕ್ಯಾಥೋಲಿಕ್ ಚರ್ಚ್ ಆಯೋಜಿಸಿದ ಕಮ್ಯುನಿಸ್ಟ್ ವಿರೋಧಿ ನಾಗರಿಕ ಸೇನೆಯೇ ಕ್ರಿಸ್ಟೋಫರ್ಸ್. ಭಾರತದಲ್ಲಿ ಕ್ರಿಸ್ಟೋಫರ್ಸ್‌ನ ಚಟುವಟಿಗಳ ಮತ್ತು ಚರ್ಚ್‌ಗಳು ವಿದೇಶದಿಂದ ಪಡೆದ ಬೆಂಬಲಗಳ ಬಗ್ಗೆ ವಿವರಣೆ ನೀಡಿರುವುದು, ಪ್ರಶಂಸನೀಯವಾದ ಕೌಶಲ್ಯವಾಗಿದೆ ಎನ್ನುವುದನ್ನು ಅವರು ಮನಬಿಚ್ಚಿ ಬರೆದಿದ್ದಾರೆ. ವಸಾಹತ್ತೋತ್ತರ ಕೇರಳದ ಸಂಕೀರ್ಣ ರಾಜಕೀಯ ಚತುರಂಗದಾಟಗಳನ್ನು ಬಿಚ್ಚಿಡುವ ಸಂಶೋಧನಾ ಗ್ರಂಥ ಎನ್ನುವ ನೆಲೆಯಲ್ಲಿ, ಇದಕ್ಕೆ ಮಹತ್ವವೂ ಪ್ರಸ್ತುತತೆಯೂ ಇರುತ್ತದೆ. ಉಪಲಬ್ಧಗಳನ್ನು ಪ್ರಾಥಮಿಕವಾಗಿ ಲಭ್ಯವಾಗಿಸುವ ದಾಖಲೆಗಳು, ಆತ್ಮಚರಿತ್ರೆಗಳು, ಸಂದರ್ಶನಗಳು, ಸಮಕಾಲೀನ ಪತ್ರಿಕೆಗಳು, ವಿಧಾನಸಭೆ-ಸಂಸತ್ತಿನ ಚರ್ಚೆಗಳು, ಖಾಸಗಿ ಗ್ರಂಥಾಲಯಗಳಿಂದ ಲಭ್ಯವಾದ ದಾಖಲೆಗಳು, ಪ್ರಕಟಣೆಗಳು ಮುಂತಾದವುಗಳ ಪರಿಶೋಧನೆಗಳಿಂದ ಸಂಗ್ರಹಿಸಿ, ವಿಶ್ಲೇಷಿಸಿ ಮತ್ತು ಪ್ರಸ್ತುತಪಡಿಸಲಾದ ಈ ಜ್ಞಾನಸಂಪತ್ತು ಚಾರಿತ್ರಿಕವಾದದ್ದು, ಎಂದು ಸುಚೇತ ಮಹಾಜನ್ ಮೌಲ್ಯಮಾಪನ ಮಾಡುತ್ತಾರೆ. ಹೋರಾಟ ಸಮಯದ ವಿವಿಧ ಪ್ರಕಟಣೆಗಳು, ಘೋಷಣೆಗಳು, ಆಗ ಪತ್ರಿಕೆಗಳಲ್ಲಿ ಕಾಣಿಸಿಕೊಂಡ ಕಾರ್ಟೂನ್‌ಗಳು ಸಹ ಅಧ್ಯಯನ ವಿಷಯವನ್ನಾಗಿ ಮಾಡಿದ್ದು ನಿಜಕ್ಕೂ ಅತ್ಯಂತ ಕುತೂಹಲಕರ ಸಂಗತಿಗಳಾಗಿವೆ. ಸಂಶೋಧನಾ ಪ್ರಬಂಧದ ಮತ್ತೊಬ್ಬ ಪರಿಶೋಧಕ ಪ್ರೊ. ಡಿ. ಅನಂತ ನಾಯ್ಡುರವರು, ಈ ಸಂಶೋಧನಾ ಪ್ರಬಂಧದ ಶ್ರೇಷ್ಠತೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾ, ಇಂಥ ಪ್ರಬಂಧಗಳು ಐತಿಹಾಸಿಕ ಅಧ್ಯಯನ ಶಾಖೆಯು ಸಾಧಿಸುತ್ತಿರುವ ಬೆಳವಣಿಗೆ ಮತ್ತು ಗುಣಮಟ್ಟಗಳನ್ನು ಎತ್ತಿ ತೋರಿಸುತ್ತದೆ, ಎಂದು ಹೇಳುತ್ತಾರೆ. ಪ್ರಾಥಮಿಕವೂ ದ್ವಿತೀಯವೂ ಆದ ಉಪಲಬ್ಧಗಳ ಸಮೃದ್ಧಿ ಮತ್ತು ವಿವಿಧ ರಾಜಕೀಯ ಸಂಬಂಧಗಳಿರುವ ನಾಯಕರರೊಂದಿಗೆ ನಡೆಸಿದ ಸಂದರ್ಶನಗಳು, ಅಧ್ಯಯನಕ್ಕೆ ವಾಸ್ತವತೆಯ ಶುದ್ಧತೆಯನ್ನು ಹೆಚ್ಚಿಸುತ್ತದೆ, ಎಂದು ನಾಯ್ಡುರವರು ಸಾಕ್ಷ್ಯವನ್ನೊದಗಿಸುತ್ತಾರೆ. ಅದು ಉತ್ತಮ ಗುಣಮಟ್ಟವನ್ನು ಅನಾವರಣಗೊಳಿಸುವ ಸಂಶೋಧನಾ ಸಾಹಸೋದ್ಯವೆಂದು ಪರಿಗಣಿಸುತ್ತಾರೆ. ಇತ್ತೀಚೆಗೆ ಭಾರತದಲ್ಲಿ ಕೆಲವು ರಾಜ್ಯಗಳಲ್ಲಿ ಸಂವಿಧಾನದ 356ನೇ ವಿಧಿಯ ದುರ್ಬಳಕೆ ಮಾಡಿಕೊಂಡಿದ್ದು ಸಹ, ಈ ಸಂಶೋಧನಾ ಕಾರ್ಯದ ಮಹತ್ವವನ್ನು ಸೂಚಿಸುತ್ತದೆ, ಎಂದು ಅವರು ಅಭಿಪ್ರಾಯಪಡುತ್ತಾರೆ.

ಹೇಗೋ ಒಂದು ಸಂಶೋಧನಾ ಪ್ರಬಂಧವನ್ನು ನಕಲಿ ಮಾಡಿ ಪದವಿ ಗಳಿಸುವ ಬದಲಿಗೆ, ಸತ್ಯ ಮತ್ತು ಪುರಾವೆಗಳ ಆಧಾರದ ಮೇಲೆ ಇತಿಹಾಸಶಾಸ್ತ್ರದ ವಿಧಾನಗಳನ್ನು ಬಳಸಿ ನಡೆಸಲಾಗುವುದರ ಹಿನ್ನೆಲೆಯಲ್ಲಿ ಸಂಶೋಧನಾ ಗ್ರಂಥಗಳ ಪ್ರಸ್ತುತತೆ ಹೆಚ್ಚುತ್ತದೆ.

ಪ್ರಮುಖ ಶೈಕ್ಷಣಿಕ ವಿಷಯವನ್ನು ಆಯ್ಕೆ ಮಾಡಿ, ತೃಪ್ತಿಕರವಾದ ರೀತಿಯಲ್ಲಿ ಅಧ್ಯಯನ ನಡೆಸಿದ್ದಕ್ಕೆ ಅನಂತನಾಯ್ದುರವರು, ಸಂಶೋಧಕರ ಮತ್ತು ಸಂಶೋಧನಾ ಮಾರ್ಗದರ್ಶಿಗಳ ಬಗ್ಗೆ ವಿಶೇಷ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ. ಹೇಗೋ ನ್ಯಾಯವಲ್ಲದ ರೀತಿಯಲ್ಲಿ ಒಂದು ಸಂಶೋಧನಾ ಪ್ರಬಂಧವನ್ನು ಸಿದ್ದಪಡಿಸಿಕೊಂಡು, ಪದವಿ ಗಳಿಸುವುದಕ್ಕಿಂತಲೂ ವಾಸ್ತವಾಂಶಗಳ ಮತ್ತು ಪುರಾವೆಗಳ ಆಧಾರದ ಮೇಲೆ ಇತಿಹಾಸಶಾಸ್ತ್ರದ ವಿಧಾನಗಳನ್ನು ಬಳಸಿ ನಡೆಸಲಾಗುವ ಹಿನ್ನಲೆಗಳಿಂದಾಗಿ, ಇಂಥ ಸಂಶೋಧನಾ ಗ್ರಂಥಗಳ ಪ್ರಸ್ತುತತೆ ಹೆಚ್ಚುತ್ತದೆ. ಕಮ್ಯುನಿಸಂ ವಿರೋಧಿ ಎನ್ನುವ ದುಷ್ಟಶಕ್ತಿಯು, ಕೇರಳದಿಂದಲೋ ಅಥವಾ ಭಾರತದಿಂದಲೋ ಬಿಟ್ಟುಹೋಗಿಲ್ಲ ಎಂಬ ಅಂಶವೂ ಈ ಸಂಶೋಧನಾ ಪ್ರಬಂಧದ ಪ್ರಸ್ತುತತೆಯತ್ತ ಬೆರಳುಮಾಡಿ ತೋರಿಸುತ್ತದೆ.

ಈ ಸಂಶೋಧನೆಯನ್ನು ನಡೆಸುವುದರ ನಡುವೆ ಸಲೀಂ ಅವರನ್ನು ನಿರುತ್ಸಾಹಗೊಳಿಸುವಂಥ ಹಲವಾರು ಘಟನೆಗಳು, ಹಲವರಿಂದ ನಡೆದಿದ್ದವು. ಆದರೆ, ಅವುಗಳೆಲ್ಲವನ್ನೂ ಸ್ಥಿತಪ್ರಜ್ಞತೆಯಿಂದ ಎದುರಿಸಿ, ಆಸಕ್ತಿ ಹೊಂದಿರುವ ಇತಿಹಾಸದ ವಿದ್ಯಾರ್ಥಿಗಳಿಗೆ, ಎಂದೆಂದಿಗೂ ಮಾದರಿಯಾಗಬಲ್ಲ ಗ್ರಂಥವೊಂದನ್ನು ಕೈರಳಿಯರ ಕೊಡುಗೆಯಾಗಿ ನೀಡಿರುವುದು ನನಗೆ ಅತ್ಯಂತ ಸಂತೋಷವನ್ನುಂಟು ಮಾಡಿದೆ. ವಾಸ್ತವವಾಗಿ ಲೇಖಕರು ಒಂದು ಐತಿಹಾಸಿಕ ದೌತ್ಯವೊಂದನ್ನು ಬಹಳ ಶ್ರಮಮಪಟ್ಟು ನಡೆಸಿಕೊಟ್ಟಿದ್ದು ನಮ್ಮೆಲ್ಲರ ಗೌರವಪೂರ್ವಕ ವಂದನೆಗೆ ಪಾತ್ರರಾಗಿರುತ್ತಾರೆ.

**ಪಯ್ಯನೂರು**
**ಡಾ. ವಿ. ವಿ. ಕುಂಞಿಕೃಷ್ಣನ್**
**09.05.2020**

# ಮುನ್ನೋಟ

ಕೇರಳದ ಆಧುನಿಕ ಇತಿಹಾಸದಲ್ಲಿ ವ್ಯಾಪಕವಾಗಿ ಚರ್ಚೆಗಳಿಗೊಳಗಾದ ಎರಡು ಘಟನೆಗಳೆಂದರೆ, ಪ್ರಜಾಸತ್ತಾತ್ಮಕ ಪ್ರಕ್ರಿಯೆಯ ಮೂಲಕ 1957ರಲ್ಲಿ ಅಧಿಕಾರಕ್ಕೆ ಬಂದ ಕಮ್ಯುನಿಸ್ಟ್ ಮಂತ್ರಿಮಂಡಲ ಮತ್ತು ಅದರ ವಿರುದ್ಧವಾಗಿ ಸಂಘಟಿಸಲ್ಪಟ್ಟ ವಿಮೋಚನಾ ಹೋರಾಟ. ಕೇಂದ್ರ ಸರ್ಕಾರ ಮಧ್ಯಪ್ರವೇಶದ ಮೂಲಕ ಆ ಸಚಿವ ಸಂಪುಟವನ್ನು ವಿಸರ್ಜನೆ ಮಾಡಿದ್ದು, ಭಾರತದ ಪ್ರಜಾಪ್ರಭುತ್ವಕ್ಕೆ ದೊರೆತ ದೊಡ್ಡ ಹಿನ್ನಡೆ ಎಂದು ಪರಿಗಣಿಸಲಾಗಿದೆ. ಪ್ರಜಾಪ್ರಭುತ್ವವಾದಿಯಾಗಿದ್ದ ಜವಾಹರಲಾಲ್ ನೆಹರೂ ಪ್ರಧಾನಿಯಾಗಿರುವಾಗಲೇ ಈ ಖಂಡನೀಯ ಹಸ್ತಕ್ಷೇಪ ನಡೆದಿತ್ತು, ಎಂಬ ಅಂಶವು ಇದನ್ನು ಹೆಚ್ಚು ಗಂಭೀರವಾದ ವಿಷಯವನ್ನಾಗಿಸಿಬಿಟ್ಟಿತು. ಭಾರತದ ಪ್ರಜಾಪ್ರಭುತ್ವದ ಇತಿಹಾಸವನ್ನು ಪರಿಶೋಧನೆಗೆ ಒಳಪಡಿಸುವವರು, ಈ ಘಟನೆಗಳ ಸ್ವರೂಪ, ಮಹತ್ವ, ಅದರ ಹಿಂದಿರುವ ಶಕ್ತಿಗಳ ಬಗ್ಗೆ ಚರ್ಚಿಸುವಲ್ಲಿ ವಿಶೇಷ ಗಮನ ಹರಿಸಿರುವುದನ್ನು ಕಾಣಬಹುದು. ಅದುವೇ ಈ ಪುಸ್ತಕದ ವಸ್ತು ಕೂಡ. ಈ ಪುಸ್ತಕದ, ಅದರ ಗಹನವಾದ ಮತ್ತು ಪಕ್ಷಪಾತವಿಲ್ಲದ ಸಾಮಾನ್ಯೀಕರಣ ಎದ್ದು ಕಾಣುವಂಥದ್ದು. ಐಕ್ಯಕೇರಳ ರಚನೆಯ ನಂತರ ನಡೆದ ಮೊದಲ ಸಾರ್ವತ್ರಿಕ ಚುನಾವಣೆಯಲ್ಲೇ ಕಮ್ಯುನಿಸ್ಟರು ಮತ್ತು ಅವರ ಸ್ವತಂತ್ರ ಬೆಂಬಲಿಗರು ಬಹುಮತ ಪಡೆದದ್ದು, 20ನೇ ಶತಮಾನದ ಕೇರಳ ರಾಜಕೀಯದಲ್ಲಿ ಎಡಪಂಥೀಯ ಚಳವಳಿಯ ಮುನ್ನಡೆಯನ್ನೇ ಪ್ರತಿಬಿಂಬಿತವಾಗುತ್ತಿರುವುದು. ಭಾರತದ ಇತರ ಪ್ರದೇಶಗಳಂತೆ ವಸಾಹತುಶಾಹಿ ವಿರೋಧಿ ಹೋರಾಟದ ಆರಂಭಿಕ ನಾಯಕತ್ವ ಕೂಡ, ಕೇರಳದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಭಾವಕ್ಕೆ ಒಳಗಾಗಿತ್ತು. ಅಸಹಕಾರ ಚಳವಳಿ, ಉಪ್ಪಿನ ಸತ್ಯಾಗ್ರಹ, ರೈತರ ಹೋರಾಟ ಇವೇ ಮುಂತಾದ ಸಂದರ್ಭಗಳಲ್ಲಿ ಗಾಂಧೀಜಿಯವರ ನಾಯಕತ್ವ ಭಾರತೀಯ ಜನರನ್ನು ಸಂಪೂರ್ಣವಾಗಿ ಬೆಚ್ಚಿಬೀಳಿಸಿತ್ತು. ಸ್ವಾತಂತ್ರ್ಯ ಹೋರಾಟದ ನಿರ್ವಿವಾದ ನಾಯಕತ್ವ ಕಾಂಗ್ರೆಸ್‌ನ ಪಾಲಾಗಿತ್ತು. ಮಹಾತ್ಮ ಗಾಂಧಿ, ಜವಾಹರಲಾಲ್ ನೆಹರೂ ಮುಂತಾದವರು ಕೂಡ ಜನಪ್ರಿಯ ನಾಯಕರುಗಳಾಗಿ ಪ್ರಕಾಶಮಾನರಾಗಿ ಕಾಣಿಸಿಕೊಂಡರು.

ಸ್ವಾತಂತ್ರ್ಯ ಹೋರಾಟವು ಒಂದು ಸಾರ್ವಜನಿಕ ಆಂದೋಲನವಾಗಿ ಬೆಳೆದುಬಂದ ಈ ಸಂದರ್ಭದಲ್ಲೇ ಭಾರತದಲ್ಲಿ ಕಮ್ಯುನಿಸ್ಟ್ ಚಳುವಳಿಯೂ ಹುಟ್ಟಿಕೊಂಡಿದ್ದು. 1925ರಲ್ಲಿ ಪಕ್ಷವನ್ನು ರಚಿಸುವ ಮೊದಲೇ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅಸಹಕಾರ ಚಳುವಳಿಯನ್ನು ಆರಂಭಿಸಿದ್ದಲ್ಲದೆ, ಜನರ ಗಮನ ಮತ್ತು ಬೆಂಬಲವನ್ನೂ ಸೆಳೆಯಿತು. ಕಮ್ಯುನಿಸ್ಟ್ ಪಕ್ಷ ಅದರ ಬೇರುಗಳು ದೃಢಗೊಳ್ಳುವುದರ ಮೊದಲೇ ಗಾಂಧೀಜಿಯವರ ಎರಡನೇ ಅಸಹಕಾರ ಚಳುವಳಿ ಪ್ರಾರಂಭಿಸಲೂ ಅದಕ್ಕೆ ಸಂಪೂರ್ಣವಾದ ರಾಷ್ಟ್ರೀಯ ಬೆಂಬಲ ಗಳಿಸಿಕೊಳ್ಳಲೂ ಸಾಧ್ಯವಾಗಿಸಿತು. ಗಾಂಧೀಜಿಯವರ

ಅಸಹಕಾರ ಚಳವಳಿಯನ್ನು ವಿರೋಧಿಸಬೇಕೆ ಅಥವಾ ಬೆಂಬಲಿಸಬೇಕೆ ಎನ್ನುವ ಸಮಸ್ಯೆ ಬಗೆಹರಿಸಲಾಗದ ಪ್ರಶ್ನೆಯಾಗಿಯೇ ಉಳಿದುಹೋಯಿತು. ಗಾಂಧೀಜಿಯ ಹೋರಾಟಗಳಿಂದ ಹೊರಗುಳಿದು, ಆ ಮೂಲಕ ಸ್ವತಂತ್ರ ನೆಲೆಯನ್ನು ಕಟ್ಟಿಕೊಳ್ಳುವ ಹಾದಿಯನ್ನು ಪಕ್ಷ ಹಿಡಿಯಿತು. ಆದರೆ ರಾಷ್ಟ್ರೀಯತೆಯ ಬಲವಾದ ಅಲೆಯಲ್ಲಿ ಪಕ್ಷವು ಪ್ರತ್ಯೇಕವಾಗಿಬಿಡುವ ಅಪಾಯ ಅದರಲ್ಲಿ ಅಡಗಿತ್ತು. ರಾಷ್ಟ್ರೀಯ ಚಳುವಳಿಯಿಂದ ಈ ಪ್ರತ್ಯೇಕಗೊಳ್ಳುವುದರ ತೀವ್ರತೆಯನ್ನು ಎರಡನೆಯ ಮಹಾಯುದ್ಧದ ಸಮಯದಲ್ಲಿ ಹೆಚ್ಚು ಅನುಭವಿಸಬೇಕಾಯಿತು. ಈ ಪ್ರತ್ಯೇಕಗೊಳ್ಳುವಿಕೆಯಿಂದಾಗಿ, ಎಡಪಕ್ಷಗಳು ಹೆಚ್ಚಿನ ರಾಜಕೀಯ ಸಾಧ್ಯತೆಗಳನ್ನು ಕಳೆದುಕೊಳ್ಳಬೇಕಾಯಿತು. ವಸಾಹತುಶಾಹಿ ವಿರುದ್ಧದ ಹೋರಾಟದ ಭಾಗವಾಗಿದ್ದುಕೊಂಡೇ ರಾಷ್ಟ್ರೀಯ ಚಳವಳಿಯ ಮೇಲೆ ಪ್ರಾಬಲ್ಯವನ್ನು ಸ್ಥಾಪಿಸಲು ಪ್ರಯತ್ನಿಸುವ ಸೃಜನಶೀಲ ಮಾರ್ಗ ಸ್ವೀಕರಿಸಲಿಲ್ಲ. ಗಾಂಧೀಜಿಯವರ ನೇತೃತ್ವದ ಬಹುಮುಖಿ ಚಳವಳಿಗೆ ಬದಲಾಗಿ, ಒಂದು ಕ್ಷಿಪ್ರ ಪರ್ಯಾಯವನ್ನು ಸ್ಥಾಪಿಸಲೂ ಸಾಧ್ಯವಾಗಿರಲಿಲ್ಲ. ಹೋರಾಟದ ಭಾಗವಾಗಿದ್ದುಕೊಂಡೇ ರಾಷ್ಟ್ರೀಯ ಚಳವಳಿಯಲ್ಲಿ ಪ್ರಾಬಲ್ಯವನ್ನು (Hegemony) ಸ್ಥಾಪಿಸುವುದು ಒಂದು ಮಾರ್ಗವಾಗಿತ್ತು. ಹಾಗಾಗದಿರುವುದರಿಂದ, ಸ್ವಾತಂತ್ರ್ಯಾನಂತರ ರಾಷ್ಟ್ರೀಯ ಚಳವಳಿಯಲ್ಲಿ ಪ್ರಾಬಲ್ಯ ಸ್ಥಾಪಿಸುವುದಕ್ಕೋ ವಸಾಹತುಶಾಹಿ ವಿರೋಧಿ ರಾಜಕಾರಣರಂಗದ ಪಡೆಯಾಳುಗಳಾಗಿ ಪ್ರತ್ಯೇಕಗೊಳ್ಳುವುದಕ್ಕೋ ಸಾಧ್ಯವಾಗದೆ ಹೋಯಿತು. ಭಾರತೀಯ ಬೂರ್ಜ್ವಾಗಳಿಂದ ಪ್ರಭಾವಿತವಾದ ವಸಾಹತುಶಾಹಿ ವಿರೋಧಿ ಶಕ್ತಿಯೆನ್ನುವುದು, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪರಂಪರೆಯಾಗಿಬಿಟ್ಟಿತು. ಈ ಪರಂಪರೆಯೇ ಸ್ವಾತಂತ್ರ್ಯಾನಂತರದ ಭಾರತದಲ್ಲಿ, ಕಾಂಗ್ರೆಸ್ ತನ್ನ ರಾಜಕೀಯ ಲಾಭಕ್ಕಾಗಿಯೂ ಎಡಪಕ್ಷಗಳೂ ಒಳಗೊಂಡಂಥ ರಾಜಕೀಯ ಶಕ್ತಿಗಳನ್ನು ಪಕ್ಕಕ್ಕೆ ಸರಿಸಿಡುವುದಕ್ಕಾಗಿಯೂ ಬಳಸಿಕೊಂಡಿದ್ದು.

ಆದರೆ, ಈ ರಾಷ್ಟ್ರೀಯ ರಾಜಕೀಯ ಪರಿಸ್ಥಿತಿಗಿಂತ ಭಿನ್ನವಾದ ಕೇರಳದ ಪರಿಸ್ಥಿತಿ ವಿಶಿಷ್ಟವಾಗಿತ್ತು. ಕೇರಳದಲ್ಲಿ ರಾಷ್ಟ್ರೀಯ ಎಡಪಕ್ಷವು ಒಂದು ವಿಶಿಷ್ಟವಾದ ಸಾಮಾಜಿಕ ಚಳುವಳಿಯಾಗಿ ರೂಪುಗೊಂಡು, ವಸಾಹತುಶಾಹಿ ವಿರೋಧಿ ಹೋರಾಟ ಮತ್ತು ವರ್ಗ ಹೋರಾಟಗಳನ್ನು ಸಂಯೋಜಿಸಿಕೊಂಡು ತನ್ನದೇ ಆದ ಅಡಿಪಾಯವನ್ನು ಸೃಷ್ಟಿಸಿಕೊಂಡಿತು. 1940-41ರ ಅವಧಿಯಲ್ಲಿ ಎಡಪಕ್ಷಗಳು ಪ್ರತ್ಯೇಕವಾಗಿರುವಾಗಲೂ ಈ ಅಡಿಪಾಯದ ಮೇಲೆ ಹೆಚ್ಚು ಪರಿಣಾಮ ಬೀರಿರಲಿಲ್ಲ. ಆದ್ದರಿಂದ ರಾಷ್ಟ್ರೀಯ ಚಳವಳಿಯಲ್ಲಿ ಸಕ್ರಿಯವಾಗಿದ್ದುಕೊಂಡು ವಸಾಹತುಶಾಹಿ ವಿರೋಧಿ ಹೋರಾಟಗಳಲ್ಲಿ ಎಡಪಕ್ಷಗಳು ಮೇಲುಗೈ ಸಾಧಿಸಲು ಸಾಧ್ಯವಾಯಿತು. ಪರಿಣಾಮವಾಗಿ 1947ರ ನಂತರ, ಕೇರಳದಲ್ಲಿ ಅತ್ಯಂತ ಶಕ್ತಿಶಾಲಿಯಾಗಿ ಎಡಪಕ್ಷಗಳು ಬೆಳೆದವು. ಇದರ ಫಲವಾಗಿ 1957ರಲ್ಲಿ ಕಮ್ಯುನಿಸ್ಟರು ಅಧಿಕಾರಕ್ಕೂ ಬಂದರು. ಸ್ವಾಭಾವಿಕವಾಗಿ, ಕಮ್ಯುನಿಸ್ಟ್ ಪಕ್ಷದ ಅಭ್ಯರ್ಥಿಗಳಿಗೆ ಮತ ಹಾಕಿದವರೆಲ್ಲರೂ ಕಮ್ಯುನಿಸ್ಟರಾಗಿರಲಿಲ್ಲ.

ಆದರೆ, ಅವರು ಕಮ್ಯುನಿಸ್ಟ್ ಸಹಾನುಭೂತಿಯನ್ನು ಹೊಂದಿದ್ದರು. ಕಮ್ಯುನಿಸಂ ಪ್ರತಿನಿಧಿಸುವ ಸಾಮಾಜಿಕ-ಆರ್ಥಿಕ ವಿಚಾರಗಳಿಗೆ ಅವರು ಸ್ಪಂದಿಸುತ್ತಿದ್ದರು.

ಅಧಿಕಾರ ವಹಿಸಿಕೊಂಡ ಕಮ್ಯುನಿಸ್ಟ್ ಮಂತ್ರಿಮಂಡಲ ಆದರ್ಶಪ್ರಾಯವಾದಂಥ ಕಾರ್ಯಗಳನ್ನು ಕೈಗೆತ್ತಿಕೊಂಡಿತು. ಇಎಂಎಸ್ ನಂಬೂದಿರಿಪಾಡ್‌ರವರ ನೇತೃತ್ವದ ಮಂತ್ರಿಮಂಡಲವು, ಹಲವು ರೀತಿಯಲ್ಲಿ ಇತಿಹಾಸ ನಿರ್ಮಿಸಿತು. ಅನೇಕ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಜಾರಿಗೆ ತರಲಾಯಿತು. ಅವುಗಳಲ್ಲಿ ಪ್ರಮುಖವಾದ ಕ್ಷೇತ್ರಗಳೆನ್ನುವುದು, ಭೂಸುಧಾರಣೆ ಮತ್ತು ಶಿಕ್ಷಣ. ಅಸ್ತಿತ್ವದಲ್ಲಿರುವ ಅಧಿಕಾರ ಕೇಂದ್ರಿತ ಸಂಸ್ಥೆಗಳಿಗೆ ಸಂಬಂಧಪಟ್ಟಂತೆ ಈ ಎರಡೂ ಕ್ಷೇತ್ರಗಳಲ್ಲಿ ಸವಾಲೆಸೆಯುವಂತಾಯಿತು. ಪರಿಣಾಮವಾಗಿ ಕೇರಳದ ಭೂಮಾಲೀಕರು, ಬಂಡವಾಳಶಾಹಿಗಳು, ಜಾತಿ/ಸಮುದಾಯ ಸಂಘಟನೆಗಳು, ಕಮ್ಯುನಿಸ್ಟ್ ವಿರೋಧಿ ಬುದ್ಧಿಜೀವಿಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ದನಿಗೂಡಿಸಿದರು. ಜಾಗತಿಕ ಕಮ್ಯುನಿಸ್ಟ್ ವಿರೋಧಿ ಶಕ್ತಿಗಳು, ಆರ್ಥಿಕವಾಗಿ ಮತ್ತು ಸೈದ್ಧಾಂತಿಕವಾಗಿ ಅವರನ್ನು ಬೆಂಬಲಿಸಿದವು. ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯಲು ನಡೆಸಿದ ವಿಮೋಚನಾ ಹೋರಾಟವು ಈ ಶಕ್ತಿಗಳ ಯಶಸ್ಸೂ ಆಗಿತ್ತು.

ಕಮ್ಯುನಿಸ್ಟ್ ಮಂತ್ರಿಮಂಡಲದ ಕ್ರಮಗಳು ಮತ್ತು ಇವಕ್ಕೆ ವಿರುದ್ಧವಾಗಿದ್ದ ಜಾತಿ ಮತ್ತು ಧಾರ್ಮಿಕ ಸಂಘಟನೆಗಳು, ಕಮ್ಯುನಿಸ್ಟ್ ವಿರೋಧಿ ರಾಷ್ಟ್ರೀಯ-ಅಂತರರಾಷ್ಟ್ರೀಯ ಸಂಘಟನೆಗಳು ಮುಂತಾದವುಗಳನ್ನು ಯಶಸ್ವಿಯಾಗಿ ಸಂಘಟಿಸಿದ ವಿರೋಧದ, ವಿವರ ಮತ್ತು ವಿಮರ್ಶಾತ್ಮಕ ನಿರೂಪಣೆಯೇ ಡಾ. ಪಿ.ಎಂ. ಸಲೀಂರವರ ಈ ಕೃತಿ. ವೈವಿಧ್ಯಮಯವಾದ ಮೂಲಗಳನ್ನು ಆಧರಿಸಿಕೊಂಡು ರಚಿಸಿದ ಈ ಸಂಶೋಧನಾ ಗ್ರಂಥ, ಆಧುನಿಕ ಕೇರಳದ ರಾಜಕೀಯ ಇತಿಹಾಸದ ಬಗ್ಗೆಯ ಅಧ್ಯಯನಕ್ಕೆ ಬಹಳ ಉತ್ತಮವಾದ ಸಂಪನ್ಮೂಲವಾಗಿದೆ. ಎಡಪಕ್ಷ ರಾಜಕೀಯವನ್ನು ವಸ್ತುನಿಷ್ಠವಾಗಿ ವಿಶ್ಲೇಷಣೆ ನಡೆಸುವ ಈ ಕೃತಿ, ಗಂಭೀರ ಓದುಗರ ಗಮನವನ್ನು ಸೆಳೆಯುತ್ತದೆ.

**25.09.2020**
**ಡಾ. ಕೆ.ಎನ್. ಪಣಿಕ್ಕರ್**
**ತಿರುವನಂತಪುರಂ**

# 1

# ವಿಮೋಚನಾ ಹೋರಾಟ
# ಒಂದು ವಿಶೇಷ ಅಧ್ಯಯನ

ಇಎಂಎಸ್, ನಂಬೂದಿರಿಪಾಡ್ ನೇತೃತ್ವದದಲ್ಲಿ ಅಸ್ತಿತ್ವಕ್ಕೆ ಬಂದ ಕೇರಳದ ಮೊದಲ ಸರ್ಕಾರಕ್ಕೆ ಸಂಬಂಧಿಸಿದ ವಿವಿಧ ಸಮಸ್ಯೆಗಳ ಹಿನ್ನೆಲೆ, ಗಂಭೀರತೆ, ವ್ಯಾಪ್ತಿ ಮುಂತಾದವುಗಳ ಬಗ್ಗೆ ವಿಶ್ಲೇಷಣೆ ನಡೆಸಿದಂಥ ಐತಿಹಾಸಿಕ ಸಂಶೋಧನಾ ಗ್ರಂಥವಿದು. ಭಾರತದಲ್ಲಿ ಮೊದಲ ಬಾರಿಗೆ ಕಮ್ಯುನಿಸ್ಟ್ ಪಕ್ಷವು ಚುನಾವಣೆಯ ಮೂಲಕ ಕೇರಳದಲ್ಲಿ, ಏಪ್ರಿಲ್ 1957ರಲ್ಲಿ ಅಧಿಕಾರಕ್ಕೆ ಬಂದಿತು. ಆ ಸಮಯದಲ್ಲಿ ಚುನಾವಣೆಯ ಮೂಲಕ ಕಮ್ಯುನಿಸ್ಟ್ ಪಕ್ಷ ಅಧಿಕಾರವನ್ನು ಪಡೆಯುವುದು ಒಂದು ದೊಡ್ಡ ಐತಿಹಾಸಿಕ ಮಹತ್ವದ ಘಟನೆಯೆಂದು ಪರಿಗಣಿಸಲಾಗಿತ್ತು.. ಅದರ ಅಲೆಗಳ ಅಬ್ಬರ ಪ್ರಪಂಚದಾದ್ಯಂತ ಪ್ರತಿಧ್ವನಿಸಿದ್ದವು. ಆದರೆ 28 ತಿಂಗಳ ಅಲ್ಪಾವಧಿಯಲ್ಲಿ ಆಡಳಿತ ಬುಡಮೇಲುಗೊಳ್ಳುವುದರ ಅಂಶಗಳಿಗೆ ದ್ರೋಹ ಬಗೆಯುವ ರಾಜಕೀಯ ಕಾರ್ಯಾಚರಣೆಗಳ ಮೂಲಕ ಕೇಂದ್ರ ಸರ್ಕಾರ, ರಾಜ್ಯ ಸರಕಾರವನ್ನು ನಿರ್ದಯವಾಗಿವಜಾಗೊಳಿಸಿತು. ಅದು ಕೇರಳದ ಕಮ್ಯುನಿಸ್ಟ್ ವಿರುದ್ಧಶಕ್ತಿಗಳ ಕ್ರೋಢೀಕರಣದ ಪರಾಕಾಷ್ಠೆಯ ಸಂಕೇತವೆನಿಸಿಕೊಂಡಿತು. ಈ ರಾಜಕೀಯ ಕಾರ್ಯಾಚರಣೆಯನ್ನು 'ವಿಮೋಚನಾ ಹೋರಾಟ' ಎಂದು ಆಗ ಕರೆಸಿಕೊಂಡಿದ್ದು ನಿಜಕ್ಕೂ ಒಂದು ವಿರೋಧಾಭಾಸವೇ ಸರಿ. ಜಾತಿ/ಸಮುದಾಯದ ಸಂಘಟನೆಗಳೂ ವಿರೋಧಪಕ್ಷಗಳೂ ಜಂಟಿಯಾಗಿ ಸಂಘಟಿಸಿದ ಈ ವಿಮೋಚನಾ ಹೋರಾಟ, ನಂತರ ಕೇಂದ್ರ ಸರ್ಕಾರ ನಡೆಸಿದ ಹಸ್ತಕ್ಷೇಪವೆನ್ನುವುದು, ಭಾರತದ ವಸಾಹತುಶಾಹಿ ಅವಧಿಯ ನಂತರ, ಕೇರಳದಲ್ಲಿ ನಡೆದ ಐತಿಹಾಸಿಕ ಮತ್ತು ಅತ್ಯಂತ ವಿವಾದಾತ್ಮಕ ಘಟನೆಗಳಾಗಿವೆ. ನಂತರದ ಕೇರಳದ ಚಾರಿತ್ರಿಕ ಪಥವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಈ ಘಟನೆಗಳ ಅಲೆಗಳು ಗುಪ್ತವಾಗಿಯೂ ಮತ್ತು ಸ್ಪಷ್ಟವಾಗಿಯೂ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಹೆಚ್ಚಿನ ರೀತಿಯಲ್ಲಿ ಪರಿಣಾಮ ಬೀರುತ್ತಲೇ ಬರುತ್ತಿವೆ ಎನ್ನುವುದು ವಾಸ್ತವದ ಸಂಗತಿಗಳಾಗಿವೆ. ಕೇರಳದ ಮೊದಲ ಜನಪರಸರ್ಕಾರದ ಆಡಳಿತ ಸುಧಾರಣೆಗಳಿಂದ ಕಂಗೆಟ್ಟ ಬಲಪಂಥೀಯ ಸಂಘಗಳು ಮತ್ತು ಇತರೆ ಕಮ್ಯುನಿಸ್ಟ್ ವಿರೋಧಿ ಸಂಘಟನೆಗಳು, ಸರ್ಕಾರವನ್ನು ಹೊರಹಾಕಲು

ನಡೆಸಿದ ಪ್ರಯತ್ನಗಳೆಲ್ಲವೂ ನಮ್ಮ ರಾಜಕೀಯ ಭ್ರಮೆಗಳಿಂದ ತುಂಬಿಕೊಂಡಿದ್ದವು. ಘೋಷಿತ ಗುರಿಯೊಂದಿಗೆ ಆಯೋಜಿಸಲಾದ ಆಂದೋಲನವು, ಆ ಸಮಯದಲ್ಲಿ ಭಾರತದ ಏಕೈಕ ಕಾಂಗ್ರೆಸ್ಸೇತರ ರಾಜ್ಯವಾಗಿದ್ದ ರಾಜ್ಯ ಸರ್ಕಾರದ ವಿಸರ್ಜನೆಗೆ ಕಾರಣವಾದ ಕೇಂದ್ರ ಸರ್ಕಾರದ ರಾಜಕೀಯ ಹಸ್ತಕ್ಷೇಪವನ್ನು, ಸೂಕ್ಷ್ಮ ಮಟ್ಟದಲ್ಲಿ ವಸ್ತುನಿಷ್ಠವಾಗಿ ಪರಿಶೀಲಿಸಬೇಕಾದ ಅಗತ್ಯವಿರುತ್ತದೆ. ಕೇರಳದಲ್ಲಿ ಪ್ರಜಾಸತ್ತಾತ್ಮಕವಾಗಿ ಅಧಿಕಾರಕ್ಕೆ ಬಂದ ಮೊದಲ ಕಮ್ಯುನಿಸ್ಟ್ ನೇತೃತ್ವದ ಸರ್ಕಾರವು ತನ್ನ ಅವಧಿಯ ಅರ್ಧದಷ್ಟು ಪೂರ್ತಿಗೊಳಿಸುವುದಕ್ಕೂ ಮೊದಲು, ಅನೈತಿಕ ಮತ್ತು ಅಪ್ರಜಾಸತ್ತಾತ್ಮಕ ರೀತಿಯಲ್ಲಿ ಹೊರಹಾಕಲ್ಪಟ್ಟಾಗ, ಅದಕ್ಕೆ ಕಾರಣವಾದ ಪರಿಸ್ಥಿತಿಯನ್ನು ಸೃಷ್ಟಿಸಿದ ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಸಿದ್ಧಾಂತ ಮತ್ತು ವಿರುದ್ಧಶಕ್ತಿಯ ಮೂಲಗಳನ್ನು, ಅದರ ಕಾರ್ಯ ವ್ಯಾಪ್ತಿಯನ್ನು ಆಧರಿಸಿದ ಸಮಗ್ರ ಅಧ್ಯಯನ ಇದುವರೆಗೂ ನಡೆದಿರುವುದಿಲ್ಲ.

ವಸಾಹತುಶಾಹಿ ಕಾಲಘಟ್ಟದ ನಂತರದ ಕೇರಳದ ಸಮಾಜದಲ್ಲಿ ಉಂಟಾದ ಬೆಳವಣಿಗೆಗಳ ಕುರಿತು ಕೆಲವು ಅವಲೋಕನಗಳನ್ನು ವಿಮರ್ಶಾತ್ಮಕವಾಗಿ ಇಲ್ಲಿ ವಿವರವಾಗಿ ಪ್ರಸ್ತುತಪಡಿಸಲಾಗುತ್ತಿದೆ. 1950ರ ದಶಕದ ಕೇರಳದ ರಾಜಕೀಯ–ಸಾಮಾಜಿಕ ಸಂರಚನೆಗಳ ಮೇಲೆ ಇದು ಖಂಡಿತವಾಗಿಯು ಬೆಳಕು ಚೆಲ್ಲುತ್ತದೆ. ವಸಾಹತುಶಾಯಿ ಕಾಲಘಟ್ಟದಲ್ಲಿ, ವಿಶೇಷವಾಗಿ 20ನೇ ಶತಮಾನದ ಪೂರ್ವಾರ್ಧದಲ್ಲಿ, ಹೊಸ ನಾಗರಿಕ ಸಮಾಜದ ಸೃಷ್ಟಿಗೆ ಕಾರಣವಾದ ಘಟನಾವಳಿಗಳು ಕೇರಳದಲ್ಲಿ ಅನಾವರಣಗೊಳ್ಳುತ್ತಿದ್ದವು. ಇವುಗಳಲ್ಲಿ ಕೆಲವು ಬೆಳವಣಿಗೆಗಳು 19ನೇ ಶತಮಾನದ ಕೊನೆಯ ದಶಕಗಳಲ್ಲೇ ರೂಪುಗೊಳ್ಳಲು ಪ್ರಾರಂಭಗೊಂಡಿದ್ದವು. 20ನೇ ಶತಮಾನದ ಮೊದಲಾರ್ಧದ ಸಾಮಾಜಿಕ ಮತ್ತು ಸಾಮುದಾಯಿಕ/ಕೋಮುವಾದ, ಇವುಗಳಿಗೆ ಸಂಬಂಧಪಟ್ಟಂತೆ ಉಂಟಾದ ಸುಧಾರಣೆಗಳು, ವಸಾಹತುಶಾಹಿ ವಿರುದ್ಧದ ರಾಷ್ಟ್ರೀಯತೆ, ವಸಾಹತುಶಾಹಿಗೂ ಭೂಮಾಲೀಕತ್ವಕ್ಕೂ ವಿರುದ್ಧದ ಕಮ್ಯುನಿಸ್ಟ್ ಹೋರಾಟದ ಸನ್ನದ್ಧತೆ, ನವೋದಯದ ಕಾರ್ಯಗಳು ಇವೇ ಮುಂತಾದವುಗಳು ಅತ್ಯಂತ ಗಮನಾರ್ಹವಾದವು. ಇವುಗಳಲ್ಲಿ ಹೆಚ್ಚಿನವು ಸಮಾನತೆಯ ದರ್ಶನ/ಆಶಯದಿಂದ ಅಂತರವನ್ನು ಕಾಯ್ದುಕೊಂಡವುಗಳಾದರೂ ವಸಾಹತುಶಾಹಿ ಕಾಲದ ಕೇರಳದಲ್ಲಿ ಹೊಸ ನಾಗರಿಕ ಸಮಾಜ ರೂಪುಗೊಳ್ಳುವ ಪ್ರಕ್ರಿಯೆಯಲ್ಲಿ ಇವುಗಳು ಮೂಲ ಘಟಕಗಳಾಗಿ ಕಾರ್ಯನಿರ್ವಹಿಸಿದವು. ಶೋಷಿತ ವರ್ಗಗಳು ಮತ್ತು ಅಂಚಿಗೆ ತಳ್ಳಲ್ಪಟ್ಟಿದ್ದ ಜಾತಿಗಳು, ಸಾಮಾಜಿಕ ಕ್ಷೇತ್ರದ ಗಡಿಗಳನ್ನು ಮೀರುವ ರೀತಿಯಲ್ಲಿ ಸಂಘಟಿತರಾಗಿ, ನಾಗರಿಕ ಸಮಾಜದಲ್ಲಿ ತಮ್ಮ ಇರುವಿಕೆಯನ್ನು ಖಚಿತಪಡಿಸಿಕೊಳ್ಳಲು ಪ್ರಯತ್ನಿಸಿದವು. ಆದರೆ, ಅವರ ಉದ್ದೇಶ ಅಷ್ಟು ಸರಳವಾಗಿರಲಿಲ್ಲ. ಮಾತ್ರವಲ್ಲ, ನಾಗರಿಕ ಸಮಾಜ ಸ್ಪರ್ಧಾತ್ಮಕವಾಗಿಯೂ ಇತ್ತು. ಆದ್ದರಿಂದ ಪ್ರಬಲ ವರ್ಗ ಮತ್ತು ಪ್ರಬಲ ಜಾತಿಗಳಿಗೆ ತಮ್ಮ ಪ್ರಾಬಲ್ಯವನ್ನು

ಉಳಿಸಿಕೊಳ್ಳಬೇಕಾದ ಅಗತ್ಯವಿತ್ತು. ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಸಂಘಟಿತಗೊಂಡ ಶಕ್ತಿ, ದುಡಿಯುವ ಜನರನ್ನು ಮತ್ತು ತುಳಿತಕ್ಕೊಳಗಾದವರನ್ನು ಆಕರ್ಷಿಸಲು ನವೀನ ರೀತಿಯ ಪರಿಕಲ್ಪನೆಗಳನ್ನು ಪ್ರಸ್ತುತಪಡಿಸಿತು. ಪ್ರಬಲ ವರ್ಗ ಮತ್ತು ಮೇಲ್ಜಾತಿ ಜನರು, ಇವುಗಳನ್ನು ಆತಂಕದಿಂದಲೇ ಕಾಣುತ್ತಿದ್ದರು. ತುಳಿತಕ್ಕೊಳಗಾದ ಜಾತಿಗಳು, ಕೇರಳದ ರಾಜಕೀಯದಲ್ಲಿ ಪ್ರಬಲ ಶಕ್ತಿಯಾಗಿ ರೂಪುಗೊಳ್ಳುವ ಪರಿಸ್ಥಿತಿಗಳು ಉದ್ಭವಗೊಂಡವು. ಸಮಾಜದಲ್ಲಿ ತೊಡಗಿಸಿಕೊಳ್ಳಲು ಅವರ ಐತಿಹಾಸಿಕ ದೌತ್ಯವೆನ್ನುವುದು, ಒಂದು ರೀತಿಯಲ್ಲಿ ಕಮ್ಯುನಿಸ್ಟ್ ಪಕ್ಷದಲ್ಲಿ ಸಹ ಕಾರ್ಯಗತಗೊಳಿಸಲಾಗುತ್ತಿತ್ತು. ಪ್ರಸ್ತುತ ಕಮ್ಯುನಿಸ್ಟ್ ಪಕ್ಷಕ್ಕೆ ಮಾತ್ರ ತುಳಿತಕ್ಕೊಳಗಾದ ಜಾತಿಗಳು ಸೇರಿದಂತೆ, ಸಾಮಾನ್ಯ ಜನರ ಬೆಂಬಲವಿತ್ತೆಂದು ಹೇಳಿಕೊಳ್ಳಬಹುದಿತ್ತು. ಈ ಪರಿಸ್ಥಿತಿಯು ಪ್ರಬಲವರ್ಗ ಮತ್ತು ಮೇಲ್ಜಾತಿವರ್ಗಗಳ ಪ್ರಾಬಲ್ಯಕ್ಕೆ ಬೆದರಿಕೆಯನ್ನೊಡ್ಡುತ್ತಿದೆ ಎಂದು ಅವರು ಭಾವಿಸುವುದಕ್ಕೆ ಎಡೆಮಾಡಿಕೊಟ್ಟಿತು. ಹೊಸ ಸರ್ಕಾರದ ನೀತಿಗಳು ಇದಕ್ಕೆ ಉದಾಹರಣೆಯಾಗಿ ಅವರಿಗೆ ಗೋಚರಿಸತೊಡಗಿದವು. 1940 ಮತ್ತು 1950ರ ದಶಕಗಳಲ್ಲಿ ಪ್ರಬಲ ಜಾತಿ ಮತ್ತು ವರ್ಗಗಳು ರಾಜಕೀಯ ಸಂಘಟನೆಗಳ ಮೂಲಕ, ತಿರುವಾಂಕೂರು-ಕೊಚ್ಚಿನ್ ಪ್ರದೇಶಗಳಲ್ಲಿ ತಮ್ಮ ಶಕ್ತಿಯನ್ನು ಕ್ರೋಡೀಕರಣಗೊಳಿಸಿಕೊಳ್ಳುತ್ತಿತ್ತು. ಪ್ರಬಲ ವರ್ಗಗಳ ಅಧಿಕಾರ ಸ್ಥಾನಗಳು ನಾಗರಿಕ ಸಮಾಜದ ಸಂಸ್ಥೆಗಳಲ್ಲಿ ಕೇಂದ್ರೀಕೃತವಾಗಿದ್ದವು. ತುಳಿತಕ್ಕೊಳಗಾದವರ ಮತ್ತು ದೀನದಲಿತರ ಉದ್ಧಾರಕ್ಕೆ ಹೆದರಿದ ಅವರು, ಸಮಾಜದ ಅಥವಾ ಸಮೂಹದ ಸಂಪ್ರದಾಯವಾದಿ ಶಕ್ತಿಗಳನ್ನು ಸಂಘಟಿಸಲು ಪ್ರಸ್ತುತ ಸಂಸ್ಥೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾರಂಭಿಸಿದರು. ಈ ಸಂದರ್ಭದಲ್ಲಿ ಸಾರ್ವಜನಿಕ ಕ್ಷೇತ್ರಗಳಲ್ಲಿ ಉಂಟಾದ ಗಮನಾರ್ಹವಾದ ಹೋರಾಟಗಳು ಸಹ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಇತರೇ ಅಂಶಗಳೊಂದಿಗೆ ಕೇರಳದಲ್ಲಿ ಸಾಕ್ಷರತೆಯ ಪ್ರಮಾಣವೂ ಅಧಿಕವಾಗಿದ್ದರಿಂದ ಮಹತ್ವದ ಪ್ರಭಾವ ಬೀರಲು ಸಾಧ್ಯವಾಗಿಸಿತು.

ವಿಮೋಚನಾ ಹೋರಾಟದ ವಿವಿಧ ಅಂಶಗಳ ಬಗ್ಗೆ ಬಹಳಷ್ಟು ಬರಹಗಳು ಪ್ರಕಟನೆಗೊಂಡಿವೆ. ಇವುಗಳಲ್ಲಿ ಕ್ಯಾಥೋಲಿಕ್ ಚರ್ಚ್ ಪ್ರಕಟಿಸಿದ ಧರ್ಮಶಾಸ್ತ್ರದ ವಿಷಯಗಳನ್ನು ಆಧರಿಸಿದ ಕಮ್ಯುನಿಸ್ಟ್ ವಿರೋಧಿ ಲೇಖನಗಳು, ಕರಪತ್ರಗಳು ಸಹ ಸೇರಿವೆ. ತನ್ನ ಸ್ವಂತ ಹಿತ್ತಲಿನಲ್ಲಿ ಬೆಳೆದ ಬೆದರಿಕೆಯಾದ 'ಯುರೋಪ್‌ನ್ನು ಕಾಡಿದ ರಾಕ್ಷಸ'ನ ವಿರುದ್ಧ ಕೆಲವು ವಾದಗಳನ್ನು ಮಂಡಿಸಿದ್ದರು. ಅವುಗಳಲ್ಲಿ ಕೆಲವು 1930ರ ದಶಕದಲ್ಲೇ ಪ್ರಕಟಗೊಂಡಿದ್ದವು. ವಿಶ್ವಮಹಾಯುದ್ಧಗಳ ಸಮಯದಲ್ಲಿ ಯುರೋಪಿನಲ್ಲಿ ಅಭಿವೃದ್ಧಿ ಹೊಂದಿದ ಬಲಪಂಥೀಯ ರಾಜಕೀಯವನ್ನು ಅವರು ವೈಭವೀಕರಿಸಿದರು. ಕಮ್ಯುನಿಸ್ಟ್ ವಿರೋಧಿ ವಿಚಾರಗಳನ್ನು ಕೇರಳದಲ್ಲಿ ಉತ್ಪಾದಿಸಲು ಮತ್ತು ವ್ಯಾಪಕವಾಗಿ ವಿತರಿಸಲು ಕೇರಳದ ಸಾರ್ವಜನಿಕ ವಲಯವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಯಿತು. ಬಲಪಂಥೀಯರ ಸಂಘಟಿತ ಶಕ್ತಿಯ ಅಪಪ್ರಚಾರವನ್ನು ಎದುರಿಸಲು ಎಡಪಂಥೀಯ ವಿದ್ವಾಂಸರ ಪ್ರಾಮಾಣಿಕ ಪ್ರಯತ್ನಗಳೂ ಇದ್ದವು.

ವಾಸ್ತವವಾಗಿ ಆ ಸಮಯದಲ್ಲಿ ಕಮ್ಯುನಿಸ್ಟ್ ವಿರೋಧಿ ಮತ್ತು ಕಮ್ಯುನಿಸ್ಟರ ನೇತೃತ್ವಗಳ ನಡುವೆ ವಿವಿಧ ರೀತಿಗಳಲ್ಲಿ ಮತ್ತು ವಿವಿಧ ಹಂತಗಳಲ್ಲಿ ಶಕ್ತಿ ಕ್ರೋಡೀಕರಣದ ಪ್ರಕ್ರಿಯೆ ನಡೆಯುತ್ತಿದ್ದವು.

## ಅಧ್ಯಯನದ ಉದ್ದೇಶಗಳು

ಕೇರಳದಲ್ಲಿ ಮೊದಲ ಜನಪರ ಸರ್ಕಾರದ ಆಡಳಿತದ ಅವಧಿಗೆ ಸಂಬಂಧಿಸಿದ ವಿಷಯಗಳನ್ನು ವಿಶ್ಲೇಷಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶ. 1957ರಲ್ಲಿ ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆ ಮತ್ತು ಮೊದಲ ಕಮ್ಯುನಿಸ್ಟ್ ಸರ್ಕಾರದ ರಚನೆಯ ಪರವಾಗಿದ್ದ ಪರಿಸ್ಥಿತಿಗಳ ಸಂದರ್ಭಗಳನ್ನು ಪರಿಶೀಲಿಸಬೇಕಾಗುತ್ತದೆ. ಇಎಂಎಸ್ ನಂಬೂದಿರಿಪಾಡ್ ನೇತೃತ್ವದ ಮೊದಲ ಸರ್ಕಾರದ ನೀತಿಗಳ ಮತ್ತು ಕಾರ್ಯಕ್ರಮಗಳ ಬಗ್ಗೆ ವಿಶ್ಲೇಷಣೆ ನಡೆಸುವುದರ ಜೊತೆಗೆ, ಅಂದಿನ ವಿರೋಧ ಪಕ್ಷಗಳು, ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್, ಕಮ್ಯುನಿಸ್ಟ್ ವಿರೋಧಿ ಫ್ರಂಟ್, ನಾಯರ್ ಸರ್ವೀಸ್ ಸೊಸೈಟಿ ಮತ್ತು ಇಂಡಿಯನ್ ಯೂನಿಯನ್ ಮುಸ್ಲಿಂ ಲೀಗ್ ಮುಂತಾದ ಜಾತಿ/ಸಮುದಾಯ ಮತ್ತು ಧರ್ಮ–ರಾಜಕೀಯ ಸಂಸ್ಥೆಗಳ, ಪ್ರತಿಗಾಮಿ ಶಕ್ತಿಗಳ ಕಾರ್ಯಾಚರಣೆ ಮುಂತಾದವುಗಳ ಬಗ್ಗೆಯೂ ಇಲ್ಲಿ ವಿಶ್ಲೇಷಣೆ ನಡೆಸಲಾಗಿದೆ.

ಕೇರಳದಲ್ಲಿ ಅಸ್ತಿತ್ವದಲ್ಲಿದ್ದ ತಾರತಮ್ಯತೆ ಮತ್ತು ಶೋಷಣಾತ್ಮಕವಾದ ಸಾಮಾಜಿಕ–ಆರ್ಥಿಕ ಸಂರಚನೆಯನ್ನು ಮರುರೂಪಿಸುವುದಕ್ಕಾಗಿಯೂ ತುಳಿತಕ್ಕೊಳಗಾದ ಮತ್ತು ಶೋಷಿತ ಜನರಿಗೆ ಸಾಮಾಜಿಕ ನ್ಯಾಯವನ್ನು ಖಾತ್ರಿಪಡಿಸಿಕೊಡುವುದಕ್ಕಾಗಿಯೂ ಆ ಸರ್ಕಾರ ಕೈಗೊಂಡ ಸಾಂವಿಧಾನಿಕ ಉಪಕ್ರಮಗಳ ಪ್ರಭಾವವನ್ನು ಮತ್ತು ಪರಿಣಾಮಗಳನ್ನು ವಿವರಿಸಲಾಗಿದೆ. ಜಾತಿ/ಸಮುದಾಯಗಳ ಸುಧಾರಣಾ ಚಳುವಳಿಗಳು ಹೇಗೆ ಪಟ್ಟಭದ್ರ ಹಿತಾಸಕ್ತಿಗಳೊಂದಿಗೆ ಒತ್ತಡದ ಗುಂಪುಗಳಾಗಿ (Pressure Group) ಪರಿವರ್ತನೆಗೊಂಡವು ಅಥವಾ ರೂಪಾಂತರಗೊಂಡವು ಎಂಬುದನ್ನು ಪರಿಶೀಲಿಸಲಾಗುತ್ತಿದೆ. ವಸಾಹತುಶಾಹಿ ನಂತರದ ಕೇರಳದ ರಾಜಕೀಯ ಭೂಮಿಯಲ್ಲಿ ಸಾಮಾಜಿಕ ಶಕ್ತಿಗಳು ಹೆಚ್ಚಾಗುತ್ತಾ ಬಂದ ಪ್ರಭಾವವನ್ನೂ ಮೌಲ್ಯಮಾಪನವನ್ನೂ ಇಲ್ಲಿ ಮಾಡಲಾಗುತ್ತಿದೆ. ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಪಕ್ಷದ ನೇತೃತ್ವದತ್ವ ಸರ್ಕಾರದ ಕುರಿತು, ಕೇಂದ್ರ ಸರ್ಕಾರಕ್ಕಿದ್ದ ಧೋರಣೆಯನ್ನು ಪರಿಶೀಲಿಸಲಾಗುತ್ತಿದೆಯಲ್ಲದೆ, ಕೇಂದ್ರ ಸರ್ಕಾರದ ಹಸ್ತಕ್ಷೇಪಕ್ಕೆ ಕಾರಣವಾದ ಸಂದರ್ಭಗಳನ್ನು ಪರಿಶೀಲಿಸುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ.

## ಪುಸ್ತಕದ ಪ್ರಾಮುಖ್ಯತೆ ಮತ್ತು ಪ್ರಸ್ತುತತೆ

ಕೇರಳದ ಮೊದಲ ಜನಪರ ಸರ್ಕಾರದ ನೀತಿಗಳು ಮತ್ತು ಆಡಳಿತಾತ್ಮಕ ಕಾರ್ಯಕ್ರಮಗಳು, ಹೆಚ್ಚಿನ ವಸ್ತುನಿಷ್ಠವಾದ ವಿಶ್ಲೇಷಣೆ ಮತ್ತು ಹೆಚ್ಚಿನ ಪ್ರಸ್ತುತತೆಯನ್ನು

ಪಡೆದುಕೊಳ್ಳುತ್ತದೆ. ಏಕೆಂದರೆ, ದುಡಿಯುವ ಜನರ ದೀರ್ಘಕಾಲದ ಕಷ್ಟ ನಿವಾರಣಾ ಉದ್ದೇಶವನ್ನು ಅವು ಹೊಂದಿದ್ದವು. ಚುನಾವಣೆಯ ಮೂಲಕ ಅಧಿಕಾರಕ್ಕೆ ಬಂದು, ವಿಧಾನಸಭೆಯಲ್ಲಿ ಸ್ಪಷ್ಟ ಬಹುಮತ ಪಡೆದುಕೊಂಡು ಜನಪರವಾದ ಕಲ್ಯಾಣ ಕಾರ್ಯಕ್ರಮಗಳಲ್ಲಿ ನಿರತವಾಗಿದ್ದ ಸರ್ಕಾರವನ್ನು ಹೊರಹಾಕಲು ವಿವಿಧ ವಿರೋಧಿ ಸಂಘ-ಸಂಸ್ಥೆಗಳು, ಸಂಘಟನೆಗಳು, ನಡೆಸಿದ ಕಾರ್ಯಗಳನ್ನು ಈ ಪುಸ್ತಕವು ಸಂಪೂರ್ಣವಾಗಿ ತನಿಖೆಗೆ ಒಳಪಡಿಸುತ್ತಿದೆ. 1959ರ ವಿಮೋಚನಾ ಹೋರಾಟವೆಂದು ಕರೆಯಲ್ಪಟ್ಟ ಈ ಸಂಘರ್ಷದ ಬಗ್ಗೆಯ ವಿಶ್ಲೇಷಣೆಗೆ ವಿಶೇಷ ಗಮನ ನೀಡಲಾಗಿದೆ. ಕಮ್ಯುನಿಸಂ ವಿರೋಧಿ (Anti-Communism)ಎನ್ನುವ ನಕರಾತ್ಮಕ ಸಿದ್ಧಾಂತದಿಂದ ಸ್ಫೂರ್ತಿ ಪಡೆದ ಸಂಘ-ಸಂಸ್ಥೆಗಳು ಮತ್ತು ಸಂಘಟನೆಗಳು ಪ್ರಜಾಸತ್ತಾತ್ಮಕವಾಗಿ ಸ್ಥಾಪಿತವಾದ ಸರ್ಕಾರವನ್ನು ಉರುಳಿಸಲು ಆಂದೋಲನಾ ಕಾರ್ಯಗಳಲ್ಲಿ ತೊಡಗಿಕೊಂಡವು. ಈ ತರಹದ ವಿಷಯಗಳ ಬಗ್ಗೆ ಶೈಕ್ಷಣಿಕ ಅಧ್ಯಯನಗಳು ನಡೆದಿರುವುದು ನಿಜಕ್ಕೂ ಅಪರೂಪ. ಕೇರಳದಲ್ಲಿ ಕಮ್ಯುನಿಸಂ ವಿರುದ್ಧತೆ ಹೊರಹೊಮ್ಮುವುದರ ಬಗ್ಗೆಯಾಗಲೀ ಕಮ್ಯುನಿಸ್ಟ್ ವಿರೋಧಿ ಬಣಗಳ ಬಲವರ್ಧನೆಯ ಬಗ್ಗೆಯಾಗಲೀ ಗಂಭೀರವಾದ ಪರಿಶೋಧನೆ ನಡೆಸಿದ ಬಗ್ಗೆ, ಸಾಮಾನ್ಯ ಬರಹ/ಲೇಖನಗಳು ಕಂಡುಬಂದಿರುವುದಿಲ್ಲ. ಆದ್ದರಿಂದ, ಅಂತಹ ಸಂಘ-ಸಂಸ್ಥೆಗಳ ಮತ್ತು ಸಂಘಟನೆಗಳ ಚಟುವಟಿಕೆಗಳ, ಅವು ಜನರ ಸಾಮಾಜಿಕ-ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಮೇಲೆ ಬಿರುವ ಪ್ರಭಾವಗಳ ಬಗ್ಗೆ ವಿಶ್ಲೇಷಣೆ ನಡೆಸುವುದು ನಮ್ಮ ಜ್ಞಾನವಿಸ್ತರಣೆಗೆ ಸಹಾಯವಾಗಬಹುದು.

ಕೇರಳದ ಅಂದಿನ ಪರಿಸ್ಥಿತಿಗಳಿಗೆ ಕಮ್ಯುನಿಸ್ಟ್ ಸರ್ಕಾರದ ಆಡಳಿತ ಕಾರ್ಯಕ್ರಮಗಳ ಜೊತೆಗೆ, ಇತರ ಹಲವು ಅಂಶಗಳಿಂದಾಗಿ ಮತ್ತು ಅವು ಉಂಟುಮಾಡಿದ ಪ್ರಭಾವದ ಪರಿಣಾಮಗಳಿಂದಾಗಿ, ಕಾಲಾಕ್ರಮೇಣದಲ್ಲಿ ರೂಪಾಂತರಗೊಂಡಿದ್ದರೂ, ವಿವಿಧ ಸಂಘಗಳ, ಸಂಘಟನೆಗಳ ನಡುವಿನ ಆಸಕ್ತಿಯ ಸಂಘರ್ಷಗಳು ಮತ್ತು ಅವುಗಳೊಳಗಡೆಯೇ ಇದ್ದಂಥ ಪಂಥೀಯತೆ/ಗುಂಪುಗಾರಿಕೆಗಳು ಹೆಚ್ಚುಕಡಿಮೆಯಾಗುತ್ತಾ ಈಗಲೂ ಅಸ್ತಿತ್ವದಲ್ಲಿ ಉಳಿದುಕೊಂಡಿವೆ. ಇಂದಿನ ಕೇರಳದ ಸಾಮಾಜಿಕ-ಸಾಂಸ್ಕೃತಿಕ-ರಾಜಕೀಯ ಜೀವನದಲ್ಲಿ ಕಣ್ಣಿಗೆ ಕಾಣುವ ವಿಮೋಚನಾ ಹೋರಾಟದ ಪ್ರಭಾವ ಪರಿಗಣಿಸತಕ್ಕದ್ದೇನು ಅಲ್ಲ. ಮೊದಲ ಜನಪರ ಸರ್ಕಾರದ ಭವಿಷ್ಯವನ್ನು ನಿರ್ಧರಿಸಿದ ವಿಮೋಚನಾ ಹೋರಾಟದ ವಿವಿಧ ಅಂಶಗಳ ಬಗ್ಗೆ ಶೈಕ್ಷಣಿಕ ಅಧ್ಯಯನದ ಅಗತ್ಯವನ್ನು ಅಲ್ಲಗಳೆಯುವಂತೆಯೂ ಇಲ್ಲ. ವಸಾಹತುಶಾಹಿ ನಂತರದ ಭಾರತ ಮತ್ತು ಕೇರಳದ ಚಾರಿತ್ರಿಕಜ್ಞಾನ ಶಾಖೆಗೆ ಇಂತಹ ಅಧ್ಯಯನಗಳು ಮೊದಲಬಾರಿಗೆ ಸೇರ್ಪಡೆಗೊಳ್ಳುತ್ತಿವೆ.

### ವಿಧಾನ ಮತ್ತು ಉಪಲಬ್ಧಗಳು

ಕೇರಳದ ಒಳಗೆ ಮತ್ತು ಹೊರಗಿನಿಂದ ದೊರೆತ ವಿವಿಧ ದಾಖಲೆ/ಕಡತಗಳಿಂದ, ಲೈಬ್ರರಿಗಳಲ್ಲಿ ದೊರೆತ ಗ್ರಂಥಗಳಿಂದ ಪರಿಶೀಲನೆಗೆ ಒಳಪಡಿಸಲು ಸಾಧ್ಯವಾದ ಪ್ರಾಥಮಿಕ ಉಪಲಬ್ಧಗಳನ್ನು ಮುಖ್ಯವಾಗಿ ಆಧರಿಸಿ ತಯಾರಿಸಿದ ಗ್ರಂಥವಿದು. ದೇಶದ ವಿವಿಧ ಐತಿಹಾಸಿಕ ದಾಖಲಾತಿಗಳು ಮತ್ತು ಗ್ರಂಥಾಲಯಗಳು, ವ್ಯಕ್ತಿಗಳು ಇವೇ ಮುಂತಾದ ವಿವಿಧ ಮೂಲಗಳಿಂದ ದೊರೆತ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಪುಸ್ತಕಗಳು, ಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು, ಸ್ಮರಣ ಸಂಚಿಕೆಗಳು, ಜೀವನಚರಿತ್ರೆಗಳು, ಆತ್ಮಚರಿತ್ರೆಗಳು, ಲೇಖನಗಳು, ಅಪ್ರಕಟಿತ ಪ್ರಬಂಧಗಳು ಇವುಗಳೇ ಎರಡನೆಯ ಉಪಲಬ್ಧಗಳು.

ವ್ಯಾಪಕವಾಗಿ ಕೈಗೊಂಡ ಪ್ರಯಾಣಗಳಿಂದ ನಡೆಸಲಾದ ಸಂಶೋಧನಾ ಚಟುವಟಿಕೆಗಳ ಮೂಲಕ, ವಿವಿಧ ಮೂಲಗಳಿಂದ ಈ ವಾಸ್ತವಾಂಶಗಳನ್ನು ಸಂಗ್ರಹ ಮಾಡಲಾಗಿದೆ. ವೈಯುಕ್ತಿಕ ಅನುಭವಗಳು, ರಾಜಕೀಯ ಸಂಸ್ಥೆಗಳ ಮತ್ತು ಸಮುದಾಯ ಗುಂಪುಗಳ ವಿಮರ್ಶೆಗಳ, ಪರಿಕಲ್ಪನೆಗಳ ವಿವರಗಳನ್ನು ಸಂಗ್ರಹಿಸಲು ಮತ್ತು ಅವುಗಳನ್ನು ಅರ್ಥಮಾಡಿಕೊಳ್ಳಲು ಸಂಬಂಧಿತ ಜನರೊಂದಿಗೆ ಹಲವಾರು ಚರ್ಚೆಗಳನ್ನು, ಸಂದರ್ಶನಗಳನ್ನು ಆಯಾ ಸ್ಥಳಗಳಲ್ಲೇ ನಡೆಸಲಾಗಿವೆ. ಕಮ್ಯುನಿಸ್ಟ್ ಪಕ್ಷದೊಂದಿಗೆ, ಸರ್ಕಾರದೊಂದಿಗೆ, ಆ ಕಾಲದ ವಿರೋಧ ಪಕ್ಷಗಳೊಂದಿಗೆ, ಜಾತಿ/ಸಮುದಾಯ ಸಂಘಟನೆಗಳೊಂದಿಗೆ, ಕಮ್ಯುನಿಸ್ಟ್ ವಿರೋಧಿ ಗುಂಪುಗಳೊಂದಿಗೆ ಮತ್ತು ವಿಮೋಚನಾ ಹೋರಾಟದಲ್ಲಿ ಕೆಲಸ ಮಾಡಿದ ಅನುಭವ ಹೊಂದಿರುವ ನಾಯಕರ ಮತ್ತು ವ್ಯಕ್ತಿಗಳೊಂದಿಗೆ ನಡೆಸಿದ ಸಂದರ್ಶನಗಳಿಂದ ಪಡೆದ ಮಾಹಿತಿಗಳಿಗೆ ವ್ಯಕ್ತಿನಿಷ್ಠವಾಗಿಯೂ ಆತ್ಮನಿಷ್ಠವಾಗಿಯೂ ಪ್ರತಿಫಲನ ಉಂಟಾಗುವುದರಿಂದಾಗಿ ಅವುಗಳೆಲ್ಲವನ್ನೂ ಪ್ರಾಥಮಿಕ/ದ್ವಿತೀಯ ಅಂಶಗಳೊಂದಿಗೆ ಹೋಲಿಸಿ ಅವೆಲ್ಲವನ್ನೂ ದೃಢೀಕರಿಸಿಕೊಂಡೇ ಇಲ್ಲಿ ಬಳಸಿಕೊಂಡಿರುವುದು.

ಕೇರಳದ ಮೊದಲ ಕಮ್ಯುನಿಸ್ಟ್ ಪಕ್ಷದ ನಾಯಕತ್ವದ ಸರ್ಕಾರ ಮತ್ತು ವಿಮೋಚನಾ ಹೋರಾಟದ ಬಗ್ಗೆ ಆ ಸಮಯದಲ್ಲಿ ಅನೇಕ ಲೇಖನ/ಬರಹಗಳು ಪ್ರಕಟವಾಗಿದ್ದವು. ದೇಶ–ವಿದೇಶಗಳ ಲೇಖಕರು ವಿವಿಧ ದೃಷ್ಟಿಕೋನಗಳಿಂದ ಈ ಘಟನೆಗಳನ್ನು ವೀಕ್ಷಿಸಿ ಪ್ರತಿಕ್ರಿಯಿಸಿದ್ದಾರೆ. ಜನವರಿ 1959ರಲ್ಲಿ ಪ್ರಕಟಗೊಂಡ ಹರ್ಷದೇವ್ ಮಾಳವೀಯ 'ಕೇರಳ–ಎ ರಿಪೋರ್ಟ್ ಟು ದಿ ನೇಷನ್' (Kerala-A Report to the Nation) ಈ ಬಗ್ಗೆಯ ಮೊದಲ ಗಮನಾರ್ಹ ಕೃತಿಯಾಗಿದೆ. ಇಎಂಎಸ್ ಇಎಂಎಸ್‌ನಂಬೂದಿರಿಪಾಡ್ ಅವರ ಸರ್ಕಾರದ ನೀತಿಗಳು ಮತ್ತು ಆಡಳಿತ ಕಾರ್ಯವಿಧಾನಗಳ ಪ್ರತ್ಯಕ್ಷ ಅನುಭವಗಳು, ತನ್ನದೇ ಆದ ಅವಲೋಕನಗಳು ಮತ್ತು ಅಧ್ಯಯನಗಳು ಇವುಗಳ ಆಧಾರದ ಮೇಲೆ ಆ ಪುಸ್ತಕವನ್ನು ರಚಿಸಲಾಗಿತ್ತು.

ಉತ್ತರ ಪ್ರದೇಶದ ಹಿರಿಯ ಕಾಂಗ್ರೆಸ್ ನಾಯಕರಾಗಿದ್ದ ಅವರು, ಎಐಸಿಸಿಯ ಆರ್ಥಿಕ ವಿಮರ್ಶೆಯ (Economic Review) ಸಂಪಾದಕರಾಗಿ ಸೇವೆ ಸಲ್ಲಿಸಿದ್ದರು. ಕೇರಳದ ಆಡಳಿತ ಸುಧಾರಣಾ ಸಮಿತಿಯ (Kerala Administrative Reform Committee) ಸದಸ್ಯ ಕಾರ್ಯದರ್ಶಿಯಾಗಿ ಒಂದು ವರ್ಷ ಸೇವೆ ಸಲ್ಲಿಸಲು ಮಾಳವೀಯಾರವರಿಗೆ ಸಾಧ್ಯವಾಗಿತ್ತು. ಆದರಿಂದಾಗಿ ಅವರಿಗೆ ಇಎಂಎಸ್ ಸರ್ಕಾರದ ಕೆಲವು ಪ್ರಮುಖ ಆಡಳಿತ ಸುಧಾರಣೆಗಳ ಬಗ್ಗೆ ಪ್ರತ್ಯಕ್ಷವಾಗಿ ಅರಿಯಲು ಸಾಧ್ಯವಾಯಿತು. ಸರ್ಕಾರ ಮತ್ತು ಸರ್ಕಾರದ ವಿರೋಧಿಗಳ ಮೊದಲ ಎರಡು ವರ್ಷಗಳ ಚಟುವಟಿಕೆಗಳ ಬಗ್ಗೆ ಸಂಕ್ಷಿಪ್ತ ವಿವರಣೆಯನ್ನು ಹರ್ಷದೇವ್ ಮಾಳವೀಯ ಅವರಿಗೆ ಆ ಪುಸ್ತಕದ ಮೂಲಕ ಸಾರ್ವಜನಿಕರಿಗೆ ನೀಡಲು ಸಾಧ್ಯವಾಯಿತು. ಅವರು ಸರ್ಕಾರದ ಪ್ರಮುಖ ಆಡಳಿತದ ಸಾಧನೆಗಳನ್ನು ಎತ್ತಿ ತೋರಿಸುತ್ತಲೇ ಅದರ ವಿರುದ್ಧ ಉದ್ಭವಿಸಿದ ವಿರೋಧದ ಸಮತೋಲನ ಮತ್ತು ವಸ್ತುನಿಷ್ಠವಾದ ವಿವರಣೆಯನ್ನು ಪ್ರಸ್ತುತಪಡಿಸುತ್ತಾರೆ.

ಆರ್. ವೇಲಾಯುಧನ್‌ರವರು ರಚಿಸಿದ 'ಕೇರಳ ದಿ ರೆಡ್ ರೈನ್ ಲ್ಯಾಂಡ್' (Kerala the Red Rain Land–1958); ಡಾ. ಜಿತೆಂದ್ರ ಸಿಂಗ್ ರಚಿಸಿದ 'ಕೇರಳದಲ್ಲಿ ಕಮ್ಯುನಿಸ್ಟ್ ರೂಲ್' (Communist Rule in Kerala-1959) ಎಸ್. ಸಿ. ಜೋಸೆಫ್ ಬರೆದ 'ಕೇರಳ: ದಿ ಕಮ್ಯುನಿಸ್ಟ್ ಸ್ಟೇಟ್' (Kerala: the Communist State), ಕೈನಿಕ್ಕರ ಪದ್ಮನಾಭ ಪಿಳ್ಳರವರ 'ಕೇರಳದ ಕಮ್ಯುನಿಸ್ಟ್ ರೂಲ್' (The Red Interlude in Kerala), ಡಿ.ಆರ್. ಮಂಕೆಕರ್ಸ್‌ರವರ 'ದಿ ರೆಡ್ ರಿಡಲ್ ಆಫ್ ಕೇರಳ' (The Red Riddle of Kerala) ಮುಂತಾದವು, ವಿಷಯಗಳ ಬಗ್ಗೆ ವಿಭಿನ್ನ ದೃಷ್ಟಿಕೋನಗಳಿಂದ ಪರಿಶೀಲಿಸಲಾದ ಸಮಕಾಲೀನ ಭಾರತೀಯ ಕೃತಿಗಳಾಗಿವೆ. ಜೇನ್ ಡಿ. ಓವರ್‌ಸ್ಟ್ರೀಟ್ ಮತ್ತು ಮಾರ್ಷಲ್ ವಿಂಡ್‌ಮಿಲ್ಲರ್ ಇವರಿಬ್ಬರೂ ಸೇರಿ ಸಂಯುಕ್ತವಾಗಿ ರಚಿಸಿದ, 'ಕಮ್ಯುನಿಸಂ ಇನ್ ಇಂಡಿಯಾ' (Communism in India-1959), ಮತ್ತು ಥಾಯ್ ಸಿಂಕಿನ್ ಅವರ 'ರಿಪೋರ್ಟಿಂಗ್ ಇಂಡಿಯಾ' (Reporting India), ಇವುಗಳು, ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ವಿಚಾರಗಳ ಬಗ್ಗೆ ಬರೆದ ಸಮಕಾಲೀನ ವಿದೇಶಿ ಬರಹಗಾರರ ಕೃತಿಗಳು. ವಿಕ್ಟರ್ ಎಂ. ಫಿಕ್ಸ್ ರಚಿಸಿದ, ಭಾರತದಲ್ಲಿ ಕಮ್ಯುನಿಸಂನ 'ಶಾಂತಿಯುತ ಪರಿವರ್ತನೆ'; 'ಕಮ್ಯುನಿಸ್ಟ್ ಪಕ್ಷದ ತಂತ್ರ'(1969),' ಕೇರಳ: ಯೇನಾನ್ ಆಫ್ ಇಂಡಿಯಾ–ರೈಸ್ ಆಫ್ ಕಮ್ಯುನಿಸ್ಟ್ ಪವರ್ 1937–1969 '(1970), ಟಿ.ಜೆ. ನೋಸಿಟ್‌ರ 'ಕಮ್ಯುನಿಸಂ ಕೇರಳದಲ್ಲಿ': ಎ ಸ್ಟಡಿ ಆಫ್ ಪೊಲಿಟಿಕಲ್ ಅಡಾಪ್ಟೇಶನ್' (1982) ಮತ್ತು 'ಮಾರ್ಕಿಸ್ಟ್ ಸ್ಟೇಟ್ ಗವರ್ನಮೆಂಟ್ ಇನ್ ಇಂಡಿಯಾ' ಮುಂತಾದವು ಈ ಅಧ್ಯಯನ ಕ್ಷೇತ್ರದ ಕೆಲವು ಅಂಶಗಳ ಕುರಿತು ವಿದೇಶಿ ವಿದ್ವಾಂಸರ ಕೃತಿಗಳು. ಜಾರ್ಜಸ್ ಕ್ರಿಸ್ಟೋಫರ್ ಲೈಟನ್ ಅವರ 'ಕೇರಳದ ಮೊದಲ ಕಮ್ಯುನಿಸ್ಟ್ ಮಂತ್ರಿಮಂಡಲ'–1957–1959, ಎನ್ನುವ ಕೃತಿ ಈ ವಿಷಯಕ್ಕೆ ಸಂಬಂಧಿದಂತೆ ಕೆಲವು ಲೇಖನಗಳ ಕುರಿತಾದ ಸೂಕ್ಷ್ಮ ಮತ್ತು ವಸ್ತುನಿಷ್ಠತೆಯಿಂದ ಕೂಡಿದ ಒಂದು ಶೈಕ್ಷಣಿಕ

ಅಧ್ಯಯನವಾಗಿದೆ. ಇಎಂಎಸ್ ಸರ್ಕಾರದ ಪ್ರಮುಖ ಆಡಳಿತಾತ್ಮಕ ಕ್ರಮಗಳ ಕುರಿತೂ ಉಳಿದ ಸಂಬಂಧಿತ ವಿಚಾರಗಳ ಕುರಿತೂ ವಜಾಗೊಳಿಸುವ ಮುನ್ನ ದಿಲ್ಲಿಯಲ್ಲಿ ತೆರೆಯ ಹಿಂದೆ ನಡೆದ ಕಸರತ್ತುಗಳ ಕುರಿತೂ ಪರಿಶೀಲನೆ ನಡೆಸಿದ ಜಿ.ಕೆ. ಲೀಟನ್ ಬಲಪಂಥೀಯರ 'ವಿಮೋಚನಾ ಹೋರಾಟ'ವನ್ನು 'ಬೂರ್ಜ್ವಾ ಪ್ರತಿ-ಕ್ರಾಂತಿ' ಎಂದು ಬಣ್ಣಿಸಿ, ಮೌಲ್ಯಮಾಪನ ಮಾಡಿರುವುದು ಗಮನಾರ್ಹ ಸಂಗತಿಯಾಗಿದೆ.

ಕೆ.ಜಿ. ಗೋಪಾಲಕೃಷ್ಣನ್ ಅವರ 'ವಿಮೋಚನಾ ಹೋರಾಟ ಒಂದು ಅಧ್ಯಯನ'. ಕೆ. ರಾಜೇಶ್ವರಿ ಅವರ 'ಕಮ್ಯುನಿಸ್ಟ್ ಆಡಳಿತ ಮತ್ತು ವಿಮೋಚನಾ ಹೋರಾಟ'. ಅಂಡಾಲತ್ ಬರೆದ 'ಏಪ್ರಿಲ್ 5, 1957ರ ಅರ್ಥ', ಪಿ. ರಾಜೀವ್ ಎಡಿಟ್ ಮಾಡಿದ '1957-ಇಎಂಎಸ್ ಕ್ಯಾಬಿನೆಟ್-ಇತಿಹಾಸ ಮತ್ತು ರಾಜಕೀಯ', ಜಾನ್ ಕಚಿರಮಟ್ಟರವರ 'ವಿಮೋಚನಾ ಹೋರಾಟಕ್ಕೆ ಒಂದು ಮುನ್ನುಡಿ'. ಡಾ. ಟಿ.ಎಂ. ಥಾಮಸ್ ಐಸಾಕ್‌ರವರ 'ವಿಮೋಚನಾ ಹೋರಾಟದ ಬಾಹ್ಯ ನೋಟಗಳು'. ಡಾ. ಕುರಿಯಾಸ್ ಕುಂಬಳಕುಳಿಯವರ 'ವಿಮೋಚನಾ ಹೋರಾಟ'. ಎಂ.ಎಸ್. ಶ್ರೀಕಲಾ ಅವರ '1957-1959: ಸುದ್ದಿಯ ಆಚೆಗೆ', ಚಾಲಕುಡಿ ನಿರ್ಮಲ ಬುಕ್ಸ್ ಪ್ರಕಟಿಸಿದ 'ಚರ್ಚನಿಂದ ಪಕ್ಷದವರೆಗೆ', '1957-1959ರ ಕಾಲದ ದೀಪಿಕಾ ಪತ್ರಿಕೆಯಿಂದ. ಫಾದರ್ ಅಲೆಕ್ಸಾಂಡರ್ ಪೈಕಡ ಅವರು ಆಯ್ದ ಕವರೇಜ್‌ಗಳನ್ನು ಸಂಪಾದಿಸಿ. ಪ್ರಕಟಿಸಿದ 'ವಿಮೋಚನಾ ಹೋರಾಟದ ವೀಕ್ಷಣೆಗಳು', ಪ್ರೊ. ನೈನಾನ್ ಕೋಶಿ ಅವರ 'ಚರ್ಚ್ ಅಂಡ್ ಪಾರ್ಟಿ ಇನ್ ಕೇರಳ' ಮುಂತಾದ ವಿಷಯಗಳ ಬಗ್ಗೆ ವಿವಿಧ ದೃಷ್ಟಿಕೋನಗಳಿರುವ ಎಲ್ಲಾ ಕೃತಿಗಳು ಮಲಯಾಳಂ ಭಾಷೆಯಲ್ಲಿ ಕಂಡು ಬಂದ ಗಮನಾರ್ಹ ಕೃತಿಗಳಾಗಿವೆ. ಇದರಲ್ಲಿ ಡಾ. ಥಾಮಸ್ ಐಸಾಕ್ ಅವರ ಪುಸ್ತಕ 'ಎ ಹಿಸ್ಟರಿ ಆಫ್ ದಿ ಲಿಬರೇಶನ್ ಸ್ಟ್ರಗಲ್'. ಯುರೋಪ್ ಮತ್ತು ಯುನೈಟೆಡ್ ಸ್ಟೇಟ್ಸ್‌ನಿಂದ ಹೋರಾಟಕ್ಕೆ ದೊರೆತ ಬೆಂಬಲ ಸೇರಿದಂತೆ ವಿವಿಧ ಅಂಶಗಳನ್ನು ಇದು ಪರಿಶೀಲಿಸುತ್ತದೆ, ವಿಶೇಷವಾಗಿ ಶೀತಲಸಮರದ ಸಮಯದಲ್ಲಿ ಕೇರಳದಲ್ಲಿ ಸಿಐಎ ಮೂಲಕ ನಡೆಸಲಾದ ಕಮ್ಯುನಿಸ್ಟ್ ವಿರೋಧಿ ಹಸ್ತಕ್ಷೇಪಗಳ ಬಗ್ಗೆಯೂ ವಿವರವಾಗಿ ಪ್ರತಿಪಾದನೆ ಮಾಡಲಾಗಿದೆ.

ಈ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ಇಎಂಎಸ್ ನಂಬೂದಿರಿಪಾಡ್ ಅವರು ವ್ಯಾಪಕವಾಗಿ ಬರೆದಿದ್ದಾರೆ. ಕಮ್ಯುನಿಸ್ಟ್ ಪಕ್ಷದ ಮತ್ತು 1957-59ರ ಸರ್ಕಾರದ ಪ್ರಮುಖ ನಾಯಕರಾಗಿ ಅವರ ಬರಹಗಳ ಅನುಭವ. ಬುದ್ಧಿವಂತಿಕೆ, ವೀಕ್ಷಣೆ. ಅಧ್ಯಯನ ಮತ್ತು ವ್ಯಾಖ್ಯಾನದ ಮಟ್ಟಗಳಲ್ಲಿ ಅವು ಹೆಚ್ಚು ಮೌಲ್ಯಯುತವಾಗಿವೆ. ಪಕ್ಷದಲ್ಲಿ ಮತ್ತು ಆಡಳಿತದ ವಿಚಾರಗಳಲ್ಲಿ ಅವರಿಗಿದ್ದ ಉನ್ನತ ಮಟ್ಟದ ನಾಯಕತ್ವ ಮತ್ತು ಅಪಾರ ಪಾಂಡಿತ್ಯಗಳಿಂದಾಗಿ ಅವರ ಬರಹಗಳು ಅಧಿಕೃತ ವ್ಯಾಖ್ಯಾನಗಳನ್ನಾಗಿಯೂ ಪರಿಗಣಿಸಬಹುದು.

ಕೇರಳದಲ್ಲಿ ಸಾಮಾಜಿಕ-ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಕೆಲವು ಪ್ರತಿಭಾವಂತರ ಆತ್ಮಚರಿತ್ರೆಯ ಮಾಹಿತಿಗಳು, ನಿರೂಪಣೆಗಳು ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ, ಹೇರಳವಾಗಿದ್ದು ಅವುಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಆತ್ಮಚರಿತ್ರೆಗಳಲ್ಲಿ ಕಂಡುಬರುವ ವಿಮೋಚನಾ ಹೋರಾಟದ ನಿರೂಪಣೆಗಳು, ವೈಯಕ್ತಿಕ ಅನುಭವಗಳು, ಅವಲೋಕನಗಳು ಮತ್ತು ವ್ಯಾಖ್ಯಾನಗಳನ್ನು ಆಧರಿಸಿದ ವಿಷಯದ ವಿವಿಧ ಹಂತಗಳ, ವಿಭಿನ್ನ ದೃಷ್ಟಿಕೋನಗಳನ್ನು ಇದು ಮುಂದಿಡುತ್ತದೆ. ಪ್ರೊ. ಜೋಸೆಫ್ ಮುಂಡಸ್ಸೆರಿಯವರ 'ಉದುರಿದ ಎಲೆಗಳು', ಪುತ್ತುಪ್ಪಳ್ಳಿ ರಾಘವನ್ ಅವರ 'ಕ್ರಾಂತಿಕಾರಿ ನೆನಪುಗಳು' ಮತ್ತು ಫಾದರ್ ವಡಕ್ಕನ್ ಅವರ 'ನನ್ನ ಜಗಿತ ಮತ್ತು ಏದುಸಿರು' ಈ ನಿಟ್ಟಿನಲ್ಲಿ ಬಹಳ ಗಮನಾರ್ಹವಾದವು. ಇವು ವಿಷಯದ ವಿವಿಧ ಆಯಾಮಗಳ, ವಿಭಿನ್ನ ಅಂಶಗಳನ್ನು ವಿಭಿನ್ನ ರೀತಿಯಲ್ಲಿ ವಿವರಿಸುತ್ತವೆ. ಕೆ.ಎ. ದಾಮೋದರ ಮೆನನ್ (ಹಿಂತಿರುಗಿ ನೋಡುವಾಗ), ಲೀಲಾದಾಮೋದರ ನಾನ್ (ಸಹೋದರನ ನೆರಳಿನಲ್ಲಿ), ಕೆ.ಪಿ. ಕೇಶವ್ ಮೆನನ್ (ಹಿಂದಿನ ಕಾಲ), ಕೆ.ಎಂ. ಚಾಂಡಿ (ಜೀವನದ ದಾರಿಬದಿಗಳು), ಎ.ಸಿ. ಮ್ಯಾಥ್ಯೂ ಎಡಯಾಡಿ (ನೆನಪಿನ ಚಕ್ರಗಳು), ಎನ್. ಭಾಸ್ಕರನ್ ನಾಯರ್ (ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ), ದಾಸ್ ಕಾವನಲ್ (ಮಿಣುಕುಹುಳು), ಎ.ಕೆ. ಗೋಪಾಲನ್ (ನನ್ನ ಜೀವನಚರಿತ್ರೆ), ಕೆ. ದಾಮೋದರನ್ (ನೆನಪುಗಳು), ತೊಪ್ಪಿಲ್ ಭಾಸಿ (ಮರೆಯದ ನೆನಪುಗಳು), ಎನ್.ಸಿ. ಶೇಖರ್ (ಬೆಂಕಿ ಬೀದಿಗಳು), ಗೋಪಾಲಕೃಷ್ಣ ಮೆನನ್ (ಅಳಿಸಲಾಗದ ನೆನಪುಗಳು), ಜೋಸೆಫ್ ಚಾಳಿಕ್ಕಾಡ್ (ಆತ್ಮಕಥೆ), ಕೆ.ಸಿ. ಜಾರ್ಜ್ (ನನ್ನ ಜೀವನ ಪಯಣ), ಕುಂಬಳತ್ ಶಂಕುಪಿಳ್ಳ (ನನ್ನ ಹಿಂದಿನ ಹೋರಾಟಗಳು), ಪಿ. ನಾರಾಯಣನ್ ನಾಯರ್ (ಅರ್ಧ ಶತಮಾನ), ಕೆ. ಮಾಧವನ್ (ಪಯಸ್ವಿನಿ ದಡದಲ್ಲಿ), ಪಿ.ಆರ್. ಕುರುಪ್ (ನನ್ನ ನಾಡಿನ ಕಥೆ, ನನ್ನದು ಸಹ), ಆನಿ ತೈಯ್ಯಿಲ್(ಇಡಂಘಯಿಲೆ ಶಿಲುಬೆ), ಪಾಲಾ ಕೆ.ಎಂ. ಮ್ಯಾಥ್ಯೂ (ಬನ್ನಿ ಮತ್ತು ಬನ್ನಿ ಸಾಮಾನ್ಯರೆ), ಬರ್ಲಿನ್ ಕುಂಜನಂತನ್ ನಾಯರ್ (ಕಳಚಿಹಾಕು) ಮುಂತಾದ ಆತ್ಮಚರಿತ್ರೆಗಳ ಮೂಲಕ ದೊರಕುವ ಮಾಹಿತಿಗಳನ್ನೂ ವಿಷಯಕ್ಕೆ ಸಂಬಂಧಿಸಿದ ಅವರ ವೈಯಕ್ತಿಕ ಅನುಭವಗಳನ್ನೂ ಅವರ ಚಳುವಳಿ/ಸಂಸ್ಥೆಗಳ ಕಾರ್ಯವಿಧಾನಗಳನ್ನೂ ಪ್ರತಿಪಾದನೆ ಮಾಡಿದ್ದು, ಅವುಗಳನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗಿವೆ. ಆ ಕಾಲಘಟ್ಟಗಳಲ್ಲಿ ಕೇರಳದ ಸಾಮಾಜಿಕ-ಸಾಂಸ್ಕೃತಿಕ-ರಾಜಕೀಯ ವಲಯಗಳಲ್ಲಿ ಆವರಿಸಿಕೊಂಡಿದ್ದ ಮಹಾಪುರುಷರ ಜೀವನ ಚರಿತ್ರೆಗಳು ವಿಶೇಷವಾದ ಪರಾಮರ್ಶೆಗೆ ಯೋಗ್ಯವಾಗಿದ್ದವು. ಮನ್ನತ್ ಪದ್ಮನಾಭನ್, ಪನಂಬಿಳ್ಳಿ ಗೋವಿಂದ ಮೇನನ್, ಕೆ.ಕೇಳಪ್ಪನ್, ಕೆ.ಪಿ. ಕೇಶವ ಮೇನನ್, ಇ.ಎಂ. ಎಸ್, ನಂಬೂದಿರಿಪಾಡ್, ಎ.ಕೆ. ಗೋಪಾಲನ್, ಪಟ್ಟಂ ತಾಣುಪಿಳ್ಳೆ, ಕೆ. ಬಾಲಕೃಷ್ಣನ್, ಮಥಾಯಿ ಮಂಜೂರಾನ್, ಟಿ.ವಿ. ಥೋಮಸ್, ಕೆ.ಸಿ. ಜಾರ್ಜ್, ಸಿ. ಅಚ್ಯುತ

ಮೇನನ್, ಇ.ಪಿ. ಗೋಪಾಲನ್, ಎನ್. ಇ. ಬಾಲರಾಂ, ಪಿ.ಟಿ. ಚಾಕೋ, ಆರ್. ಶಂಕರ್, ಸೀತಿ ಸಾಹಿಬ್, ಪಿ.ಕೆ. ಕುಂಞ್, ಬಾಫಖಿ ತಂಙಳ್, ಸಿ.ಎಚ್. ಮುಹಮ್ಮದ್ ಕೋಯ ಮುಂತಾದವರ ಜೀವನ ಚರಿತ್ರೆಗಳು ಈ ವಿಷಯಕ್ಕೆ ಸಂಬಂಧಿಸಿದಂತೆ ಗಮನಾರ್ಹತೆಯನ್ನು ಪಡೆದುಕೊಳ್ಳುತ್ತದೆ.

ಈ ಕೃತಿಯ ವಿಷಯಗಳನ್ನು ಎಂಟು ಅಧ್ಯಾಯಗಳಲ್ಲಿ ಕ್ರಮಬದ್ಧಗೊಳಿಸಲಾಗಿದೆ. ಸಂಶೋಧನಾ ಯೋಜನೆಯ ರೂಪರೇಖೆಯಂತೆ ಮೊದಲ ಅಧ್ಯಾಯವು, ಅಧ್ಯಯನದ ಮಹತ್ವ ಮತ್ತು ಉದ್ದೇಶವನ್ನು ವಿವರಿಸುತ್ತದೆ. ಕಾರ್ಯವಿಧಾನ ಮತ್ತು ರೀತಿಗಳನ್ನು ವಿವರವಾಗಿ ವಿವರಿಸಲಾಗಿದೆ.

ವಿಮೋಚನಾ ಹೋರಾಟಕ್ಕೆ ಸಂಬಂಧಿಸಿದ ಕೆಲವು ಫೋಟೋಗಳನ್ನೂ ಕಾಲಕಾಲಕ್ಕೆ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾದ ಕೆಲವು ಅತ್ಯಂತ ಸೂಕ್ತವಾದ ವ್ಯಂಗ್ಯಚಿತ್ರಗಳನ್ನೂ ಈ ಕೃತಿಯಲ್ಲಿ ಸೇರಿಸಲಾಗಿದೆ. ಕೆಲವು ಅನುಬಂಧಗಳೂ ಇಲ್ಲಿ ಸೇರಿಕೊಂಡಿವೆ. ಮೊದಲ ಕೇರಳ ವಿಧಾನಸಭೆಯು ಅಂಗೀಕರಿಸಿದ ಪ್ರಮುಖ ಮಸೂದೆಗಳನ್ನೂ ಕೆಲವು ಸರ್ಕಾರಿ ಅಧಿಸೂಚನೆಗಳನ್ನೂ ಸಂದರ್ಶನಕ್ಕೆ ಅವಕಾಶಗಳನ್ನು ಒದಗಿಸಿದವರ ಹೆಸರುಗಳನ್ನೂ ಅನುಬಂಧದ ಭಾಗವಾಗಿ ಇಲ್ಲಿ ಒಳಗೊಳಿಸಲಾಗಿದೆ.

●

2

# ಕೇರಳದ ಕಮ್ಯುನಿಸ್ಟ್ ಚಳುವಳಿ 1957 ರವರೆಗೆ

*(ಈ ಅಧ್ಯಾಯ ಕೇರಳದ ಕಮ್ಯುನಿಸ್ಟ್ ಚಳವಳಿಯ ಆರಂಭ ಮತ್ತು 1957ರವರೆಗಿನ ಅದರ ಬೆಳವಣಿಗೆಯನ್ನು ಚಿತ್ರಿಸುತ್ತದೆ. ಈ ಅಧ್ಯಾಯವು ಇಪ್ಪತ್ತನೇ ಶತಮಾನದ ಎರಡನೇ ಕಾಲುಭಾಗದಲ್ಲಿ ಕೇರಳದಲ್ಲಿ ಎಡಸಂಘಟನೆಗಳ ವಿಕಾಸ ಮತ್ತು ಸಂಬಂಧಿತ ವಿಷಯಗಳ ಕುರಿತು ಒತ್ತು ನೀಡುತ್ತದೆ. ಕಮ್ಯುನಿಸ್ಟ್ ಪಕ್ಷದ ಔಪಚಾರಿಕ ರಚನೆ ಮತ್ತು ಕೇರಳದಲ್ಲಿ ಪಕ್ಷವು ಪರಿಚಯಿಸಿದ ನವೀನ ಕಾರ್ಯಕ್ರಮಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ.)*

ಹತ್ತೊಂಬತ್ತನೇ ಶತಮಾನದ ನಾಲ್ಕನೇ ದಶಕದಲ್ಲಿ, ಕಾರ್ಲ್‌ಮಾರ್ಕ್ಸ್ ಮತ್ತು ಫ್ರೆಡ್ರಿಕ್ ಎಂಗೆಲ್ಸ್ ವರ್ಗರಹಿತ ಸಮಾಜದ ಸೃಷ್ಟಿಗಾಗಿ ಸಾಮಾಜಿಕ-ಆರ್ಥಿಕ-ರಾಜಕೀಯ ಸಿದ್ಧಾಂತವನ್ನು ಆಧರಿಸಿ ವೈಜ್ಞಾನಿಕ ಸಮಾಜವಾದ ಅಥವಾ ಕಮ್ಯುನಿಸಂನ್ನು ಅಭಿವೃದ್ಧಿಪಡಿಸಿದರು. ಇಪ್ಪತ್ತನೇ ಶತಮಾನದ ಮೊದಲಾರ್ಧದಲ್ಲಿ, ಈ ಸಿದ್ಧಾಂತವು ಪ್ರಪಂಚದಾದ್ಯಂತ ಲಕ್ಷಾಂತರ ಕಾರ್ಮಿಕರ ಮೇಲೆ ಗಾಢವಾಗಿ ಪ್ರಭಾವ ಬೀರಿತ್ತು. ಪ್ರಸ್ತುತ ಈ ಸಿದ್ಧಾಂತವನ್ನು ವಿ.ಐ. ಲೆನಿನ್ ರಷ್ಯಾದ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವಂತೆ ಕಾರ್ಯರೂಪಕ್ಕೆ ತರುವುದರ ಮೂಲಕ, ಅಕ್ಟೋಬರ್ 1917ರಲ್ಲಿ ಅಲ್ಲಿ ಕ್ರಾಂತಿ ಸಾಧ್ಯವಾಗುವಂತಾಯಿತು.

ರಷ್ಯಾದ ಬೆಳವಣಿಗೆಗಳಿಂದ ಸ್ಫೂರ್ತಿ ಪಡೆದುಕೊಂಡು, ಆ ಸಮಯದಲ್ಲಿ ಭಾರತದ ಕೆಲವು ನಗರಗಳಲ್ಲಿ ಸಣ್ಣ ಸಣ್ಣ ಕಮ್ಯುನಿಸ್ಟ್ ಗುಂಪುಗಳು ರೂಪುಗೊಂಡವು. ಆದರೆ ವಾಸ್ತವವಾಗಿ, ಭಾರತದ ಕಮ್ಯುನಿಸ್ಟ್ ಪಕ್ಷದ ಸಂಸ್ಥಾಪಕರು ಎನ್ನುವ ಕೀರ್ತಿ ಪ್ರಸಿದ್ಧ ಎಡಪಂಥೀಯ ಚಿಂತಕ ಎಂ.ಎನ್. ರಾಯ್(1:V1pXXXI) ಅವರಿಗೆ ಸಲ್ಲುತ್ತದೆ.

ಸಮರ್ಪಣಾಭಾವದಿಂದ ಮಾರ್ಕ್ಸ್‌ವಾದಿಗಳು ಭಾರತದಲ್ಲಿ ಕಮ್ಯುನಿಸ್ಟರ ಚಟುವಟಿಕೆಗಳನ್ನು ಸಂಘಟಿಸಲು ಉಪಕ್ರಮವನ್ನು ಕೈಕೊಂಡರು. ಕಮ್ಯುನಿಸ್ಟರ ಬೆಳೆಯುತ್ತಿರುವ ಚಟುವಟಿಕೆಗಳಿಂದ ವಿಚಲಿತರಾದ ಬ್ರಿಟಿಷ್ ಅಧಿಕಾರಿಗಳು 1922ರಲ್ಲಿ ಪೇಶಾವರದಲ್ಲಿ ಮೂರು ಕಪೋಲಕಲ್ಪಿತ ಪಿತೂರಿ ಪ್ರಕರಣಗಳನ್ನು ಸೃಷ್ಟಿಸಿದರು. ಪರಿಣಾಮವಾಗಿ ಕಮ್ಯುನಿಸ್ಟ್ ಕ್ರಾಂತಿಕಾರಿಗಳು ದೀರ್ಘಾವಧಿಯ ಜೈಲು ಶಿಕ್ಷೆ

ಅನುಭವಿಸಬೇಕಾಯಿತು. 1924ರಲ್ಲಿ ಮುಜಾಫರ್ ಅಹಮದ್, ಎಸ್.ಎ.ಡಾಂಗೆ ಮತ್ತು ಶೌಕತ್ ಉಸ್ಮಾನಿ ಮುಂತಾದ ಕಮ್ಯುನಿಸ್ಟ್ ನಾಯಕರನ್ನು ಒಳಗೊಳಿಸಿಕೊಂಡು ಬ್ರಿಟಿಷರು ಮತ್ತೆ ಕಾನ್ಪುರ ಪಿತೂರಿ ಪ್ರಕರಣವನ್ನು ಸೃಷ್ಟಿಸಿದರು(1:V1pXXXIV). ಕಾನ್ಪುರದಲ್ಲಿ ವಿವಿಧ ಕಮ್ಯುನಿಸ್ಟ್ ಗುಂಪುಗಳನ್ನು ಒಗ್ಗೂಡಿಸಲು 1925ರಲ್ಲಿ ಸಮ್ಮೇಳನವನ್ನು ನಡೆಸಲಾಯಿತು. ಬಾಂಬೆಯನ್ನು ಕೇಂದ್ರವಾಗಿಟ್ಟುಕೊಂಡು ಸಿಪಿಐ ಪಕ್ಷವನ್ನು ರಚಿಸುವ ಸಲುವಾಗಿ ಆ ಸಮ್ಮೇಳನದಲ್ಲಿ ಒಂದು ನಿರ್ಣಯ ಮಂಡಿಸಲಾಯಿತು(1:p318). ಕಾನ್ಪುರ ಸಮ್ಮೇಳನದ ಪ್ರಮುಖ ಸಾಧನೆಯೆಂದರೆ, ವಿವಿಧ ಪ್ರಾದೇಶಿಕ ಕಮ್ಯುನಿಸ್ಟ್ ಗುಂಪುಗಳನ್ನು ಏಕೀಕರಣಗೊಳಿಸಿಕೊಂಡಿದ್ದು(1:p320-323;p407-413).

ಭಾರತದಲ್ಲಿದ್ದ ಬ್ರಿಟಿಷ್ ವಸಾಹತುಶಾಹಿ ಸರ್ಕಾರ, ಕಮ್ಯುನಿಸ್ಟ್ ಪಕ್ಷ ಸ್ವತಂತ್ರವಾಗಿ ಕೆಲಸ ನಿರ್ವಹಿಸುವುದರ ಬಗ್ಗೆ ದೊಡ್ಡ ಅಸಹಿಷ್ಣುತೆ ಬೆಳೆಸಿಕೊಂಡಿತ್ತು. ಆದ್ದರಿಂದ, ಅವರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಜೊತೆ ಸೇರಿಕೊಂಡು ಕೆಲಸ ಮಾಡಲು ಪಕ್ಷದ ಮೇಲೆ ಒತ್ತಡ ಉಂಟಾಯಿತು. ಆದರೆ ಬೂರ್ಜ್ವಾಗಳೊಂದಿಗೆ ರಾಜಿಮಾಡಿಕೊಂಡಿರುವುದು ಕಮ್ಯುನಿಸ್ಟರಿಗೆ ಸ್ವೀಕಾರಾರ್ಹವಾಗಿರಲಿಲ್ಲ. ಹಾಗಾಗಿ ಕಾರ್ಮಿಕರು ಮತ್ತು ರೈತರನ್ನು ಒಳಗೊಂಡ ಪಕ್ಷವೊಂದರ ರಚನೆ ಮಾಡಿಕೊಂಡು, ಊಳಿಗಮಾನ್ಯ ಪದ್ಧತಿ ವಿರೋಧಿ, ಸಾಮ್ರಾಜ್ಯಶಾಹಿ ವಿರೋಧಿ ಕ್ರಾಂತಿಗೆ ಸಿದ್ಧರಾಗಲು ಕಮ್ಯುನಿಸ್ಟ್ ಇಂಟರ್‌ನ್ಯಾಶನಲ್, ಭಾರತದ ಕಮ್ಯುನಿಸ್ಟರನ್ನು ಪ್ರೇರೇಪಿಸಿತು(1:pXXXIV). ಈ ಗುರಿಯನ್ನು ಹೊತ್ತು ಕಾರ್ಮಿಕರು ಮತ್ತು ರೈತರ ಒಂದು ಸಭೆಯು ಕಲ್ಕತ್ತಾದಲ್ಲಿ 1928ರ ಡಿಸೆಂಬರ್‌ನಲ್ಲಿ ನಡೆಯಿತು(1:pXXXIV). ಭಾರತದಲ್ಲಿ ಕಮ್ಯುನಿಸ್ಟ್ ಪಾರ್ಟಿ ಶಕ್ತಗೊಳ್ಳುವುದನ್ನು ತಡೆಯುವ ಸಲುವಾಗಿ ಬ್ರಿಟಿಷರು, ಪಕ್ಷದ ಪ್ರಮುಖ ನಾಯಕರ ವಿರುದ್ಧ ಮೀರತ್ ಸಂಚು/ಪಿತೂರಿ ಪ್ರಕರಣವನ್ನು (1929) ಹೆಣೆದರು. ಈ ಮೀರತ್ ಪ್ರಕರಣದ ವಿಚಾರಣೆ ನಾಲ್ಕು ವರ್ಷಗಳವರೆಗೆ ದೀರ್ಘವಾಗಿದ್ದಲ್ಲದೆ, ಕಮ್ಯುನಿಸ್ಟರ ಚಟುವಟಿಕೆಗಳನ್ನು ತಾತ್ಕಾಲಿಕವಾಗಿ ದಣಿಯುವಂತೆಯೂ ಮಾಡಲಾಯಿತು. ಆದರೂ ಕೃಷಿ ಕ್ರಾಂತಿ, ಸಂಪೂರ್ಣ ಸ್ವಾತಂತ್ರ್ಯ ಮುಂತಾದ ಕಮ್ಯುನಿಸ್ಟ್ ಆಶಯಗಳು ಜನಪ್ರಿಯವಾದವು(2:p23).

1920ರ ದಶಕದ ಅಂತ್ಯದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಒಳಗೆ ಬಲಿಷ್ಠ ಎಡಪಕ್ಷವು ಹೊರಹೊಮ್ಮಿತು. ಸುಭಾಷ್ ಚಂದ್ರ ಬೋಸ್, ಜವಾಹರಲಾಲ್ ನೆಹರು ಮುಂತಾದವರ ನಾಯಕತ್ವದಲ್ಲಿ, ಈ ಪ್ರಬಲ ಶಕ್ತಿಯು ಬ್ರಿಟಿಷರ ವಿರುದ್ಧ ತೀವ್ರ ಆಂದೋಲನದ ಆರಂಭಕ್ಕೆ ಒಲವು ತೋರಿತು(3:p72-73). ಸಾಮ್ರಾಜ್ಯಶಾಹಿ ವಿರುದ್ಧ ಬೆಳೆಯುತ್ತಿರುವ ಅಸಮಾಧಾನವು ನಾಗರಿಕ ಅಸಹಕಾರ ಚಳವಳಿ ಆರಂಭಿಸಲು ಕಾಂಗ್ರೆಸ್‌ಗೆ ಪ್ರೇರಣೆ ಲಭಿಸಿತು. ಬೂರ್ಜ್ವಾ ವಿರೋಧಿ ಮನೋಭಾವದ ಕಮ್ಯುನಿಸ್ಟರು ಈ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಲಿಲ್ಲ(4:p364). ಆದಾಗ್ಯೂ ವಿವಿಧ ಪ್ರಾಂತ್ಯಗಳಲ್ಲಿ ಅವರ ಪರೋಕ್ಷವಾದ ಒಳಗೊಳ್ಳುವಿಕೆ ಗೋಚರಿಸಿತು.

1934ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಎನ್ನುವ ಒಂದು ಘಟಕ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನೊಳಗೆ ರೂಪುಗೊಂಡಿತು. ಆರಂಭದಿಂದಲೂ ಎಡ ಏಕತೆಯ ಪರವಾಗಿರುವ ಸಂಪೂರ್ಣ ಸ್ವಾತಂತ್ರ್ಯ ಮತ್ತು ಕೃಷಿ ಕ್ರಾಂತಿಯ ವಿಚಾರಗಳನ್ನು ಎತ್ತಿ ತೋರಿಸುತ್ತಾ ಬಂದಿತು(1:V3pIX;3:p15). ಕಮ್ಯುನಿಸ್ಟ್ ಇಂಟರ್‌ನ್ಯಾಶನಲ್‌ನ ಏಳನೆಯ ಸಮ್ಮೇಳನ(1935)ದಿಂದ ಪ್ರಭಾವಿತರಾಗಿ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನೊಂದಿಗೂ ದೇಶಿಯ ಬೂರ್ಷ್ವಾಗಳೊಂದಿಗೂ ಭಾರತದ ಕಮ್ಯುನಿಸ್ಟರ ಮನೋಭಾವ ಬಿಗಿಗೊಂಡಿತು. ಕಮ್ಯುನಿಸ್ಟ್ ಪಕ್ಷದ ಸದಸ್ಯತ್ವವನ್ನು ತ್ಯಜಿಸದೆ ಅವರು ಕಾಂಗ್ರೆಸ್ ಸಮಾಜವಾದಿ ಪಕ್ಷಕ್ಕೆ ಸೇರಿದರು(3:p15).

ಕಮ್ಯುನಿಸ್ಟ್ ಸಿದ್ಧಾಂತವು 1930ರ ದಶಕದ ಆರಂಭದಿಂದಲೂ ಕೇರಳದ ಕೆಲವು ರಾಜಕೀಯ ಕಾರ್ಯಕರ್ತರ ಮನಸ್ಸಿನಲ್ಲಿ ಸ್ಥಾನ ಪಡೆದುಕೊಂಡಿತ್ತು. ಆದರೆ ಎಂಟು ವರ್ಷಗಳು ಕಳೆದ ನಂತರವಷ್ಟೇ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಅಸ್ತಿತ್ವ ಪಡೆದುಕೊಂಡಿದ್ದು. 1929ರ ಲಾಹೋರ್ ಕಾಂಗ್ರೆಸ್ ಸಮ್ಮೇಳನದಲ್ಲಿ ಎತ್ತಿದ ಐತಿಹಾಸಿಕ 'ಪೂರ್ಣಸ್ವರಾಜ್' (ಪೂರ್ಣ ಸ್ವಾತಂತ್ರ್ಯ) ಎನ್ನುವ ಘೋಷಣೆ, ಭಗತ್ ಸಿಂಗ್ ಮತ್ತು ಇತರ ಕ್ರಾಂತಿಕಾರಿಗಳ ವಿಚಾರಣೆ, ಮರಣದಂಡನೆ, ಮುಂತಾದವು ಕೇರಳದಲ್ಲೂ ಪ್ರತಿಧ್ವನಿಗೊಂಡವು. ಪರಿಣಾಮವಾಗಿ ಪೊನ್ನಾರ ಶ್ರೀಧರ್, ಎನ್.ಪಿ.ಕುರಿಕ್ಕಳ್, ಎನ್.ಸಿ.ಶೇಖರ್ ಮುಂತಾದವವರ ನೇತೃತ್ವದಲ್ಲಿ, ತಿರುವನಂತಪುರಂ(1931)ನಲ್ಲಿ 'ಕಮ್ಯುನಿಸ್ಟ್ ಲೀಗ್' ರಚನೆಯಾಯಿತು(5:p186). ಭಾರತದ ಉಳಿದ ಕಡೆಗಳಂತೆ, ಈ ಕಮ್ಯುನಿಸ್ಟ್ ಗುಂಪು ಕೇವಲ ಕಮ್ಯುನಿಸ್ಟ್ ಸಿದ್ಧಾಂತದಿಂದ ಪ್ರೇರಿತವಾದ ಯುವ ಜನರ ಸ್ಥಳೀಯ ಒಕ್ಕೂಟ ಮಾತ್ರವಾಗಿತ್ತು.

ಕೇರಳದ ಕಮ್ಯುನಿಸ್ಟ್ ಒಲವಿದ್ದ ಯುವಕರಾದ ಕಾಂಗ್ರೆಸಿನ ನಾಯಕರು, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಆರಂಭಿಸಿದ ನಾಗರಿಕ ಕಾನೂನು ಉಲ್ಲಂಘನೆ ಚಳುವಳಿಯಿಂದ ಆಕರ್ಷಿತರಾದರು. ಈ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡ ಕೆ. ಕೇಳಪ್ಪನ್ 1930 ಏಪ್ರಿಲ್ 13ರಂದು, ಕೋಳಿಕೋಡ್‌ನಿಂದ ಪಯ್ಯನೂರ್‌ವರೆಗೆ ಒಂದು ಜಾಥಾವನ್ನು ನಡೆಸಿದರು(6:p142-149). ಅದೇ ವರ್ಷ ಮೇ 12ನೇ ತಾರೀಖು ಕೋಳಿಕೋಡ್ ಸಮುದ್ರತೀರದಲ್ಲಿ ಉಪ್ಪಿನ ಕಾನೂನನ್ನು ಉಲ್ಲಂಘನೆ ಮಾಡಿ, ಪಿ.ಕೃಷ್ಣಪಿಳ್ಳ ಸಹ ಪ್ರಸ್ತುತ ಚಳುವಳಿಯಲ್ಲಿ ಭಾಗವಹಿಸಿದರು(7:25.4.1930;55:P143). ನಾಗರಿಕ ಕಾನೂನು ಭಂಗ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ಎ.ಕೆ. ಗೋಪಲನ್, 1930ರ ದಶಕಗಳ ದೇವಾಸ್ಥಾನ ಪ್ರವೇಶಗಳ ಬಗ್ಗೆ ಪ್ರತಿಭಟನೆಗಳಿಗೆ ಸಂಬಂಧಿಸಿ ನಡೆದ ಜಾಥಾದಲ್ಲಿ ಸ್ವಯಂಸೇವಕ ಕ್ಯಾಪ್ಟನ್ ಆಗಿಯೂ ಕಾರ್ಯನಿರ್ವಹಿಸಿದರು(8:p62-67). ಈ ನಾಯಕರುಗಳಿಗೆ ದೊರೆತ ಇಂಥ ಅನುಭವಗಳಿಂದಾಗಿ ಅವರೆಲ್ಲರಿಗೂ ಜನಪರವಾದ ನೆಲೆಯನ್ನು ಕಂಡುಕೊಳ್ಳಲೂ ನಂತರ ಕೇರಳದಲ್ಲಿ ಶಕ್ತವಾದ ಎಡಪಂಥೀಯ ಚಳುವಳಿಯನ್ನು ಸಂಘಟಿಸಲೂ ಸಾಧ್ಯವಾಯಿತು.

1932 ಜನವರಿಯಲ್ಲಿ ಕೆ.ಪಿ.ಸಿ.ಸಿ ಸಮಿತಿಗಳನ್ನು ಬ್ರಿಟಿಷ್ ಸರ್ಕಾರವು ಕಾನೂನುಬಾಹಿರವೆಂದು ಘೋಷಿಸಿತು. ನಂತರ ಹಿರಿಯ ನಾಯಕರನ್ನು ಬಂಧಿಸಲಾಯಿತು. ಈ ನಿರ್ಣಾಯಕವಾದ ಸಂದರ್ಭದಲ್ಲೇ ಇಎಂಎಸ್ ನಂಬೂದಿರಿಪಾಡ್ ಕಾಂಗ್ರೆಸ್ ರಾಜಕೀಯ ಚಟುವಟಿಕೆಗಳಲ್ಲಿ ಕಾಣಿಸಿಕೊಂಡಿದ್ದು.

ಮೇ 12, 1934ರಂದು ಸಮಾಜವಾದಿ ವಿಚಾರಗಳ ಬಗ್ಗೆ ಸಹಾನುಭೂತಿ ಹೊಂದಿರುವ ಕಾಂಗ್ರೆಸಿಗರ ಸಭೆಯೊಂದು ಕೋಳಿಕೋಡ್‌ನಲ್ಲಿ ಕೆ. ಕೇಳಪ್ಪನ್‌ರವರ ಅಧ್ಯಕ್ಷತೆಯಲ್ಲಿ ಸೇರಿತು(9:p181). ಮೇ 1935ರಲ್ಲಿ ಕೇರಳದಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಮೊದಲ ರಾಜ್ಯ ಸಮ್ಮೇಳನವನ್ನು ನಡೆಸಲು ಈ ಸಭೆಯಲ್ಲಿ ನಿರ್ಧರಿಸಲಾಯಿತು(9:). ಸಿ.ಕೆ.ಗೋವಿಂದನ್ ನಾಯರ್, ಪಿ. ಕೃಷ್ಣಪಿಳ್ಳ ಕ್ರಮವಾಗಿ ಪಕ್ಷದ ಅಧ್ಯಕ್ಷ ಮತ್ತು ಕಾರ್ಯದರ್ಶಿಯಾಗಿ ಆಯ್ಕೆಯಾದರು. ಇಎಂಎಸ್, ಪಿ. ಕೃಷ್ಣನ್ ಪಣಿಕ್ಕರ್, ಕೆ.ಪಿ.ಗೋವಿಂದನ್, ಎಚ್.ಮಂಜುನಾಥ್ ರಾವ್, ಪಿ.ಕುಮಾರನ್ ಮುಂತಾದವರು ಸದಸ್ಯರಾಗಿರುವ ಒಂದು ಸಮಿತಿಯನ್ನೂ ರಚಿಸಲಾಯಿತು(10:p77). ರೈತರನ್ನೂ ಕಾರ್ಮಿಕರನ್ನೂ ಸಮಾಜವಾದಿ ತತ್ವಗಳ ಆಧಾರದಲ್ಲಿ ಸಂಘಟನೆ ಮಾಡಬೇಕೆನ್ನುವುದು ಪಕ್ಷದ ಘೋಷಿತಗುರಿಗಳಲ್ಲೊಂದಾಗಿತ್ತು(11:p193). ಕೇರಳದಲ್ಲಿ ಈ ಬೆಳವಣಿಗೆಯಲ್ಲಿ, ಎಡರಾಜಕೀಯದ ಆರಂಭವನ್ನು ಸ್ಪಷ್ಟವಾಗಿ ಕಾಣಬಹುದು.

1935ರಲ್ಲಿ, ಇಎಂಎಸ್‌ರವರು ಅಖಿಲ ಭಾರತ ಸಮಾಜವಾದಿ ಪಕ್ಷದ ನಾಲ್ಕು ಜಂಟಿ ಕಾರ್ಯದರ್ಶಿಗಳಲ್ಲಿ ಒಬ್ಬರಾಗಿ ಆಯ್ಕೆಯಾದರು. ಆದರೆ ಭಾರತೀಯ ಕಮ್ಯುನಿಸ್ಟರ ದೃಷ್ಟಿಯಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ ಬೂರ್ಜ್ವಾ ಪಕ್ಷವಾಗಿತ್ತು(5:P227).

ಕಾಂಗ್ರೆಸ್‌ನ್ನು ವಿರೋಧಿಸುವ ಕಾರ್ಯವಿಧಾನವನ್ನು ಅಳವಡಿಸಿಕೊಂಡಿದ್ದರಿಂದ ರಾಷ್ಟ್ರೀಯ ಮುಖ್ಯವಾಹಿನಿಯಿಂದ ಪ್ರತ್ಯೇಕಗೊಳ್ಳುವ ಆತಂಕವನ್ನು ಹೋಗಲಾಡಿಸಿ ಕೊಳ್ಳಲು ಭಾರತೀಯ ಕಮ್ಯುನಿಸ್ಟರ ತಂತ್ರವಾಗಿ 'ಯುನೈಟೆಡ್ ಫ್ರಂಟ್'ನ್ನು(3:p153) (ಐಕ್ಯರಂಗ) ರೂಪಿಸಲಾಯಿತು. ಅದರಂತೆ ಕಾಂಗ್ರೆಸ್ ಸಮಾಜವಾದಿ ಪಕ್ಷ ಮತ್ತು ಕಾಂಗ್ರೆಸ್ ಪಕ್ಷದಲ್ಲಿ ಏಕಕಾಲದಲ್ಲಿ ಕೆಲಸ ಮಾಡಿಕೊಳ್ಳುತ್ತಾ ಅವರು ರಾಷ್ಟ್ರೀಯ ಘಟಕಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡಿದ್ದರು.

1935ರಲ್ಲಿ ಕೇರಳದ ಸಿ.ಎಸ್.ಪಿ ನಾಯಕರು ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯೊಂದಿಗೆ, ಅದರ ಸದಸ್ಯರಾಗಿದ್ದ ಪಿ. ಸುಂದರಯ್ಯರವರ ಮುಖಾಂತರ ಸಂ ಪರ್ಕವಿಟ್ಟುಕೊಂಡಿದ್ದರು(12:p11). ಜುಲೈ 1937ರಲ್ಲಿ, ಸಿ.ಎಸ್.ಪಿ. ಮುಖಂಡರಾದ ಇಎಂಎಸ್, ಪಿ.ಕೃಷ್ಣಪಿಳ್ಳ, ಎನ್.ಸಿ.ಶೇಖರ್, ಕೆ. ದಾಮೋದರನ್ ಮುಂತಾದವರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಒಂದು ರಹಸ್ಯ ಘಟಕವಾಗಿ ಬದಲಾದರು(13:p60). ಈ ಘಟಕದ ಗೌಪ್ಯವಾದ ಒಂದು ಸಭೆ 1937ರ ಅಕ್ಟೋಬರ್‌ರಂದು, ಕೋಳಿಕ್ಕೋಡ್‌ನಲ್ಲಿ ನಡೆಯಿತು. ಕಮ್ಯುನಿಸ್ಟ್ ಪಕ್ಷದ ಕೇಂದ್ರ ನಾಯಕತ್ವದ ಪ್ರತಿನಿಧಿಯಾಗಿ, ಎಸ್.ವಿ. ಘಾಟೆ

ಈ ಸಭೆಯಲ್ಲಿ ಭಾಗವಹಿಸಿದ್ದರು. ಕೇರಳದ ಕಮ್ಯುನಿಸ್ಟ್ ಪಕ್ಷವು ಈ ಸಭೆಯಿಂದ ಹುಟ್ಟಿಕೊಂಡಿತು ಎಂದು ಇಎಂಎಸ್ ಸೂಚಿಸುತ್ತಾರೆ(13:p60).

1930ರ ಆರ್ಥಿಕ ಹಿಂಜರಿತದಿಂದ ಉಂಟಾದ ತೊಂದರೆ, ಕಾರ್ಮಿಕರಲ್ಲಿ ಕಮ್ಯುನಿಸ್ಟ್ ವಿಚಾರಗಳ ಪ್ರಸಾರಕ್ಕೆ ದಾರಿ ಸುಗಮವಾಯಿತು. ಆಲಪ್ಪುಳದಲ್ಲಿ ಕಾಯರ್ (ಹಗ್ಗ) ಉದ್ಯಮದ ಕಾರ್ಮಿಕರೂ ರೈತರೂ ಇತರೇ ಕಾರ್ಮಿಕರೆಲ್ಲರೂ ಎದುರಿಸಿದ ಸಮಸ್ಯೆಗಳಲ್ಲಿ ಕಮ್ಯುನಿಸ್ಟ್ ಪಕ್ಷ ಪರಿಣಾಮಕಾರಿಯಾಗಿ ಮಧ್ಯಪ್ರವೇಶ ಮಾಡಿತು. ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಗಳು ಆ ಪ್ರದೇಶದಲ್ಲಿ ಕ್ರಮೇಣ ಬಲವನ್ನು ಪಡೆಯುತ್ತಾ, 1946ರ ಪುನ್ನಪ್ರ–ವಯಲಾರ್ ಹೋರಾಟಕ್ಕೆ ಕಾರಣವಾಯಿತು(14:p93).

ಅಕ್ಟೋಬರ್ 1937ರಿಂದ, ಕಮ್ಯುನಿಸ್ಟ್ ಪಕ್ಷದ ರಹಸ್ಯ ಸಮಿತಿ ಸಿ.ಎಸ್.ಪಿ.ಯ ವಿಳಾಸದಲ್ಲಿ ಕೆಪಿಸಿಸಿಯಲ್ಲಿ ಕೆಲಸ ಮಾಡುತ್ತಿತ್ತು. ಅಖಿಲ ಭಾರತ ಕಾಂಗ್ರೆಸ್ ಪಕ್ಷದೊಳಗಿನ ಸೈದ್ಧಾಂತಿಕ ಸಂಘರ್ಷಗಳು ಕೆಪಿಸಿಸಿಯನ್ನು ಗಣನೀಯವಾಗಿ ಬಾಧಿಸಿತು. ಕೆಪಿಸಿಸಿ ನಿರ್ಣಯಗಳ ಮೇಲೂ ದೈನಂದಿನ ಕೆಲಸಗಳಲ್ಲೂ ಎಡಪಕ್ಷಗಳ ಒಲವು ಎದ್ದುಕಾಣುತ್ತಿದ್ದವು. ಕೇರಳದ ಕಾಂಗ್ರೆಸ್ ಪಕ್ಷದಲ್ಲಿ ತಮ್ಮ ಹಿಡಿತವನ್ನು ಬಲಗೊಳಿಸಲು, ಎಡಪಕ್ಷವು ಮಲಬಾರ್‌ನ ರಾಷ್ಟ್ರೀಯ ಮುಸ್ಲಿಮರ ಬೆಂಬಲವನ್ನು ಕೋರಿತು(10:p74). ಹತ್ತು ಸದಸ್ಯರಿರುವ ಕೆಪಿಸಿಸಿಯಲ್ಲಿ, ನಾಲ್ವರು ಎಡಪಕ್ಷಗಳ ಪ್ರತಿನಿಧಿಗಳಾಗಿದ್ದವರಿದ್ದರು. ಉಪಸಮಿತಿಗಳಲ್ಲೂ ಎಡಪಕ್ಷಗಳು ಬಹುಮತ ಪಡೆಯುವಲ್ಲಿ ಯಶಸ್ವಿಯಾದವು.

1938–40ರ ಅವಧಿಯಲ್ಲಿ ಕೆಪಿಸಿಸಿಯಲ್ಲಿ ಪ್ರಾಬಲ್ಯ ಹೊಂದಿದ್ದ ಎಡಪಕ್ಷವು, ಸಿ.ಎಸ್.ಪಿ ನಾಯಕತ್ವದ ಸಲಹೆಗಳಿಗನುಸಾರವಾಗಿ ಕಾರ್ಯಕ್ರಮಗಳನ್ನು ಆಯೋಜನೆಗೊಳ್ಳುತ್ತಿದ್ದವು(15:p336-337). ಸಾಮೂಹಿಕ ಬೆಂಬಲವನ್ನು ಪಡೆಯಲು, ವಿವಿಧ ವರ್ಗಗಳ ಸಂಘಟನೆಗಳನ್ನು ರಚಿಸಲು ಪ್ರಯತ್ನಿಸಲಾಯಿತು(16:p108). ಸೈದ್ಧಾಂತಿಕ ಪ್ರಚಾರಕ್ಕಾಗಿ ಸಾಹಿತ್ಯವನ್ನು ಆಯುಧವನ್ನಾಗಿಸಿಕೊಂಡರು(17:p4). ಈ ಉದ್ದೇಶಕ್ಕಾಗಿ ಸಾಪ್ತಾಹಿಕ ಪತ್ರಿಕೆಗಳು, ಕರಪತ್ರಗಳು, ಲೇಖನಗಳು ಇತ್ಯಾದಿಗಳನ್ನು ಪ್ರಕಟಿಸಲಾದವು. ಹಾಗೆಯೇ ಕಾರ್ಮಿಕರು, ರೈತರು, ಯುವಕರು ವಿದ್ಯಾರ್ಥಿಗಳು, ಶಿಕ್ಷಕರು, ಮಹಿಳೆಯರು ಮುಂತಾದವರನ್ನು ರಾಷ್ಟ್ರೀಯ ಆಂದೋಲನದ ಮುಖ್ಯವಾಹಿನಿಗೆ ಕರೆತಂದರು(18:p342).

ಸ್ಪಷ್ಟವಾದ ರಾಜಕೀಯ ದೃಷ್ಟಿಕೋನ ಹೊಂದಿರುವ ಕಾರ್ಮಿಕ ಸಂಘಗಳನ್ನು ಸಂಘಟಿಸಲು ಪ್ರಯತ್ನಿಸಲಾಯಿತು. ಕಮ್ಯುನಿಸ್ಟ್ ಪಕ್ಷದ ಪೋಷಕ ಸಂಘಟನೆಗಳಾಗಿ ಕಾರ್ಯನಿರ್ವಹಿಸುವುದು ಅಂಥ ಸಂಘಗಳ ದೌತ್ಯವಾದವು(10:p74). ಆಲ್ ಕೇರಳ ಸ್ಟೂಡೆಂಟ್ಸ್ ಫೆಡರೇಶನ್(ಎಕೆಎಸ್‌ಎಫ್)ನ ಸಭೆಯೊಂದು ಕೋಳಿಕೊಡ್‌ನಲ್ಲಿ ಸೌಮ್ಯೇಂದ್ರನಾಥ ಟ್ಯಾಗೋರ್ ಅವರ ಅಧ್ಯಕ್ಷತೆಯಲ್ಲಿ ಸೇರಿತು(19:p37). 1938ರ ಹೊತ್ತಿಗೆ ಅಖಿಲ ಮಲಬಾರ್ ರೈತ ಸಂಘ 30,000ಗಿಂತಲೂ ಹೆಚ್ಚು ಸದಸ್ಯರನ್ನು ಹೊಂದಿತ್ತು(10:).

1938ರಲ್ಲಿ, ಕಮ್ಯುನಿಸ್ಟ್ ಪಕ್ಷದ ಕೋರಿಕೆಯ ಮೇರೆಗೆ, ಕೆ. ದಾಮೋದರನ್ ಮುಹಮ್ಮ ಕಾಯರ್ ಫ್ಯಾಕ್ಟರಿ ಕಾರ್ಮಿಕರ ಸಂಘವನ್ನು ರಚಿಸಿದರು(19:p37).

ಇಎಂಎಸ್ ನಂಬೂದಿರಿಪಾಡ್ ಕಾರ್ಯದರ್ಶಿಯಾಗಿ ಬಡ್ತಿ ಪಡೆದಾಗ, ಗ್ರಾಮ ಮಟ್ಟದಲ್ಲಿ ಪಕ್ಷವನ್ನು ವಿಸ್ತರಿಸಲು ಪರಿಣಾಮಕಾರಿಯಾಗಿ ಕಾರ್ಯಕ್ರಮಗಳನ್ನು ಆಯೋಜಿಸಲಾಯಿತು(12:p52). ಎಲ್ಲ ಗ್ರಾಮಗಳಲ್ಲಿ ಸಮಿತಿಗಳನ್ನು ರಚಿಸಲಾಯಿತು. ಅಂತಹ ಸಮಿತಿಗಳ ಕಛೇರಿಗಳಿಗೆ ಸಂಬಂಧಿಸಿದ ಗ್ರಂಥಾಲಯಗಳು ಕಾರ್ಯನಿರತವಾದವು. ರೈತ ಸಂಘಗಳ ಮತ್ತು ಶಿಕ್ಷಕರ ಸಂಘಗಳ ಪ್ರತಿನಿಧಿಗಳು ಇಲ್ಲಿಗೆ ನಿತ್ಯವೂ ಭೇಟಿ ನೀಡುತ್ತಿದ್ದರು(12:). ಕೆಳವರ್ಗದ ಜನರ, ವಿಶೇಷವಾಗಿ ರೈತರ ಬೆಂಬಲ ಪಡೆಯಲು ಕಮ್ಯುನಿಸ್ಟ್ ನಾಯಕರು, ಸಾಹಿತ್ಯ ಕೃತಿಗಳು, ಜಾನಪದ ಕಲಾ ಪ್ರಕಾರಗಳು ನಾಟಕಗಳು ಮುಂತಾದವುಗಳ ಮೇಲೆ ಹೆಚ್ಚು ಅವಲಂಬಿತರಾದರು(20:p8). ರೈತ ಸಂಘಗಳ ಚಟುವಟಿಕೆಯ ವಿಸ್ತರಣೆಯ ಭಾಗವಾಗಿ ಸಮ್ಮೇಳನಗಳು; ಸಮ್ಮೇಳನದ ನಿರ್ಣಯದಂತೆ ಸಾಮೂಹಿಕ ಕೃಷಿಯ ವಿಸ್ತರಣೆ ಮತ್ತು ಅದರ ಉತ್ತೇಜನಕ್ಕಾಗಿ ಕೆ. ದಾಮೋದರನ್ ಅವರ ಪ್ರಸಿದ್ಧವಾದ 'ಪಾಟ್ಟಬಾಕಿ'(ಗೇಣಿಬಾಕಿ)ಯಂತಹ ನಾಟಕಗಳನ್ನು ಸಂದರ್ಭೋಚಿತವಾಗಿ ಬಳಸಲಾಯಿತು(8:p145).

ರಾಜಕೀಯ ಮತ್ತು ಆರ್ಥಿಕ ವಿಷಯಗಳ ಕುರಿತು ಹಲವಾರು ಅಧ್ಯಯನಗಳನ್ನು, ತರಗತಿಗಳನ್ನು ಆಯೋಜಿಸಲಾದವು. ಜೊತೆಗೆ ಕ್ರೀಡಾ ತರಬೇತಿ ಕೇಂದ್ರವನ್ನು ಸ್ಥಾಪಿಸಲಾಯಿತು(9:p291-292). 1938ರಲ್ಲಿ ರಾಜ್ಯ ಮಟ್ಟದ ಒಂದು ತಿಂಗಳ ಅವಧಿಯ ಸ್ವಯಂಸೇವಕ ತರಬೇತಿ ಶಿಬಿರವನ್ನು ಪ್ರಾರಂಭಿಸಲಾಯಿತು. ಮೇಲಿನ ಕೇಂದ್ರಗಳಿಂದ ತರಬೇತಿ ಪಡೆದ ವ್ಯಕ್ತಿಗಳು, ಗ್ರಾಮ ಮಟ್ಟದ ಚಟುವಟಿಕೆಗಳನ್ನು ನೋಡಿಕೊಳ್ಳುವ ಶಿಕ್ಷಕರಾಗಿ ನೇಮಕಗೊಂಡರು(14:p205). ಸರ್ದಾರ್ ಚಂದ್ರೋತ್ ಅವರ ನೇತೃತ್ವದಲ್ಲಿ ತರಬೇತಿ ಪಡೆದ 3000 ಸ್ವಯಂಸೇವಕರ ಗುಂಪು ಅಸ್ತಿತ್ವಕ್ಕೆ ಬಂದಿತು(20:p90). ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳ ಆಧಾರದ ಮೇಲೆ, 1939ರಲ್ಲಿ ಒಂದು ತಿಂಗಳ ಅವಧಿಯ ಮಧ್ಯ ಬೇಸಿಗೆ ಶಾಲೆಯನ್ನೂ ನಡೆಸಲಾಯಿತು(12:p52). ಸಮಾಜವಾದಿ ಮತ್ತು ಕಮ್ಯುನಿಸ್ಟ್ ವಿಚಾರಗಳನ್ನು ಹರಡುವುದು ಈ ತರಗತಿಗಳ ಉದ್ದೇಶವಾಗಿತ್ತು. ಎ.ಕೆ. ಗೋಪಾಲನ್ ಅವರ ಅವರ ನೇತೃತ್ವದ ಉಪವಾಸ ಸತ್ಯಾಗ್ರಹವೂ (1936ರಲ್ಲಿ) ಎಡಪಂಥೀಯ ರಾಜಕಾಜಕೀಯ ಅಭಿಯಾನದ ಭಾಗವಾಗಿತ್ತು(10:p110-125).

1935ರ ಭಾರತ ಸರ್ಕಾರದ ಕಾಯಿದೆಯನ್ನು ಜಾರಿಗೊಳಿಸಿದ ನಂತರ, ಶಾಸನ ರಚಿಸುವ ಸಭೆಗಳಿಗಾಗಿ ಚುನಾವಣೆಗಳು ನಡೆದವು. ಹೆಚ್ಚಿನ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸಚಿವ ಸಂಪುಟವನ್ನು ರಚಿಸಿತು. ಈ ಅವಧಿಯಲ್ಲಿ ಚುನಾವಣೆಯ ಬಗ್ಗೆ ಎಡಪಕ್ಷಗಳಿಗಿದ್ದ ನಕಾರಾತ್ಮಕ ಧೋರಣೆಯನ್ನು ಕೈಬಿಡಲಾಯಿತು. ಮಂತ್ರಿಗಳಿಗೆ ನೀಡಿರುವ ಅಧಿಕಾರವು ಜನರಿಗೆ ಸೇರಿದ್ದು, ಅವರು ಜನರ ಅಗತ್ಯಗಳನ್ನು ಪೂರೈಸಲು

ಅವುಗಳನ್ನು ಬಳಸಿಕೊಳ್ಳಬೇಕು ಎಂದು ಅವರು ಬಯಸಿದರು(12:p39). ಈ ಗುರಿಯನ್ನು ಸಾಧಿಸುವುದರೊಂದಿಗೆ, ಸಂಘಟನಾ ಬೆಳವಣಿಗೆ ಸಾಧಿಸಲು ಮತ್ತು ಜನಮನವನ್ನು ಸೆಳೆಯಲು ಎಡಪಕ್ಷಗಳು ಪ್ರಚಾರಗಳನ್ನು ಮತ್ತು ಹೋರಾಟಗಳನ್ನು ಪ್ರಾರಂಭಿಸಿದವು.

ರಷ್ಯಾದ ಕ್ರಾಂತಿಯ ಯಶಸ್ಸು ಮತ್ತು ಸೋವಿಯತ್ ಒಕ್ಕೂಟ ಪ್ರಮುಖ ಕಮ್ಯುನಿಸ್ಟ್ ಶಕ್ತಿಯಾಗಿ ಉದಯಿಸಿದ್ದು, ಭಾರತದ ಕಮ್ಯುನಿಸ್ಟರಲ್ಲಿ ಬೃಹತ್ ಪ್ರಮಾಣದಲ್ಲಿ ಪ್ರಚೋದನೆ, ಸ್ಫೂರ್ತಿ ಉಂಟುಮಾಡಿದವು. ಕೇರಳದ ಕಾಂಗ್ರೆಸ್ ಸಮಾಜವಾದಿಗಳು ಕಮ್ಯುನಿಸ್ಟರೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದರು. ಆದ್ದರಿಂದ ಅವರು ಸೋವಿಯತ್ ಒಕ್ಕೂಟದೊಂದಿಗೆ ಭಾವನಾತ್ಮಕ ಸಂಬಂಧವನ್ನು ಬೆಳೆಸಿಕೊಂಡರು(12:p43). ಈ ಸಂಬಂಧವು ನಂತರ ಭಾರತೀಯ ಕಮ್ಯುನಿಸ್ಟರಿಗೆ ಕೆಲವು ತಪ್ಪುಗಳನ್ನು ಮಾಡುವ ಸಂದರ್ಭ ಉಂಟಾಗಲು ಎಡೆಮಾಡಿಕೊಟ್ಟಿತು.

1939ರ ಎರಡನೇ ಮಹಾಯುದ್ಧ ಪ್ರಾರಂಭವು, ಭಾರತದ ಕಮ್ಯುನಿಸ್ಟ್ ಚಳವಳಿಗೆ ಹೊಂದಿಕೊಂಡು ಹೋಗುವಂತಾಯಿತು. ಬ್ರಿಟಿಷ್ ಸರ್ಕಾರವು ತನ್ನ ಯುದ್ಧದಲ್ಲಿ ಭಾರತವನ್ನು ಏಕಪಕ್ಷೀಯವಾಗಿ ಒಳಗೊಳ್ಳುವಂತೆ ಮಾಡಿದ್ದಲ್ಲದೆ, ಯುದ್ಧಾನಂತರದ ಪ್ರಯೋಜನಗಳ ಬಗ್ಗೆ ವಾಗ್ದಾನ ಮಾಡಲು ನಿರಾಸಕ್ತಿಯನ್ನು ವ್ಯಕ್ತಪಡಿಸಿತು. ಕೋಪಗೊಂಡ ಕಾಂಗ್ರೆಸ್ 1939ರ ಅಕ್ಟೋಬರ್‌ನಲ್ಲಿ ತನ್ನ ಪ್ರಾಂತೀಯ ಕ್ಯಾಬಿನೆಟ್‌ಗೆ ರಾಜೀನಾಮೆ ನೀಡುವಂಥ ಕಠಿಣ ತೀರ್ಮಾನ ತೆಗೆದುಕೊಳ್ಳಲು ನಿರ್ಧರಿಸಿತು(3:p234). ಅಕ್ಟೋಬರ್ 1940ರಲ್ಲಿ ಗಾಂಧಿ ನಡೆಸಿದ ಪ್ರತಿಭಟನೆ ತೀವ್ರವಾಗಿರಲಿಲ್ಲ. ಅವರು ನಿರ್ವಹಿಸಿದ ಸೀಮಿತ ಸತ್ಯಾಗ್ರಹ ಚಳುವಳಿಯು ಬ್ರಿಟಿಷರ ಯುದ್ಧದ ಪ್ರಯತ್ನಕ್ಕೆ ಅಡ್ಡಿಯಾಗಲಿಲ್ಲ(3:p234).

ಬ್ರಿಟನ್ ಎರಡನೇ ವಿಶ್ವಮಹಾಯುದ್ಧದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡ ಪರಿಸ್ಥಿತಿಯನ್ನು ತನಗೆ ಅನುಕೂಲವಾಗಿಸಿಕೊಳ್ಳಲು ಭಾರತೀಯ ಕಮ್ಯುನಿಸ್ಟರು ನಿರ್ಧರಿಸಿದರು. ಬ್ರಿಟಿಷರನ್ನು ಹೊರಹಾಕಲು ಜನಾಂದೋಲನವನ್ನು ಶುರುಮಾಡಿದರು(21:p7). ಎರಡನೇ ವಿಶ್ವಮಹಾಯುದ್ಧದ ಮೊದಲ ಹಂತವನ್ನು ಕಮ್ಯುನಿಸ್ಟರು (ಅಕ್ಟೋಬರ್ 1939 ರಿಂದ ಜುಲೈ 1942) 'ಸಾಮ್ರಾಜ್ಯಶಾಹಿ ಯುದ್ಧ' ಎಂದು ಉಲ್ಲೇಖಿಸಿದರು. ಕೇರಳದ ಕಮ್ಯುನಿಸ್ಟರು, ಭಾರತದ ಇತರ ಭಾಗಗಳ ತಮ್ಮ ಸಹೋದ್ಯೋಗಿಗಳಂತೆ, ಸಾಮ್ರಾಜ್ಯಶಾಹಿಯ ವಿರುದ್ಧ ಪ್ರಚಾರ ಕೈಗೊಂಡರು.

ಅಕ್ಟೋಬರ್ 1939ರಲ್ಲಿ, ಉತ್ತರ ಮಲಬಾರ್‌ನ ಪಿಣರಾಯಿ ಗ್ರಾಮದ ಪಾರಪ್ರಮ್‌ನಲ್ಲಿ, ಕೇರಳದ ಕಮ್ಯುನಿಸ್ಟ್ ಚಟುವಟಿಕೆಗಳಿಗೆ ಸಂಬಂಧಿಸಿದ ಪ್ರಥಮ ಸಂಘಟಿತ ಸಮ್ಮೇಳನ ನಡೆಯಿತು.

ಕೇರಳದ ಕಮ್ಯುನಿಸ್ಟರು ಆಗಲೂ ಕಾಂಗ್ರೆಸ್ ಪಕ್ಷದಲ್ಲೇ ಕಾರ್ಯನಿರ್ವಹಿಸುತ್ತಿದ್ದರು. ಅದೇ ಸಮಯದಲ್ಲಿ ಕಮ್ಯುನಿಸ್ಟರು ಪಕ್ಷದ ಕೇಂದ್ರ ನಾಯಕತ್ವದೊಂದಿಗೆ

ತಮ್ಮ ಸಂಬಂಧವನ್ನೂ ಉಳಿಸಿಕೊಂಡಿದ್ದರು. ಅವರು ದ್ವಿಮುಖ ತಂತ್ರವನ್ನು ಅಳವಡಿಸಿಕೊಳ್ಳುವಂತೆ ಒತ್ತಾಯಕ್ಕೊಳಪಟ್ಟಿದ್ದರು. ಕೆಪಿಸಿಸಿ ಪದಾಧಿಕಾರಿಗಳಾಗಿ, ಅವರು ಶಾಂತಿಯುತ ಪ್ರತಿಭಟನೆಗಳಿಗೆ ಮತ್ತು ಆಂದೋಲನಗಳಿಗೆ ಬೆಂಬಲ ವ್ಯಕ್ತಪಡಿಸಿದರು. ಆದರೆ ನೈಜ ಕಮ್ಯುನಿಸ್ಟರು ಎನ್ನುವ ನೆಲೆಯಲ್ಲಿ ತೀವ್ರಸ್ವರೂಪದ ಚಟುವಟಿಕೆಗಳನ್ನೂ ಬೆಂಬಲಿಸಿದರು. ಕಮ್ಯುನಿಸ್ಟ್ ಚಟುವಟಿಕೆಗಳನ್ನು ಹತ್ತಿಕ್ಕಲು ಸರ್ಕಾರ ಕಠಿಣ ಕ್ರಮಗಳನ್ನು ತೆಗೆದುಕೊಂಡಿತು. ಕಮ್ಯುನಿಸ್ಟ್ ಪಕ್ಷದ ಮೇಲೆ ನಿಷೇಧ ಹೇರಿದ ನಂತರ, ಅದರ ನಾಯಕರು ತಲೆಮರೆಸಿಕೊಂಡು ಪಕ್ಷದ ಪ್ರಚಾರದ ಚುಕ್ಕಾಣಿ ಹಿಡಿದರು. 1941ರ ಮಧ್ಯದ ವೇಳೆಗೆ ಇಎಂಎಸ್ ಒಬ್ಬರನ್ನು ಬಿಟ್ಟು ಉಳಿದೆಲ್ಲ ನಾಯಕರು ಜೈಲು ಪಾಲಾದರು. ಎಡಪಕ್ಷದ ಪ್ರಾಬಲ್ಯವಿರುವ ಕೆಪಿಸಿಸಿ ಸೆಪ್ಟೆಂಬರ್ 15, 1940ರಂದು 'ದಮನ ವಿರೋಧಿ ದಿನ' ಆಚರಿಸಲು ಕರೆ ನೀಡಿತು. ಈ ಆಚರಣೆ ಮತ್ತು ಸರ್ಕಾರದ ರಕ್ಷಣಾ ಚಟುವಟಿಕೆಗಳಿಂದಾಗಿ, ತಲಶ್ಶೇರಿ, ಮೊರಝ, ಮಟ್ಟನ್ನೂರು ಮುಂತಾದ ಸ್ಥಳಗಳಲ್ಲಿ ಹಿಂಸಾಚಾರಕ್ಕೆ ಕಾರಣವಾಯಿತು(12:p54). ಎಡಪಕ್ಷದ ಒಲವಿನ ಚಟುವಟಿಕೆಗಳಿಗಿಂದಾಗಿಯೂ ಮತ್ತು ಸ್ಥಳೀಯ ಮಟ್ಟದಲ್ಲಿ ಉಂಟಾಗುತ್ತಿದ್ದ ಸಂಘರ್ಷಗಳಿಗೆ ಪರ್ಯಾಯ ಮಾರ್ಗ ಸಿಗದೇ ಇದ್ದಿದ್ದರಿಂದಲೂ ಕಾಂಗ್ರೆಸ್ ಹೈಕಮಾಂಡ್ ಕೆಪಿಸಿಸಿಯನ್ನು ವಿಸರ್ಜಿಸಿ 'ತಾತ್ಕಾಲಿಕ ಸಮಿತಿ'ಯನ್ನು ನಾಮನಿರ್ದೇಶನ ಮಾಡಿತು(12:). ಆದರಿಂದಾಗಿ, ಕಮ್ಯುನಿಸ್ಟರು ರಾಜಕಿಯ ಪ್ರಚಾರಕ್ಕಾಗಿ ಸಾರ್ವಜನಿಕ ವೇದಿಕೆಯನ್ನು ಕಳೆದುಕೊಂಡರು. ಟಿ.ಜೆ. ನಾಸಿಟರ್ ಈ ವಿದ್ಯಮಾನವನ್ನು ಹೀಗೆ ಗಮನಿಸುತ್ತಾರೆ:

> "ಸೆಪ್ಟೆಂಬರ್ 15, 1940, ಪಕ್ಷದ ಇತಿಹಾಸದಲ್ಲಿ ಒಂದು ವಿಶೇಷ ಕ್ಷಣವನ್ನಾಗಿ ಗುರುತಿಸುತ್ತದೆ. ಕಮ್ಯುನಿಸಂ ಬಗ್ಗೆ ಕಾಂಗ್ರೆಸ್‌ನ ಮೇಲಿನ ಅವಲಂಬನೆ ಇಲ್ಲಿಗೆ ಕೊನೆಗೊಳ್ಳುತ್ತದೆ. ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ ಮತ್ತು ಇತರ ಪಕ್ಷಗಳನ್ನು ನೇರವಾಗಿ ವಿರೋಧಿಸುವ ಒಂದು ಸ್ವತಂತ್ರ ರಾಜಕೀಯ ಪಕ್ಷವಾಗಿಬಿಟ್ಟಿತು"(10:p85).

ಬೋಲ್ಶೆವಿಕ್ ಶೈಲಿಯ ಪಕ್ಷದ ಪ್ರಚಾರವನ್ನು ಭೂಗತರಾಗಿದ್ದ ಕಮ್ಯುನಿಸ್ಟ್ ನಾಯಕರು ಕೇರಳದಲ್ಲಿ ಅಳವಡಿಸಿಕೊಂಡರು. ಮಲಬಾರಿನಲ್ಲಿ ಎಲ್ಲಾ ತಾಲೂಕುಗಳಲ್ಲಿ ಗುಪ್ತ ಪ್ರಚಾರಕೇಂದ್ರಗಳನ್ನು ಸ್ಥಾಪಿಸಿದರು. ಅವರು ತಿರುವಾಂಕೂರು, ಕೊಚ್ಚಿ ಮತ್ತು ಮಂಗಳೂರಿನಲ್ಲಿ ಅಂತಹ ನಿಗೂಢ ಸ್ಥಳಗಳನ್ನು ಕಂಡುಕೊಂಡರು. ಸ್ಥಳೀಯ ಕೇಂದ್ರಗಳೊಂದಿಗೆ ರಾಜ್ಯದ ಕೇಂದ್ರದ ಮೂಲಕ ಪ್ರತಿವಾರ ಸಂವಹನವನ್ನು ಪರಿಣಾಮಕಾರಿಯಾಗಿ ನಡೆಸಲಾಯಿತು. ಪಕ್ಷದ ಬುಲೆಟಿನ್‌ಗಳನ್ನು ಪ್ರತಿವಾರವೂ ಪ್ರಕಟಿಸಲಾಗುತ್ತಿತ್ತು(12:p285;21:p94).

ಕೈಯೂರು ಬಂಡಾಯವು ಆ ಸಮಯದ ಗಮನಾರ್ಹ ಘಟನೆಯಾಗಿತ್ತು. ಕೈಯೂರು ಕಾಸರಗೋಡು ತಾಲೂಕಿನ ಒಂದು ಕುಗ್ರಾಮವಾಗಿದ್ದು, ಇದು ಹಿಂದಿನ

ದಕ್ಷಿಣ ಕನ್ನಡ (ಸೌತ್ ಕೇನರಾ) ಪ್ರದೇಶದಲ್ಲಿದೆ. ಪ್ರಸ್ತುತ ಗ್ರಾಮದ ದೇಶಭಕ್ತ ರೈತರು ಮಾರ್ಚ್ 28, 1941ರಂದು, ಕಮ್ಯುನಿಸ್ಟ್ ಸೆಲ್ ನೇತೃತ್ವದಲ್ಲಿ ಸಾಮ್ರಾಜ್ಯಶಾಹಿ ವಿರೋಧಿ ಜಾಥಾವನ್ನು ನಡೆಸಿದರು. ಅದರಲ್ಲಿ ಒಬ್ಬ ಪೊಲೀಸ್ ಪೇದೆ ಸಾವಿಗೀಡಾದ ನಂತರ ಪೋಲಿಸರ ದಬ್ಬಾಳಿಕೆಯಿಂದಾಗಿ ಆ ಪ್ರದೇಶದ ಶಾಂತ ಜೀವನ ಛಿದ್ರವಾಯಿತು. ಕೈಯೂರ್ ಒಡನಾಡಿಗಳೆಂದು ಕರೆಯಲ್ಪಡುವ ನಾಲ್ಕು 'ರೈತ ದೇಶಪ್ರೇಮಿಗಳನ್ನು' ಮಾರ್ಚ್ 28, 1943ರಂದು ಗಲ್ಲಿಗೇರಿಸಲಾಯಿತು(22:p17-59).

ಮೊರಳ್ಹಾ ಪ್ರಕರಣದಲ್ಲಿ ಭಾಗಿಯಾಗಿದ್ದರು ಎನ್ನುವ ಆಧಾರದ ಮೇಲೆ ಕೆ.ಪಿ.ಆರ್.ಗೋಪಾಲರನ್ನು ಬಂಧಿಸಿ ಶಿಕ್ಷಿಸಲಾಯಿತು. ಒಂದು ಪ್ರಹಸನ ವಿಚಾರಣೆಯ ನಂತರ, ಅಧಿಕಾರಿಗಳು ಅವರಿಗೆ ಮರಣದಂಡನೆ ವಿಧಿಸಲು ನಿರ್ಧರಿಸಿದರು. 'ಸೇವ್ ಕೆಪಿಆರ್ ಫೋರಂ'ನ್ನು ರಚಿಸಿಕೊಂಡು ಅದರ ನೇತೃತ್ವದಲ್ಲಿ ಪ್ರಬಲ ಆಂದೋಲನ ಪ್ರಾರಂಭಿಸಲಾಯಿತು. ಜನರ ಒತ್ತಡಕ್ಕೆ ಮಣಿದು ಸರ್ಕಾರ ಕೆಪಿಆರ್‌ನ ಮರಣದಂಡನೆಯನ್ನು ಜೀವಾವಧಿ ಶಿಕ್ಷೆಯಾಗಿ ಪರಿವರ್ತಿಸಿತು(39:25.02.42-25.03.42) 'ಕೆಪಿಆರ್ ಉಳಿಸಿ' ಚಳುವಳಿಯು ಗಣನೀಯವಾದ ಜನ ಬೆಂಬಲ ಪಡೆದುಕೊಳ್ಳಲು ಮತ್ತು ರಾಜಕೀಯ ಪ್ರಚಾರಗಳಿಗೆ ಕಾನೂನುಬದ್ಧವಾದ ಅವಕಾಶಗಳನ್ನು ಪಡೆಯಲು ಕಮ್ಯುನಿಸ್ಟ್ ಪಕ್ಷಕ್ಕೆ ಸಾಧ್ಯವಾಗಿಸಿತು. ಕೈಯೂರು ಮತ್ತು ಮೊರಜ್ಹಾ ವಿಚಾರಣೆಗಳ ಫಲವಾಗಿ ಕೆಲಕಾಲದವರೆಗೂ ಕಮ್ಯುನಿಸ್ಟ್ ಪಕ್ಷವು ಸಕ್ರಿಯವಾಗಿ ಸಾರ್ವಜನಿಕ ಗಮನವನ್ನು ಸೆಳೆದುಕೊಂಡಿರಲು ಸಾಧ್ಯವಾಯಿತು.

ಅಡಾಲ್ಫ್ ಹಿಟ್ಲರ್ ಜೂನ್ 22, 1941ರಂದು ಸೋವಿಯತ್ ಒಕ್ಕೂಟದ ಮೇಲೆ ದಾಳಿ ಮಾಡಿದ್ದು, ವಸಾಹತುಶಾಹಿ ಅಧಿಕಾರಿಗಳ ಬಗೆಗಿನ ಭಾರತೀಯ ಕಮ್ಯುನಿಸ್ಟರ ಮನೋಭಾವದಲ್ಲಿ ಗಮನಾರ್ಹವಾದ ಪರಿವರ್ತನೆಯನ್ನುಂಟು ಮಾಡಿತು. ಭಾರತೀಯ ಕಮ್ಯುನಿಸ್ಟರ ದೃಷ್ಟಿಯಲ್ಲಿ 'ಸಾಮ್ರಾಜ್ಯಶಾಹಿಯ ಯುದ್ಧ'ಕ್ಕೆ 'ಜನತಾ ಯುದ್ಧ'ದ ಆವರಣ ದೊರಕಿತು.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, 9 ಆಗಸ್ಟ್ 1942ರಂದು 'ಭಾರತ ಬಿಟ್ಟು ತೊಲಗಿ' (ಕ್ವಿಟ್ ಇಂಡಿಯಾ) ನಿರ್ಣಯವನ್ನು ಅಂಗೀಕರಿಸಿದಾಗ, ಭಾರತೀಯ ಕಮ್ಯುನಿಸ್ಟರು, ಫ್ಯಾಸಿಸ್ಟ್ ವಿರೋಧಿ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಭಾರತ ಬಿಟ್ಟು ತೊಲಗಿ ಆಂದೋಲನವು ಫ್ಯಾಸಿಸ್ಟ್ ವಿರೋಧಿ ಬಣಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎಂದು ಕಮ್ಯುನಿಸ್ಟರು ಭಯಪಟ್ಟರು(21:p7). ಕೆಲವು ಕಾಲ ಕಮ್ಯುನಿಸ್ಟರು ಈ ನೀತಿಗಳಿಂದ ಪ್ರಯೋಜನವನ್ನೂ ಪಡೆದಿದ್ದರು. ಕಮ್ಯುನಿಸ್ಟರ ಮೇಲಿನ ನಿಷೇಧವನ್ನು ಸರ್ಕಾರ ಹಿಂತೆಗೆದುಕೊಂಡಿತು. ಹಾಗಾಗಿ ಅವರಿಗೆ ಗುಪ್ತಪ್ರಚಾರದ ಅಗತ್ಯ ಉಂಟಾಗಲಿಲ್ಲ. ಅವರ ನಾಯಕರನ್ನು ಜೈಲಿನಿಂದ ಬಿಡುಗಡೆ ಮಾಡಲಾಯಿತು. ಬಾಂಬೆಯಲ್ಲಿ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿ ಕಚೇರಿಯನ್ನು ತೆರೆಯಲಾಯಿತು.

ವಿವಿಧ ಭಾಷೆಗಳಲ್ಲಿ ಪ್ರಕಟಣೆಗಳು ಪ್ರಾರಂಭವಾದವು. ದೇಶಾಭಿಮಾನಿ ಪ್ರೆಸ್ ಮತ್ತು ವಾರಪತ್ರಿಕೆಗಳು ಅಸ್ತಿತ್ವಕ್ಕೆ ಬಂದವು. ಪಕ್ಷದ ಶಾಲೆ, ಸಾಮಾನ್ಯ ಸಭೆ ಮತ್ತು ತರಬೇತಿ ಶಿಬಿರ ಮುಂತಾದವುಗಳನ್ನು ಪರಿಣಾಮಕಾರಿಯಾಗಿ ನಡೆಸಲು ಸಾಧ್ಯವಾದವು, ಪಕ್ಷದ ಕಾರ್ಯಕರ್ತರು ಪ್ರತಿಯೊಂದು ವಿಷಯದಲ್ಲೂ ಶಕ್ತರಾಗಿ ಕಾರ್ಯನಿರ್ವಹಿಸಲು ಪ್ರಾಪ್ತರಾದರು(12:p156-168). ಕೇರಳದ ಮೊದಲ ರಾಜ್ಯ ಸಮ್ಮೇಳನವು ಮಾರ್ಚ್ 1943ರಲ್ಲಿ ಕೋಳಿಕ್ಕೋಡ್‌ನಲ್ಲಿ ನಡೆಯಿತು(12:p175). ಕಮ್ಯುನಿಸ್ಟ್ ಪಕ್ಷದ ಮೊದಲ ಪಕ್ಷದ ಕಾಂಗ್ರೆಸ್/ಮಹಾ ಸಮ್ಮೇಳನ 1943ರಲ್ಲೇ ಬಾಂಬೆಯಲ್ಲಿ ನಡೆಯಿತು.

**ಮೂರನೆಯ ಪಕ್ಷದ ಕಾಂಗ್ರೆಸ್ ವರದಿಯ ಪ್ರಕಾರ ಕೇರಳದ ಕಮ್ಯುನಿಸ್ಟ್ ಪಕ್ಷದ ಸದಸ್ಯರ ಸಂಖ್ಯೆಗಳು**

| | |
|---|---|
| ಪಕ್ಷದ ಸದಸ್ಯರು | 2500 |
| ಪಕ್ಷದ ಕಾರ್ಯಕರ್ತರು | 10000 |
| ಪೂರ್ಣಾವಧಿ ಕಾರ್ಯಕರ್ತರು | 300 (20:p92) |

ಈ ರೀತಿಯಲ್ಲಿ ಅಸ್ತಿತ್ವದಲ್ಲಿರುವ ಸಂದರ್ಭಗಳನ್ನು ಕಾನೂನುಬದ್ಧವಾಗಿ ಬಳಸಿಕೊಂಡ ಪಕ್ಷವು, ಪರಿಣಾಮಕಾರಿ ಸಾಂಸ್ಥಿಕ ರಚನೆಯಾಗಿ ರೂಪುಗೊಂಡಿತು. ಅಧಿಕಾರಿಗಳೊಂದಿಗೆ ಸಹಕರಿಸುವ ನೆಪದಲ್ಲಿ ಪಕ್ಷ ಸಂಘಟನೆ ಬಲವರ್ಧನೆಗೆ ಸಿಕ್ಕ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡಿತು(10:p85).

ಸಾಮ್ರಾಜ್ಯಶಾಹಿಯ ವಿರುದ್ಧವಿದ್ದ ಸಿಪಿಐನ ಹೊಸಪೀಳಿಗೆಯು, ತಾವು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಬಲಿಪಶುಗಳು ಎಂದು ನಂಬಿದ್ದರು. ಕ್ವಿಟ್ ಇಂಡಿಯಾ ಆಂದೋಲನವನ್ನು ವಿರೋಧಿಸಿದ್ದು ದೊಡ್ಡ ತಪ್ಪು ಎಂದು ಗುರುತಿಸಲು ತುಂಬಾ ತಡವಾಗಿ ಹೋಗಿತ್ತು. ರಾಷ್ಟ್ರೀಯ ಚಳವಳಿಯ ಮುಖ್ಯವಾಹಿನಿಯಿಂದ ಅವರು ಪ್ರತ್ಯೇಕಗೊಂಡಿದ್ದರು(7:p409-415). ಭಾರತದಾದ್ಯಂತ ಸೈದ್ಧಾಂತಿಕಸಂಘರ್ಷ ಪಕ್ಷದಲ್ಲಿ ಆಳವಾಗಿ ಬೇರೂರಿತ್ತು(12:91-92). ಕೇರಳವೂ ಇದಕ್ಕೆ ಹೊರತಾಗಿರಲಿಲ್ಲ. ಈ ಪರಿಸ್ಥಿತಿಯಲ್ಲಿ, ಪಿ. ಕೃಷ್ಣಪಿಳ್ಳ ಪಕ್ಷದ ಸಮಿತಿಯು ಕಾರ್ಯನಿರ್ವಹಿಸುವುದನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕಾಯಿತು. ಆಹಾರ ಧಾನ್ಯದ ಕೊರತೆಯ ಮೇಲೆ ಕಾಳಸಂತೆಕೋರರು ಮತ್ತು ಅಕ್ರಮ ದಾಸ್ತಾನುಗಾರರ ವಿರುದ್ಧ ಪಕ್ಷ ನಡೆಸಿದ ಊಳಿಗಮಾನ್ಯ ವಿರೋಧಿ ಚಳುವಳಿಯಿಂದಾಗಿ, ಎದುರಾಳಿಗಳ ಟೀಕಾ ಶಕ್ತಿಯನ್ನು ಭಾಗಶಃ ಕಡಿಮೆಗೊಳಿಸಲು ಸಾಧ್ಯವಾಯಿತು(23:p204-211). ಕ್ವಿಟ್ ಇಂಡಿಯಾ ಹೋರಾಟದಿಂದ ಸರಿದು ನಿಂತಿದ್ದು, ಬಹುಶಃ, ನೈಜ ರಾಜಕೀಯ ಪರಿಸ್ಥಿತಿಯನ್ನು ವಿಶ್ಲೇಷಿಸುವಾಗ ಉಂಟಾಗಬೇಕಿದ್ದ ದೂರದೃಷ್ಟಿಯ ಕೊರತೆಯಿಂದಾಗಿಯೋ ಅಥವಾ ತಮ್ಮ ತತ್ತ್ವಸಂಹಿತೆಯ ಮೇಲಿದ್ದ ಅಚಂಚಲವಾದ ನಂಬಿಕೆ ಗಣನೀಯವಾದ ಮಟ್ಟದಲ್ಲಾದರೂ ಸೋವಿಯತ್ ಒಕ್ಕೂಟದೊಂದಿಗಿದ್ದ ತಾರ್ಕಿಕವಲ್ಲದ ಒಲುಮೆಯಿಂದಾಗಿ ವಿಚಲಿತಗೊಂಡಿದ್ದರ ಕಾರಣದಿಂದಾಗಿಯೋ ಇರಬೇಕು.

1945–46ರ ಅವಧಿಯಲ್ಲಿ ರಾಷ್ಟ್ರೀಯವಾಗಿ ಕಮ್ಯುನಿಸ್ಟ್ ಪಕ್ಷವು ಆಕ್ರಮಣಶೀಲ ಶೈಲಿಯನ್ನು ಅಳವಡಿಸಿಕೊಂಡಿತು. ಜನಪರ ಹೋರಾಟಗಳ ನಾಯಕತ್ವವನ್ನು ಮರಳಿ ಪಡೆಯಲು ಮತ್ತು ಜನರ ಹೋರಾಟದ ಮನೋಭವವನ್ನು ಉದ್ದೀಪನಗೊಳಿಸಿ, ಆಮೂಲಕ ಸ್ವಾತಂತ್ರ್ಯವನ್ನೂ ಅಧಿಕಾರವನ್ನೂ ಪಡೆದುಕೊಳ್ಳುವುದಕ್ಕಾಗಿ, ನಿರ್ಣಾಯಕ ಹೋರಾಟಕ್ಕೆ ಸಜ್ಜುಗೊಳ್ಳಲು, ಆಗಸ್ಟ್ 1946ರ ನಿರ್ಣಯವು ಪಕ್ಷವನ್ನು ಪ್ರೇರೇಪಿಸಿತು(24:). ಈ ಹೊಸ ಆಕ್ರಮಣಶೀಲ ಶೈಲಿಯು ತಿರುವಾಂಕೂರಿನ ಸಾರ್ವಜನಿಕ ರಾಜಕೀಯ ವಾತಾವರಣಕ್ಕೆ ಹೊಂದಿಕೆಯಾಗುವಂತ್ತಿದ್ದು(25:p79), ಅಂಬಳಪುಳ, ಚೇರ್ತಲ ತಾಲೂಕುಗಳ ಸಾಮಾಜಿಕ–ರಾಜಕೀಯ ಸ್ಥಿತಿಗತಿಗಳಿಗೆ ಸೂಕ್ತವೂ ಆಗಿತ್ತು. ಸ್ವಾಭಾವಿಕವಾಗಿ ಸರ್ಕಾರದೊಂದಿಗೆ ನೇರ ಮುಖಾಮುಖಿ ಅನಿವಾರ್ಯವಾಗಿ ಬಿಟ್ಟಿತು. ಮೇಲಿನ ತಾಲೂಕುಗಳಲ್ಲಿ ಕಮ್ಯುನಿಸ್ಟರ ಬೆದರಿಕೆಯನ್ನು ನಿಭಾಯಿಸುವಲ್ಲಿ ಆಡಳಿತ ವ್ಯವಸ್ಥೆಯು ತೆಗೆದುಕೊಂಡ ಜಾಗರೂಕತೆಯ ಬಗ್ಗೆ ಸರ್ಕಾರಿ ದಾಖಲೆಗಳು ದೃಢೀಕರಿಸುತ್ತವೆ. ಈ ವಿಶೇಷ ಸಂದರ್ಭಗಳು ಪುನ್ನಪ್ರ–ವಯಲರ್ ಆಂದೋಲನಕ್ಕೆ ಕಾರಣವಾಯಿತು. ಪಕ್ಷದ ನೂರಾರು ಕಾರ್ಯಕರ್ತರು ಹುತಾತ್ಮರಾದರು(26:).

ಆಗಸ್ಟ್ ನಿರ್ಣಯದ ಪರಿಣಾಮವಾಗಿ, ಉತ್ತರ ಮಲಬಾರ್‌ನ ಕೆಲವು ಹಳ್ಳಿಗಳಲ್ಲಿ ಸಣ್ಣ ರೈತ ಆಂದೋಲನಗಳು ಭುಗಿಲೆದ್ದವು. ಕರಿವೆಳ್ಳೂರು, ಕಾವುಂಬೈ, ಕೊರೋಮ್ ಮತ್ತು ಮುನಯನ್‌ಕುನ್ನ್ ಮುಂತಾದೆಡೆಗಳಲ್ಲಿ ರೈತರುನಡೆಸಿದ ವೀರೋಚಿತ ಪ್ರತಿರೋಧವು ಅದರ ಜನಪ್ರಿಯ ನೆಲೆಯನ್ನು ವಿಸ್ತರಿಸಲು ಪಕ್ಷಕ್ಕೆ ಸಹಾಯ ಮಾಡಿತು(27:p29). ಮಲಬಾರ್ ಮತ್ತು ತಿರುವಾಂಕೂರಿನಲ್ಲಿ ನಡೆದ ಚುನಾವಣೆಗಳಲ್ಲಿ ಸ್ಪರ್ಧಿಸಿದ್ದ ಕಮ್ಯುನಿಸ್ಟ್ ಅಭ್ಯರ್ಥಿಗಳು ಪಡೆದ ಮತಗಳ ಸಂಖ್ಯೆಯು, ಪಕ್ಷದ ಜನಪ್ರಿಯ ನೆಲೆಯ ವಿಸ್ತರಣೆಯ ಬಗ್ಗೆ ಸಾಕ್ಷ್ಯವನ್ನು ಒದಗಿಸುತ್ತದೆ(28:p56).

ಭಾರತದ ಕಮ್ಯುನಿಸ್ಟ್ ಪಕ್ಷದ ಎರಡನೇ ಪಕ್ಷದ ಸಮ್ಮೇಳನ 1948, ಫೆಬ್ರವರಿಯಲ್ಲಿ ಕಲ್ಕತ್ತಾದಲ್ಲಿ ನಡೆಯಿತು. ಪಕ್ಷದ ಸಮ್ಮೇಳನ ನಾಯಕತ್ವದಲ್ಲಿ ಮಾತ್ರವಲ್ಲದೆ, ಅದರ ನೀತಿಗಳಲ್ಲೂ ಕಾರ್ಯಕ್ರಮಗಳಲ್ಲೂ ಬದಲಾವಣೆಯನ್ನು ತಂದಿತು. ಕೇರಳ, ಆಂಧ್ರಪ್ರದೇಶಗಳಿಂದ ಬಂದ ಹೆಚ್ಚಿನ ಪ್ರತಿನಿಧಿಗಳು 'ಪಿ.ಸಿ. ಜೋಶಿಯವರ ಕಾರ್ಯತಂತ್ರ' (ಜೋಶಿ ಲೈನ್)ವನ್ನು ಅನುಮೋದಿಸಿದರು (12:;24:). ಆದರೆ ಪಕ್ಷದ ಕಾಂಗ್ರೆಸ್/ಸಮ್ಮೇಳವು ತೀವ್ರಸ್ವರೂಪದ, ಐತಿಹಾಸಿಕವಾದ 'ಕಲ್ಕತ್ತಾ ಪ್ರಬಂಧ' (ಕಲ್ಕತ್ತ ಥೀಸಿಸ್) ವನ್ನು ಸ್ವೀಕರಿಸಿತು(12:;24:). 1948ರ ಕೊಚ್ಚಿ ಚುನಾವಣೆಯನ್ನು ಪಕ್ಷವು ಬಹಿಷ್ಕರಿಸಿತು. ಅದರಿಂದಾಗಿ, ಸರ್ಕಾರವು ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸುವ ಕ್ರಮಕ್ಕೆ ಕೈಹಾಕಿತು. ಅನೇಕ ನಾಯಕರನ್ನು ಬಂಧಿಸಿ, ಜೈಲಿಗೆ ಹಾಕಲಾಯಿತು. ಉಳಿದವರು ತಲೆಮರೆಸಿಕೊಂಡಿದ್ದರು. ಪಕ್ಷವು ಅಭೂತಪೂರ್ವವಾದ ಕಷ್ಟಗಳನ್ನು ಎದುರಿಸಬೇಕಾಯಿತು. 1949ರ ರೈಲ್ವೆ ಕಾರ್ಮಿಕರ ಮುಷ್ಕರ ವಿಫಲವಾಯಿತು. ಮತ್ತು ಪಕ್ಷದ ಆಂತರಿಕ ಘರ್ಷಣೆಗಳೂ ಭಿನ್ನಾಭಿಪ್ರಾಯಗಳೂ ಮುಗಿಲು ಮುಟ್ಟಿದವು.

ಬಿಕ್ಕಟ್ಟನ್ನು ನಿವಾರಿಸಿಕೊಳ್ಳಲು ಪರಿಷ್ಕರಣಾವಾದಿಗಳಾಗಿದ್ದ ಸಂಗಾತಿಗಳ ವಿರುದ್ಧ ನಾಯಕತ್ವವು ಕಠಿಣ ಶಿಸ್ತು ಕ್ರಮ ಕೈಗೊಂಡಿತು. ಜೈಲು ಅಧಿಕಾರಿಗಳನ್ನು ಧಿಕ್ಕರಿಸಲು ಪಕ್ಷವು, ಬಂಧನಕ್ಕೆ ಒಳಗಾಗಿದ್ದ ಸಂಗಾತಿಗಳಿಗೆ ಕರೆ ನೀಡಿತು(12:p339). ಈ ಸಾಹಸಿಕ ನೀತಿಯಿಂದಾಗಿ ಪಕ್ಷವು ದೊಡ್ಡ ನಷ್ಟವನ್ನು ಅನುಭವಿಸಬೇಕಾಯಿತು. ಪರಿಣಾಮವಾಗಿ ಪಕ್ಷ ಭಾರೀ ಹಿನ್ನಡೆ ಅನುಭವಿಸಿತು. ಕಾರ್ಮಿಕರು ಸಾಮಾನ್ಯವಾಗಿ ನಿಷ್ಕ್ರಿಯರಾಗಿಬಿಟ್ಟರು. ಪಕ್ಷದ ಸದಸ್ಯತ್ವ ಗಣನೀಯ ಪ್ರಮಾಣದಲ್ಲಿ ಕುಸಿಯಿತು(30:p357).

ಭಾರತೀಯ ಕ್ರಾಂತಿಗೆ, ಚೀನಾ ಮಾರ್ಗ ಅನುಸರಿಸಬೇಕೆ ಅಥವಾ ರಷ್ಯನ್ ಮಾರ್ಗ ಅನುಸರಿಸಬೇಕೆ ಎಂಬುದರ ಕುರಿತು 1948–50ರ ಕಾಲಘಟ್ಟಗಳಲ್ಲಿ ಬಹಳ ಗೊಂದಲ ಪಕ್ಷವನ್ನು ಆವರಿಸಿಕೊಂಡಿತು(2:p23). ಚೈನೀಸ್ ಸರಣಿಯನ್ನು ಬೆಂಬಲಿಸುವ ಬಸವ ಪುನ್ನಯ್ಯ ಮತ್ತು ರಾಜೇಶ್ವರ್ ರಾವ್ ಹಾಗೂ ರಷ್ಯನ್ ಸರಣಿಯನ್ನು ಬೆಂಬಲಿಸುವ ಎಸ್.ಎ. ಡಾಂಗೆ ಮತ್ತು ಅಜಯ್ ಘೋಷ್ ಅವರನ್ನು ಒಳಗೊಂಡ ನಾಲ್ಕು ಸದಸ್ಯರ ಕಾರ್ಯಾಚರಣಾ ತಂಡ ಸಮಸ್ಯೆಗಳನ್ನು ಪರಿಹರಿಸಲು ಸೋವಿಯತ್ ಒಕ್ಕೂಟಕ್ಕೆ ಭೇಟಿ ನೀಡಿತು(12:p343). ಭಾರತೀಯ ಸನ್ನಿವೇಶಕ್ಕೆ ಸರಿಹೊಂದುವಂಥ ಭಾರತೀಯ ಕ್ರಾಂತಿ ನಡೆಸಲು ಒಂದು ಅನನ್ಯ ಕಾರ್ಯತಂತ್ರವನ್ನು ರೂಪಿಸಲು ಸಿಪಿಎಸ್‌ಯು(ಸೋವಿಯತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷ) ನಾಯಕತ್ವ ಪಕ್ಷಕ್ಕೆ ಸಲಹೆ ನೀಡಿತು(12:). ಅದರಂತೆ, 1951ರಲ್ಲಿ ಕಲ್ಕತ್ತಾದಲ್ಲಿ ನಡೆದ ಅಖಿಲ ಭಾರತ ಪಕ್ಷದ ಸಮ್ಮೇಳನದಲ್ಲಿ ಹೊಸ ಕಾರ್ಯಕ್ರಮಗಳನ್ನೂ ತಂತ್ರಗಳನ್ನೂ ಅಳವಡಿಸಿಕೊಳ್ಳಲು ನಿರ್ಧರಿಸಿತು. ನವೀನ ಯೋಜನೆಯನ್ನು ಈ ಪ್ರಕಾರದಲ್ಲಿ ಸಂಗ್ರಹಿಸಬಹುದು:

> "ನಮ್ಮ ದೇಶದ ಸಂಪೂರ್ಣ ಸ್ವಾತಂತ್ರ್ಯವನ್ನು ಸಾಧಿಸಲು, ಊಳಿಗಮಾನ್ಯ ಪ್ರಭುಗಳ ದಬ್ಬಾಳಿಕೆಯಿಂದ ರೈತರನ್ನು ಬಿಡುಗಡೆ ಮಾಡಲು, ದುಡಿಯುವ ಜನರ ಜೀವನಮಟ್ಟವನ್ನು ಸುಧಾರಿಸಲು, ನಮ್ಮ ರಾಷ್ಟ್ರೀಯ ಕೃಷಿ–ಕೈಗಾರಿಕಾ ಕ್ಷೇತ್ರಗಳನ್ನು ಮುನ್ನಡೆಸಲು, ನಮ್ಮ ದೇಶದ ಸಾಂಸ್ಕೃತಿಕ ಪ್ರಗತಿಯನ್ನು ಸಾಧ್ಯವಾಗಿಸಲು, ದುಡಿಯುವ ಲಕ್ಷೋಪಲಕ್ಷ ಜನಗಳನ್ನು, ರೈತ–ಕಾರ್ಮಿಕ ವರ್ಗವನ್ನು, ದುಡಿಯುವ ಬುದ್ಧಿಜೀವಿಗಳ ವಿಭಾಗವನ್ನು, ಅದೇ ತರಹ, ಸ್ವರಾಜ್ಯ, ಸ್ವಾತಂತ್ರ್ಯ ಮತ್ತು ಸಮೃದ್ಧಿಯಲ್ಲಿ ಆಸಕ್ತಿ ಹೊಂದಿರುವ ಮಧ್ಯಮ ವರ್ಗದ ಜೊತೆಗೆ ರಾಷ್ಟ್ರೀಯ ಬೂರ್ಜ್ವಾಸಿಗಳನ್ನು ಒಂದೇ ಪ್ರಜಾಪ್ರಭುತ್ವರಂಗವಾಗಿ ಪಕ್ಷವು ಒಗ್ಗೂಡಲು ಬದ್ಧವಾಗಿದೆ"(31:p583).

ಹೊಸ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುತ್ತಿದ್ದಂತೆ ಪಕ್ಷಕ್ಕೆ ಸೇರಿದ ರೈತ ಸಂಘಗಳು ಮತ್ತು ಕಾರ್ಮಿಕ ಸಂಘಗಳ ಬಲವು ಹೆಚ್ಚಾಗತೊಡಗಿತು. ಚುನಾವಣಾ ಸಂದರ್ಭದಲ್ಲಿ ಮಾತ್ರ ಸಂಸದೀಯ ಪಕ್ಷಗಳಿಗಿಂತ ಭಿನ್ನವಾಗಿ, ಕಮ್ಯುನಿಸ್ಟ್ ಪಕ್ಷವು ಯಾವಾಗಲೂ ಸಕ್ರಿಯವಾಗಿ ಕೆಲಸ ಮಾಡುತ್ತಿತ್ತು. ಈ ಅವಧಿಯಲ್ಲಿ ಮಲಬಾರ್‌ನಲ್ಲಿ ಪಕ್ಷದ ಜನಪ್ರಿಯ ನಾಯಕನಾಗಿ ಎ.ಕೆ. ಗೋಪಾಲನ್ ಕಾಣಿಸಿಕೊಂಡರು. ಅವರು

ಸಾವಿರಾರು ಜನರನ್ನು ಪಕ್ಷದ ಧ್ವಜದಡಿಯಲ್ಲಿ ಒಟ್ಟುಗೂಡಿಸಿದರು. ತಿರುವಾಂಕೂರು ಮತ್ತು ಕೊಚ್ಚಿಯಲ್ಲಿ ಪಕ್ಷದ ನಾಯಕರ ಅವಿರತ ಪ್ರಯತ್ನದಿಂದಾಗಿ, ಆ ಪ್ರದೇಶಗಳಲ್ಲಿ ಪಕ್ಷಕ್ಕೆ ಅಪಾರವಾದ ಜನಬಲ ದೊರಕಿತು.

1953ರಲ್ಲಿ ಮಧುರೈನಲ್ಲಿ ಪಕ್ಷದ ಮೂರನೇ ಕಾಂಗ್ರೆಸ್ ನಡೆಯಿತು. ಜವಾಹರಲಾಲ್ ನೆಹರು ಅನುಸರಿಸಿದ ದೇಶೀಯ ಮತ್ತು ವಿದೇಶಿ ನೀತಿಗಳು ಭಾರತದ ಕಮ್ಯುನಿಸ್ಟ್ ಪಕ್ಷವನ್ನು ಗೊಂದಲದ ಸುಳಿಗೆ ಸಿಲುಕಿಸಿತು(2:p112). ಸೋವಿಯತ್ ಒಕ್ಕೂಟದೊಂದಿಗೆ ಭಾರತದ ಸಂಬಂಧಗಳಲ್ಲಿ, ಸ್ನೇಹ, ಸೌಹಾರ್ದತೆ ಮತ್ತು ಸಹಕಾರಕ್ಕೆ ನೆಹರೂ ಒತ್ತು ನೀಡಿದರು.* ದೇಶೀಯ ನೀತಿಯಲ್ಲಿ ಅವರು ಆವಡಿ ಅಧಿವೇಶನದಲ್ಲಿ ಎಡಪಕ್ಷಗಳ ಮೆಚ್ಚಿನ ಸಮಾಜವಾದವನ್ನು ಒಳಗೊಳಿಸಿಕೊಂಡರು.** ಬದಲಾಗುತ್ತಿರುವ ಕಾಂಗ್ರೆಸ್ ನೀತಿಗಳೊಂದಿಗೆ ಕಮ್ಯುನಿಸ್ಟ್ ಪಕ್ಷವು ಯಾವ ಮಾರ್ಗವನ್ನು ತೆಗೆದುಕೊಳ್ಳಬೇಕೆಂಬುದರ ಬಗ್ಗೆ ತೀವ್ರವಾದ ಅನಿಶ್ಚಿತತೆಗೆ ಒಳಗಾಯಿತು(12:V2p47-51). 1956ರಲ್ಲಿ ಪಾಲಕ್ಕಾಡ್‌ನಲ್ಲಿ ನಡೆದ, ನಾಲ್ಕನೇ ಪಕ್ಷದ ಕಾಂಗ್ರೆಸ್‌ನಲ್ಲಿ ಈ ವಿಷಯ ತೀವ್ರ ಚರ್ಚೆಗೆ ಗ್ರಾಸವಾಯಿತು. ಬಹುಪಾಲು ಪ್ರತಿನಿಧಿಗಳು ಕಾಂಗ್ರೆಸ್‌ನೊಂದಿಗಿನ ಸ್ನೇಹಪರ ನೀತಿಯನ್ನು ವಿರೋಧಿಸಿದರು(12:p58-62). ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ವಿರುದ್ಧ ತನ್ನ ನಿಲುವನ್ನು ಬಲಪಡಿಸಿಕೊಂಡ ಕೇರಳದ ಕಮ್ಯುನಿಸ್ಟ್ ಪಕ್ಷವು, ಮಲಬಾರ್ ಮತ್ತು ತಿರುವಾಂಕೂರ್ ಚುನಾವಣೆಗಳಲ್ಲಿ ಗಮನಾರ್ಹ ವಿಜಯಗಳನ್ನು ಗಳಿಸಿತು.

ಸಮಗ್ರ ತಿರು-ಕೊಚ್ಚಿ ರಾಜ್ಯ ವಿಧಾನಸಭೆಗೆ ನಡೆದ 1952ರ ಚುನಾವಣೆಯಲ್ಲಿ, ನಾಮಮಾತ್ರವಾಗಿ ಸ್ವತಂತ್ರರಾಗಿ ಸ್ಪರ್ಧಿಸಿದ್ದ ಸಿಪಿಐ., ಶೇಕಡ 18ರಷ್ಟು ವೋಟು ಪಡೆದುಕೊಂಡಿತು.*** ಎಡರಂಗದ ಪಾಲುದಾರರು ಸಹ ಶೇಕಡ 5ರಷ್ಟು ವೋಟು ಪಡೆದರು. 123 ವಿಧಾನಸಭಾ ಕ್ಷೇತ್ರಗಳಲ್ಲಿ 53-ಸ್ಥಳಗಳಲ್ಲಿ ಮಾತ್ರ ಸ್ಪರ್ಧೆಗಿಳಿದಿದ್ದ ಸಿ.ಪಿ.ಐ. 29 ಸ್ಥಾನಗಳಲ್ಲಿ ವಿಯಯಿಗಳಾದಾಗ, ಮೈತ್ರಿಪಕ್ಷಗಳಾದ ರೆವಲ್ಯೂಷನರಿ ಸೋಷಿಯಲಿಸ್ಟರು (ಆರ್‌ಎಸ್‌ಪಿ) ಕೇರಳ ಸೋಷಿಯಲಿಸ್ಟರು (ಕೆ.ಎಸ್.ಪಿ.) ಸ್ಪರ್ಧಿಸಿದ್ದ ಅವರ 21 ಕ್ಷೇತ್ರಗಳ ಪೈಕಿ 7 ಸ್ಥಾನಗಳಲ್ಲಿ ವಿಜಯಿಶಾಲಿಗಳಾದರು(10:p111).

---

* ಭಾರತದ ವಿದೇಶಾಂಗ ನೀತಿಯ ಮುಖ್ಯಶಿಲ್ಪಿ ಭಾರತದ ಮೊದಲ ಪ್ರಧಾನಿ. ಜವಾಹರಲಾಲ್ ನೆಹರೂ ಆಗಿದ್ದರು. ಭಾರತೀಯ ವಿದೇಶಾಂಗ ನೀತಿಯ ಮೂಲಭೂತ ಅಂಶಗಳೆಂದರೆ - ಆಲಿಪ್ತನೀತಿ, ವಸಾಹತುಶಾಹಿ ವಿರೋಧಿ. ಸಾಮ್ರಾಜ್ಯಶಾಹಿ ವಿರೋಧಿ ಮತ್ತು ವರ್ಣಭೇದ ನೀತಿ ವಿರೋಧಿ. ಪಂಚಶೀಲತತ್ವಗಳು.

** 78. ಡಿಸೆಂಬರ್ 1957ರಲ್ಲಿ ತಮಿಳುನಾಡಿನ ಅವಡಿಯಲ್ಲಿ. ಇಂಡಿಯನ್ ನ್ಯಾಷನಲ್ ಕಾಂಗ್ರೆಸಿನ ಆವಡಿಯ ಐತಿಹಾಸಿಕ ಸಮ್ಮೇಳನದಲ್ಲಿ ನಿರ್ಣಯ ಅಂಗೀಕರಿಸಿದ್ದನ್ನು 'ಆವಡಿ ಸಮಾಜವಾದ' ಎಂದು ಕರೆಯಲಾಗುತ್ತದೆ. ವ್ಯಾಪಕವಾಗಿ ಚರ್ಚೆಯಾದ ಈ ವಿಷಯ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅನ್ನು ಮುನ್ನಡೆಸುವ ಗುರಿಯಾಗಿ ಭಾರತದಲ್ಲಿ ಸಮಾಜವಾದಿ ಸಮಾಜವನ್ನು ನಿರ್ಮಿಸುವುದಾಗಿತ್ತು.

*** ಕಮ್ಯುನಿಸ್ಟ್ ಪಕ್ಷವನ್ನು 1948 ರಲ್ಲಿ ನಿಷೇಧಿಸಲಾಯಿತು. 1952 ರ ಚುನಾವಣೆಯ ನಂತರ ಕಮ್ಯುನಿಸ್ಟ್ ಪಕ್ಷದ ಮೇಲಿನ ನಿಷೇಧವನ್ನು ಕೇಂದ್ರ ಸರ್ಕಾರ ತೆಗೆದುಹಾಕಿತು.

ಮಲಬಾರ್‌ನಲ್ಲಿ ಸಿಪಿಐ, ಕಿಸಾನ್ ಮಜ್ದೂರ್ ಪ್ರಜಾ ಪಾರ್ಟಿಯೊಂದಿಗೆ ಮೈತ್ರಿ ಮಾಡಿಕೊಂಡಿತು. ಕೆಎಂಪಿಪಿ–ಸಿಪಿಐ ಮೈತ್ರಿಕೂಟ 32 ಸ್ಥಾನಗಳಲ್ಲಿ 13 ಸ್ಥಾನಗಳನ್ನು ಗೆದ್ದುಕೊಂಡಿತು*. ಹೀಗೆ 1952ರ ಚುನಾವಣೆಯಲ್ಲಿ, ಕಮ್ಯುನಿಸ್ಟ್ ಪಕ್ಷವು ಮಲಬಾರ್ ಮತ್ತು ತಿರುವಾಂಕೂರಿನಲ್ಲಿ ಗಮನಾರ್ಹ ವಿಜಯಗಳನ್ನು ಗಳಿಸಿತು.

1954ರಲ್ಲಿ ಮತ್ತೆ ತಿರು–ಕೊಚ್ಚಿ ರಾಜ್ಯ ವಿಧಾನಸಭೆಗೂ ಮಲಬಾರ್ ಜಿಲ್ಲಾ ಮಂಡಳಿಗೂ ಚುನಾವಣೆ ನಡೆದಿದ್ದವು. ತಿರುವಾಂಕೂರಿನಲ್ಲಿ ಪಕ್ಷವು ಪಿಎಸ್‌ಪಿಯೊಂದಿಗೆ ಚುನಾವಣಾ ಒಪ್ಪಂದ ಮಾಡಿಕೊಂಡಿತು. ಮೈತ್ರಿಕೂಟ ಬಹುಮತ ಗಳಿಸಿದ್ದರೂ ಪಿ.ಎಸ್.ಪಿಯ ನಂಬಿಕೆದ್ರೋಹದಿಂದ ಪಕ್ಷಕ್ಕೆ ಸರ್ಕಾರ ರಚಿಸಲು ಸಾಧ್ಯವಾಗಲಿಲ್ಲ(28:p64). ಕಮ್ಯುನಿಸ್ಟ್ ಪಕ್ಷವು ಮಲಬಾರಿನಲ್ಲಿ ಪ್ರಬಲ ಪಕ್ಷವಾಗಿ ಹೊರಹೊಮ್ಮಿತು. ಒಟ್ಟು ಮತದಾನವಾದ ವೋಟುಗಳ ಪೈಕಿ 40% ಮತಗಳನ್ನು ಗಳಿಸಿದ್ದಲ್ಲದೆ, 50 ಸ್ಥಾನಗಳನ್ನೂ ತನ್ನದಾಗಿಸಿಕೊಂಡಿತು(28:;12:p38).

ಚುನಾವಣಾ ಗೆಲುವಿನ ಮೂಲಕ ವಿಶ್ವಾಸ ಗಳಿಸಿದ ಸಿ.ಪಿ.ಐ.ಗೆ ಭಾಷಾವಾರು ರಾಜ್ಯಗಳ ರಚನೆಗಾಗಿ ದೇಶದ ವಿವಿಧ ಭಾಗಗಳಲ್ಲಿ ಹುಟ್ಟಿಕೊಂಡ ಜನಪರ ಹೋರಾಟಗಳನ್ನು ನೇರವಾಗಿ ನೋಡದೇ ಇರಲು ಸಾಧ್ಯವಾಗಲಿಲ್ಲ. ಈ ಹೋರಾಟಗಳಿಗೆ ಬೆಂಬಲ ವ್ಯಕ್ತಪಡಿಸಿದ ಪಕ್ಷವು, ಭಾಷಾವಾರು ರಾಜ್ಯಗಳಿಗಾಗಿ ನಡೆಸುವ ಹೋರಾಟವನ್ನು ನಿಜವಾದ ಭಾರತೀಯ ಒಕ್ಕೂಟದ ರಚನೆಯ ಹೋರಾಟವಾಗಿ ಪರಿವರ್ತಿಸಲು ಪಕ್ಷವು ನಿರ್ಧರಿಸಿತು(12:p87-88). ಸಿಪಿಐ, ಆರ್‌ಎಸ್‌ಪಿ, ಕೆಎಸ್‌ಪಿ. ಮುಂತಾದ ಕೇರಳದ ಘಟಕಗಳು, ಐಕ್ಯಕೇರಳಕ್ಕಾಗಿ ಒಂದುಗೂಡಲು ಕೇರಳಿಗರನ್ನು ಉದ್ದೀಪನಗೊಳಿಸಿದವು. ಐಕ್ಯಕೇರಳವೆನ್ನುವುದು ಮಲಯಾಳಿಗಳ ಜನ್ಮಸಿದ್ಧ ಹಕ್ಕು ಎಂದು ಘೋಷಿಸಲಾಯಿತು(37:p93). ಐಕ್ಯಕೇರಳ ಸಮಾವೇಶಗಳು ಕೇರಳದ ಒಳಗೂ ಹೊರಗೂ ನಡೆದವು. ಅವುಗಳು, ಭಾಷಾವಾರು ಆಧಾರದಲ್ಲಿ ಐಕ್ಯಕೇರಳ ಉದಯವಾಗಲು ಜನರಲ್ಲಿದ್ದ ಆಕಾಂಕ್ಷೆಗಳ ಸ್ಪಷ್ಟವಾದ ಅಭಿವ್ಯಕ್ತಿಯಾಗಿದ್ದವು. ಕಾರ್ಮಿಕ ಸಂಘಗಳು, ಮತ್ತು ರೈತ ಸಂಘಟನೆಗಳು ಸೇರಿದಂಥ ವರ್ಗ ಸಂಘಟನೆಗಳು, ಐಕ್ಯಕೇರಳದ ಸಂದೇಶವನ್ನು ಕೆಳಹಂತಗಳಿಗೂ ಹರಡಲು ಶ್ರಮಿಸಿದವು(38:p138-145). ಕಮ್ಯುನಿಸ್ಟರು ಅಂಗೀಕರಿಸಿದ ಐಕ್ಯಕೇರಳ ಚಳುವಳಿಯು, 1953ರ ಅಂತ್ಯದ ವೇಳೆಗೆ, ಪ್ರಬಲವಾದ ಜನಪ್ರಿಯ ಚಳುವಳಿಯಾಗಿ ವಿಕಸನಗೊಂಡಿತು(37:p93;12:p38). ಐಕ್ಯಕೇರಳವೆನ್ನುವ ಕನಸು ನವೆಂಬರ್ 1, 1956ರಂದು ಸಾಕ್ಷಾತ್ಕಾರಗೊಂಡಿತು. ಕೇರಳ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ಫೆಬ್ರವರಿ–ಮಾರ್ಚ್ 1957ರಲ್ಲಿ ನಡೆಯಿತು.

●

* 1952ರ ಚುನಾವಣೆಯಲ್ಲಿ, ಸಿಪಿಐ ಮಲಬಾರ್‌ನಲ್ಲಿ 'ಐಕ್ಯರಂಗ'ದ ತಂತ್ರವನ್ನು ಜಾರಿಗೆ ತಂದಿತು. ಇದು ಪಕ್ಷದ ಜನಪ್ರಿಯ ನೆಲೆಯನ್ನು ವಿಸ್ತರಿಸಲು ಸಹಾಯ ಮಾಡಿತು.

# 3

# ಚುನಾವಣಾ ರಾಜಕೀಯ ಮತ್ತು 1957ರ ಸಚಿವ ಸಂಪುಟ ರಚನೆ

*(ಈ ಅಧ್ಯಾಯದ 1957ರ ಕೇರಳದ ಚುನಾವಣಾ ರಾಜಕೀಯದ ಬಗ್ಗೆ ವಿಶ್ಲೇಷಣೆ ನಡೆಸುತ್ತದೆ. ಚುನಾವಣಾ ಮೈತ್ರಿಗಳು, ಪ್ರಚಾರ, ಚುನಾವಣಾ ಪ್ರಕ್ರಿಯೆ ಮತ್ತು ಚುನಾವಣಾ ಫಲಿತಾಂಶಗಳನ್ನು ಮುಖ್ಯವಾಗಿ ಪ್ರಸ್ತುತಪಡಿಸುತ್ತದೆ. ಸಿ.ಪಿ.ಐ.ಯ ಯಶಸ್ಸಿನ ಕಾರಣಗಳನ್ನು ವಿಶ್ಲೇಷಣೆ ನಡೆಸುವುದರೊಂದಿಗೆ, ಕಮ್ಯುನಿಸ್ಟ್ ಪಕ್ಷದ ನಾಯಕತ್ವವು ಸರ್ಕಾರದ ಬಗ್ಗೆ ರಾಜ್ಯಪಾಲರ ನಕಾರಾತ್ಮಕ ಧೋರಣೆಯನ್ನು ವ್ಯಕ್ತಪಡಿಸುತ್ತದೆ.)*

## ಕಮ್ಯುನಿಸ್ಟ್ ಪಕ್ಷದ ತ್ರಿಶೂರ್ ನಿರ್ಣಯ

ಮಲಯಾಳಿಗಳಿಂದ ಅಖಂಡ ಅಥವಾ ಐಕ್ಯಕೇರಳದ ಉದಯ ಎನ್ನುವುದು ಮಲಯಾಳಿಗಳ ನ್ಯಾಯಯುತವಾದ ಮತ್ತು ಸಮಂಜಸವಾದ ಆಕಾಂಕ್ಷೆಗಳ ಈಡೇರಿಕೆಯಾಗಿತ್ತು.* ಕಮ್ಯುನಿಸ್ಟ್ ಪಕ್ಷದ ಕೇರಳ ಘಟಕದ ಪ್ರಾಂತೀಯ ಸಮ್ಮೇಳನವು ತ್ರಿಶೂರ್‌ನಲ್ಲಿ 1956, ಜೂನ್ 22ರಿಂದ 24ರವರೆಗೆ ನಡೆಯಿತು. ಇದು ಕೇರಳದಲ್ಲಿ ರಾಷ್ಟ್ರಪತಿ ಆಳ್ವಿಕೆಯ ಆರಂಭಕ್ಕಿಂತ ಕೆಲವೇ ದಿನಗಳ ಹಿಂದೆ ನಡೆದ ಸಮ್ಮೇಳನವಾಗಿತ್ತು. 'ಪ್ರಜಾಸತ್ತಾತ್ಮಕ ಮತ್ತು ಸಮೃದ್ಧವಾದ ಒಂದು ಕೇರಳವನ್ನು ನಿರ್ಮಿಸಲು ಅಗತ್ಯದ ಕ್ರಮಗಳು'(40:V3No43p4-13) ಎನ್ನುವ ಶೀರ್ಷಿಕೆಯಡಿಯ ಈ ನಿರ್ಣಯ ಈ ಸಭೆಯಲ್ಲಿ ಅಂಗೀಕರಿಸಲಾಯಿತು. ಐಕ್ಯಕೇರಳಕ್ಕಾಗಿ ನಡೆದ ಚಳವಳಿಯಲ್ಲಿ ಕಮ್ಯುನಿಸ್ಟ್ ಪಕ್ಷ ಮತ್ತು ಜನರು ವಹಿಸಿದ ಪಾತ್ರದ ಬಗ್ಗೆ ನಿರ್ಣಯದ ಆರಂಭದಲ್ಲಿ ಮೌಲ್ಯಮಾಪನ ಮಾಡಲಾಗಿತ್ತು. ನಿಶ್ಚಯಿಸಲ್ಪಟ್ಟ ಚಟುವಟಿಕೆಗಳ ಒಂದು ಭಾಗ ಮಾತ್ರ ಐಕ್ಯಕೇರಳದ ಉದಯ ಎನ್ನುವುದೆಂದೂ ಕೇರಳವನ್ನು ಎಲ್ಲಾ ಮಲಯಾಳಿಗಳಿಗೆ ಯೋಗ್ಯವಾದ

* ಕೇರಳದ ರಾಜ್ಯ ರಚನೆಯು ಭಾಷಾವಾರು ರಾಜ್ಯ ಪುನರ್ವಿಂಗಡನೆಯ ಭಾಗವಾಗಿ ನಡೆದಿತ್ತು. – (ಮಲಯಾಳಂ ಭಾಷೆಯನ್ನು ಮಾತನಾಡುವ ಜನರಿಗಾಗಿ ಒಂದು ರಾಜ್ಯ) ಭಾಷಾವಾರು ಆಧಾರದ ಮೇಲೆ ನಾಲ್ಕು ರಾಜ್ಯಗಳ ಉಗಮಕ್ಕೆ ಆ ದಿನ ಸಾಕ್ಷಿಯಾಯಿತು. – ಆಂಧ್ರಪ್ರದೇಶ, ಮೈಸೂರು(ಕರ್ನಾಟಕ), ಕೇರಳ ಮತ್ತು ತಮಿಳುನಾಡು. ದಕ್ಷಿಣ ಭಾರತದ ರಾಜಪ್ರಭುತ್ವದ ರಾಜ್ಯಗಳು ಮತ್ತು ಬ್ರಿಟಿಷ್ ಭಾರತದ ಪ್ರಾಂತ್ಯಗಳ ನಡುವಿನ ಗಡಿಗಳನ್ನು ಇನ್ನಿಲ್ಲದಂತೆ ಮಾಡುವುದರ ಪರಿಣಾಮವಾಗಿತ್ತು ಇದು.

ಪ್ರಜಾಪ್ರಭುತ್ವ ಮತ್ತು ಸಮೃದ್ಧ ರಾಜ್ಯವನ್ನಾಗಿ ಪರಿವರ್ತಿಸುವುದೇ ಕಮ್ಯುನಿಸ್ಟ್ ಪಕ್ಷದ ಪ್ರಮುಖ ಜವಾಬ್ದಾರಿ ಎಂದೂ ನಿರ್ಣಯವು ಜನರಿಗೆ ಮನವರಿಕೆ ಮಾಡಿಕೊಟ್ಟಿತು. ಕಾಂಗ್ರೆಸ್ ಪಕ್ಷವನ್ನು ಕಟುವಾಗಿ ಟೀಕಿಸಿದ ನಿರ್ಣಯದ ಎರಡನೇ ಭಾಗವು, ಕೇರಳದ ಕಾಂಗ್ರೆಸ್‌ನ ಪ್ರಬಲ ವಿಭಾಗದ, ಭಾಷಾ ವಿರೋಧಿ ನೀತಿಯನ್ನು ಜನರಿಗೆ ತೆರೆದು ತೋರಿಸಿಕೊಟ್ಟಿತು.* ಕೇರಳದಲ್ಲಿ ಹೇರಳವಾಗಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಕಾಂಗ್ರೆಸ್ ಪಕ್ಷದ ದುರಾಡಳಿತದಿಂದಾಗಿ ಜನರಿಂದ ಅನುಭವಿಸಲು ಸಾಧ್ಯವಾಗುತ್ತಿಲ್ಲ ಎಂದು ನಿರ್ಣಯವು ಒತ್ತಿಹೇಳಿತು. ಸಂಘಟಿತವಾದ ಒಂದು ರಾಜಕೀಯ ಹೋರಾಟವನ್ನು ಸಜ್ಜುಗೊಳಿಸುವುದರ ಮೂಲಕ ಕೈಗಾರಿಕೀಕರಣಗೊಳಿಸಲು ಮತ್ತು ಸಮಾಜವಾದಕ್ಕೆ ಅಡಿಪಾಯ ಹಾಕಲು ಜನರಿಂದ ಸಾಧ್ಯವಾಗುತ್ತದೆ ಎಂದು ನಿರ್ಣಯವು ಸೂಚಿಸುತ್ತದೆ(40:V3No43p4-13).

ಮೇಲಿನ ಕನಸು ನನಸಾಗಲು ಪರಿಣಾಮಕಾರಿಯಾದ ಯೋಜನೆಯನ್ನು ರೂಪಿಸಲಾಯಿತು. ರಾಜ್ಯದಲ್ಲಿ ರಾಜಕೀಯ ಅಸ್ಥಿರತೆಯನ್ನು ಕೊನೆಗೊಳಿಸುವುದಕ್ಕಾಗಿ ವಿಧಾನಸಭೆಯನ್ನು ಕರೆಯಬೇಕು ಎಂದು ಆಗ್ರಹಿಸಲಾಯಿತು. ಎಡಪಕ್ಷಗಳೂ ಪ್ರಜಾಸತ್ತಾತ್ಮಕ–ಪ್ರಗತಿಪರ ಧೋರಣೆ ಹೊಂದಿರುವ ವ್ಯಕ್ತಿಗಳೂ ಕಾಂಗ್ರೆಸ್‌ನ ಪ್ರತಿಗಾಮಿತನವೆಂದು ನಿರ್ಣಯಿಸಲ್ಪಟ್ಟ ನೀತಿಗಳನ್ನು ವಿರೋಧಿಸುವ ಕಾಂಗ್ರೆಸ್ಸಿಗರೂ ಸೇರಿದಂಥ ಚುನಾವಣಾ ಮೈತ್ರಿಕೂಟ ರಚನೆಗೆ ಜನಬೆಂಬಲ ನೀಡಬೇಕೆಂದು ಕರೆ ನೀಡುತ್ತಾ, ಕನಿಷ್ಠ ಕಾರ್ಯಕ್ರಮದ ಆಧಾರದ ಮೇಲೆ ಸರ್ವಪಕ್ಷ ಸರ್ಕಾರ ರಚನೆಯ ಯೋಜನೆಯೊಂದನ್ನು ರೂಪಿಸಲಾಯಿತು(40:V3No47p12). ರಾಷ್ಟ್ರಪತಿ ಆಡಳಿತದ ಭಾಗವಾಗಿ ನಡೆಯುತ್ತಿದ್ದ ಅನ್ಯಾಯ, ಭ್ರಷ್ಟಾಚಾರ ಮತ್ತು ಪ್ರಜಾಪ್ರಭುತ್ವ ವಿರೋಧಿ ಚಟುವಟಿಕೆಗಳ ವಿರುದ್ಧ ಅಹಿಂಸಾತ್ಮಕ ಹೋರಾಟವನ್ನು ನಡೆಸಲು ನಿರ್ಣಯವು ಜನರಿಗೆ ಕರೆ ನೀಡಿತು. ಈ ಗುರಿಯನ್ನು ಸಾಧಿಸಲು, ಜನರು ಸಂಘಟಿತರಾಗಿ ಪ್ರತಿಭಟನೆಯ ಹಾದಿಯನ್ನು ಅನುಸರಿಸಬೇಕು. ಅಂತಹ ಪ್ರಯತ್ನದ ಮೂಲಕ ಮಾತ್ರವೇ ಪ್ರಜಾಪ್ರಭುತ್ವ ವಿರೋಧಿಯಾದ ರಾಷ್ಟ್ರಪತಿ ಆಡಳಿತದ ಬದಲಿಗೆ, ಶಾಸಕಾಂಗಕ್ಕೆ ಹೊಣೆಗಾರಿಕೆಯಿರುವ ಒಂದು ಪ್ರಜಾಪ್ರಭುತ್ವ ಸರ್ಕಾರವನ್ನು ಪ್ರತಿಷ್ಠಾಪಿಸಲು ಸಾಧ್ಯವಾಗುವುದು(37:p97). ಬೆಲೆ ಏರಿಕೆಯನ್ನು ತಡೆಗಟ್ಟಲು ಮತ್ತು ಕಾರ್ಮಿಕರ ವೇತನ ಹೆಚ್ಚಿಸುವಿಕೆಯನ್ನು ಖಾತ್ರಿಗೊಳಿಸಲು, ಕೃಷಿ ಉತ್ಪನ್ನಗಳಿಗೆ ನ್ಯಾಯಯುತ ಬೆಲೆ ಪಡೆಯಲು, ಒಕ್ಕಲೆಬ್ಬಿಸುವುದನ್ನು ತಡೆಯಲು ಮತ್ತು ಜನರ ಸಮಾನವಾದ ಇತರೆ ಅಗತ್ಯಗಳನ್ನು ಪೂರೈಸಲು, ಜನರನ್ನು ಪ್ರೇರೇಪಿಸುವ ಕಾರ್ಯವನ್ನೂ ಕೈಗೊಳ್ಳಲಾಯಿತು(40:V3No43&47; p4-13).

---

* ಎಲ್ಲಾ ಕಾಂಗ್ರೆಸ್ ನಾಯಕರು ಸಂಯುಕ್ತ ಅಥವಾ ಐಕ್ಯಕೇರಳ ಚಳವಳಿಯ ಬಗ್ಗೆ ಒಂದೇ ರೀತಿಯ ದೃಷ್ಟಿಕೋನವನ್ನು ಹೊಂದಿರಲಿಲ್ಲ. ಕೆಲವರು ಅಖಂಡ ಕೇರಳದ ಪರ ನಿಂತರು. ಕೆಲವರು ವಿಶಾಲ ಕೇರಳದ ಬಗ್ಗೆ ಒಲವು ವ್ಯಕ್ತಪಡಿಸಿದರು. ಮತ್ತೆ ಕೆಲವರು ಭಾಷೆಯ ಆಧಾರದ ಮೇಲೆ ಕೇರಳದ ರಚನೆಗಾಗಿ ವಾದಿಸಿದರು.

ತಿರುವಾಂಕೂರು-ಕೊಚ್ಚಿ ಸಾರ್ವಜನಿಕ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷ, ಪಿಎಸ್‌ಪಿ ಮತ್ತು ಇತರ ಎಡಪಕ್ಷಗಳು ರಚಿಸಿದ ಯುನೈಟೆಡ್ ಫ್ರಂಟ್ (ಐಕ್ಯರಂಗ) ಜನರಲ್ಲಿ ಭಾರಿ ಉತ್ಸಾಹವನ್ನು ಉಂಟುಮಾಡಿತು. ಆದರೆ ನಂತರ ಪಿ.ಎಸ್.ಪಿ.ಯು ಕಮ್ಯುನಿಸ್ಟ್ ವಿರೋಧಿ ನಿಲುವು ತಳೆದಿದ್ದರ ಕಾರಣ ಜನಪರ ಹೋರಾಟದ ಶಕ್ತಿ ಸೋರಿಕೆಯಾಗಿ ಬಿಟ್ಟಿತು, ಎಂದು ನಿರ್ಣಯವು ಮೌಲ್ಯಮಾಪನ ಮಾಡಿತು. ಕಾಂಗ್ರೆಸ್‌ನದು ಪ್ರಜಾಪ್ರಭುತ್ವ ವಿರೋಧಿ ನೀತಿಗಳೆಂದೂ ಅವುಗಳನ್ನು ವಿರೋಧಿಸುವುದರಲ್ಲಿ ಪಿಎಸ್‌ಪಿ ಹಿಂಜರಿಯುತ್ತಿದೆ ಎಂದೂ ನಿರ್ಣಯವು ಎತ್ತಿ ತೋರಿಸಿತು. ಈ ಹಿಂದೆ ತಳೆದ ತಪ್ಪು ನಿಲುವಿನಿಂದ ಪಾಠ ಕಲಿತು ಪ್ರಜಾಸತ್ತಾತ್ಮಕ ಸರ್ಕಾರ ರಚಿಸಲು ಎಡಪಕ್ಷಗಳ ಐಕ್ಯರಂಗದಲ್ಲಿ, ಸಿಪಿಐನೊಂದಿಗೆ, ಪಿಎಸ್‌ಪಿ ಕೂಡ ಒಟ್ಟಾಗಿ ಕೆಲಸ ಮಾಡುವಂತೆ ಒತ್ತಾಯಿಸಿದ್ದಲ್ಲದೆ, ಒಂದು ಜನರ ಪರವಾದ ಸರ್ಕಾರವನ್ನು ರಚಿಸುವಲ್ಲಿ ಸಹಕರಿಸಲು ಆ ಪಕ್ಷಕ್ಕೆ ಕರೆ ಕೊಡುತ್ತಲೇ ಇತ್ತು(40:22.07.56-19.08.56).

## ಪಿ.ಎಸ್.ಪಿ.ಯ ನಿಲುವು

ಪಿ.ಎಸ್.ಪಿ.ಯ ರಾಷ್ಟ್ರೀಯ ಸಮ್ಮೇಳನ ಡಿಸೆಂಬರ್ 1955ರಲ್ಲಿ ಗಯಾದಲ್ಲಿ ನಡೆಯಿತು. ಈ ಸಮ್ಮೇಳನದ ಹಿನ್ನೆಲೆಯ ಬಗ್ಗೆ ಒತ್ತು ನೀಡಿ ಹೇಳಬೇಕಾದ ಸಂಗತಿಗಳಿವೆ. ಪಿಎಸ್‌ಪಿಯ ಎರಡು ಗುಂಪುಗಳು ಇತರ ಪಕ್ಷಗಳೊಂದಿಗಿನ ತಮ್ಮ ಸಂಬಂಧಗಳ ಬಗ್ಗೆ ವಾದವಿವಾದಗಳನ್ನು ಮಾಡಿಕೊಳ್ಳುತ್ತಲಿದ್ದವು. ಅಶೋಕ್ ಮೆಹ್ತಾ ಅವರದ್ದು ಒಂದು ಗುಂಪಾದರೆ, ಮತ್ತೊಂದು ರಾಮಮನೋಹರ ಲೋಹಿಯಾ ನೇತೃತ್ವ ವಹಿಸಿಕೊಂಡಿದ್ದ ಗುಂಪು. ಅಶೋಕ್ ಮೆಹ್ತಾ ನೇತೃತ್ವದ ಗುಂಪು ಕಾಂಗ್ರೆಸ್ ಸಹಯೋಗವನ್ನು ಬೆಂಬಲಿಸುವ ಆಶಯ ವ್ಯಕ್ತಪಡಿಸಿದಾಗ, ಡಾ. ರಾಮಮನೋಹರ ಲೋಹಿಯಾ ಅದಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದರು(2:p118). ಪಿ.ಎಸ್.ಪಿ.ಯಲ್ಲಿ ಅಸ್ತಿತ್ವದಲ್ಲಿದ್ದ ಆಂತರಿಕ ಸಂಘರ್ಷದಿಂದಾಗಿ ಗಯಾ ಸಮ್ಮೇಳನದಲ್ಲಿ ಆ ಪಕ್ಷವು, ಕಾಂಗ್ರೆಸ್ ಪಕ್ಷ, ಕಮ್ಯುನಿಸ್ಟ್ ಪಕ್ಷ ಅಥವಾ ಯಾವುದೇ ಇತರ ರಾಜಕೀಯ ಸಂಘಟನೆಗಳೊಂದಿಗೆ ಚುನಾವಣಾ ಮೈತ್ರಿಯನ್ನು ರಚಿಸಿಕೊಳ್ಳುವುದರ ಬಗ್ಗೆ ಯಾವುದೇ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಕೇರಳದ ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಪಿಎಸ್‌ಪಿ.ಯ ನಿಲುವಿನ ಬಗ್ಗೆ, ಗಯಾ ಸಮ್ಮೇಳನದ ನಿರ್ಧಾರದ ಬಗ್ಗೆ, ಹಾನಿಕರವಾದ ದುಷ್ಪರಿಣಾಮಗಳ ಬಗ್ಗೆ ತಿಳಿದುಕೊಂಡ ಇಎಂಎಸ್ ಒಂದು ಲೇಖನವನ್ನು ಬರೆದರು. ಸಿಪಿಐ ಮತ್ತು ಪಿಎಸ್‌ಪಿ. ನಡುವೆ ಇರುವ ಸಮಾನ ಅಭಿಪ್ರಾಯ ಮತ್ತು ಭಿನ್ನಾಭಿಪ್ರಾಯಗಳ ಬಗ್ಗೆ ಸ್ಪಷ್ಟನೆ ಕೊಡುವಂತಿತ್ತು ಆ ಲೇಖನ. ಮಹತ್ತಾದ ವಿಶಾಲ ಉದ್ದೇಶವನ್ನು ಮುಂದಿಟ್ಟುಕೊಂಡು, ಭಿನ್ನಾಭಿಪ್ರಾಯಗಳನ್ನು ಪರಿಗಣಿಸದಿರುವಂತೆಯೂ ಒಂದೇ ರೀತಿಯ ದೃಷ್ಟಿಕೋನಗಳ ಆಧಾರದ ಮೇಲೆ ಐಕ್ಯರಂಗವನ್ನು ರೂಪಿಸುವುದಕ್ಕಾಗಿಯೂ ಇಎಂಎಸ್‌ರವರು ಪಿಎಸ್‌ಪಿ ನಾಯಕತ್ವವನ್ನು ಕೋರಿದರು(41:15.01.56p3-12;42:Vol16).

## ಸಿಪಿಐ. – ಪಿ.ಎಸ್.ಪಿ. ನಡುವಿನ ಮೈತ್ರಿ ಪ್ರಯತ್ನಗಳು

1952ರ ಸಾರ್ವತ್ರಿಕ ಚುನಾವಣೆಗಳು, 1954ರ ಉಪಚುನಾವಣೆಗಳು, 1954ರಲ್ಲಿ ಮಲಬಾರ್ ಡಿಸ್ಟ್ರಿಕ್ಟ್ ಬೋರ್ಡ್‌ಗೆ ನಡೆದ ಚುನಾವಣೆಗಳು ಮತ್ತು ತಿರು-ಕೊಚ್ಚಿಯ ಪುರಸಭೆಯ ಚುನಾವಣೆಗಳು, ಇವುಗಳಲ್ಲಿ ಕಾಂಗ್ರೆಸ್‌ನ ಜನಬೆಂಬಲ ಕುಸಿಯುತ್ತಿರುವುದು ಬಹಿರಂಗಗೊಂಡಿತು(37:p97). ಈ ಮಧ್ಯೆ, ಸಿಪಿಐನ ಪ್ರಾಂತೀಯ ಸಮಿತಿ ಸಭೆ, 1956 ಅಕ್ಟೋಬರ್ 6ರಿಂದ 9ರವರೆಗೆ ಎರ್ನಾಕುಲಂನಲ್ಲಿ ನಡೆಯಿತು. ಇ.ಎಂ.ಎಸ್ ಅವರ ಲೇಖನದಿಂದ ಸ್ಫೂರ್ತಿ ಪಡೆದ ಸಿಪಿಐ ನಾಯಕತ್ವವು ರಾಜ್ಯದ ಜನರ ವಿಶಾಲವಾದ ಆಸಕ್ತಿಗೆ ಪ್ರಮುಖ್ಯತೆ ನೀಡಬೇಕಾಗುವುದರ ನಿಲುವನ್ನು ಸ್ವೀಕರಿಸುವುದಕ್ಕಾಗಿಯೂ ಚುನಾವಣಾ ನಿಲುವನ್ನು ಪುನಃಪರಿಶೀಲನೆ ನಡೆಸುವುದರ ಬಗ್ಗೆಯೂ ಪಿಎಸ್‌ಪಿಯಲ್ಲಿ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಬೆಂಗಳೂರಿನಲ್ಲಿ ನಡೆದ ತನ್ನ ಮೂರನೇ ರಾಷ್ಟ್ರೀಯ ಸಮ್ಮೇಳನದಲ್ಲಿ ಚುನಾವಣಾ ಮೈತ್ರಿಯಲ್ಲಿ ರಾಜಿ ಮಾಡಿಕೊಳ್ಳುವ ಈ ಅಪೇಕ್ಷೆಯ ಬಗ್ಗೆ ಪಿಎಸ್‌ಪಿ ಅನುಕೂಲಕರವಾಗಿ ಪ್ರತಿಕ್ರಿಯಿಸಿ, ಅದಕ್ಕೆ ಸಿದ್ಧವಿರುವುದಾಗಿ ತಿಳಿಸಿತು(40:21.10.56). ಪಕ್ಷಗಳ ನಡುವಿನ ಪರಸ್ಪರ ಸ್ಪರ್ಧೆಯು ಪ್ರಜಾಪ್ರಭುತ್ವದ ನಿರೀಕ್ಷೆಯನ್ನು ದುರ್ಬಲಗೊಳಿಸುತ್ತದೆ ಎಂದು ಪಿ.ಎಸ್.ಪಿ. ಅರಿತುಕೊಂಡಿದ್ದಲ್ಲದೆ, ಸೀಮಿತ ಚುನಾವಣಾ ಒಪ್ಪಂದಕ್ಕೆ ಪ್ರವೇಶಿಸಲು ರಾಜ್ಯ ಘಟಕಕ್ಕೆ ಅನುಮೋದನೆ ನೀಡಿತು. ಇದು ಸಿಪಿಐ ಮತ್ತು ಪಿಎಸ್‌ಪಿ ನಡುವೆ ಸ್ಪರ್ಧಿಸಬೇಕಾದ ಸ್ಥಾನಗಳ ಬಗ್ಗೆ ಸುದೀರ್ಘ ಸಮಾಲೋಚನೆಗೆ ಕಾರಣವಾಯಿತು. ಚುನಾವಣಾ ಗೆಲುವನ್ನು ಖಾತ್ರಿಪಡಿಸಿಕೊಳ್ಳುವುದಕ್ಕಿಂತಲೂ ಹೆಚ್ಚಾಗಿ, ಒಪ್ಪಂದದ ಪ್ರಯೋಜನವನ್ನು ಪಡೆಯುವುದರ ಬಗ್ಗೆ ಪಿಎಸ್‌ಪಿ ಒತ್ತು ನೀಡಿತು. ಮಲಬಾರ್‌ನ ಒಟ್ಟು 49 ಸ್ಥಾನಗಳಲ್ಲಿ 20 ಸ್ಥಾನಗಳನ್ನು ಪಿಎಸ್‌ಪಿಗಾಗಿ ಮೀಸಲಿಡಲು ಅಪೇಕ್ಷಿಸಿತು. ಮಲಬಾರ್ ಡಿಸ್ಟ್ರಿಕ್ಟ್ ಬೋರ್ಡ್ ಚುನಾವಣೆಗಳಲ್ಲಿ (1954) 38.50% ಮತಗಳನ್ನು ಪಡೆದು ಯಶಸ್ವಿಯಾಗಿದ್ದ ಸಿಪಿಐ, ಪಿಎಸ್‌ಪಿಗೆ 13 ಸ್ಥಾನಗಳನ್ನು ಬಿಟ್ಟುಕೊಡಲು ಸಿದ್ದವಾಯಿತು. ತಿರು-ಕೊಚ್ಚಿ ಪ್ರದೇಶದಲ್ಲಿ 77 ಸ್ಥಾನಗಳ ಪೈಕಿ, 41 ಸ್ಥಾನಗಳಿಗೆ ಪಿಎಸ್‌ಪಿ ಬೇಡಿಕೆ ಇಟ್ಟಿತು(40:20.01.57p9-12;39:p93).

ಪಿಎಸ್ಪಿಯ ಹಿರಿಯ ನಾಯಕರಾದ ಎನ್. ಶ್ರೀಕಂಠನ್ ನಾಯರ್‌ರವರು ಜನವರಿ 5, 1957ರಂದು ಕಲ್ಕತ್ತಾದಲ್ಲಿ ಪಿಎಸ್‌ಪಿಯ ಪ್ರಣಾಳಿಕೆಯನ್ನು ಬಿಡುಗಡೆ ಮಾಡುವ ಸಮಯದಲ್ಲಿ, ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿ ಐಕ್ಯರಂಗವು ಬಹುಮತ ಗಳಿಸಲಿರುವ ಸಾಧ್ಯತೆಯ ಬಗ್ಗೆ ಸೂಚಿಸಿದರು(28:p66). ಕೇರಳದಲ್ಲಿ ಸಿಪಿಐ ಮತ್ತು ಆರ್‌ಎಸ್‌ಪಿ ನಡುವಿನ ಧೋರಣೆಗಳ ಬಗ್ಗೆಯೂ ಅವರು ಉಲ್ಲೇಖಿಸಿದರು. ಪಿಎಸ್‌ಪಿಯು ಹೆಚ್ಚಿನ ಸ್ಥಾನಗಳ ಬೇಡಿಕೆಯನ್ನು ಎತ್ತಿದ್ದರಿಂದ ಪಿಎಸ್‌ಪಿಯೊಂದಿಗೆ ಒಪ್ಪಂದ ಮಾಡಿಕೊಳ್ಳಲು ಸಿಪಿಐ ಜತೆಗಿನ ಮಾತುಕತೆ ಫಲ ನೀಡಲಿಲ್ಲ(43:p65).

ಆರ್‌ಎಸ್‌ಪಿಯೊಂದಿಗಿನ ಚರ್ಚೆಯಲ್ಲೂ ಅದೇ ತರಹ ಮಾತುಕತೆ ವಿಫಲವಾಯಿತು. ಸಿಪಿಐ ಹತ್ತೊಂಬತ್ತು ಸ್ವತಂತ್ರ ಅಭ್ಯರ್ಥಿಗಳನ್ನು ಬೆಂಬಲಿಸುವುದರ ಮೂಲಕ ಚುನಾವಣೆಯಲ್ಲಿ ಏಕಾಂಗಿಯಾಗಿ ನಿಲ್ಲುವಂಥ ಒತ್ತಾಯಕ್ಕೊಳಗಾಯಿತು. ಮಾತುಕತೆ ವಿಫಲವಾದರೂ, ಸಿಪಿಐ ಬಹುಮತ ಗಳಿಸಿದಲ್ಲಿ, ಪಿಎಸ್‌ಪಿಯ ಸಹಯೋಗದೊಂದಿಗೆ ಕಮ್ಯುನಿಸ್ಟ್ ಪಕ್ಷವು ಸರ್ಕಾರ ರಚನೆಯ ಆಸೆಯನ್ನಿಟ್ಟುಕೊಂಡಿತ್ತು(12:p84). ಪಿಎಸ್‌ಪಿ ಬಗ್ಗೆ ತಮ್ಮ ಪ್ರಾಮಾಣಿಕತೆಯನ್ನು ವ್ಯಕ್ತಪಡಿಸುವ ರೀತಿಯಲ್ಲಿ, ಸಿಪಿಐ ಎಲ್ಲೆಲ್ಲಿ ತಮ್ಮ ಅಭ್ಯರ್ಥಿಗಳನ್ನು ಸ್ಪರ್ಧೆಗೆ ನಿಲ್ಲಿಸಿಲ್ಲವೋ ಅಂಥ ಕ್ಷೇತ್ರಗಳಲ್ಲಿ ಪಿಎಸ್‌ಪಿ ಅಭ್ಯರ್ಥಿಗಳನ್ನು ಸಿಪಿಐ ಬೆಂಬಲಿಸಿತು(44:p18). ಇಎಂಎಸ್ ಅವರ ಅಭಿಪ್ರಾಯದಲ್ಲಿ, ಸಿಪಿಐನ ಈ ನಿಲುವಿನಿಂದಾಗಿ, ಎರಡು ಕ್ಷೇತ್ರಗಳಲ್ಲಿ ಪಿಎಸ್‌ಪಿ.ಯು ಯಶಸ್ಸು ಪಡೆಯುವಲ್ಲಿ ಸಿ.ಪಿ.ಐ ಪ್ರಮುಖ ಪಾತ್ರ ವಹಿಸಿತು(45:p125).

## ಫಾದರ್ ವಡಕ್ಕನ್ ಮಟ್ಟಾಂಚೇರಿ ಥೀಸೀಸ್ (ಪ್ರಬಂಧ)

ಕಾಂಗ್ರೆಸ್, ಪಿಎಸ್‌ಪಿ ಮತ್ತು ಮುಸ್ಲಿಂ ಲೀಗ್ ಮುಂತಾದ ಪಕ್ಷಗಳು ಸೇರಿ ಮೈತ್ರಿ ಮಾಡಿಕೊಳ್ಳಲು ವಿವಿಧ ವಲಯಗಳಿಂದ ಪ್ರಯತ್ನಗಳು ನಡೆದವು. ಇದು 1957ರ ಚುನಾವಣೆಯಲ್ಲಿ ಕಮ್ಯುನಿಸ್ಟರನ್ನು ಸೋಲಿಸಲು ಫಾದರ್ ವಡಕ್ಕಾನ್ ಮತ್ತು ಕಮ್ಯುನಿಸ್ಟ್ ವಿರೋಧಿ ರಂಗವು, ಜಂಟಿಯಾಗಿ ವಿನ್ಯಾಸಗೊಳಿಸಲಾದ ಯೋಜನೆಯಾಗಿತ್ತು. 'ಮಟ್ಟಂಚೇರಿ ಪ್ರಬಂಧ'(46:p95) ಎಂದು ನಂತರ ಕರೆಯಲ್ಪಟ್ಟ ಈ ಯೋಜನೆಯು ದೀರ್ಘ ಕಾಲ ರಾಜಕೀಯ ಚರ್ಚಾ ವಿಷಯವಾಗಿತ್ತು. ಪಿ.ಎಸ್.ಪಿ. ಮತ್ತು ಮುಸ್ಲಿಂ ಲೀಗ್ ಜೊತೆ ಸೂಕ್ತ ನಡೆಗಳನ್ನು ಕೈಗೊಳ್ಳುವುದರ ಮೂಲಕ ಕಮ್ಯುನಿಸ್ಟರನ್ನು ಚುನಾವಣೆಯಲ್ಲಿ ಮಣ್ಣುಮುಕ್ಕಿಸುವುದೇ ಅದರ ಗಂಭೀರವಾದ ವಿಚಾರವಾಗಿತ್ತು. ಆದರೆ, ತನ್ನದೇ ಆದ ನೆಲೆಯಲ್ಲಿ ಕಾಂಗ್ರೆಸ್ ಚುನಾವಣೆಯಲ್ಲಿ ಗೆಲ್ಲುವ ನಿರೀಕ್ಷೆಯನ್ನಿಟ್ಟುಕೊಂಡಿದ್ದರಿಂದ, ಯೋಜನೆಗೆ ಅನುಮೋದನೆ ಸಿಗಲಿಲ್ಲ(47:p59).

ಆದರೆ ಕಾಂಗ್ರೆಸ್‌ನ ನಿರೀಕ್ಷೆ ಹುಸಿಯಾಯಿತು. ಬೆಂಕಿಯಲ್ಲಿ ಸುಟ್ಟುಕೊಂಡಂಥ ಪಾಠವನ್ನು ಅವರು ಕಲಿತರು. ಇದರ ಬಗ್ಗೆ ಫಾದರ್ ವಡಕ್ಕನ್ ಈ ರೀತಿ ಅವಲೋಕಿಸಿದ್ದರು,

> "ದುರುದ್ದೇಶದ ಕುರುಡುತನದಿಂದ ಕಾಂಗ್ರೆಸ್ ಮಟ್ಟಂಚೇರಿ ಪ್ರಬಂಧವನ್ನು ಅಂಗೀಕರಿಸಲಿಲ್ಲ. ಅವರು ತಮ್ಮ ತಪ್ಪನ್ನು ನಂತರದಲ್ಲಾದರೂ ಅರಿತುಕೊಳ್ಳುತ್ತಾರೆ. ಕಮ್ಯುನಿಸ್ಟ್ ಸರ್ಕಾರ ವಿಸರ್ಜನೆಗೊಂಡ ನಂತರ 1959ರ ಚುನಾವಣೆಯಲ್ಲಿ ಕಾಂಗ್ರೆಸ್, ಪಿಎಸ್‌ಪಿ ಮತ್ತು ಲೀಗ್‌ನೊಂದಿಗೆ ಮೈತ್ರಿ ಮಾಡಿಕೊಂಡಿತು. ನಾವು 1957ರಲ್ಲಿ ಏನನ್ನು ಕಂಡಿದ್ದೆವೋ ಅದನ್ನು 1960ರಲ್ಲಷ್ಟೆ ಕಾಂಗ್ರೆಸ್‌ಗೆ ಕಾಣಲು ಸಾಧ್ಯವಾಗಿದ್ದು"(46:p95).

## ಕಾಂಗ್ರೆಸ್‌ನ ಚಟುವಟಿಕೆಗಳು

ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ತರ ಪಾತ್ರವಹಿಸಿದ್ದರ ಆಧಾರದ ಮೇಲೆ, ಕೇರಳದ ಒಳಗೆ ಮತ್ತು ಹೊರಗಿನ ಕಾಂಗ್ರೆಸಿನವರು, ಜನರಿಗೆ ಕಾಂಗ್ರೆಸ್‌ಗೆ ಮತ ಹಾಕಲು ಮನವಿ ಮಾಡಿದರು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ, ಅವರ ಕಾರ್ಯಗಳು ಮತ್ತು ವೈಫಲ್ಯಗಳಿಗಾಗಿ ಕಾಂಗ್ರೆಸಿಗರು ಕಮ್ಯುನಿಸ್ಟರನ್ನು ಅವಮಾನಿಸಿದರು. ಆದರೆ, ಗತಕಾಲದ ವೈಭವ ಕಾಂಗ್ರೆಸ್‌ನ ನೆರವಿಗೆ ಬರಲಿಲ್ಲ. ಕಾಂಗ್ರೆಸ್ ಮತ್ತು ಪ್ರಜಾ ಸೋಷಿಯಲಿಸ್ಟ್ ಪಾರ್ಟಿ ಮತ್ತೆ ಅಧಿಕಾರಕ್ಕೆ ಬಂದಿದ್ದೆ ಆದರೆ, ಅವರು ಯಾವ ರೀತಿಯ ಸರ್ಕಾರವನ್ನು ರಚಿಸುತ್ತಾರೆ ಎಂಬುದರ ವಿಷಯದಲ್ಲಿ ಅವರ ಹಿಂದಿನ ಕ್ರಮಗಳೇ ಜನರ ಮನಸ್ಸಿನಲ್ಲಿ ಸ್ಪಷ್ಟವಾದ ಛಾಪು ಮೂಡಿಸಿದ್ದವು(48:p10). 1948ರಲ್ಲಿ ತಿರುವಾಂಕೂರು ಶಾಸನಸಭೆಯ ಸಂಪೂರ್ಣ ಸ್ಥಾನವನ್ನು ಕಾಂಗ್ರೆಸ್ ಗೆದ್ದಿದ್ದರೂ ಆರೇ ತಿಂಗಳಲ್ಲಿ ಅವರು ರಚಿಸಿದ ಸರ್ಕಾರ ಪತನಗೊಂಡಿತು*.

ಕಾಂಗ್ರೆಸ್‌ನ ಖ್ಯಾತಿ ತಾರಕಕ್ಕೇರಿರುವಾಗ, 1957ರಲ್ಲಿ ಚುನಾವಣಾ ಪ್ರಚಾರ ಪ್ರಾರಂಭವಾಯಿತು. ಕಾಂಗ್ರೆಸ್ ಪಾಳಯದಲ್ಲಿ ಟಿಕೆಟ್‌ಗಾಗಿ ತೀವ್ರ ಪೈಪೋಟಿ ಏರ್ಪಟ್ಟಿತ್ತು. ಆಂಧ್ರಪ್ರದೇಶದಲ್ಲಿ ಕಮ್ಯುನಿಸ್ಟರ ಶಕ್ತಿ 1955ರಲ್ಲಿ ಕ್ಷೀಣಿಸಿದ್ದರಿಂದ, ಮುಂಬರುವ ಚುನಾವಣೆಯಲ್ಲಿ ಕೇರಳದಲ್ಲೂ ಕಮ್ಯುನಿಸ್ಟರು ಭಾರಿ ಸೋಲನ್ನು ಅನುಭವಿಸಿತ್ತಾರೆ ಎನ್ನುವ ಭರವಸೆಯಲ್ಲಿದ್ದರು. ಹಂಗೇರಿಯಾದಲ್ಲಿ ನಡೆದಂಥ ಅಂತರಾಷ್ಟ್ರೀಯ ಘಟನೆಗಳನ್ನು ಉತ್ತ್ರೇಕ್ಷಿಸಿ ಕಾಂಗ್ರೆಸ್ಸಿಗರು ಕಮ್ಯುನಿಸ್ಟರನ್ನು ರಕ್ತಪಿಪಾಸು ಕೊಲೆಗಾರರನ್ನಾಗಿ ಚಿತ್ರಿಸಿದರು.** ಸ್ಟಾಲಿನ್ ಬಗ್ಗೆ ಕ್ರುಶ್ಚೇವ್ ಬಹಿರಂಗಪಡಿಸಿದ(51:p4) ವಿಚಾರಗಳು ತಮ್ಮ ಪರವಾಗಿ ಕೆಲಸ ಮಾಡುತ್ತವೆ ಎಂದು ಕಾಂಗ್ರೆಸ್ಸಿಗರು ಆಶಿಸಿದರು. ಕಳೆದು ಹೋದ ಅಧಿಕಾರವನ್ನು ಮರಳಿ ಪಡೆಯಬಹುದೆಂಬ ಕಾಂಗ್ರೆಸ್ಸಿಗರ ನಿರೀಕ್ಷೆಗಳಿಗೆ ಈ ಅಂಶಗಳು ದಾರಿಮಾಡಿಕೊಟ್ಟಿದ್ದವು. ಟಿಕೆಟ್‌ಗಾಗಿ ವಿವೇಚನಾರಹಿತ ಪೈಪೋಟಿ ಕಾಂಗ್ರೆಸ್‌ನಲ್ಲಿ ತೀವ್ರ ಮತಬೇಧಕ್ಕೆ ಕಾರಣವಾಯಿತು(52:p113).

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ವಿಜಯದ ಸಾಧ್ಯತೆಗಳನ್ನು ಕೇರಳದಲ್ಲಿ ತೀವ್ರಗೊಳಿಸುವುದಕ್ಕಾಗಿ, ಚುನಾವಣಾ ಪ್ರಚಾರವನ್ನು ಸುವ್ಯವಸ್ಥಿತಗೊಳಿಸಲು,

---

* ತಿರುವಾಂಕೂರು ರಾಜ್ಯದ ಶಾಸನ ಸಭೆಗೆ ಮೊದಲ ಚುನಾವಣೆ ಫೆಬ್ರವರಿ 1948ರಲ್ಲಿ ನಡೆಯಿತು. ಆಗ ಕಾಂಗ್ರೆಸ್‌ನ ವರ್ಚಸ್ಸು ತುಂಬಾ ಹೆಚ್ಚಿತ್ತು. ಹೀಗಾಗಿ ಪಕ್ಷ ಸುಲಭವಾಗಿ ಚುನಾವಣೆ ಗೆಲ್ಲಲು ಸಾಧ್ಯವಾಯಿತು. ಒಂದು ಕ್ಷೇತ್ರವನ್ನು ಬಿಟ್ಟು ಉಳಿದೆಲ್ಲಾ ಕ್ಷೇತ್ರಗಳನ್ನು ತನ್ನದಾಗಿಸಿಕೊಂಡಿತು. ಸ್ವತಂತ್ರ ಅಭ್ಯರ್ಥಿಗಳಾಗಿ ಆಯ್ಕೆಯಾದವರು ವಿಳಂಬವಿಲ್ಲದೆ ಕಾಂಗ್ರೆಸ್ ಪಕ್ಷ ಸೇರಿದರು. ಪಟ್ಟಂ ತಾನುಪಿಳ್ಳ ನೇತೃತ್ವದಲ್ಲಿ ಸಚಿವ ಸಂಪುಟ ರಚನೆಯಾಯಿತು. ಆದರೆ ಅದು 1948ರಲ್ಲಿ ಸೆಪ್ಟೆಂಬರ್‌ನಲ್ಲಿ ನೆಲ ಕಚ್ಚಿತು. ಅಸ್ತಿತ್ವಕ್ಕೆ ಬಂದ ಕೇವಲ ಆರು ತಿಂಗಳುಗಳೊಳಗೆ ಅದರ ಪತನ ಸಂಭವಿಸಿತು.

** 1956ರಲ್ಲಿ, ಹಂಗೇರಿಯ ಪ್ರಧಾನಿ ಇಮ್ರಿನಾಗಿ ಹತ್ಯೆಯಾಗಿದ್ದಕ್ಕೂ ಅವರ ಸ್ಥಾನದಲ್ಲಿ ಜನೋಸ್ಕದರ್ ಅನ್ನು ಸ್ಥಾಪಿಸುವುದಕ್ಕೂಸೋವಿಯತ್ ಸೈನ್ಯವೇಕಾರಣವೆಂದು ಹೇಳಲಾಗುತ್ತದೆ.

ಚುನಾವಣಾ ವ್ಯವಸ್ಥಾಪಕ ಎಸ್.ಕೆ ಪಾಟೀಲ್ ಅವರನ್ನು ಕೇರಳಕ್ಕೆ ಕಳುಹಿಸಿಕೊಡಲಾಯಿತು. ಅವರು ಆಂಧ್ರ ಪ್ರದೇಶದ ಕಾಂಗ್ರೆಸ್‌ನ ಅದ್ಭುತ ಯಶಸ್ಸಿನ ಶಿಲ್ಪಿಯಾಗಿದ್ದರು(53:p41).* ಕೇರಳದಲ್ಲಿ ಅಂತಹ ಯಶಸ್ಸನ್ನು ಪುನರಾವರ್ತಿಸಲು ಎಸ್.ಕೆ.ಪಾಟೀಲ್ ಸಮರ್ಥರು ಎಂದು ಇಲ್ಲಿನ ಕಾಂಗ್ರೆಸ್ಸಿಗರು ಭಾವಿಸಿದ್ದರು(48:p11). ಚುನಾವಣಾ ಗೆಲುವು ಸರಳವಾದ ಕೆಲಸವಲ್ಲ ಎಂದು ಮನವರಿಕೆ ಮಾಡಿಕೊಂಡ ಚುನಾವಣಾ ತಂತ್ರಗಾರ ಪಾಟೀಲ್‌ರು ಮುಸ್ಲಿಂ ಲೀಗ್ ಮತ್ತು ಕೇರಳ ಪೀಪಲ್ಸ್ ಪಾರ್ಟಿ (ಕೆ.ಪಿ.ಪಿ.) ಗಳನ್ನು ಸೇರಿಸಿಕೊಂಡು ಒಂದು ಚುನಾವಣಾ ರಂಗವನ್ನು ರಚಿಸುವುದರ ಸಾಧ್ಯತೆಯನ್ನು ಪರಿಶೋಧಿಸತೊಡಗಿದರು(48:p11).

ಸಿ.ರಾಜಗೋಪಾಲಾಚಾರಿ ನೇತೃತ್ವದ ಮದ್ರಾಸಿನ ಅಲ್ಪಸಂಖ್ಯಾತ ಮಂತ್ರಿಮಂಡಲಕ್ಕೆ, 1952ರಲ್ಲಿ ಮುಸ್ಲಿಂ ಲೀಗ್ ನೀಡಿದ ಬೆಂಬಲ, ಮದ್ರಾಸ್ ರಾಜ್ಯದಲ್ಲಿ ನಂತರ ನಡೆದ ಮುನ್ಸಿಪಲ್ ಚುನಾವಣೆಗಳಲ್ಲಿ ಕಾಂಗ್ರೆಸ್–ಲೀಗ್ ಒಪ್ಪಂದ, ಇವುಗಳಿಂದಾಗಿ, ಕೇರಳದಲ್ಲಿ ಕಾಂಗ್ರೆಸ್–ಮುಸ್ಲಿಂಲೀಗ್ ಮೈತ್ರಿ ಮೈತ್ರಿಕೂಟ ರಚನೆಗೆ ಅನುಕೂಲಕರ ವಾತಾವರಣ ಸೃಷ್ಟಿಸಿತು(54:p51). ಎಸ್.ಕೆ.ಪಾಟೀಲ್, ಪಣಂಪಲ್ಲಿ ಗೋವಿಂದ ಮೆನನ್, ಆರ್.ಶಂಕರ್ ಮುಂತಾದವರೂ ಮುಸ್ಲಿಂಲೀಗ್‌ನ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಎಂ.ಸೀತಿ ಸಾಹಿಬ್‌ರವರೂ ಚುನಾವಣಾ ಮೈತ್ರಿಗೆ ಮಾತುಕತೆ ನಡೆಸಿದರು(55:p27). ಆದರೆ, ಕೆಲ ಕಾಂಗ್ರೆಸಿಗರು ಪರದೆಯ ಹಿಂದಿನಿಂದ ಕೆಲಸ ಮಾಡುತ್ತಾ ಈ ಪ್ರಯತ್ನವನ್ನು ವಿಫಲಗೊಳಿಸಿದರು. ಲೀಗ್ ಜೊತೆಗಿನ ಮೈತ್ರಿಯಿಂದಾಗಿ ಉತ್ತರಭಾರತದಲ್ಲಿ, ಅವರ ಚುನಾವಣಾ ಪರಿಸ್ಥಿತಿಯ ಮೇಲೆ ಪ್ರತಿಕೂಲ ಪರಿಣಾಮ ಬೀರಬಹುದೆನ್ನುವ ಭಯ ಕಾಂಗ್ರೆಸ್ ಹೈಕಮಾಂಡ್‌ಗೆ ಕಾಡಿತು(56:p108). ಕಮ್ಯುನಿಸ್ಟರು ಮತ್ತು ಇತರ ಪಕ್ಷಗಳು ಈ ಹಿಂದೆ ಐಕ್ಯರಂಗವನ್ನು ರಚಿಸುವ ಪ್ರಯತ್ನಗಳನ್ನು ಪ್ರಧಾನಮಂತ್ರಿ ನೆಹರೂ ಲೇವಡಿ ಮಾಡಿದ್ದರೆನ್ನುವುದು ಆ ಕ್ಷಣದಲ್ಲಿ ಸ್ಮರಣೀಯವಾಗಿತ್ತು.

> "ಮೂವರು ಅಂಗವಿಕಲರನ್ನು ಸಂಯೋಜಿಸಿಕೊಂಡು ನೀವು ಶಕ್ತಿಯುತನಾದ ಒಬ್ಬ ಪರಿಪೂರ್ಣ ಮನುಷ್ಯನನ್ನು ಸೃಷ್ಟಿಸಲು ಸಾಧ್ಯವಿಲ್ಲ"(57:p327).

ಪಿಎಸ್‌ಪಿಯನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಎಸ್.ಕೆ.ಪಾಟೀಲ್ ಅವರ ಪ್ರಯತ್ನಗಳು ಎರಡು ಕಾರಣಗಳಿಂದಾಗಿ ವಿಫಲವಾದವು. ಒಂದು, ಇತರ ಪಕ್ಷಗಳೊಂದಿಗೆ ಪಿಎಸ್‌ಪಿ ಚುನಾವಣಾ ಮೈತ್ರಿ ಮಾಡಿಕೊಳ್ಳಲು ಬಯಸುವುದಿಲ್ಲ ಎಂದು ಬೆಂಗಳೂರಿನ ಸಮ್ಮೇಳನದಲ್ಲಿ ನಿರ್ಧಾರ ಕೈಗೊಳ್ಳಲಾಗಿತ್ತು. ಪಿಎಸ್‌ಪಿ ನಾಯಕರಾದ ಪಟ್ಟಂ ತಾನುಪಿಳ್ಳ ಮತ್ತು ಕೇರಳದ ಹಿರಿಯ ಕಾಂಗ್ರೆಸ್ ನಾಯಕರ ನಡುವಿನ ಅಸಮಾಧಾನ

---

* Mid Term Election in Andhra in March 1955, where the Communist Party received a stunning blow in that its representation in the Legislature was reduced from 41out of 140 seats to 15 out of 196

ಮತ್ತೊಂದು ಅಂಶ.* ಹಾಗಾಗಿ ಪಾಟೀಲ್‌ರು ಮುಸ್ಲಿಂ ಲೀಗ್ ಬೆಂಬಲ ಕೋರಿದರು. ಇದು ಕಾಂಗ್ರೆಸ್ ಪಕ್ಷದಲ್ಲಿದ್ದ ಮುಸ್ಲಿಂ ಸದಸ್ಯರ ಶ್ರೇಯಾಂಕದಲ್ಲಿ ತೀವ್ರ ವಿರೋಧವನ್ನು ಹುಟ್ಟುಹಾಕಿತು(89:p437). ಕೇರಳ ಪೀಪಲ್ಸ್ ಪಕ್ಷದ ಬೆಂಬಲ ಪಡೆಯಲು ಪಕ್ಷ ನಡೆಸಿದ ಪ್ರಯತ್ನಗಳೂ ವ್ಯರ್ಥವಾದವು. ಆದ್ದರಿಂದ ಪರಿಣಾಮಕಾರಿ ಚುನಾವಣಾ ಮೈತ್ರಿಯನ್ನು ರೂಪಿಸಲು ಕಾಂಗ್ರೆಸ್‌ನ ಕನಸು ಭಗ್ನವಾಯಿತು(58:p17;48:p11).

ಕೇರಳದ ಚುನಾವಣೆಯಲ್ಲಿ ಕಾಂಗ್ರೆಸ್ ದುರಾಡಳಿತ ಬಹಿರಂಗಗೊಂಡಿತು. ಉದಾಹರಣೆಗೆ, ಜನವರಿ 27, 1957ರವರೆಗೂ (ನಾಮಪತ್ರಗಳ ಸಲ್ಲಿಕೆಗೆ ಕೊನೆಯ ದಿನಾಂಕದಿಂದ 48 ಗಂಟೆಗಳಿಗೂ ಮೊದಲು) ಹತ್ತಾರು ಕ್ಷೇತ್ರಗಳಲ್ಲಿ ಅಭ್ಯರ್ಥಿಗಳ ಹೆಸರನ್ನೇ ಅಂತಿಮಗೊಳಿಸಿರಲಿಲ್ಲ. ಕಾಂಗ್ರೆಸ್ ಗೆಲುವು ಅನಿಶ್ಚಿತವೆನ್ನುವ ಕ್ಷೇತ್ರಗಳಲ್ಲಿ ಅರ್ಹ ಅಭ್ಯರ್ಥಿಗಳನ್ನು ಕಂಡುಹಿಡಿಯಲು ತ್ವರಿತ ಪ್ರಯತ್ನಗಳು ಮುಂದುವರಿದವು. ಇದರಿಂದಾಗಿ, ಹೊಸದಾಗಿ ರೂಪುಗೊಂಡ ಕೇರಳ ರಾಜ್ಯಕ್ಕೆ ಸುಸ್ಥಿರ ಆಡಳಿತ ನೀಡುವ ಸಾಮರ್ಥ್ಯವನ್ನು ಹೊಂದಿರುವುದು ತಾನು ಮಾತ್ರ ಎಂದು ಕಾಂಗ್ರೆಸ್ ಸಂಘಟನೆ ಹೇಳಿಕೊಳ್ಳುವುದು ಈ ಸಂದರ್ಭದಲ್ಲಿ ತಿರಸ್ಕಾರ ಮತ್ತು ಅಪಹಾಸ್ಯವನ್ನು ಹುಟ್ಟುಹಾಕಿತು(58:p17;48:p11).

ಪಿಎಸ್‌ಪಿಯ ಮೊದಲ ಕೇರಳ ರಾಜ್ಯ ಸಮ್ಮೇಳನವು ಜನವರಿ 5, 1957ರಂದು ತ್ರಿಶೂರ್‌ನ ಪುದುಕ್ಕಾಡ್‌ನಲ್ಲಿ ನಡೆಯಿತು. ಸಮ್ಮೇಳನದಲ್ಲಿ, ಮುಖ್ಯವಾಗಿ ಎರಡು ವಿಷಯಗಳ ಮೇಲೆ ಚರ್ಚೆಗಳು ನಡೆದವು. ಮೊದಲನೆಯದು ಪಿಎಸ್‌ಪಿಯ ರಾಜ್ಯ ಸಮಿತಿಯ ರಚನೆಯ ಬಗ್ಗೆಯಾಗಿತ್ತು. ಎರಡನೆಯದು ಮುಂಬರುವ ಸಾರ್ವತ್ರಿಕ ಚುನಾವಣೆಯಲ್ಲಿ ಅನುಸರಿಸಬೇಕಾದ ತಂತ್ರಗಳ ಬಗ್ಗೆ. ಪಟ್ಟಂ ತಾನುಪಿಳ್ಳ ಅಧ್ಯಕ್ಷರಾಗಿ ಮತ್ತು ಎಂ.ಪಿ. ಗೋವಿಂದ ಮೆನನ್ ರಾಜ್ಯ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿ ಹೊಸ ಸಮಿತಿ ರೂಪುಗೊಂಡಿತು. ಈ ಸಭೆಯಲ್ಲಿ ಚುನಾವಣಾ ಕಾರ್ಯತಂತ್ರದ ಕುರಿತು ಚರ್ಚೆಗಳು ನಡೆದವು. ಗಯಾ ಸಮ್ಮೇಳನದ ಧೋರಣೆಗಳಿಗೆ ಅನುಗುಣವಾಗಿ ಮಲಬಾರ್‌ನ ಬಹುತೇಕ ಪ್ರತಿನಿಧಿಗಳು, ಕಾಂಗ್ರೆಸ್-ಕಮ್ಯುನಿಸ್ಟ್ ಪಕ್ಷಗಳೊಂದಿಗೆ ಸಮಾನ ಅಂತರವನ್ನು ಕಾಯ್ದುಕೊಳ್ಳಬೇಕೆಂದು ಒತ್ತಾಯಿಸಿದರು.** ಆದರೆ ತಿರುವಾಂಕೂರು-ಕೊಚ್ಚಿನ್‌ನಿಂದ ಬಂದ ಪ್ರತಿನಿಧಿಗಳು ಬೆಂಗಳೂರು ನಿರ್ಣಯವನ್ನು ಜಾರಿಗೊಳಿಸಬೇಕು ಎಂದು ಒತ್ತಾಯಿಸಿದರು.***

---

* ತಿರು-ಕೊಚ್ಚಿಯಲ್ಲಿ ಪಟ್ಟಂ ತಾನುಪಿಳ್ಳ ನೇತೃತ್ವದ ಸಚಿವ ಸಂಪುಟಕ್ಕೆ ಡಿಸೆಂಬರ್ 12, 1954ರಂದು ಕಾಂಗ್ರೆಸ್ ತನ್ನ ಬೆಂಬಲವನ್ನು ಹಿಂತೆಗೆದುಕೊಂಡಿತು. ಇದರಿಂದ ಸರ್ಕಾರ ಬಹುಮತ ಕಳೆದುಕೊಂಡು ರಾಜೀನಾಮೆ ನೀಡಿತು.

** ವಡಕರ ಮಾಜಿ ಸಮಾಜವಾದಿ ಪಕ್ಷದ ನಾಯಕ ಟಿ.ಸಿ. ಅಶೋಕನ್ ಮಾಸ್ಟರ್‌ರವರೊಂದಿಗೆ 14 ಮಾರ್ಚ್ 2010ರಂದು ಅವರ ನಿವಾಸದಲ್ಲಿ ಸಂದರ್ಶನ.

*** ಬೆಂಗಳೂರಿನಲ್ಲಿ ನಡೆದ ಪಿಎಸ್‌ಪಿಯ ರಾಷ್ಟ್ರೀಯ ಮಂಡಳಿಯು, ಇತರ ರಾಜಕೀಯ ಪಕ್ಷಗಳೊಂದಿಗೆ ಚುನಾವಣಾ ಮೈತ್ರಿಯನ್ನು ನಿಷೇಧಿಸಲಾಯಿತಾದರೂ ಕ್ಷೇತ್ರವಾರು

## ಪಿಎಸ್‌ಪಿ–ಲೀಗ್ ಮೈತ್ರಿ

ಫೆಬ್ರವರಿ 28 ಮತ್ತು ಮಾರ್ಚ್ 11, 1957ರ ನಡುವೆ ಕೇರಳ ರಾಜ್ಯದ ಮೊದಲ ಶಾಸನಸಭೆಗೆ ಚುನಾವಣೆಗಳು ನಿಗದಿಯಾಗಿದ್ದವು(62:p24). ಕಮ್ಯುನಿಸ್ಟರು ಕ್ರಾಂತಿಕಾರಿ ಮಾರ್ಗವನ್ನು ತ್ಯಜಿಸಿ ಪ್ರಜಾಪ್ರಭುತ್ವ ಪ್ರಕ್ರಿಯೆಗಳೊಂದಿಗೆ ಸಹಕರಿಸಲು ಸಿದ್ಧವಾದಾಗ, ಕೆಲವು ಸಮಾಜವಾದಿಗಳು ಕಮ್ಯುನಿಸ್ಟ್ ಮೈತ್ರಿಗೆ ಆಸಕ್ತಿಯನ್ನು ವ್ಯಕ್ತಪಡಿಸಿದರೂ(63:13.09.56) ಈ ವಿಷಯದಲ್ಲಿ ನಡೆದ ಚರ್ಚೆ ವಿಫಲವಾಯಿತು. ಚುನಾವಣೆಯಲ್ಲಿ ಏಕಾಂಗಿಯಾಗಿ ಸ್ಪರ್ಧಿಸಲು ಸಿಪಿಐ ನಿರ್ಧರಿಸಿತು(45:p127). ಈ ಸಂದರ್ಭದಲ್ಲಿ ಪಿಎಸ್‌ಪಿಯು ಮುಸ್ಲಿಂ ಲೀಗ್ ಜೊತೆ ಚುನಾವಣೆಗೆ ಸಂಬಂಧಿಸಿದ ಕೆಲವು ಮತುಕತೆಗಳನ್ನು ಮುಂದುವರಿಸಿದರು. ಮುಸ್ಲಿಂ ಲೀಗ್ ನಾಯಕರೊಂದಿಗೆ ಕೆಲವು ಸುತ್ತುಗಳ ಚರ್ಚೆಯ ನಂತರ, ಕೆ.ಬಿ. ಮೆನನ್ ಸೂಚನೆ ಮೇರೆಗೆ ಒಪ್ಪಂದಕ್ಕೆ ಸಹಿ ಹಾಕಲಾಯಿತು(57:p323-324). ಧಾರ್ಮಿಕ ಅಲ್ಪಸಂಖ್ಯಾತರಿಗೆ ಭಾರತೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿಶಿಷ್ಟ ಸ್ಥಾನವಿದೆ(64:). ಬಹುಸಂಸ್ಕೃತಿಯ ಆರೋಗ್ಯಕರ ಪ್ರಗತಿಗಾಗಿ ಧಾರ್ಮಿಕ ರಾಜಕೀಯ ಪಕ್ಷಗಳ ಚಟುವಟಿಕೆಗಳು ನಕರಾತ್ಮಕ ಪರಿಣಾಮ ಬೀರುತ್ತದೆ ಎಂದು ಊಹಿಸಲು ಸಮಾಜವಾದಿಗಳಾಗಿದ್ದ ಕೆ.ಬಿ.ಮೆನನ್‌ಗೆ ಸಾಧ್ಯವಾಗಲಿಲ್ಲ. ಕಾಂಗ್ರೆಸ್ ಅವಮಾನಕರವಾಗಿ ಕಂಡಿದ್ದ ಮುಸ್ಲಿಂ ಲೀಗ್ ಅನ್ನು ಒಂದು ರಾಜಕೀಯ ತಂತ್ರವೆನ್ನುವ ನೆಲೆಯಲ್ಲಿ ತನ್ನ ಜೊತೆಗೆ ನಿಲ್ಲಿಸಿಕೊಳ್ಳಲು ಕೆ.ಬಿ.ಮೆನನ್‌ರವರ ನೇತೃತ್ವದಲ್ಲಿದ್ದ ಪಿ.ಎಸ್.ಪಿ,ಗೆ ಸಾಧ್ಯವಾಯಿತು(58:p18). ಹೀಗೆ ಧಾರ್ಮಿಕತೆಯ ಹಿನ್ನಲೆಯಿರುವ ರಾಜಕೀಯ ಪಕ್ಷವಾದ ಮುಸ್ಲಿಂಲೀಗ್, ಕೇರಳ ರಾಜಕೀಯದ ಮುಖ್ಯವಾಹಿನಿಗೆ ತರುವಲ್ಲಿ ಪಿ.ಎಸ್.ಪಿ.ಯ ಪಾತ್ರ ಸ್ಪಷ್ಟವಾಗಿದೆ(64:). ಪಿ.ಎಸ್.ಪಿ.ಯು ಮುಸ್ಲಿಂ ಲೀಗ್‌ನೊಂದಿಗೆ ಮಾಡಿಕೊಂಡ ಮೈತ್ರಿಯನ್ನು 'ಸತ್ತ ಕುದುರೆ'(57:p327) ಎಂದು ನೆಹರು ಕರೆದಿದ್ದು, ಮುಸ್ಲಿಮ್ ಲೀಗ್‌ಗೆ ಒಳ್ಳೆಯದೇ ಆಯಿತು. ಅದೇ ಸಮಯದಲ್ಲಿ, ಪಿ.ಎಸ್.ಪಿ.ಗೂ ಈ ಮೈತ್ರಿಯು ತುಂಬಾ ಪ್ರಯೋಜನಕಾರಿಯಾಯಿತು. ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಬಲಗೊಳ್ಳುತ್ತಿದ್ದು, ಕಾಂಗ್ರೆಸ್‌ನ ಸ್ಥಿತಿ ಹದಗೆಡುತ್ತಿದ್ದ ಪರಿಸ್ಥಿತಿಯಲ್ಲಿ, ಪಿ.ಎಸ್.ಪಿ–ಮುಸ್ಲಿಂ ಲೀಗ್ ಮೈತ್ರಿಯಿಂದಾಗಿ, ಕನಿಷ್ಠ ಕೆಲವು ಸ್ಥಳಗಳಲ್ಲಾದರೂ ಕಮ್ಯುನಿಸ್ಟರ ಮುನ್ನಡೆಗೆ ತಡೆಯನ್ನು ಸೃಷ್ಟಿಸಲು ಸಾಧ್ಯವಾಯಿತೆಂದೇ ಹೇಳಬೇಕು(54:p51).

ಪಿ.ಎಸ್.ಪಿ. ನಾಯಕರೊಂದಿಗಿನ ತನ್ನ ಒಡನಾಟದ ಬಗ್ಗೆ, ಧಾರ್ಮಿಕ ಹಿನ್ನಲೆಯ ರಾಜಕೀಯ ಪಕ್ಷವಾದ ಮುಸ್ಲಿಂ ಲೀಗ್‌ಗೆ ಹೆಮ್ಮೆಪಡುವಂತಾಗಿತ್ತು. ಮಲಬಾರಿನಲ್ಲಿ ಎರಡೂ ಪಕ್ಷಗಳ ಕಾರ್ಯಕರ್ತರು ಜಂಟಿಯಾಗಿ ಗ್ರಾಮಗಳಲ್ಲಿ ಪ್ರಚಾರ ನಡೆಸಿದರು. ಮುಸ್ಲಿಂ ಲೀಗ್ ನಾಯಕರುಗಳಾದ ಸಿ.ಎಚ್.ಮೊಹಮ್ಮದ್ ಕೋಯಾ, ಬಾಫಕಿ ತಂಗಳ್

---

ಆಧಾರದಡಿಯಲ್ಲಿ ಕೆಲವು ಸ್ಥಳೀಯ ಬದಲಾವಣೆಗಳಿಗೆ ಅನುಮತಿಸಲಾಯಿತು.

ಮುಂತಾದವರು ಚುನಾವಣಾ ರ್‍ಯಾಲಿಗಳಲ್ಲಿ ಅರಂಜಿಲ್ ಶ್ರೀಧರನ್‌ರಂಥ ಸಮಾಜವಾದಿ ನಾಯಕರ ಉಪಸ್ಥಿತಿಗೆ ತುಂಬಾ ಶ್ರಮಿಸಿದರು(57:p324).

## ಮುರಿದುಬಿದ್ದ ಎಡ ಐಕ್ಯತೆ

ಅಭ್ಯರ್ಥಿಗಳ ಪಟ್ಟಿಯನ್ನು ಅಂತಿಮಗೊಳಿಸುವುದಕ್ಕೂ ಮೊದಲು, ಆರ್‌ಎಸ್‌ಪಿ, ಪಿ.ಎಸ್.ಪಿ. ಮುಂತಾದ ಪಕ್ಷಗಳೊಂದಿಗೆ ಒಂದು ಒಪ್ಪಂದಕ್ಕೆ ಬರಲು ಕಮ್ಯುನಿಸ್ಟ್ ಪಕ್ಷ ಕಠಿಣವಾಗಿ ಶ್ರಮಿಸಿತು. ಇದಕ್ಕಾಗಿ ಬಹಳಷ್ಟು ಪ್ರಯೋಜನಗಳ ಭರವಸೆಯನ್ನೂ ನೀಡಿತು. ಇದೇ ವೇಳೆ ಯಾವುದೇ ಪಕ್ಷಕ್ಕೆ ಸೇರದವರು, ಪ್ರಜಾಪ್ರಭುತ್ವವಾದಿಗಳು, ಒಳ್ಳೆಯ ವರ್ಚಸ್ಸನ್ನು ಹೊಂದಿದವರೂ ಆದ ಎ.ಆರ್. ಮೆನನ್, ಪಿ.ಕೆ.ಕೋರುಮಾಸ್ತರ್ ಮತ್ತು ಇತರರೊಂದಿಗೆ ಕಮ್ಯುನಿಸ್ಟ್ ಪಕ್ಷವು ಒಂದು ಒಪ್ಪಂದವನ್ನು ಮಾಡಿಕೊಂಡಿತು(65:p95). ಕಮ್ಯುನಿಸ್ಟ್ ಪಕ್ಷವು ಪರ್ಯಾಯ ಸರ್ಕಾರವನ್ನು ರಚಿಸಲು ತೀರ್ಮಾನಿಸಿ, ಎಡಐಕ್ಯತೆಯನ್ನು ಬಲಪಡಿಸಲು ಕೇರಳ ಸಮಿತಿ ಶಕ್ತಿ ಮೀರಿ ಪ್ರಯತ್ನಿಸಿತು. ತಮ್ಮ ನೆಲೆ ಭದ್ರವಾಗಿದೆಎಂಬ ಭ್ರಮೆಯನ್ನು ಉಳಿಸಿಕೊಂಡ ಪಿಎಸ್‌ಪಿ ಮತ್ತು ಆರ್‌ಎಸ್‌ಪಿ ಪಕ್ಷಗಳು, ಕಮ್ಯುನಿಸ್ಟರೊಂದಿಗೆ ಒಪ್ಪಂದ ಮಾಡಿಕೊಳ್ಳಲು ನಿರಾಕರಿಸಿದವು(48:p14). ಮೇಲಿನ ಪಕ್ಷಗಳ ಅತಿಯಾದ ಮತ್ತು ಅನಗತ್ಯ ಬೇಡಿಕೆಗಳಿಂದಾಗಿ ಒಪ್ಪಂದತ್ತ ತಲುಪಲು ನಡೆಸಿದ ಚರ್ಚೆಗಳು ವಿಫಲಗೊಂಡವು(8:p226).

ಸಂಧಾನಗಳ ವೈಫಲ್ಯದಿಂದಾಗಿ, ಕಮ್ಯುನಿಸ್ಟ್ ಪಕ್ಷಕ್ಕಿಂತ ಪಿಎಸ್‌ಪಿ ಮತ್ತು ಆರ್‌ಎಸ್‌ಪಿಪಕ್ಷಗಳಿಗೆ ಅತ್ಯಂತ ಹೆಚ್ಚು ಹಾನಿಕರವಾಯಿತು. ಆರ್‌ಎಸ್‌ಪಿ ಸ್ಪರ್ಧಿಸಿದ್ದ 28 ಸ್ಥಾನಗಳಲ್ಲಿ ಒಂದನ್ನು ಸಹ ಗೆಲ್ಲಲು ಸಾಧ್ಯವಾಗಲಿಲ್ಲ. ಪಿ.ಎಸ್.ಪಿ.ಯ ಸದಸ್ಯತ್ವವು ಈ ಮೊದಲಿದ್ದ 19ರಿಂದ (ತಿರು–ಕೊಚ್ಚಿ ರಾಜ್ಯ ವಿಧಾನಸಭೆ) 9ಕ್ಕೆ ಇಳಿಯಿತು. ಚುನಾವಣಾ ಫಲಿತಾಂಶಗಳನ್ನು ವಿಶ್ಲೇಷಿಸಿದ 'ಸ್ಟೇಟ್‌ಮ್ಯಾನ್' ಪತ್ರಿಕೆಯ ವರದಿಗಾರರು ಈ ಕೆಳಗಿನಂತೆ ಪ್ರತಿಕ್ರಿಯಿಸಿದರು.

> "ಕಾಂಗ್ರೆಸ್ ವಿರುದ್ಧ ಐಕ್ಯರಂಗಕ್ಕೆ ಬಲ ತುಂಬಿ ಅದನ್ನು ಗಟ್ಟಿಗೊಳಿಸುವ ಪರಿಶ್ರಮದಲ್ಲಿ, 1954ರಲ್ಲಿ ಕಮ್ಯುನಿಸ್ಟರು, ಪ್ರಜಾ ಸಮಾಜವಾದಿ (ಪಿ.ಎಸ್.ಪಿ) ಮತ್ತು ಕ್ರಾಂತಿಕಾರಿ ಸಮಾಜವಾದಿಗಳನ್ನು (ಆರ್.ಎಸ್.ಪಿ) ತೃಪ್ತಿಪಡಿಸಲು, ಕೆಲವು ಸ್ಥಾನಗಳನ್ನು ಅನಗತ್ಯವಾಗಿ ತ್ಯಜಿಸಿರಬೇಕು. ಚುನಾವಣಾ ಮೈತ್ರಿಗೆ ಶ್ರಮಿಸುತ್ತಿರುವ ಕಮ್ಯುನಿಸ್ಟರ ಮುಂದೆ ಕ್ರಾಂತಿಕಾರಿ ಸಮಾಜವಾದಿಗಳು ಸೀಟುಗಳಿಗಾಗಿ ನ್ಯಾಯಯುತವಲ್ಲದ ಮತ್ತು ಅನಗತ್ಯವಾದ ಬೇಡಿಕೆಗಳನ್ನು ಮುಂದಿಟ್ಟಿದ್ದರು"(66:20.03.57).

ಪಿಎಸ್‌ಪಿ ಮತ್ತು ಆರ್‌ಎಸ್‌ಪಿ ಪಕ್ಷಗಳೊಂದಿಗೆ ಚುನಾವಣಾ ಮೈತ್ರಿ ಮಾಡಿಕೊಳ್ಳುವ ವಿಫಲ ಪ್ರಯತ್ನವಾದ ನಂತರ, ಕಮ್ಯುನಿಸ್ಟ್ ಪಕ್ಷವು 1957ರ ತನ್ನ

ಚುನಾವಣಾ ಪ್ರಚಾರದ ಅಂತ್ಯ ಘಟ್ಟವನ್ನು ತಲುಪಿ, ಜನವರಿಯಲ್ಲಿ ತನ್ನ ಚುನಾವಣಾ ಪ್ರಣಾಳಿಕೆ ಬಿಡುಗಡೆ ಮಾಡಿತು.

## ಸಿಪಿಐಯ ಚುನಾವಣಾ ಪ್ರಣಾಳಿಕೆ

ಕಮ್ಯುನಿಸ್ಟ್ ಪಕ್ಷದ ಪ್ರಣಾಳಿಕೆ ಅಮೂಲ್ಯ ದಾಖಲೆಯಾಗಿತ್ತು. ಕಾಂಗ್ರೆಸ್ ವಿರುದ್ಧ ಕಟು ಟೀಕೆಗಳನ್ನು ಒಳಗೊಂಡ ಈ ದಾಖಲೆ ಪತ್ರದಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಳನ್ನು ಕಲ್ಪಿಸುವ ರಚನಾತ್ಮಕ ಯೋಜನೆಗಳನ್ನು ಒಳಗೊಂಡಿದ್ದವು(43:p65). ಪ್ರಣಾಳಿಕೆಯ ಮೊದಲ ಭಾಗದಲ್ಲಿ ರಾಷ್ಟ್ರೀಯತೆ ಮತ್ತು ದೇಶಭಕ್ತಿ ಎದ್ದುಕಾಣುತ್ತಿತ್ತು. ಐಕ್ಯಕೇರಳ ನಿರ್ಮಾಣದಲ್ಲಿ ಕಮ್ಯುನಿಸ್ಟ್ ಪಕ್ಷದ ಪಾತ್ರವನ್ನು ಶ್ಲಾಘಿಸಿದ ಈ ದಾಖಲೆಪತ್ರದಲ್ಲಿ, ಕಾಂಗ್ರೆಸ್‌ನ ದೇಶವಿರೋಧಿ, ದೇಶದ್ರೋಹಿ ಮತ್ತು ವಂಚನಾಪರವಾದ ಕಾರ್ಯವಿಧಾನ ಬಗ್ಗೆ ಆರೋಪಿಸಿತು. ಅನೇಕ ಪಿತೂರಿಗಳು ಪರದೆಯ ಹಿಂಭಾಗದಲ್ಲಿ ರಹಸ್ಯವಾಗಿ ನಡೆಯುತ್ತಿರುವುದರಿಂದ ಹೊಸ ರಾಜ್ಯದ ಭವಿಷ್ಯವು ಸಂಪೂರ್ಣವಾಗಿ ಸುರಕ್ಷಿತವಾಗಿಲ್ಲ ಎಂದು ಪ್ರಣಾಳಿಕೆಯಲ್ಲಿ ಎತ್ತಿ ತೋರಿಸಲಾಗಿತ್ತು(43:p66). ಮೂರು ಪಿತೂರಿ ಗ್ಯಾಂಗ್‌ಗಳ ಕೈಯಲ್ಲಿ ರಾಜ್ಯದ ಭವಿಷ್ಯ ಅಡಗಿದೆ. ರಾಜ್ಯದ ಭವಿಷ್ಯವನ್ನು ನಿಯಂತ್ರಿಸಲು ಪಟ್ಟಭದ್ರ ಹಿತಾಸಕ್ತಿಗಳೊಂದಿಗೆ ಮೂರು ಸಮಾಲೋಚನಾ ಬಣಗಳು ಕಸರತ್ತುಗಳನ್ನು ನಡೆಸುತ್ತಿವೆ. ಮೊದಲ ವರ್ಗವು ದಕ್ಷಿಣ ರಾಜ್ಯದ ಅಥವಾ ವಿಶಾಲ ಕೇರಳದ ವಕ್ತಾರರಾಗಿದ್ದಾರೆ (ದಕ್ಷಿಣ ರಾಜ್ಯಗಳ ವಕೀಲರು – ಗ್ರೇಟರ್ ಕೇರಳ). ಎರಡನೇ ಗುಂಪಿನವರು ಪಶ್ಚಿಮ ತೀರದ ರಾಜ್ಯಗಳಿಗಾಗಿ ನೆಲೆಗೊಳಿಸಿಕೊಂಡು, ಭಾಷಾಧಾರದ ಮೇಲೆ ಐಕ್ಯಕೇರಳದ ಕಲ್ಪನೆಯನ್ನು ಬೆಂಬಲಿಸಿದ್ದರು. (ಐಕ್ಯಕೇರಳ ಪರಿಕಲ್ಪನೆಯು ಭಾಷಾಧಾರದ ಮೇಲೆ ನಿರ್ಮಾಣವಾಗಿದೆ). ಮೂರನೆಯ ವರ್ಗವೆನ್ನುವುದು ಐಕ್ಯಕೇರಳದ ಚಳುವಳಿಗಾರರಾಗಿದ್ದವರು(37:p93).

ಈ ಎಲ್ಲಾ ಸಂಘಟನೆಗಳು ಸ್ಥಾಪಿತ ಹಿತಾಸಕ್ತಿ ಮತ್ತು ವಿಭಜಕ ವಿಚಾರಗಳನ್ನು ಅನುಸರಿಸುತ್ತಿವೆ. ಕ್ಷಿಪ್ರ ಚುನಾವಣೆಯ ನಂತರ ಬಹುಮತ ಹೊಂದದ ವಿಧಾನಸಭೆ ಅಸ್ತಿತ್ವಕ್ಕೆ ಬರಬೇಕೆಂದು ಬಯಸಿದ್ದರು. ಒಂದು ವೇಳೆ ಹಾಗೆ ಆದಾಗ, ಸಾಂವಿಧಾನಿಕ ಬಿಕ್ಕಟ್ಟಿಗೆ ಕಾರಣವಾಗಲಿದೆಯೆಂದು ಅವರು ಲೆಕ್ಕಾಚಾರ ಹಾಕಿದರು. ಹೊಸ ರಾಜ್ಯವು ಪರಸ್ಪರ ಹೊಂದಾಣಿಕೆಯಿಲ್ಲದ ಮತ್ತು ಆಡಳಿತ ನಡೆಸಲು ಅಸಮರ್ಥವಾದ ಮೈತ್ರಿಯ ಫಲವಾಗಿ ಇದು ಸಂಭವಿಸಿದೆಯೆಂದು ಪರಿಗಣಿಸಿ, ರಾಷ್ಟ್ರಪತಿ ಆಡಳಿತ ಮುಂದುವರಿಕೆಗೆ ಸಮರ್ಥನೀಯವಾಗುತ್ತದೆ, ಎಂದು ಅವರು ಭಾವಿಸಿದರು. ಈ ಸಂಘಟನೆಗಳ ಅಭಿಲಾಷೆಗಳು ಭಿನ್ನವಾಗಿದ್ದವು. ಚುನಾವಣಾ ಪ್ರಣಾಳಿಕೆ ಸೂಚಿಸುವಂತೆ ಚುನಾವಣೆಯ ನಂತರ, ಅಸ್ಥಿರ ಸರ್ಕಾರ ಅಸ್ತಿತ್ವಕ್ಕೆ ಬರುತ್ತದೆ ಎನ್ನುವುದು ಮೇಲೆ ತಿಳಿಸಿದ ಸ್ಥಾಪಿತ ಹಿತಾಸಕ್ತಿಯ ಸಂಘಟನೆಗಳ ಸಾಮಾನ್ಯ ನಿರೀಕ್ಷೆಯಾಗಿತ್ತು(40:p8-10).

ವಿರೋಧಿಗಳ ಕುಟಿಲ ತಂತ್ರಗಳನ್ನು ಸೋಲಿಸುವುದಕ್ಕಾಗಿಯೂ ಸಂಪತ್ಭರಿವಾದ ಕೇರಳ ಎನ್ನುವ ಕನಸನ್ನು ನನಸಾಗಿಸುವುದಕ್ಕಾಗಿಯೂ ಕಮ್ಯುನಿಸ್ಟ್ ಪಕ್ಷದ ಹಿಂದೆ ಎಲ್ಲರೂ ಒಂದುಗೂಡಬೇಕೆಂದು ಈ ಹಿನ್ನಲೆಯಲ್ಲಿ ಪ್ರಣಾಳಿಕೆಯು ಜನರಿಗೆ ಕರೆನೀಡಿತು. ಕಾಂಗ್ರೆಸ್ ಪಕ್ಷಕ್ಕೆ ಸಮರ್ಥವಾಗಿ ಆಡಳಿತ ನಡೆಸಲು ಸಾಧ್ಯವಿಲ್ಲ ಎಂಬುದನ್ನು ಅದರ ಹಿಂದಿನ ಕೆಲಸಗಳು ಈಗಾಗಲೇ ಸಾಬೀತುಪಡಿಸಿರುತ್ತದೆ. ರಾಜ್ಯವು ನೈಸರ್ಗಿಕ ಸಂಪನ್ಮೂಲಗಳಿಂದಾಗಿ ಸ್ವಾವಲಂಬಿಯಾಗಿದ್ದರೂ ಕಾಂಗ್ರೆಸ್ ಸಂಘಟನೆಗೆ ಜನರ ಮೂಲಭೂತ ಅಗತ್ಯಗಳನ್ನು ಪೂರೈಸಲು ಸಾಧ್ಯವಾಗಲಿಲ್ಲ ಎನ್ನುವುದನ್ನೂ ಪ್ರಣಾಳಿಕೆಯಲ್ಲಿ ಹೇಳಲಾಗಿದೆ(37:p117).

ಭಾರತ ಸರ್ಕಾರ ಮತ್ತು ಅಖಿಲ ಭಾರತ ಕಾಂಗ್ರೆಸ್ ಪಕ್ಷವು ಕೈಗೊಂಡ ಪ್ರಗತಿಪರ ಕ್ರಮಗಳೆಲ್ಲವನ್ನೂ ಪ್ರಣಾಳಿಕೆಯಲ್ಲಿ ಯಾವುದೇ ಕಲುಷಿತವಿಲ್ಲದೆ ಸ್ಪಷ್ಟಪಡಿಸಲಾಗಿದೆ(43:p65-68). ಭಾರತದ ನೆಲದಲ್ಲಿ ಸಮಾಜವಾದ ಬೇರೂರಲು ಸಾಧ್ಯವಿಲ್ಲ ಎಂದು ಕಮ್ಯುನಿಸ್ಟರನ್ನು ಟೀಕಿಸಿದ್ದ ಕಾಂಗ್ರೆಸ್ ಪಕ್ಷವು, ಸಮಾಜವಾದವನ್ನು ಸ್ಥಾಪಿಸುವುದು ರಾಷ್ಟ್ರದ ಗುರಿಯನ್ನಾಗಿ ಬದಲಾಯಿಸಿಕೊಂಡಿದ್ದು ಸಂತೋಷದ ಸಂಗತಿ(44:p25). ಕಮ್ಯುನಿಸ್ಟರನ್ನು ರಷ್ಯಾದ ಗೂಢಚಾರರು ಎಂದು ಕರೆದ ಕಾಂಗ್ರೆಸ್ ಪಕ್ಷವು,ಇದೀಗ ತನ್ನ ನಿಲುವನ್ನು ಬದಲಾಯಿಸಿಕೊಂಡು, ಸೋವಿಯತ್ ಒಕ್ಕೂಟ, ಚೀನಾ ಸೇರಿದಂತೆ ಸಮಾಜವಾದಿ ರಾಷ್ಟ್ರಗಳ ವಿಷಯದಲ್ಲಿ ಭಾರತದ ನೈಜ ಸ್ನೇಹಿತರಂತೆ ಪರಿಗಣಿಸಲು ಪ್ರಾರಂಭಿಸಿರುವುದು ಸಹ ಸಂತೋಷಕರ ಸಂಗತಿಯಾಗಿದೆ. ಆದ್ದರಿಂದ ಸಮಾಜವಾದಿ ರಾಷ್ಟ್ರಗಳೊಂದಿಗೆ ಸಂಬಂಧವನ್ನು ಬೆಸೆಯುವಲ್ಲಿ ಕಾಂಗ್ರೆಸ್ ತೊಡಗಿಕೊಂಡಿತು(40:10.02.57p8-10;58:p18).

ಕೇಂದ್ರ ಸರ್ಕಾರ ಮತ್ತು ಅಖಿಲ ಭಾರತ ಕಾಂಗ್ರೆಸ್‌ನ್ನು ವಿಮರ್ಶೆಗೊಳಪಡಿಸಿದ ನಂತರ, ಪ್ರಣಾಳಿಕೆಯು ಕೇರಳದಲ್ಲಿ ಕಾಂಗ್ರೆಸ್ ಪಕ್ಷದ ನ್ಯೂನತೆಗಳನ್ನು ಪಟ್ಟಿಮಾಡಿ ಪ್ರಸ್ತುತಪಡಿಸಿತು. ಪಂಡಿತ್ ನೆಹರೂ ಮತ್ತು ಅಖಿಲ ಭಾರತ ಕಾಂಗ್ರೆಸ್ ನಾಯಕತ್ವದ ಪ್ರಗತಿಪರ ಹೆಜ್ಜೆಗಳನ್ನು ಸಹ ಕೇರಳದ ಕಾಂಗ್ರೆಸ್ಸಿಗರು ಮಾನ್ಯ ಮಾಡುತ್ತಿಲ್ಲ, ಎನ್ನುವ ವಿಚಾರವನ್ನೂ ಪ್ರಣಾಳಿಕೆಯಲ್ಲಿ ದಾಖಲಿಸಿತು(43:p65-68). ಹತ್ತು ವರ್ಷಗಳ ಕಾಂಗ್ರೆಸ್ ಆಡಳಿತದ ನಂತರವೂ ಕೇರಳವು ಒಂದು ಸಮಸ್ಯಾತ್ಮಕ ರಾಜ್ಯವಾಗಿಯೇ ಮುಂದುವರಿದ್ದರೆ, ಅದಕ್ಕೆ ಸಂಪೂರ್ಣ ಜವಾಬ್ದಾರಿಯನ್ನು ಸ್ಥಳೀಯ ಕಾಂಗ್ರೆಸ್ ಮುಖಂಡರೇ ಹೊರಬೇಕಾಗುತ್ತದೆ. ಕೇರಳದ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರದ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಇಲ್ಲಿಯ ಕಾಂಗ್ರೆಸ್ ಸರ್ಕಾರ ಸಂಪೂರ್ಣ ವಿಫಲವಾಗಿದೆ. ಪಂಚವಾರ್ಷಿಕ ಯೋಜನೆಯ ಭಾಗವಾಗಿ ಕೇರಳಕ್ಕೆ ಮಂಜೂರಾದ ಮೊತ್ತವನ್ನು ಸಹ ಅವರು ಖರ್ಚು ಮಾಡಲಿಲ್ಲ. ಅದಕ್ಕೆ ಬದಲಾಗಿ, ಅವರು ಮತೀಯ ಕಲಹಗಳಲ್ಲಿ ತೊಡಗಿಕೊಂಡು ನ್ಯಾಯಯುತವಾದ ಅಗತ್ಯಗಳಿಗೆ ಹೋರಾಡಿದ ಜನರ ಮೇಲೆ ದಬ್ಬಾಳಿಕೆ ನಡೆಸಿದರು(40:10.02.57p10). ಈ

ಕ್ರಮಗಳು ದೇಶಭಕ್ತ ಕಾಂಗ್ರೆಸ್ಸಿಗರಲ್ಲೂ ದ್ವೇಷ ಮತ್ತು ಅತೃಪ್ತಿಯನ್ನು ಕೆರಳಿಸಿರುತ್ತದೆ, ಎಂದು ಪ್ರಣಾಳಿಕೆಯಲ್ಲಿ ಸ್ಪಷ್ಟಪಡಿಸಿರುತ್ತದೆ.

ಕೊಳೆಯುತ್ತಿರುವ ಕಾಂಗ್ರೆಸ್ ಆಡಳಿತದ ವಿರುದ್ಧದ 'ಜನಪರ' ಆಂದೋಲನದ ನಾಯಕತ್ವವು ಕಮ್ಯುನಿಸ್ಟ್ ಪಕ್ಷದ ಕೈಯಲ್ಲಿ ಸುರಕ್ಷಿತವಾಗಿರುತ್ತದೆ ಎಂಬ ಭರವಸೆಯನ್ನು ಪ್ರಣಾಳಿಕೆಯಲ್ಲಿ ಸ್ಪಷ್ಟವಾದ ಮಾತುಗಳಲ್ಲಿ ಹೇಳಲಾಗಿದೆ. ಜನರು ಕಾಂಗ್ರೆಸ್ ಆಡಳಿತದಿಂದ ಬೇಸತ್ತಿದ್ದಾರೆಂದೂ ಇನ್ನು ಮುಂದೆ ಕಾಂಗ್ರೆಸ್ ಪಕ್ಷದ ಜನವಿರೋಧಿ ನೀತಿಯನ್ನು ಸಹಿಸಲು ಸಾಧ್ಯವಿಲ್ಲವೆಂದೂ ಈ ದಾಖಲೆಯಲ್ಲಿ ಅಡಿಗೆರೆಹಾಕಿ ಹೇಳಲಾಗಿದೆ. 1952ರ ಮತ್ತು 1954ರ ಸಾರ್ವತ್ರಿಕ ಚುನಾವಣೆಯಲ್ಲೂ 1954ರ ಮಲಬಾರ್ ಡಿಸ್ಟ್ರಿಕ್ಟ್ ಬೋರ್ಡ್ ಚುನಾವಣೆಯಲ್ಲೂ 1955ರ ಕೊನೆಯಲ್ಲೂ 1956ರ ಆರಂಭದಲ್ಲೂ ತಿರು-ಕೊಚ್ಚಿ ಪ್ರದೇಶದಲ್ಲಿ ನಡೆದ ಮುನ್ಸಿಪಲ್ ಚುನಾವಣೆಗಳಲ್ಲೂ ಕಾಂಗ್ರೆಸ್ ವಿರುದ್ಧದ ಜನಾಭಿಪ್ರಾಯವು ಸ್ಪಷ್ಟವಾಗಿ ಪ್ರತಿಫಲಿಸಿರುತ್ತದೆ(40:15.04.56p5). ಮುಂದಿನ ಚುನಾವಣೆಯಲ್ಲಿ ಜನ ಕಾಂಗ್ರೆಸನ್ನು ತೀವ್ರವಾಗಿ ತಿರಸ್ಕರಿಸುತ್ತಾರೆ. ಏಕೆಂದರೆ, ಜನಾಭಿಪ್ರಾಯಕ್ಕೆ ವಿರುದ್ಧವಾಗಿ ಆಡಳಿತ ನಡೆಸುವ ಬಹುಮತದ ಪಕ್ಷಕ್ಕೆ ಸೋಲು ಅನಿವಾರ್ಯವಾದ ತೀರ್ಪಾಗಲಿದೆ ಎಂದು ಪ್ರಣಾಳಿಕೆಯಲ್ಲಿ ನುಡಿದಿರುತ್ತದೆ(40:15.04.56p5).

ಬಹುಪಾಲು ಜನರು ಪ್ರಗತಿಪರ ನೀತಿಗಳ ಪರವಾಗಿ ಮತ ಚಲಾಯಿಸಿದಾಗ ಮಾತ್ರವೇ ರಾಜ್ಯದ ರಾಜಕೀಯ ಅನಿಶ್ಚಿತತೆ ಕೊನೆಗೊಳ್ಳಲು ಸಾಧ್ಯವಾಗುತ್ತದೆ, ಎಂದು ಪ್ರಣಾಳಿಕೆ ನೆನಪಿಸಿತು. ಜನರ ಈ ಇಚ್ಛೆಯನ್ನು ಪೂರ್ಣಗೊಳಿಸುವುದಕ್ಕಾಗಿಯೇ ಕಮ್ಯುನಿಸ್ಟ್ ಪಕ್ಷವು ಈ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು(40:10.02.57p9). ಕಮ್ಯುನಿಸ್ಟರು ಆಡಳಿತ ನಡೆಸಿದ್ದ ಪಂಚಾಯತುಗಳ ಇತಿಹಾಸ ಮತ್ತು ಮಲಬಾರ್ ಜಿಲ್ಲಾ ಮಂಡಳಿಯಲ್ಲಿ ಆಡಳಿತವನ್ನು ಯಶಸ್ವಿಯಾಗಿ ನಿರ್ವಹಿಸಿದ್ದರ ಫಲವಾಗಿ, ಚುನಾವಣೆಯಲ್ಲಿ ಜನರ ತೀರ್ಪು ತಮ್ಮ ಪರವಾಗಿ ಬಂದದ್ದೇ ಆದರೆ, ಕಮ್ಯುನಿಸ್ಟ್ ಪಕ್ಷಕ್ಕೆ ಪರಿಣಾಮಕಾರಿಯಾಗಿ ಆಡಳಿತ ನಡೆಸಲು ಸಾಧ್ಯವಾಗುತ್ತದೆ, ಎಂದು ಚುನಾವಣಾ ಪ್ರಣಾಳಿಕೆಯಲ್ಲಿ ಹೇಳಲಾಗಿತ್ತು(40:10.02.57p9).

ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಅನೇಕ ಪುರಸಭೆಗಳು ಮತ್ತು ಮಲಬಾರ್ ಡಿಸ್ಟ್ರಿಕ್ಟ್ ಬೋರ್ಡ್ ಆಡಳಿತವು ಹಿಂದೆಂದಿಗಿಂತಲೂ ಉತ್ತಮವಾಗಿದೆಯೆಂದು ಜನರು ಅರ್ಥ ಮಾಡಿಕೊಂಡಿದ್ದಾರೆ. ಮಾತ್ರವಲ್ಲ, ಉತ್ತಮ ಆಡಳಿತಕ್ಕಾಗಿ ಪ್ರಧಾನಿ ನೆಹರೂ ಅವರಿಂದ ಎರಡು ಪಂಚಾಯತ್‌ಗಳನ್ನು ಆಯ್ಕೆ ಮಾಡಿ ಪ್ರಶಸ್ತಿ ಪಡೆದಿರುವುದು ಸಹ, ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಆಡಳಿತವಿರುವ ಪಂಚಾಯತುಗಳೇ ಆಗಿದ್ದವು ಎನ್ನುವುದು ಗಮನಾರ್ಹ ಸಂಗತಿ. ಹೋರಾಟ ಮಾಡಲು ಜನರನ್ನು ಒಗ್ಗೂಡಿಸುವುದು ಮಾತ್ರವಲ್ಲ, ಆಡಳಿತವನ್ನು ಯಶಸ್ವಿಯಾಗಿ ನಡೆಸುವುದಕ್ಕೂ ಕಮ್ಯುನಿಸ್ಟ್ ಪಕ್ಷಕ್ಕೆ ಸಾಧ್ಯ

ಎಂಬುದನ್ನು ಈ ಅನುಭವಗಳು ಸ್ಪಷ್ಟಪಡಿಸುತ್ತವೆ.

ಕೇರಳವನ್ನು ಪ್ರಜಾಸತ್ತಾತ್ಮಕ ಮತ್ತು ಸಮೃದ್ಧ ರಾಜ್ಯವನ್ನಾಗಿ ಅಭಿವೃದ್ಧಿಗೊಳಿಸುವುದೊಂದೇ ಕಮ್ಯುನಿಸ್ಟ್ ಪಕ್ಷದ ಗುರಿಯೆಂದು, ಮತದಾರರಿಗೆ ಅಂತಿಮ ಕರೆ ನೀಡುವ ಸಮಯದಲ್ಲಿ ಪ್ರಣಾಳಿಕೆಯನ್ನು ಪ್ರಕಟಿಸಲಾಯಿತು. ಆಗ ಮಾತ್ರವೇ ಪಕ್ಷವು ಜನರನ್ನು ಆತ್ಮವಿಶ್ವಾಸದಿಂದ ಎದುರಿಸಲು ಸಾಧ್ಯವಾಗುತ್ತದೆ ಎಂದೂ ಪ್ರಣಾಳಿಕೆ ಹೇಳುತ್ತದೆ.

ಆರ್ಥಿಕ, ಸಾಮಾಜಿಕ ಮತ್ತು ಆಡಳಿತಾತ್ಮಕ ಸುಧಾರಣೆಗಳನ್ನು ಪ್ರಣಾಳಿಕೆಯ ಕೊನೆಯಲ್ಲಿ ನಮೂದಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಕೆಳಗೆ ಉಲ್ಲೇಖಿಸಿ ವಿಮರ್ಶೆಗೊಳಪಡಿಸಲಾಗಿದೆ(40:10.02.57p8-10;168:p22-24;43:p68-70;37:p61-62).

1. ರಾಷ್ಟ್ರೀಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅಗತ್ಯವಿರುವ ಹಣವನ್ನು ಪಡೆಯಲು, ಎರಡನೇ ಪಂಚವಾರ್ಷಿಕ ಯೋಜನೆಯಡಿ ಕೇರಳದ ಬಂಡವಾಳದ ಪಾಲು 870 ದಶಲಕ್ಷ ರೂಪಾಯಿಗಳಿಂದ 2000 ದಶಲಕ್ಷ ರೂಪಾಯಿಗಳಿಗೆ ಹೆಚ್ಚಿಸಲು ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸಲಾಗುವುದು.
2. ಕೈಗಾರಿಕೆಗಳನ್ನು ಉತ್ತೇಜಿಸಲು ಮತ್ತು ಆ ಮೂಲಕ ಹೊಸ ಉದ್ಯೋಗಗಳನ್ನು ಸೃಷ್ಟಿಸಲು ಇದನ್ನು ಬಳಸಿಕೊಳ್ಳಲಾಗುವುದು.
3. ಕಾಯರ್ ಮತ್ತು ಕೈಮಗ್ಗದಂತಹ ಕೈಗಾರಿಕೆಗಳಲ್ಲಿ ಸಹಕಾರ ಸಂಘಗಳನ್ನು ಪ್ರಾರಂಭಿಸಲು ನಿಧಿಯ ಒಂದು ಭಾಗವನ್ನು ಮೀಸಲಿಡಲಾಗುವುದು.
4. ಕೈಗಾರಿಕಾ ಕಾರ್ಮಿಕರಿಗೆ ಮತ್ತು ತೋಟದ/ಎಸ್ಟೇಟ್ ಕಾರ್ಮಿಕರಿಗೆ ವೇತನ ಹೆಚ್ಚಳಕ್ಕೆ ಅವಕಾಶ ಕಲ್ಪಿಸಲಾಗುವುದು.
5. ಕಾರ್ಮಿಕರ ವೇತನದ ಮೇಲೆ ಶೇಕಡಾ 12.5 ಬೋನಸ್ ಹೆಚ್ಚಳವನ್ನು ಪ್ರಣಾಳಿಕೆಯಲ್ಲಿ ಕಲ್ಪಿಸಲಾಗಿದೆ.
6. ಕೃಷಿ ಕ್ಷೇತ್ರದಲ್ಲಿ ಆಮೂಲಾಗ್ರ ಬದಲಾವಣೆ ತರಲು ಕೃಷಿ ಕುರಿತ ಮಸೂದೆಯನ್ನು ಸಿದ್ಧಪಡಿಸಲಾಗುವುದು. ಗೇಣಿದಾರರ ಹಿತಾಸಕ್ತಿಗಳನ್ನು ರಕ್ಷಿಸುವುದು, ಹಿಡುವಳಿ ಭೂಮಿಯ ಮೇಲಿನ ಮಿತಿ, ಹೆಚ್ಚುವರಿ ಭೂಮಿಯನ್ನು ಭೂರಹಿತರಿಗೆ ವಿತರಿಸುವುದು ಮತ್ತು ನ್ಯಾಯಯುತವಾದ ಗೇಣಿಯನ್ನು ನಿರ್ಧರಿಸುವುದು ಮುಂತಾದವುಗಳು ಮಸೂದೆಯ ಉದ್ದೇಶವಾಗಿರುತ್ತದೆ.
7. ಗೇಣಿದಾರರಿಗೆ ತ್ವರಿತ ರೀತಿಯಲ್ಲಿ ಪರಿಹಾರ ಕ್ರಮಗಳನ್ನು ಒದಗಿಸಿ, ಸ್ವಾಧೀನದ ಅವಧಿಯ ವಿಷಯದಲ್ಲಿ ಅಸ್ತಿತ್ವದಲ್ಲಿರುವ ಸ್ಥಿತಿಯನ್ನೇ ಮುಂದುವರಿಸುವ, ಪ್ರಸ್ತಾವಿತ ಕೃಷಿಗೆ ಸಂಬಂಧಿಸಿದ ಮಸೂದೆಯನ್ನು ಅಂಗೀಕರಿಸುವುದಕ್ಕೂ ಮೊದಲು ಗೇಣಿದಾರರನ್ನು ಒಕ್ಕಲೆಬ್ಬಿಸುವಿಕೆಯನ್ನು ತಡೆಗಟ್ಟುವ ಉದ್ದೇಶದಿಂದ ಗೇಣಿದಾರರ ಒಕ್ಕಲೆಬ್ಬಿಸುವಿಕೆ ವಿರೋಧಿ ಮಸೂದೆಯನ್ನು ಜಾರಿಗೊಳಿಸುವುದು.
8. ಕೇರಳವು ಒಂದು ಆಹಾರ ಕೊರತೆಯಿರುವ ರಾಜ್ಯ ಎನ್ನುವ ನೆಲೆಯಿಂದ,

ಹೆಚ್ಚು ಆಹಾರ ಬೆಳೆಯುವ ರಾಜ್ಯವೆಂದು ಕೇರಳವನ್ನು ಮೇಲ್ದರ್ಜೆಗೆ ಏರಿಸುವ ರೀತಿಯಲ್ಲಿ, ಆಹಾರ ಉತ್ಪಾದನೆಯನ್ನು ಹೆಚ್ಚಿಸಲು ವಿಶೇಷ ಗಮನ ಕೊಡುವುದು.

9. ಸಮಂಜಸವಾದ ಬೆಲೆಯಲ್ಲಿ ಅಗತ್ಯ ಗೃಹನಿರ್ಮಾಣ ವಸ್ತುಗಳ ಸಮರ್ಪಕ ಪೂರೈಕೆಯನ್ನು ಖಚಿತಪಡಿಸಿಕೊಳ್ಳಲು ಶಕ್ತವಾದ ವಸತಿ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸಿ ಕಾರ್ಯಗತಗೊಳಿಸುವುದು.

10. ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರ, ವಿದ್ಯಾರ್ಥಿಗಳ ಪ್ರತಿಭಟನೆಗಳಲ್ಲಿ ಪೋಲೀಸರ ಹಸ್ತಕ್ಷೇಪವನ್ನು ತಪ್ಪಿಸಲು, ಅಸ್ತಿತ್ವದಲ್ಲಿರುವ ಪೊಲೀಸ್ ನೀತಿಯನ್ನು ಪರಿಷ್ಕರಿಸುವುದು. ಕಾರ್ಮಿಕ ವರ್ಗಕ್ಕೆ 'ಅನಿರ್ಬಂಧಿತ ಸ್ವಾತಂತ್ರ್ಯ'ಕ್ಕೆ ಅವಕಾಶ ನೀಡುವುದಾಗಿತ್ತು ನಿಜವಾದ ಗುರಿ. ಕಾರ್ಮಿಕರ ಹಿತಾಸಕ್ತಿಗಳನ್ನು ರಕ್ಷಿಸುವ ವಿಧದಲ್ಲಿ, ಕಾರ್ಮಿಕ ಕಾನೂನುಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವುದು.

11. ಚಹಾ ಮತ್ತು ಕಾಫಿಯಂತಹ ವಿದೇಶಿ ಮಾಲೀಕತ್ವದ ತೋಟಗಳನ್ನು ರಾಷ್ಟ್ರೀಕರಣಗೊಳಿಸುವುದು.

12. ಶಿಕ್ಷಣ ಕ್ಷೇತ್ರವನ್ನು ಸಮಗ್ರವಾಗಿಯು, ಶಾಲೆಗಳಿಗೆ ಸರ್ಕಾರ ಆರ್ಥಿಕ ನೆರವು ನೀಡುವ ವ್ಯವಸ್ಥೆಯನ್ನು ಪುನರ್ರಚಿಸುವುದು.

13. ಒಟ್ಟಾರೆಯಾಗಿ ರಾಜ್ಯದ ಆಡಳಿತ ವ್ಯವಸ್ಥೆಯ ಅಧಿಕಾರವಿಕೇಂದ್ರೀಕರಣದ ಮೂಲಕ ಪುನರ್ರಚಿವುದು. ಸರ್ಕಾರದ ಕೆಲಸಗಳ ದಕ್ಷತೆಯನ್ನು ಹೆಚ್ಚಿಸಿ ಕಡತಗಳ ಇತ್ಯರ್ಥದಲ್ಲಿ ಆಗುತ್ತಿರುವ ವಿಳಂಬ ತಪ್ಪಿಸಿ, ಮಿತವ್ಯಯ ನೀತಿಯನ್ನು ಅಳವಡಿಸಿಕೊಳ್ಳಲು ಸೂಕ್ತ ಕ್ರಮಕೈಗೊಳ್ಳಲಾಗುವುದು.

14. ಆಡಳಿತದಲ್ಲಿ ಪಾರದರ್ಶಕತೆಯನ್ನು ಖಚಿತಪಡಿಸಿಕೊಳ್ಳಲು, ಭ್ರಷ್ಟಾಚಾರ ಮತ್ತು ಸ್ವಜನಪಕ್ಷಪಾತಗಳ ವಿರುದ್ಧ ತೀವ್ರ ತರಹದ ಸರ್ಕಾರಿ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು.

ಹೀಗೆ ಸಮೃದ್ಧ ಕೇರಳವನ್ನು ರೂಪಿಸಲು ಸಾಧ್ಯವಾಗುವಂತೆ ಅಲ್ಪಾವಧಿ ಮತ್ತು ದೀರ್ಘಾವಧಿಯ ಕಾರ್ಯಕ್ರಮಗಳನ್ನು ಕಮ್ಯುನಿಸ್ಟ್ ಪಕ್ಷದ ಪ್ರಣಾಳಿಕೆಯಲ್ಲಿ ಒಳಗೊಳಿಸಲಾಗಿತ್ತು(28:p70).

## ಕಮ್ಯುನಿಸ್ಟ್ ಪಕ್ಷದ ಚುನಾವಣಾ ಪ್ರಚಾರ

ಕಾಂಗ್ರೆಸ್ ಸೇರಿದಂತೆ ಇತರೆ ಪಕ್ಷಗಳ ಮೇಲೆ ಆರೋಪಗಳ ದಾಳಿ ನಡೆಸಿ ಚುನಾವಣಾ ಪ್ರಚಾರದಲ್ಲಿ ಮೇಲುಗೈ ಸಾಧಿಸಲು ಪ್ರಣಾಳಿಕೆಯು ಕಮ್ಯುನಿಸ್ಟ್ ಪಕ್ಷಕ್ಕೆ ಒಂದು ದೊಡ್ಡ ಆಯುಧವಾಗಿತ್ತು. ಪ್ರಣಾಳಿಕೆಯೊಂದಿಗೆ ಸುಸಜ್ಜಿತಗೊಂಡ ಪಕ್ಷಕ್ಕೆ ಸುಮಾರು ಮೂರು ಲಕ್ಷ ಕಾರ್ಯಕರ್ತರನ್ನು ಯಶಸ್ವಿಯಾಗಿ ಸಂಘಟಿಸಲು ಸಾಧ್ಯವಾಯಿತು(68:14.04.57). ಸಣ್ಣ ಸಣ್ಣ ಸ್ವಯಂಸೇವಕ ಗುಂಪುಗಳಾಗಿ ವಿಂಗಡಿಸಿ, ಮನೆ-ಮನೆಗೆ ಭೇಟಿ, ಪ್ರಮುಖ ಬೀದಿ, ಪೇಟೆ, ವೃತ್ತಗಳಲ್ಲಿ ಸಭೆ, ಪ್ರಾತ್ಯಕ್ಷಿಕೆ ಮುಂತಾದವುಗಳನ್ನು ನಿಖರವಾಗಿ ಸಂಘಟಿಸಿ, ಪ್ರಚಾರ ನಡೆಸಲಾದವು.

ಈ ಕಾಲದಲ್ಲಿ ಕೇರಳ ಪೀಪಲ್ಸ್ ಆರ್ಟ್ಸ್ ಕ್ಲಬ್ (ಕೆ.ಪಿ.ಎ.ಸಿ.) ಕೇರಳದಾದ್ಯಂತ ಸೈದ್ಧಾಂತಿಕ ಸಾಂಸ್ಕೃತಿಕ ವೇದಿಕೆಗಳ ಪ್ರಚಾರದಲ್ಲಿ ಸಂದರ್ಭೋಚಿತವಾಗಿ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಲಾಯಿತು. ತೊಪ್ಪಿಲ್‌ಭಾಸಿಯವರ ಪ್ರಸಿದ್ಧ ನಾಟಕ 'ನೀವು ನನ್ನನ್ನು ಕಮ್ಯುನಿಸ್ಟ್‌ನನ್ನಾಗಿ ಮಾಡಿದಿರಿ', ಕೆ.ಪಿ.ಎ.ಸಿ.ಯ ಕಲ್ಚರಲ್ ಗ್ರೂಪ್‌ನಿಂದ ಸಂಗೀತ ಕಾರ್ಯಕ್ರಮ ಇವೇ ಮುಂತಾದವು ಜನರಲ್ಲಿ ಆವೇಶ ತುಂಬಿಸಿ, ಹುರಿದುಂಬಿಸಿದವು ಮತ್ತು ಕಮ್ಯುನಿಸ್ಟ್ ಪಕ್ಷದ ಪರವಾಗಿ ಗಟ್ಟಿಯಾಗಿ ನಿಲ್ಲುವಂತೆ ಮನವೊಲಿಸಿದವು. ಇದೊಂದು, ಪೂರ್ವನಿದರ್ಶನಗಳಿಲ್ಲದಂಥ ಸಂಪೂರ್ಣ ವಿನೂತನವಾದ ಕಾರ್ಯಕ್ರಮವಾಗಿತ್ತು(37:p62-107). ಕೆಪಿಎಸಿ ತಾರೆಯರಾದ ಸುಲೋಚನಾ, ಸುಧರ್ಮ, ವಿಜಯಕುಮಾರಿ, ಓ. ಮಾಧವನ್, ಕೆಎಸ್ ಜಾರ್ಜ್ ಮತ್ತು ಪಿಕೆ ಮೇದಿನಿ ಮುಂತಾದವರು ಬೆಳಗುವ ಬೆಳಕಿಗೆ ತೆರೆದುಕೊಂಡರು. ಅವರೆಲ್ಲರೂ ನೈಜಸಂಗಾತಿಗಳಾಗಿದ್ದರು. ಕಮ್ಯುನಿಸ್ಟ್ ಕ್ರಾಂತಿಕಾರಿ ಶಕ್ತಿಯನ್ನು ಕ್ರಿಯಾಶೀಲವಾಗಿಡುವಲ್ಲಿ ಅವರ ಕೊಡುಗೆ ಅಮೂಲ್ಯವಾದುದು.

> ವೈ.ಕೆ.ದಾಮೋದರನ್ ಅವರ 'ಪಾಟ್ಟಬಾಕ್ಕಿ', ಚೆರುಕಾಡ್ ಗೋವಿಂದ ಪಿಶಾರಡಿಯವರ 'ನಮ್ಮಳಾಣ್' (ಇದು ನಾವೇ), ಇ.ಕೆ.ಅಯಮುವಿನ 'ನೀನು ಒಳ್ಳೆಯ ಮನುಷ್ಯನಾಗಲು ನೋಡು' ಮುಂತಾದ ಉತ್ಕೃಷ್ಟ ನಾಟಕಗಳು ಜನಮಾನಸದಲ್ಲಿ ಕಮ್ಯುನಿಸ್ಟ್ ಸಿದ್ಧಾಂತದ ಮುದ್ರೆಯೊತ್ತಲೂ ಆ ಮೂಲಕ ಪ್ರಚಾರ ತೀವ್ರ ಪರಿಣಾಮಕಾರಿಯಾಗುವಂತೆ ಮಾಡಲೂ ಸಾಧ್ಯವಾಯಿತು(69:p29-31).

ಚುನಾವಣಾ ಪ್ರಚಾರವನ್ನು ಬಲಪಡಿಸಲು, ಚುನಾವಣಾ ಪ್ರಚಾರಕ್ಕೆ ಸನ್ನದ್ಧಗೊಳಿಸಲು, ಪಕ್ಷದ ವ್ಯವಸ್ಥೆಯನ್ನು ಸಜ್ಜುಗೊಳಿಸಲು ಕಮ್ಯುನಿಸ್ಟ್ ಪಕ್ಷವು ಜಿಲ್ಲಾ ಸಮಿತಿಗಳಿಗೆ ವಿವಿಧ ಕಾರ್ಯಕ್ರಮಗಳನ್ನು ಪ್ರಾರಂಭಿಸಲು ವಹಿಸಿಕೊಡಲಾಯಿತು. ಅವುಗಳನ್ನು ಕೆಳಗೆ ನೀಡಲಾಗಿದೆ.

1. ತ್ರಿಶೂರ್, ಆಲುವಾ ಮತ್ತು ಎರ್ನಾಕುಲಂನಲ್ಲಿ ನಡೆದ ಪಾರ್ಟಿ ಸಮ್ಮೇಳನದ ನಿರ್ಧಾರಗಳು ಮತ್ತು ಚುನಾವಣಾ ಪ್ರಣಾಳಿಕೆಯನ್ನು ವಿವರವಾಗಿ ಚರ್ಚಿಸಲು ಸಭೆಗಳನ್ನು ಕರೆಯುವುದು.
2. ಪಕ್ಷದ ನಿರ್ಧಾರಗಳನ್ನು ವಿವರಿಸಲು ಪಕ್ಷದ ಸದಸ್ಯರು ಮತ್ತು ಹಿತೈಷಿಗಳ ಸಭೆಗಳನ್ನು ಕರೆಯುವುದು.
3. ಚುನಾವಣಾ ಪ್ರಚಾರವನ್ನು ತೀವ್ರಗೊಳಿಸಲು ಪಕ್ಷದ ಸದಸ್ಯರ ಸಣ್ಣ ಗುಂಪುಗಳನ್ನು ರಚಿಸುವುದು.
4. ಚುನಾವಣಾ ಪ್ರಣಾಳಿಕೆಯ ಆಧಾರದ ಮೇಲೆ ಸಿದ್ಧಪಡಿಸಿದ ಹೇಳಿಕೆಗಳನ್ನು ಮನೆ-ಮನೆಗೆ ವಿತರಿಸಲು, ನಿಧಿ, ದೇಣಿಗೆ ಸಂಗ್ರಹಿಸಿ ಸ್ವೀಕರಿಸಲು, ವ್ಯವಸ್ಥೆ ಮಾಡುವುದು.

ಇಂತಹ ಚಟುವಟಿಕೆಗಳಿಗೆ ಜನರು ಸಕ್ರಿಯವಾಗಿ ಸ್ಪಂದಿಸಿದ್ದಾರೆ, ಎಂದು ಪುತ್ತುಪ್ಪಲ್ಲಿ ರಾಘವನ್ ಹೇಳುತ್ತಾರೆ. 'ಮೊದಲ ಘಟ್ಟದಲ್ಲಿ ಬದ್ಧತೆಯುಳ್ಳ ಪಕ್ಷದ ಸದಸ್ಯರು ಮಾತ್ರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ಆದರೆ ಹೆಚ್ಚು ತಡವಾಗದೆ, ವಿದ್ಯಾರ್ಥಿಗಳು, ಯುವಕರು ಮತ್ತು ಹಿರಿಯರು ತಂಡದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸತೊಡಗಿದರು. ಅವರು ಹೆಚ್ಚು ಹುರುಪಿನಿಂದ ಕ್ರಾಂತಿಗೀತೆಗಳನ್ನು ಹಾಡಿದರು. ಇದು ಸಂಪೂರ್ಣವಾಗಿ ವಿಭಿನ್ನ ಅನುಭವವಾಗಿತ್ತು(37:p81).

ಕೇರಳದಲ್ಲಿ ಕಾಂಗ್ರೆಸ್ಸಿಗರಿಗೆ ಸೌಮ್ಯ ರೀತಿಯ ಪ್ರಚಾರ ವಿಧಾನಗಳನ್ನು ಅಳವಡಿಸಿಕೊಳ್ಳುವಂತೆ ಉನ್ನತಾಧಿಕಾರದ ನಾಯಕರಿಂದ ಸೂಚನೆ ನೀಡಲಾಯಿತು(48:p12). ಕಾಂಗ್ರೆಸ್ ಅಧ್ಯಕ್ಷ ಯು.ಎನ್. ದೇಬಾರ್ ಅವರು ಚುನಾವಣಾ ಪ್ರಚಾರಕ್ಕಾಗಿ ಕೇರಳಕ್ಕೆ ಆಗಮಿಸಿದ್ದರು. ಕಮ್ಯುನಿಸ್ಟ್ ಆಡಳಿತವಿರುವ ಪುರಸಭೆ ಮತ್ತು ಕಮ್ಯುನಿಸ್ಟರ ಭದ್ರಕೋಟೆಯಾದ ಅಲಪ್ಪುಟಿಕ್ಕೆ ಬಂದಾಗ ಅವರು ಭಾಷಣ ಮಾಡುತ್ತಾ, ಹೀಗೆ ಹೇಳಿದರು:

> "ಭಾರತದ ರಾಜ್ಯವನ್ನು ಹೇಗೆ ಆಳಬೇಕು ಎಂಬುದರ ಕುರಿತು ಮಾಸ್ಕೋ ಗ್ರಂಥಾಲಯದಲ್ಲಿ ಒಂದೇ ಒಂದು ಪುಸ್ತಕವೂ ಲಭ್ಯವಿಲ್ಲ. ಆಡಳಿತವೆನ್ನುವುದು ಮಕ್ಕಳ ಆಟವಲ್ಲ. ಒಂದೋ ಎರಡೋ ಪುರಸಭೆಗಳು ಹಿಡಿತದಲ್ಲಿವೆ ಎಂದು ಭಾವಿಸಿ, ಕಮ್ಯುನಿಸ್ಟರು ಇಡೀ ರಾಜ್ಯದ ಆಡಳಿತವನ್ನು ಕೈಗೆತ್ತಿಕೊಳ್ಳುವಷ್ಟು ಪ್ರಬುದ್ಧರಾಗಿಲ್ಲ"(48:p12)

ಎನ್ನುವ ಉಪದೇಶವನ್ನೂ ನೀಡಿದರು.

ದೇಬಾರರವರ ಭಾಷಣಗಳು ಮತ್ತು ಪ್ರಸ್ತಾವನೆಗಳೆಲ್ಲವೂ ಕಮ್ಯುನಿಸ್ಟರನ್ನೇ ಉತ್ತೇಜಿಸುವಂತಿದ್ದವು. ಅವರ ಕೆಲವು ಮಾತುಗಳ ಪದಪ್ರಯೋಗಗಳು ಕಮ್ಯುನಿಸ್ಟರನ್ನು ಅವಹೇಳನ ಮಾಡುವಂತಿದ್ದವು. ಕಮ್ಯುನಿಸ್ಟ್ ಪಕ್ಷದ ಬೆಂಬಲಿತ ಸ್ವತಂತ್ರ ಅಭ್ಯರ್ಥಿಯ ಕ್ಷೇತ್ರದಲ್ಲಿ ಕಾಂಗ್ರೆಸ್ ಅಶ್ಲೀಲ ರೀತಿಯ ಒಂದು ಪದಪ್ರಯೋಗ ನಡೆಸಿತು. ಮುಖಕ್ಕೆ ಬಣ್ಣ ಬಳಿದುಕೊಂಡು ಅನೇಕ ಪಕ್ಷಗಳೊಂದಿಗೆ ಚೆಲ್ಲಾಟವಾಡುತ್ತಾ, ಮೈಬಿಸಿ ಮಾಡಿಸಿಕೊಳ್ಳುವ ಹೆಣ್ಣಿನೊಂದಿಗೆ ಸ್ವತಂತ್ರ ಅಭ್ಯರ್ಥಿಯನ್ನು ಹೋಲಿಕೆಮಾಡಿ ಚಿತ್ರಿಸಲು ಪ್ರಯತ್ನಿಸಿದ ದೇಬಾರ್, ಈ ಸ್ವತಂತ್ರ ಅಭ್ಯರ್ಥಿಗಳೇ ರಾಷ್ಟ್ರಕ್ಕೆ 'ದೊಡ್ಡ ಅಪಾಯ' ಎನ್ನುವ ಎಚ್ಚರಿಕೆಯನ್ನೂ ನೀಡಿದ್ದರೆಂದು ಎಚ್.ಡಿ. ಮಾಳವೀಯ ಗಮನಸೆಳೆದಿದ್ದಾರೆ. ಕಾಂಗ್ರೆಸ್ ಅಧ್ಯಕ್ಷರ ಈ ಹೇಳಿಕೆಯನ್ನೇ ಗೇಲಿ ಮಾಡುವ ರೀತಿಯಲ್ಲಿ, ಎ.ಕೆ. ಗೋಪಾಲ್ ವಿರುದ್ಧ ಕಾಸರಗೋಡು ಲೋಕಸಭಾ ಕ್ಷೇತ್ರದಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಡಾ. ಶೆಣೈಯನ್ನು ಬೆಂಬಲಿಸಿ ಕಾಸರಗೋಡು ನಗರದಲ್ಲಿ ಪಂಡಿತ್ ಜವಾಹರಲಾಲ್ ನೆಹರೂ ಮತ್ತು ಪಣಂಪಲ್ಲಿ ಗೋವಿಂದಮೆನನ್‌ರವರು ಭಯಾನಕವಾಗಿ ಭಾಷಣ ಬಿಗಿದಿದ್ದರು(8:p227).

ಕೇರಳದ ಚುನಾವಣೆಗೆ ಸಂಬಂಧಿಸಿದಂತೆ ಕಾಂಗ್ರೆಸ್ ಪರವಾಗಿ ಕೆಲಸ ಮಾಡಿದ ದೊಡ್ಡ ಅಂಶವೆಂದರೆ, ಕ್ಯಾಥೊಲಿಕ್ ಪಾದ್ರಿಗಳ ಮತ್ತು ಕ್ರಿಶ್ಚಿಯನ್ ತೋಟದ/ಎಸ್ಟೇಟ್ ಮಾಲೀಕರ ಅಚಲ ಬೆಂಬಲ(70:01.04.59p10-66). 'ಧರ್ಮನಿಂದನೆ'ಗೈಯುವ ಮಾರ್ಕ್ಸ್‌ವಾದಿಗಳ(71:p92) ವಿರುದ್ಧ ಮತ ಚಲಾಯಿಸಲು ಕರೆ ನೀಡಿದ ಕ್ಯಾಥೋಲಿಕ್ ಪಾದ್ರಿಗಳು, ಹಾಗೆ ಮಾಡುವಂತೆ ಒತ್ತಾಯಿಸುವ ಕರಪತ್ರಗಳನ್ನು(72:p95) ಪ್ರಕಟಿಸಿದರು. ಕಮ್ಯುನಿಸ್ಟ್ ವಿರೋಧಿ ಪ್ರಚಾರಕ್ಕಾಗಿ ಮುದ್ರಣ ಮಾಧ್ಯಮವು, ಪ್ರಮುಖವಾಗಿ 'ಮಲಯಾಳ ಮನೋರಮಾ' ಪತ್ರಿಕೆ, ಕಾಂಗ್ರೆಸ್ ಪರವಾಗಿ ಜನರ ಅನುಕಂಪ ಗಿಟ್ಟಿಸಲು ತನ್ನೆಲ್ಲ ಪ್ರಯತ್ನ ಮಾಡಿತು. ಕಮ್ಯುನಿಸ್ಟರು ಚುನಾವಣೆಯಲ್ಲಿ ಗೆದ್ದರೆ, ಕೇರಳವು ದೊಡ್ಡ ಆಪತ್ತಿನಲ್ಲಿ ಸಿಲುಕಿಕೊಳ್ಳುತ್ತದೆ ಎನ್ನುವ ರೀತಿಯಲ್ಲಿ, ಮನೋರಮಾ ಪತ್ರಿಕೆಯು ಕಮ್ಯುನಿಸ್ಟರನ್ನು ಬಿಂಬಿಸಲಾರಂಭಿಸಿತು.* ಕೇರಳದಲ್ಲಿ ಕಮ್ಯುನಿಸ್ಟರು ಚುನಾವಣೆಯನ್ನು ನಿಭಾಯಿಸಿದ ವಿಧಾನ ಕಾಂಗ್ರೆಸ್ಸಿಗಿಂತ ಭಿನ್ನವಾಗಿತ್ತು. ಕಾಂಗ್ರೆಸ್ಸಿಗರಷ್ಟು ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಕಮ್ಯುನಿಸ್ಟರಿಗೆ ಸಾಧ್ಯವಾಗಲಾರದು ಎಂದು ಯಾವುದೇ ಸಂದೇಹವಿಲ್ಲದೆ ಹೇಳಬಹುದು. ಏಕೆಂದರೆ, ಇಡೀ ಶ್ರೀಮಂತವರ್ಗ ಒಗ್ಗಟ್ಟಾಗಿ ಕಾಂಗ್ರೆಸ್‌ನ ಬೆಂಬಲಕ್ಕೆ ನಿಂತಿತ್ತು. ಆದರೆ ಅಕ್ಷರಸ್ಥರೂ ಸಾಮಾನ್ಯರೂ ಆದ ಮತದಾರರನ್ನು ಪ್ರಭಾವಿಸಲು ಕಮ್ಯುನಿಸ್ಟರಿಗೆ ಸಾಧ್ಯವಾಯಿತು(58:p7). ಕಾಂಗ್ರೆಸ್ಸಿಗರು ಪ್ರಚಾರದ ಸಮಯದಲ್ಲಿ ಭಾಷಣಗಳನ್ನು ಮಾತ್ರ ಹೆಚ್ಚಾಗಿ ಅವಲಂಬಿಸಿದ್ದರು. ಮೂಲಭೂತವಾಗಿ ಜನಜೀವನ ಸುಧಾರಣೆ ಮಾಡುವಂಥ ಯಾವುದೇ ರಚನಾತ್ಮಕ ನಿರ್ದೇಶನಗಳನ್ನಾಗಲೀ ಆರ್ಥಿಕ ವಿಚಾರಗಳನ್ನಾಗಲೀ ಜನರ ಮುಂದಿಡಲಿಲ್ಲ. ದೈನಂದಿನ ಜೀವನದಲ್ಲಿ ಸಾಮಾನ್ಯ ಜನರು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳು ಮತ್ತು ತೊಂದರೆಗಳ ಮೇಲೆ ಕೇಂದ್ರೀಕರಿಸಿ ಕಮ್ಯುನಿಸ್ಟರು ಜನರ ಮನಸ್ಸಿಗೆ ತಲುಪುವಂತೆ ತಮ್ಮ ಪ್ರಚಾರ ನಡೆಸಿದರು. ಹೊಸದಾಗಿ ರೂಪುಗೊಂಡ ಐಕ್ಯಕೇರಳಕ್ಕಾಗಿ ಆರ್ಥಿಕ ಯೋಜನೆಯೊಂದನ್ನು ಆಯೋಜಿಸಲು ತಿಂಗಳುಗಳ ಕಾಲ ಕಮ್ಯುನಿಸ್ಟ್ ಪಕ್ಷದ ರಾಜ್ಯ ಸಮಿತಿಯಲ್ಲಿ ಸಂಶೋಧನಾ ರೀತಿಯ ಅಧ್ಯಯನ, ನಡೆಸಿದ್ದು, ಈ ಸಂದರ್ಭದಲ್ಲಿ ವಿಶೇಷವಾಗಿ ಉಲ್ಲೇಖಿಸಲು ಎಡೆಮಾಡಿಕೊಟ್ಟಿರುತ್ತದೆ. ಈ ಅಧ್ಯಯನದ ಫಲಿತಾಂಶಗಳನ್ನು ಸಿಪಿಐ ರಾಜ್ಯ ಸಮಿತಿಯ ಆಗಿನ ಕಾರ್ಯದರ್ಶಿ ಅಚ್ಯುತ ಮೆನನ್

---

* 'ಮಲಯಾಳಂ ಮನೋರಮಾ'ರವರ ಕಮ್ಯುನಿಸ್ಟ್ ವಿರೋಧಿ ಪ್ರಚಾರವು ತುಂಬಾ ಪ್ರಬಲವಾಗಿತ್ತು. ಕೇರಳದಲ್ಲಿ ಕಮ್ಯುನಿಸ್ಟರು ಅಧಿಕಾರಕ್ಕೆ ಬಂದರೆ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು ಮನೋರಮಾ ಮುಖ್ಯಸ್ಥರಾದ ಶ್ರೀ ಮಾಮನಮಾಪಿಳ, 1940 ಮತ್ತು 50ರ ದಶಕದಲ್ಲಿ ಘೋಷಿಸಿದ್ದರು, ಎಂದು ದಾಖಲಿಸಲಾಗಿದೆ(34:p222). 1970ರಲ್ಲಿ ಪ್ರಕಟಿತ 'ಮಾಮನ ಮಾಪಿಲ ಸ್ಮಾರಕ'ದಲ್ಲಿ ಶ್ರೀ. ಕೆ.ಸಿ. ಜಾರ್ಜ್ ಮಲಯಾಳಂ ಮನೋರಮಾ ಅವರ ಕಮ್ಯುನಿಸ್ಟ್ ವಿರುದ್ಧತೆಯನ್ನು ಸ್ಪಷ್ಟವಾಗಿ ಹೇಳಲಾಗಿದೆ. ಕಮ್ಯುನಿಸ್ಟ್ ಪಕ್ಷ ಅಧಿಕಾರಕ್ಕೆ ಬಂದ ಮೇಲೆ ಮಾಮನ ಮಾಪಿಲ ಕುಟುಂಬ ವಿಷ ಮಾರಿ ಹಣ ಗಳಿಸುತ್ತಿದ್ದಾರೆ ಎಂದು ಕೆ.ಸಿ. ಜಾರ್ಜ್ ವ್ಯಂಗ್ಯವಾಗಿ ಸೂಚಿಸಿದ್ದರು. ಮಲಯಾಳಂ ಮನೋರಮಾ ಹಾಗೂ ಕಮ್ಯುನಿಸ್ಟ್ ವಿರೋಧಿ ಅಪಪ್ರಚಾರದ ಪ್ರಸಾರ ಕಮ್ಯುನಿಸ್ಟರ ವಿರುದ್ಧ ವಿಷ ಮಾರುವುದಕ್ಕೆ ಸಮಾನವಾಗಿದೆ ಎಂದು ಕೆ.ಸಿ. ಜಾರ್ಜ್ ಅವರದು ಪರೋಕ್ಷವಾಗಿ ಅವಲೋಕಿಸಿದ್ದರು.

ಅವರು ದೀರ್ಘವಾದ ವಿವರಗಳೊಂದಿಗೆ ಕರಪತ್ರದಲ್ಲಿ ಒಳಗೊಳಿಸಿದ್ದಾರೆ. ಕೇರಳದ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ನಿರ್ಣಯಿಸುವುದರ ಜೊತೆಗೆ, ಈ ಕರಪತ್ರವು ಜನರು ಎದುರಿಸುತ್ತಿರುವ ನಿರ್ಣಾಯಕ ಸಮಸ್ಯೆಗಳನ್ನು ತಿಳಿಸುವುದಲ್ಲದೆ, ಹಣಕಾಸಿನ ತೊಂದರೆಗಳ ಬಗ್ಗೆ ಒಳನೋಟಗಳನ್ನೂ ಒದಗಿಸುತ್ತದೆ(73:). ಈ ಕರಪತ್ರವು ಮೂರ್ತವಾದ ಮತ್ತು ಪ್ರಾಯೋಗಿಕ ಸಲಹೆಗಳನ್ನು ಜನರ ಮುಂದಿಟ್ಟಿತ್ತು. ಸಿಪಿಐನ ಚುನಾವಣಾ ಪ್ರಣಾಳಿಕೆಗೆ ಪೂರಕವಾಗಿ ನೀಡಿದ ಅನುಬಂಧದ ಈ ಕರಪತ್ರದಲ್ಲಿ ಇಂತಹ ಅಮೂಲ್ಯ ಅಂಶಗಳನ್ನು ಒಳಗೊಳಿಸಲಾಗಿತ್ತು(12:p85).

ಕಾಂಗ್ರೆಸ್‌ಗಿಂತ ಕಮ್ಯುನಿಸ್ಟ್ ಪ್ರಚಾರವೇ ಹೆಚ್ಚು ಮತದಾರರ ಮೇಲೆ ಪ್ರಭಾವ ಬೀರಿತು. ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರು ವಿವಿಧ ರಾಜಕೀಯ ಪಕ್ಷಗಳು ಅನುಸರಿಸುವ ನೀತಿಗಳ ಅನುಕೂಲಗಳನ್ನು ಮತ್ತು ದೌರ್ಬಲ್ಯಗಳನ್ನು ಮತದಾರರಿಗೂ ಸ್ಪಷ್ಟವಾಗಿ ವಿವರಿಸಿದರು(74:p84).

ಕಮ್ಯುನಿಸ್ಟರು ಬಹಳ ಸೂಕ್ಷ್ಮವಾಗಿಯೂ ಕಾಳಜಿಯಿಂದಲೂ ಚುನಾವಣೆಯನ್ನು ನಿಭಾಯಿಸಿದರು. ಅಭ್ಯರ್ಥಿಗಳ ಆಯ್ಕೆಯನ್ನು ಬಹಳ ವಿವೇಕ ಮತ್ತು ಕಾಳಜಿಯಿಂದ ಮಾಡಲಾಗಿತ್ತು. ಕಾಂಗ್ರೆಸಿನ ದೋಷಪೂರಿತ ಅಭ್ಯರ್ಥಿ ನಿರ್ಣಯ ವ್ಯವಸ್ಥೆಗಿಂತ ಭಿನ್ನವಾಗಿತ್ತು, ಕಮುನಿಸ್ಟ್ ಅಭ್ಯರ್ಥಿಗಳ ನಿರ್ಣಯ ವ್ಯವಸ್ಥೆ. ಕಮ್ಯುನಿಸ್ಟ್ ಪಾಳಯದಲ್ಲಿ ಟಿಕೆಟ್ ಅಥವಾ ಗುಂಪುಗಾರಿಕೆಗಳ ಸಮಸ್ಯೆ ಇರಲಿಲ್ಲ(48:p13). ಚುನಾವಣಾ ಅಧಿಸೂಚನೆಗಿಂತಲೂ ಮುಂಚಿತವಾಗಿ ಕಮ್ಯುನಿಸ್ಟ್ ಪಕ್ಷದ ರಾಜ್ಯ ನಾಯಕತ್ವವು, ಪ್ರತಿಯೊಂದು ಕ್ಷೇತ್ರದ ವಿಶೇಷತೆಗಳನ್ನು ಮತ್ತು ವಿಭಿನ್ನ ರಾಜಕೀಯ ಪಕ್ಷಗಳ ಪ್ರಭಾವಗಳ ಬಗ್ಗೆ ಗಮನ ಕೊಟ್ಟು ಅರ್ಥಮಾಡಿಕೊಂಡಿತ್ತು. ಗೆಲ್ಲುವ ಸಾಮರ್ಥ್ಯವಿರುವ ಪ್ರತಿಭಾವಂತ ಸ್ವತಂತ್ರ ಅಭ್ಯರ್ಥಿಗಳನ್ನು ಕಣಕ್ಕಿಳಿಸಲು ಕಮ್ಯುನಿಸ್ಟ್ ಪಕ್ಷ ಹಿಂಜರಿಯಲಿಲ್ಲ(69:p57;12:pp56). ಅಭ್ಯರ್ಥಿಗಳನ್ನು ನಿರ್ಧರಿಸುವಲ್ಲಿ ಕೆಳಮಟ್ಟದ ಸಮಿತಿಗಳ ಶಿಫಾರಸುಗಳನ್ನು ಪಕ್ಷವು ಎಚ್ಚರಿಕೆಯಿಂದ ಪರಿಗಣಿಸಿತು. ತಪ್ಪುಗಳ್ಯಾವುವು ಉಂಟಾಗದಂತೆ ಬಹಳ ಹಿಂದೆಯೇ ಕಮ್ಯುನಿಸ್ಟ್ ಪಕ್ಷವು ರೂಪಿಸಿದ ಚುನಾವಣಾ ತಂತ್ರಗಾರಿಕೆಯಿಂದ ನಾಮಪತ್ರಗಳನ್ನು ಸಲ್ಲಿಸಲಾದವು. ಆ ಮೂಲಕ ಸದೃಢವಾದ ಒಗ್ಗಟ್ಟಿನಿಂದ ಪಕ್ಷವು ಚುನಾವಣಾ ಅಖಾಡಕ್ಕಿಳಿಯಿತು(48:p14).

ಚುನಾವಣೆಯಲ್ಲಿ ಕೆಟ್ಟ ರೀತಿಯ ತಂತ್ರಗಾರಿಕೆ ಮತ್ತು ಪ್ರಚಾರದಲ್ಲಿ ಸಿಲುಕಿಕೊಂಡ ಕಾಂಗ್ರೆಸ್ ಪಕ್ಷ ಭಾರೀ ಬೆಲೆ ತೆರಬೇಕಾಯಿತು. ಅನುಕರಣೀಯ ರೀತಿಯಲ್ಲಿ ಏಕತೆ, ಸುಶಿಕ್ಷಿತ ಸ್ವಯಂಸೇವಕರು, ಸಮರ್ಥ ನಾಯಕತ್ವ, ತಾರ್ಕಿಕ ಶ್ರೇಷ್ಠತೆ, ನಿರ್ಭಯತೆ ಮತ್ತು ಉದ್ದೇಶಕ್ಕೆ ಪೂರಕವಾದ ಸಮರ್ಪಣಾ ಮನೋಭಾವನೆ ಮುಂತಾದ ವಿಶಿಷ್ಟತೆಗಳಿಂದಾಗಿ, ಕೇರಳದ ಕಮ್ಯುನಿಸ್ಟರಿಗೆ ಚುನಾವಣೆಯನ್ನು ನಿಭಾಯಿಸುವುದು ಹೆಚ್ಚು ತ್ರಾಸದಾಯವಾಗಲಿಲ್ಲ(59:p7). 1952ರ ಚುನಾವಣೆಯಲ್ಲಿ,

ಅವರು ಎಲ್ಲಾ ಸ್ಥಾನಗಳಿಗೂ ಸ್ಪರ್ಧಿಸಿ, ತಮ್ಮ ಶಕ್ತಿಯನ್ನು ವ್ಯರ್ಥ ಮಾಡಿಕೊಂಡಿದ್ದ, ಆಂಧ್ರಪ್ರದೇಶದ ತಮ್ಮ ಸಂಗಾತಿಗಳು ಮಾಡಿದ ತಪ್ಪುಗಳಿಂದ ಪಾಠ ಕಲಿತು, ಕೇರಳದ ಕಮ್ಯುನಿಸ್ಟರು ಬುದ್ಧಿವಂತಿಕೆಯಿಂದ ಕೇವಲ 100 ಸ್ಥಾನಗಳಲ್ಲಿ ಸ್ಪರ್ಧಿಸಲು ನಿರ್ಧರಿಸಿದರು(53:p41;2:p121). ಸ್ವಾತಂತ್ರ್ಯ ಹೋರಾಟಗಾರರಲ್ಲಿದ್ದ ಉತ್ಸಾಹ ಮತ್ತು ತ್ಯಾಗ ಮನೋಭಾವನೆ ಕಾಂಗ್ರೆಸ್ ಅಭ್ಯರ್ಥಿಗಳಿಗೆ ಇರಲಿಲ್ಲ. ಇಎಂಎಸ್ ನಂಬೂದಿರಿಪಾಡ್, ಎ.ಕೆ. ಗೋಪಾಲನ್, ಸಿ. ಅಚ್ಯುತಮೇನನ್, ಕೆ. ದಾಮೋದರನ್, ಕೆ.ಪಿ.ಆರ್. ಗೋಪಲನ್, ಇ.ಪಿ. ಗೋಪಾಲನ್, ಇ. ಗೋಪಾಲಕೃಷ್ಣಮೇನನ್, ಕೆ.ಸಿ.ಜಾರ್ಜ್, ಟಿ.ಸಿ.ನಾರಾಯಣನ್ ನಂಬಿಯಾರ್, ಪಿ.ಟಿ. ಪೂನೂಸ್, ಟಿ.ವಿ.ಥಾಮಸ್, ಆರ್. ಸುಗತನ್, ಮುಂತಾದ ವೈಯುಕ್ತಿಕ ಪ್ರಭಾವವಿರುವ ಬಹಳಷ್ಟು ಕಮ್ಯುನಿಸ್ಟ್ ಅಭ್ಯರ್ಥಿಗಳ ಉದಾಹರಣೆಗಳು ಎಡರಂಗದ ಪಾಳೆಯದಲ್ಲಿ ಕಂಡುಬಂದಿದ್ದವು(69:p57).

**ಚುನಾವಣಾ ಫಲಿತಾಂಶ**

ಫೆಬ್ರವರಿ 1957ರಂದು ಕೇರಳ ವಿಧಾನಸಭೆಗೆ ಮೊದಲ ಚುನಾವಣೆ ನಡೆಯಿತು. ಒಟ್ಟು 126 ಸ್ಥಾನಗಳಲ್ಲಿ* 11 ಪರಿಶಿಷ್ಟ ಜಾತಿಗಳಿಗೂ ಒಂದು ಸ್ಥಾನ ಪರಿಶಿಷ್ಟ ಪಂಗಡದವರಿಗೂ ಕಾಯ್ದಿರಿಸಲಾಗಿತ್ತು. ವಿಧಾನಸಭಾ ಕ್ಷೇತ್ರಗಳ ಸಂಖ್ಯೆ 114 (ಅದರಲ್ಲಿ 12 ಉಭಯ ಶಾಸಕರ ಕ್ಷೇತ್ರಗಳಾಗಿದ್ದವು/ಒಂದು ವಿಧಾನಸಭೆ ಕ್ಷೇತ್ರಕ್ಕೆ ಇಬ್ಬರು ಶಾಸಕರನ್ನು ಆಯ್ಕೆ ಮಾಡುವಂತೆ)** ಆಗಿತ್ತು. ಮತದಾರರ ಸಂಖ್ಯೆ 7,514,626, ಚಲಾವಣೆಯಾದ ಒಟ್ಟು ಮಾನ್ಯ ಮತಗಳ ಸಂಖ್ಯೆ 5.837,577 ಆಗಿದ್ದು,ಶೇಕಡ 65.49 ಮತದಾನವಾಗಿತ್ತು(78:). ಒಬ್ಬ ಅಭ್ಯರ್ಥಿ ಅವಿರೋಧವಾಗಿ ಆಯ್ಕೆಯಾಗಿದ್ದರು.*** 125 ಸ್ಥಾನಗಳಿಗೆ ಸ್ಪರ್ಧೆ ನಡೆದಿತ್ತು. ಚುನಾವಣಾ ಕಣದಲ್ಲಿ 389 ಅಭ್ಯರ್ಥಿಗಳಿದ್ದರು****.

ಪಿಎಸ್‌ಪಿ ಮತ್ತು ಮುಸ್ಲಿಮ್ ಲೀಗ್ ನಡುವಿನ ಚುನಾವಣಾ ಒಪ್ಪಂದವನ್ನು ಹೊರತುಪಡಿಸಿ ಬೇರೆ ಯಾವುದೇ ಚುನಾವಣಾ ಮೈತ್ರಿಗಳು ಇರಲಿಲ್ಲ(44:p13). ಆದ್ದರಿಂದ ತ್ರಿಕೋನ ಮತ್ತು ಚತುರ್ಭುಜ ಸ್ಪರ್ಧೆಗಳು ಹಲವಾರು ಕ್ಷೇತ್ರಗಳಲ್ಲಿದ್ದವು. ನೇರ ಸ್ಪರ್ಧೆ 21 ಕ್ಷೇತ್ರಗಳಲ್ಲಿ ಮಾತ್ರ ಇತ್ತು(78:p41-50).

1957ರ ಚುನಾವಣೆಯ ಫಲಿತಾಂಶಗಳನ್ನು ಈ ಕೆಳಗೆ ಪಟ್ಟಿಮಾಡಿ ತೋರಿಸಲಾಗಿದೆ(44:p13).

---

* 92. ಶಾಸನ ಸಭೆಯಲ್ಲಿ ನಾಮನಿರ್ದೇಶಿತ ಆಂಗ್ಲೋ-ಇಂಡಿಯನ್ ಸದಸ್ಯರೂ ಸೇರಿದಂತೆ ಒಟ್ಟು 127 ಸದಸ್ಯರಿದ್ದರು.

** ದ್ವಿಸದಸ್ಯ ಕ್ಷೇತ್ರಗಳಲ್ಲಿ ಪ್ರತಿಯೊಬ್ಬ ಮತದಾರರು ಇಬ್ಬರಿಗೆ ಮತ ಹಾಕಬಹುದು.

*** ಮಂಜೇಶ್ವರಂನಿಂದ ಎಂ.ಉಮೇಶ್ ರಾವ್ ಅವರು ಅವಿರೋಧವಾಗಿ ಆಯ್ಕೆಯಾದ ಸ್ವತಂತ್ರ ಸದಸ್ಯರು.

**** ಕಮ್ಯುನಿಸ್ಟ್ ಪಕ್ಷವು 19 ಸ್ವತಂತ್ರ ಅಭ್ಯರ್ಥಿಗಳನ್ನು ಬೆಂಬಲಿಸಿತ್ತು.

| ರಾಜಕೀಯ ಪಕ್ಷ | ಸ್ಪರ್ಧಿಸಿದ ಸ್ಥಾನಗಳ ಸಂಖ್ಯೆ | ಗೆದ್ದ ಸ್ಥಾನಗಳ ಸಂಖ್ಯೆ | ಠೇವಣಿ ನಷ್ಟವಾದದ್ದು |
|---|---|---|---|
| ಕಾಂಗ್ರೆಸ್ | 124 | 43 | 5 |
| ಕಮ್ಯುನಿಸ್ಟ್ ಪಕ್ಷ | 100 | 60 | 4 |
| ಪಿ.ಎಸ್.ಪಿ. | 62 | 9 | 28 |
| ಆರ್‌ಎಸ್‌ಪಿ | 28 | 0 | 22 |
| ಮುಸ್ಲೀಂ ಲೀಗ್ | 19 | 8 | 0 |
| ಕಮ್ಯುನಿಸ್ಟ್ ಪಕ್ಷದ ಬೆಂಬಲಿತ ಸ್ವತಂತ್ರ ಅಭ್ಯರ್ಥಿಗಳು | 19 | 5 | 0 |
| ಸ್ವತಂತ್ರ ಅಭ್ಯರ್ಥಿಗಳು | 37 | 0 | 31 |
| **ಒಟ್ಟು** | **389** | **125** | **90** |

ರಾಜ್ಯದ ಒಂಬತ್ತು ಜಿಲ್ಲೆಗಳಲ್ಲೂ ಕಮ್ಯುನಿಸ್ಟ್ ಪಕ್ಷ ಅಭ್ಯರ್ಥಿಗಳನ್ನು ಕಣಕ್ಕಿಳಿಸಿತ್ತು. ಸ್ಪರ್ಧಿಗಳ ಸಂಖ್ಯೆಯಲ್ಲಿ ಕಾಂಗ್ರೆಸ್‌ಗಿಂತ ಸ್ವಲ್ಪ ಹಿಂದೆ ಕಮ್ಯುನಿಸ್ಟ್ ಪಕ್ಷವಿತ್ತು. ಪಕ್ಷದ ಸದಸ್ಯರಾಗಿರುವ 100 ಅಭ್ಯರ್ಥಿಗಳ ಜೊತೆಗೆ, ಯಾವುದೇ ಪಕ್ಷದೊಂದಿಗೆ ಸಂಬಂಧವಿಲ್ಲದ ಎಲ್ಲಾ 19 ಅಭ್ಯರ್ಥಿಗಳನ್ನು ಕಮ್ಯುನಿಸ್ಟ್ ಪಕ್ಷವು ಬೆಂಬಲಿಸಿತ್ತು. ಮೇಲ್ನೋಟಕ್ಕೆ, ಇವು ಕಮ್ಯುನಿಸ್ಟೇತರ ಅಭ್ಯರ್ಥಿಗಳು ಗೆಲ್ಲುವ ಸಾಧ್ಯತೆಯಿರುವ ಕ್ಷೇತ್ರಗಳಾಗಿದ್ದವು.

ಕಮ್ಯುನಿಸ್ಟ್ ಪಕ್ಷವು ತನ್ನದೇ ಅಭ್ಯರ್ಥಿಗಳನ್ನು ನಿಲ್ಲಿಸದ ಅಥವಾ ಸ್ವತಂತ್ರ ಅಭ್ಯರ್ಥಿಗಳನ್ನು ಬೆಂಬಲಿಸದ ಏಳು ಕ್ಷೇತ್ರಗಳೂ ಇದ್ದವು. ಕಾಂಞಿರಪಳ್ಳಿ, ಪುಲಿಯನೂರು, ಚಾಲಕುಡಿ, ವಡಕ್ಕಾಂಚೇರಿ ತಾಣೂರು, ಕೊಡುವಳ್ಳಿ, ಮಂಜೇಶ್ವರಂ ಮುಂತಾದವುಗಳೇ ಆ ಏಳು ಕ್ಷೇತ್ರಗಳು. ಈ ಕ್ಷೇತ್ರಗಳಲ್ಲಿ ನಾಮಮಾತ್ರದಷ್ಟು ಮಾತ್ರ ಬೆಂಬಲ ಪಕ್ಷಕ್ಕೆ ಸಿಗುವುದೆಂದು ಭಾವಿಸಿ ಅಲ್ಲಿ ಸ್ಪರ್ಧಿಸಿರಲಿಲ್ಲ(44:p18). ಪುಲಿಯೂರ್, ಚಾಲಕುಡಿ ಮುಂತಾದ ಸ್ಥಳಗಳಲ್ಲಿ ಪಿ.ಎಸ್.ಪಿ. ಅಭ್ಯರ್ಥಿಗಳಿಗೆ ಬೆಂಬಲ ನೀಡಿತು. ಹೀಗಾಗಿ ಪಿಎಸ್‌ಪಿ ಅಭ್ಯರ್ಥಿಗಳ ಗೆಲುವಿನಲ್ಲಿ ಪಕ್ಷಕ್ಕೆ ನಿರ್ಣಾಯಕ ಪಾತ್ರವನ್ನು ವಹಿಸಲು ಸಾಧ್ಯವಾಯಿತು(45:p127).

## ಕಮ್ಯುನಿಸ್ಟ್ ಯಶಸ್ಸು–ವಿಭಿನ್ನ ಮೌಲ್ಯಮಾಪನಗಳು

ಚುನಾವಣೆಯಲ್ಲಿ ಒಟ್ಟು ಚಲಾಯಿಸಿ ಸಿಂಧುವಾದ ಮತಗಳ ಸಂಖ್ಯೆ 5837577 ಆಗಿತ್ತು. ಅದರಲ್ಲಿ ಕಮ್ಯುನಿಸ್ಟ್ ಪಕ್ಷ 2377962 ಮತಗಳನ್ನು ಪಡೆದುಕೊಂಡಿತು. ಶೇಕಡಾವಾರು ಮತಗಳನ್ನು ಪರಿಗಣಿಸುವುದಾದರೆ (40.74), ಕಮ್ಯುನಿಸ್ಟ್ ಪಕ್ಷ (ಸ್ವತಂತ್ರರು ಸೇರಿದಂತೆ) ಬಹುಮತದ ಪಕ್ಷವಾಗಿ ಹೊರಹೊಮ್ಮಿತು. ಅದೇ ರೀತಿ ಪಕ್ಷಕ್ಕೆ 65 ಸ್ಥಾನಗಳನ್ನು ಗೆಲ್ಲಲು ಸಾಧ್ಯವಾಯಿತು(78:). ಸಂಪೂರ್ಣವಾಗಿಯೂ



ಮುಖ್ಯಮಂತ್ರಿಯಾಗಿ ಇ.ಎಂ.ಎಸ್. ಪ್ರಮಾಣವಚನ ಸ್ವೀಕರಿಸುತ್ತಿರುವುದು...

ಗಮನಾರ್ಹವಾದ ಯಶಸ್ಸಾಗಿತ್ತದು*. ಹಿಂದಿನ ಚುನಾವಣೆಗಳಲ್ಲಿ ಸ್ವಂತ ಪ್ರದರ್ಶನ ಮತ್ತು ಇತರ ಪಕ್ಷಗಳ ಪ್ರದರ್ಶನಗಳಿಗೆ ಹೋಲಿಕೆ ಮಾಡಿ ನೋಡಿದರೆ, 1957ರಲ್ಲಿ ಕೇರಳದಲ್ಲಿ ನಡೆದ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷವು ಅಸಾಧಾರಣ ಪ್ರಗತಿಯನ್ನು ದಾಖಲಿಸಿತು.** ಕಾಂಗ್ರೆಸ್ ವೈಫಲ್ಯವು ಅನಿರೀಕ್ಷಿತ ಮತ್ತು ಆಘಾತಕಾರಿಯಾಗಿತ್ತು. 'ದಿ ಸ್ಟೇಟ್ಸ್‌ಮ್ಯಾನ್' ಲೇಖಕರ ಅಭಿಪ್ರಾಯದಲ್ಲಿ,

> "ಕಾಂಗ್ರೆಸ್‌ನ ಭದ್ರಕೋಟೆಯಾಗಿದ್ದ ತ್ರಿಶೂರ್ ಕೂಡ, ಕಾಗದದ ರಟ್ಟಿನ ಅರಮನೆಯಂತೆ ಕುಸಿದುಬಿದ್ದಿತ್ತು. ಸ್ವಂತ ಕ್ಷೇತ್ರದಲ್ಲಿ ಮಾಜಿ ಮುಖ್ಯಮಂತ್ರಿ ಪಣಂಪಳ್ಳಿ ಗೋವಿಂದ ಮೆನನ್ ಪಡೆದಂಥ ಸೋಲು ಕಾಂಗ್ರೆಸ್‌ನ ಪ್ರತಿಷ್ಠೆಗೆ ಭಾರೀ ಹೊಡೆತ ನೀಡಿತು"(66:20.03.57).

ಅಧಿಕಾರದಲ್ಲಿದ್ದಾಗ ಕಾಂಗ್ರೆಸಿನ ವಿರುದ್ಧ ಕೇಳಿ ಬಂದ ಭ್ರಷ್ಟಾಚಾರ, ಸ್ವಜನಪಕ್ಷಪಾತಗಳ ಆರೋಪಗಳು ಕಾಂಗ್ರೆಸ್ ಪಾಲಿಗೆ ಅನಿವಾರ್ಯವಾದ ದುರಂತಕ್ಕೆ ಕಾರಣವಾಯಿತು(83:p80).

> "ಒಮ್ಮೆ ಆಳವಾಗಿ ಬೇರೂರಿಕೊಂಡಿದ್ದ ದೊಡ್ಡ ಮರಕ್ಕೆ ಅಂಟಿಕೊಂಡಿರುವ ಒಂದು ಪರವಾಲಂಬಿ ಗಿಡ,"

ಎಂದು ಕಾಂಗ್ರೆಸ್‌ಗೆ ಸಹಾನುಭೂತಿ ತೋರಿಸುವ ಮಾತೃಭೂಮಿ ದಿನಪತ್ರಿಕೆಯಲ್ಲಿ

* ಕಾಂಗ್ರೆಸ್ ಕೇವಲ 37.84% ಮತಗಳನ್ನು ಪಡೆದಿದೆ ಸಿಪಿಐ 2.5% ಮತಗಳ ಸ್ಪಷ್ಟ ಮೇಲುಗೈ ಸಾಧಿಸಿದೆ. ಒಟ್ಟು ಶೇ.40.70ರಷ್ಟು ಮತಗಳು ಲಭಿಸಿವೆ.

** 1954ರ ತಿರುವಾಂಕೂರು-ಕೊಚ್ಚಿನ್ ಅಸೆಂಬ್ಲಿ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷ, ಕಾಂಗ್ರೆಸ್ ಮತ್ತು ಪಿಎಸ್‌ಪಿ ಕ್ರಮವಾಗಿ 35, 115 ಮತ್ತು 38. ಅಭ್ಯರ್ಥಿಗಳನ್ನು ಕಣಕ್ಕಿಳಿಸಿದ್ದವು. ಒಟ್ಟು ಸ್ಥಾನಗಳು 117. ಕಮ್ಯುನಿಸ್ಟ್ ಪಕ್ಷ 23 ಸ್ಥಾನಗಳನ್ನು ಪಡೆದರೆ, ಕಾಂಗ್ರೆಸ್ ಮತ್ತು ಪಿಎಸ್‌ಪಿ ಕ್ರಮವಾಗಿ 45 ಮತ್ತು 19 ಸ್ಥಾನಗಳನ್ನು ಗೆದ್ದಿದೆ. 38.08312 ಮಾನ್ಯ ಮತಗಳು ಚಲಾವಣೆಯಾದವು ಕಮ್ಯುನಿಸ್ಟ್ ಪಕ್ಷ 629791 (16.1%) ಮತ್ತು ಕಾಂಗ್ರೆಸ್ 1758283 (42.2%) ಪಿಎಸ್‌ಪಿ 589140 (12.2%) ಮತಗಳು ಲಭಿಸಿವೆ.

ಪ್ರಕಟವಾದ ವಿಶೇಷ ಚುನಾವಣಾ ಅವಲೋಕನ, ರಾಜ್ಯದ ಕಾಂಗ್ರೆಸ್ ನಾಯಕರನ್ನು ಅವಹೇಳನಕಾರಿಯಾಗಿ ಬಣ್ಣಿಸಲಾಗಿತ್ತು. ಈ ವಿಮರ್ಶೆಯು ಕಮ್ಯುನಿಸ್ಟ್ ವಿಜಯದ ಕಾರಣಗಳನ್ನು ವಿವರಿಸುತ್ತಲೇ ಅದನ್ನು ಹೀಗೆ ಹೇಳಲಾಗಿದೆ:

> "ಇದೀಗ ಪಕ್ಷವು ಕೇರಳದ ನೆಲದಲ್ಲಿ ಆಳವಾಗಿ ಬೇರೂರಿದ್ದು, ಪಕ್ಷವು ಕಾರ್ಯಕರ್ತರ ನಿರಂತರ ಪರಿಶ್ರಮದಿಂದಾಗಿ ಬೆಳೆಸಲ್ಪಟ್ಟಿದೆ. ಪ್ರತಿಯೊಂದು ದೂರದ ಹಳ್ಳಿಯಲ್ಲೂ ದೃಢವಾಗಿರುವ ಕಮ್ಯುನಿಸ್ಟ್ ಕಾರ್ಯಕರ್ತರು, ಅತ್ಯಂತ ಕೆಳವರ್ಗದ ಜನರ ಸಹಾನುಭೂತಿ ಗಳಿಸಿ, ಅವರೊಂದಿಗೆ ಗುರುತಿಸಿಕೊಳ್ಳುವವರಾಗಿದ್ದಾರೆ. ಮೇಲ್ನೋಟಕ್ಕೆ ಕಮ್ಯುನಿಸ್ಟ್ ಕಾರ್ಯಕರ್ತ ಒಬ್ಬ ಅಲೆಮಾರಿಯೇ ಹೌದು. ಆದರೆ ಅವನದೇ ಹಳ್ಳಿಯಲ್ಲಿ ಅವನು ಸರ್ವರೊಂದಿಗೂ ಸಂಪರ್ಕದಲ್ಲಿರುತ್ತಾನೆ. ಹಾಗೆಯೇ ಪಕ್ಷದ ಸಂದೇಶವನ್ನು ಆತ ಎದೆಯಲ್ಲಿರಿಸಿಕೊಳ್ಳುತ್ತಾನೆ. ಯಾವಾಗಲೂ ಅವನಿಗೆ ಸ್ಫೂರ್ತಿ ನೀಡುವ ಒಂದು ಗುರಿಯಿದೆ. ಆ ಗುರಿಯನ್ನು ಸಾಧಿಸಲು ಅವನು ಸದಾ ಬದ್ಧನಾಗಿರುತ್ತಾನೆ. ಒಳ್ಳೆಯ ನಾಳೆ ಎನ್ನುವುದು ಬಹುಶಃ ಮರೀಚಿಕೆಯಾಗಬಹುದು. ಆದರೆ ಅದು ಅವನಿಗೆ ಸಂಬಂಧಿಸಿದಂತೆ ಅದು ಸಂಪೂರ್ಣ ನಿಜವೂ ಹೌದು. ಅವನು ತಮ್ಮ ಗುರಿಯನ್ನು ಸಾಧಿಸುವ ಮಾರ್ಗಕ್ಕಾಗಿ ಆತ ಕಮ್ಯುನಿಸ್ಟ್ ಪಕ್ಷದ ಕಡೆಗೆ ನೋಡುತ್ತಾನೆ. ಪಕ್ಷವನ್ನು ಆತ ತನ್ನ ದೇಹ ಮತ್ತು ಆತ್ಮ ಎಂದು ಕಾಳಜಿವಹಿಸುತ್ತಾನೆ"(7:23.03.57).

ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿ ಪ್ರಕಾಶನ ಮಾಡಿದ, 'ದಿ ರೆಡ್ ಇಂಟರ್‌ಲೂಡ್ ಇನ್ ಕೇರಳ' ಪುಸ್ತಕವು ಕಮ್ಯುನಿಸ್ಟಿನ ಯಶಸ್ಸಿಗೆ ಈ ಕೆಳಗಿನ ಕಾರಣಗಳನ್ನು ವ್ಯಕ್ತಪಡಿಸುತ್ತದೆ.

> "ಕಾಂಗ್ರೆಸ್ ಮಂತ್ರಿಮಂಡಲದ ನಿರಂತರವಾದ ಅವನತಿಗೆ, ಪಕ್ಷದ ಪಾಳಯದಲ್ಲಿದ್ದ ಆಂತರಿಕ ಸಂಘರ್ಷಣೆ ಕಾರಣವಾಗಿತ್ತು. ದೃಢವಾದ ಮತ್ತು ಸ್ಥಿರವಾದ ಸರ್ಕಾರವನ್ನು ಜನರು ಅವರ ಅಧಿಕಾರದಾವಧಿಯಲ್ಲಿ ನೋಡಬೇಕೆಂದು ಬಯಸಿದ್ದರು. ಈ ಆಸೆಯನ್ನು ಕಾಂಗ್ರೆಸ್ ಈಡೇರಿಸಲಿ ಎಂದು ಹಾರೈಸಿದ್ದ ಜನರ ನಿರೀಕ್ಷೆ ಹುಸಿಯಾಯಿತು. ಕಮ್ಯುನಿಸ್ಟ್ ಪಕ್ಷವು ಈ ಪರಿಸ್ಥಿತಿಯಲ್ಲಿ ಪರ್ಯಾಯ ಸರ್ಕಾರದ ಭರವಸೆಯೊಂದಿಗೆ ಜನರ ಬಳಿಗೆ ಬಂದರು. ಕಾಂಗ್ರೆಸ್ ಬಿಟ್ಟರೆ, ಹೊಸ ಸರ್ಕಾರ ರಚಿಸಲು ಬಹುಮತಕ್ಕೆ ಬೇಕಾಗುವಷ್ಟು ಸ್ಥಾನಗಳಿಗೆ ಸ್ಪರ್ಧಿಸಿದ್ದು ಕಮ್ಯುನಿಸ್ಟ್ ಪಕ್ಷ ಮಾತ್ರವಾಗಿತ್ತು. ಸಂಕುಚಿತ, 'ಮತೀಯತೆ' ಮತ್ತು ವೈಯುಕ್ತಿಕವಾದ ಮಾರ್ಗಗಳನ್ನು ಅನುಸರಿಸಲು ಅವರು ಯಾವುದೇ ತರಹದ ಹಿಂಜರಿಕೆಯನ್ನು ತೋರಿಸಲಿಲ್ಲ. 'ಕೇರಳ ಕೌಮುದಿ', 'ದೇಶಬಂಧು'ಮುಂತಾದ ಜನಪ್ರಿಯ ಪತ್ರಿಕೆಗಳು ಕಮ್ಯುನಿಸ್ಟ್ ಪಕ್ಷಕ್ಕೆ ಗಣನೀಯವಾಗಿ ಸಹಕರಿಸಿ ಬೆಂಬಲಿಸಿತು. ಕಾಂಗ್ರೆಸಿನ ಅಧಿಕಾರವಧಿಯಲ್ಲಿ ನಿರಾಶರಾಗಿದ್ದ ಶ್ರೀಮಂತವರ್ಗದ ಒಂದು ವಿಭಾಗವನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಕಮ್ಯುನಿಸ್ಟ್ ಪಕ್ಷ ಯಶಸ್ವಿಯಾಗಿತ್ತು"(47:p19).

ಕೇರಳದ ಸಮಕಾಲೀನ ರಾಜಕೀಯ ಪರಿಸ್ಥಿಯ ಮೇಲೆ ಒಂದು ಅಧ್ಯಯನವನ್ನು ನಡೆಸಿದ ಡಾ. ಜಿತೇಂದ್ರ ಸಿಂಗ್ ದಾಖಲೆಗಳ ಸಮೇತ ಕಾರಣಗಳನ್ನು ದಾಖಲಿಸಿದ್ದಾರೆ(42:p244-247).

1. ಕಾರ್ಯಕರ್ತರಲ್ಲಿ ಉಂಟಾದ ಸಂಘರ್ಷ, ಬಿರುಕುಗಳಿಂದಾಗಿ ಕಾಂಗ್ರೆಸ್ ಆತ್ಮವಿಶ್ವಾಸವನ್ನು ಕಳೆದುಕೊಂಡಿತು. ಕಾಂಗ್ರೆಸ್ ಒಂದು ದೃಢ ಸರ್ಕಾರ ನೀಡುತ್ತದೆ ಎನ್ನುವ ನಂಬಿಕೆ ಜನರಲ್ಲಿ ಪೂರ್ಣವಾಗಿ ನಾಶಗೊಂಡಿತ್ತು. ಕಾಂಗ್ರೆಸ್ ಪಕ್ಷದ ಬಗ್ಗೆ ಜನರಿಗಿದ್ದ ಅಸಮಾಧಾನವನ್ನು ಕಮ್ಯುನಿಸ್ಟ್ ಪಕ್ಷವು ಸಮರ್ಥವಾಗಿ ತನ್ನ ಬೆಂಬಲಕ್ಕಾಗಿ ಬಳಸಿಕೊಂಡಿತು.
2. ಆ ಸಮಯ ಕೇರಳದಲ್ಲಿ ಕಾಂಗ್ರೆಸ್ ಮತ್ತು ಪಿ.ಎಸ್.ಪಿ. ಪಕ್ಷಗಳ ಬದಲಿಗೆ, ಕಮ್ಯುನಿಸ್ಟ್ ಪಕ್ಷ ಬಿಟ್ಟರೆ ಬೇರೆ ಪಕ್ಷ ಇರಲಿಲ್ಲ. ಕಾಂಗ್ರಸಿನ ವರ್ಚಸ್ಸು ನಾಶಗೊಂಡಿತ್ತು. ಕೇರಳದಲ್ಲಿ ಪಿಎಸಪಿಗೆ ಸ್ವಂತವಾಗಿ ಸರ್ಕಾರ ರಚಿಸಲು ಸಾಧ್ಯವಾಗುತ್ತಿರಲಿಲ್ಲ ಎಂದು ಜನರಿಗೆ ಮನವರಿಕೆಯಾಗಿತ್ತು. ಕಾಂಗ್ರೆಸ್‌ನ ಕಾರ್ಯವೈಖರಿಯಿಂದ ಬೇಸತ್ತಿದ್ದ ಜನರು, ಪಿಎಸ್‌ಪಿಯನ್ನು ಬೆಂಬಲಿಸುವುದರಿಂದ ತಮ್ಮ ಮತಗಳನ್ನು ವ್ಯರ್ಥಮಾಡಿದಂತಾಗುತ್ತದೆ ಎಂದು ಭಾವಿಸಿದರು. ಸುಸ್ಥಿರ ಸರ್ಕಾರವನ್ನು ಒದಗಿಸಲು ಏಕೈಕ ಸಮರ್ಥ ಪಕ್ಷವೆಂದರೆ ಕಮ್ಯುನಿಸ್ಟ್ ಪಕ್ಷ ಮಾತ್ರ ಎನ್ನುವ ಪ್ರಜ್ಞೆ ಜನರ ಮನಸ್ಸಿನಲ್ಲಿ ದೃಢವಾಗಿ ಮೂಡಿತ್ತು.
3. ಕಮ್ಯುನಿಸ್ಟ್ ಪಕ್ಷ ಪರಿಣಾಮಕಾರಿಯಾಗಿ ಪ್ರಸ್ತುತ ಪಡಿಸಿದ ಚುನಾವಣಾ ಪ್ರಣಾಳಿಕೆಯು ವಶೀಕರಣದಂತೆ ಜನರನ್ನು ಆವರಿಸಿಕೊಂಡಿದ್ದು ಮತ್ತೊಂದು ಕಾರಣವಾಗಿ ಪರಿಣಮಿಸಿತು. ಸರ್ವ ಜನರ, ಸರ್ವ ಅಗತ್ಯಗಳನ್ನು ಪೂರೈಸಲಾಗುವುದು ಎನ್ನುವ ಭರವಸೆ ಈ ಪ್ರಣಾಳಿಕೆಯಲ್ಲಿ ಕಾಣಿಸಲಾಗಿತ್ತು. ಸಾರ್ವಜನಿಕರ ಅನುಮೋದನೆಯನ್ನು ಗಳಿಸಲುಈ ಪ್ರಣಾಳಿಕೆಯ ಸಮಗ್ರತೆಗೆ ಸಾಧ್ಯವಾಯಿತು. ಹೀಗಾಗಿ ಕೇರಳಿಯರ ಮನಸ್ಸಿನಲ್ಲಿ ಕಮ್ಯುನಿಸ್ಟ್ ಪರವಾದ ಮನೋಭಾವನೆ ಬೆಳೆಯಿತು. ಪ್ರಸ್ತುತ ಪ್ರಣಾಳಿಕೆಯು ಅಸಂತೃಪ್ತರಲ್ಲಿ ಭರವಸೆಗಳನ್ನು ಮೂಡಿಸಿದ್ದಲ್ಲದೆ, ಅವುಗಳು ಕಮ್ಯುನಿಸ್ಟ್ ಪಕ್ಷದ ಕಾರ್ಯಕ್ರಮಗಳಾಗಿ ಪರಿವರ್ತನೆಗೊಂಡವು
4. ಕಮ್ಯುನಿಸ್ಟೇತರ ಪಕ್ಷಗಳ ನಡುವೆ ಇದ್ದಂಥ ಭಿನ್ನಾಭಿಪ್ರಾಯಗಳು ಕಮ್ಯುನಿಸ್ಟರಿಗೆ ಸಹಾಯ ಮಾಡಿತು. 1957ರ ಚುನಾವಣೆ ಕಮ್ಯುನಿಸ್ಟರು ಮತ್ತು ಕಮ್ಯುನಿಸ್ಟೇತರರ ನಡುವಿನ ಯುದ್ಧವಾಗಿರಲಿಲ್ಲ. ಬದಲಿಗೆ, ಕಮ್ಯುನಿಸ್ಟರು ಒಂದು ಕಡೆ, ಪ್ರಜಾ ಸಮಾಜವಾದಿ ಪಕ್ಷ, ಕ್ರಾಂತಿಕಾರಿ ಸಮಾಜವಾದಿ ಪಕ್ಷ, ಕೇರಳ ಸಮಾಜವಾದಿ ಪಕ್ಷ, ಮುಸ್ಲಿಂ ಲೀಗ್ ಮತ್ತು ಸ್ವತಂತ್ರರು ಮುಂತಾದವರೆಲ್ಲರೂ ಮತ್ತೊಂದು ಬದಿಯಲ್ಲಿ ಸ್ಥಿರತೆಯನ್ನು ಕಾಯ್ದುಕೊಂಡು ನಡೆಸಿದ ಹೋರಾಟವಾಗಿತ್ತು.
5. ಕಮ್ಯುನಿಸ್ಟರಿಗೆ ಮರೆಮಾಡುವಂಥ ಅಥವಾ ಗುಪ್ತವಾಗಿಟ್ಟುಕೊಳ್ಳುವಂಥ ಯಾವುದೇ ಸಂಗತಿಗಳಿರಲಿಲ್ಲ, ಏಕೆಂದರೆ ಅವರು ಹಿಂದೆಂದೂ ಅಧಿಕಾರದಲ್ಲಿ ಇರಲಿಲ್ಲ.

6. ಕಾಂಗ್ರೆಸ್‌ನ ಸಂಘಟನಾ ರಚನೆಯು ದುರ್ಬಲ ಮತ್ತು ಅಸಮರ್ಥವಾಗಿತ್ತು. ಸಂಘಟನಾ ವ್ಯವಸ್ಥೆಯ ಸಾಮರ್ಥ್ಯ ಕಾಣೆಯಾಗಿದ್ದಲ್ಲದೆ, ಅದರ ನಾಯಕರ ಅಸಡ್ಡೆ, ಕಮ್ಯುನಿಸ್ಟ್ ಸಾಂಸ್ಥಿಕ ರಚನೆಯ ಚಾಲನಾ ಶಕ್ತಿ ಮತ್ತು ಪರಿಣಾಮಕಾರಿಯಾಗಿ ರೂಪುಗೊಂಡ ಸಾಮರ್ಥ್ಯ ಇವುಗಳ ನಡುವೆ ಯಾವುದೇ ತರಹದ ಹೊಂದಾಣಿಕೆ ಇರಲಿಲ್ಲ.
7. ಸಾರ್ವಜನಿಕವಾಗಿ ಕೆಲವು ಹಿರಿಯ ಕಾಂಗ್ರೆಸ್ ನಾಯಕರು ತಮ್ಮನ್ನೇ ಅಪಹಾಸ್ಯ ಮಾಡಿಕೊಂಡರು. ಕೇರಳದ ಕಾಂಗ್ರೆಸ್‌ನಲ್ಲಿ ಇದ್ದಂಥ ಭ್ರಷ್ಟಾಚಾರದ ವಿಚಾರಗಳು, ಕೆಲವು ಕಾಂಗ್ರೆಸ್ಸಿಗರಿಂದಲೇ ಬಯಲಾಗಿದ್ದು ಅವರಿಗೆ ಪ್ರತಿಕೂಲವಾಗಿ ಪರಿಣಾಮಿಸಿತು.
8. ಹಿರಿಯ ಕಾಂಗ್ರೆಸ್ ನಾಯಕರು ಮುಸ್ಲಿಂ ಲೀಗ್ ಅನ್ನು ಸಾರ್ವಜನಿಕವಾಗಿ ಟೀಕಿಸಿ ಖಂಡಿಸಿದ್ದು,ದಕ್ಷಿಣ ಮಲಬಾರ್, ಪಾಲಕ್ಕಾಡ್ ಜಿಲ್ಲೆಗಳ ಕಾಂಗ್ರೆಸ್‌ನಲ್ಲಿದ್ದ ಮುಸ್ಲಿಮರ ಭಾವನೆಗಳಿಗೆ ಧಕ್ಕೆಯುಂಟಾಗಿ ಅವರಲ್ಲಿ ಕಾಂಗ್ರಸ್ ವಿರೋಧಿ ಭಾವನೆಗಳು ಬೆಳೆಯುವುದಕ್ಕೆ ಕಾರಣವಾಯಿತು.

1957ರ ಚುನಾವಣೆಯಲ್ಲಿ ಕೋಮುವಾದ ಮತ್ತು ಜಾತೀಯತೆಯ ಅಂಶಗಳು ಕಮ್ಯುನಿಸ್ಟ್ ಪಕ್ಷದ ಗೆಲುವಿಗೆ ನೆರವಾದವು ಎನ್ನಲಾಗಿದೆ(42:p244-247). ಎಕನಾಮಿಕ್ ವೀಕ್ಲಿಯ ವಿಶೇಷ ವರದಿಗಾರ ಹೀಗೆ ಸೂಚಿಸುತ್ತಾರೆ:

> "ಬಹುಪಾಲು ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರು, ಕಾಂಗ್ರೆಸ್, ಪಿಎಸಪಿ ಮತ್ತು ಮುಸ್ಲಿಂಲೀಗ್‌ನ್ನು ಬೆಂಬಲಿಸಿದ್ದರು. ಬಹುಪಾಲು ನಗರದ ನಿವಾಸಿಗಳು ಸಹ ಕಾಂಗ್ರೆಸ್ ಮತ್ತು ಪಿಎಸ್‌ಪಿಯನ್ನು ಬೆಂಬಲಿಸಿದ್ದರು. ಆದರೆ ಬಹುತೇಕ ಗ್ರಾಮೀಣರು ಕಮ್ಯುನಿಸ್ಟರ ಪರವಾಗಿ ಮತ ಚಲಾಯಿಸಿದ್ದರು"(70:01.08.59p1066-1067).

'ಸಾಮಾಜಿಕ ಮಾನವಶಾಸ್ತ್ರಜ್ಞ' ಎನ್ನುವ ಕಾವ್ಯನಾಮದಲ್ಲೊಬ್ಬರು ಎಕನಾಮಿಕ್ ವೀಕ್ಲಿಯ ಲೇಖಕದಲ್ಲಿ ಹೀಗೆ ಬರೆದಿದ್ದಾರೆ.

> "ನಾಯರ್‌ಗಳು ಮತ್ತು ನಂಬೂದಿರಿಗಳು ಸಾಮಾನ್ಯವಾಗಿ ಜಮೀನ್ದಾರರಾಗಿದ್ದರು. ಆದರೆ ಈಳವರು/ಈಡಿಗರು, ಪರಿಶಿಷ್ಟರು, ಇತರೆ ಕೆಳಜಾತಿಗಳಿಗೆ ಸೇರಿದ ದಲಿತರೆಲ್ಲರೂ ಭೂರಹಿತ ರೈತಕಾರ್ಮಿಕರಾಗಿದ್ದರು. ಮೊದಲ ವಿಭಾಗದ ಮೇಲ್ವರ್ಗದವರು ಕಾಂಗ್ರೆಸಿಗೆ ಮತ್ತು ಪಿಎಸ್‌ಪಿಗೆ ಬೆಂಬಲಿಸಿದಾಗ, ಎರಡನೇ ವಿಭಾಗದವರು ಕಮ್ಯುನಿಸ್ಟರನ್ನು ಬೆಂಬಲಿಸಿದ್ದರು"(70:15.08.59p1131).

ಬಶೀರುದ್ದೀನ್ ಅಹ್ಮದ್ ಬರೆಯುತ್ತಾರೆ:

> "ಕಾಂಗ್ರೆಸ್ ಜೊತೆ ತಾತ್ಕಾಲಿಕವಾಗಿ ಅಸಮಾಧಾನ ಹೊಂದಿದ್ದ ನಾಯರ್ ಸರ್ವೀಸ್ ಸೊಸೈಟಿ (ಎನ್‌ಎಸ್‌ಎಸ್) ಒತ್ತಡ ಹಾಕಿ ಕಮ್ಯುನಿಸ್ಟ್ ಅಭ್ಯರ್ಥಿಗಳಿಗೆ ಪೂರ್ಣ ಬೆಂಬಲವನ್ನು ನೀಡಿದ್ದರು. ಈ ಬೆಂಬಲದ ಫಲವಾಗಿ ಕಮ್ಯುನಿಸ್ಟ್

ಪಕ್ಷ, ಮಧ್ಯ ತಿರುವಾಂಕೂರು ಪ್ರದೇಶಗಳಲ್ಲಿ ಯಶಸ್ಸು ಗಳಿಸಿದ್ದಲ್ಲದೆ, ಇದರ ಮೊದಲೂ ನಂತರವೂ ಗೆಲ್ಲಲಾಗದ ಹಲವು ಕ್ಷೇತ್ರಗಳಲ್ಲಿ ಪಕ್ಷ ಗೆಲುವನ್ನು ಖಚಿತಪಡಿಸಿಕೊಳ್ಳಲು ಸಾಧ್ಯವಾಯಿತು(59:07.07.66p390).

ಎನ್‌ಎಸ್‌ಎಸ್‌ನ ಮುಖ್ಯಸ್ಥ ಮನ್ನತ್ ಪದ್ಮನಾಭನ್, 1957ರಲ್ಲಿ ವಾಸ್ತವವಾಗಿ ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸಿರಲಿಲ್ಲ. 1957 ಜನವರಿ 7ರಂದು ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ ಅವರು ಹೀಗೆ ಮಾತನಾಡಿದ್ದರು:

"ಕಾಂಗ್ರೆಸ್ ಜೊತೆಗಿನ ನನ್ನ ಸಂಬಂಧ ಸರಿಪಡಿಸಲಾಗದಷ್ಟು ಗೊಂದಲವನ್ನುಂಟು ಮಾಡಿದೆ. ನಾನು ಚುನಾವಣಾ ಪ್ರಚಾರಗಳಲ್ಲಿ ಭಾಗವಹಿಸದಿದ್ದರೂ ಕೇರಳ ಪೀಪಲ್ಸ್ ಪಾರ್ಟಿಗೆ ನನ್ನ ಸಂಪೂರ್ಣ ಬೆಂಬಲವಿರುತ್ತದೆ" (33:07.01.57;69:p62;36:).

ವಿಕ್ಟರ್ ಎಂ. ಫಿಕ್ ಅವರ ಅಭಿಪ್ರಾಯದಲ್ಲಿ,

"ಕೋಮುವಾದದ ಸಮೀಕರಣಗಳು, ಪ್ರಮುಖ ರಾಜಕೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಕಮ್ಯುನಿಸ್ಟರಲ್ಲಿ ಆಳವಾಗಿ ಬೇರೂರಿದ್ದವು. ಬೇರೆ ರೀತಿಯಲ್ಲಿ ಹೇಳುವುದಾದರೆ, ಕೋಮುವಾದಿ ಸಂಸ್ಥೆಗಳ ಸಾಮರ್ಥ್ಯ ಮತ್ತು ಆಕಾಂಕ್ಷೆಗಳು ಕೇರಳದ ರಾಜಕೀಯದಲ್ಲಿ ಸಂಪೂರ್ಣವಾಗಿ ಅಭಿವ್ಯಕ್ತಗೊಂಡಿದ್ದವು"(43:p6-7).

ಕ್ರೈಸ್ತರ ವಿರುದ್ಧ ಹಿಂದೂಗಳ ಬೆಂಬಲವನ್ನು ಹೆಚ್ಚಾಗಿ ಅವಲಂಬಿಸಿಕೊಂಡಿದ್ದೇ ಕಮ್ಯುನಿಸ್ಟರ ಚುನಾವಣಾ ಗೆಲುವಿಗೆ ಕಾರಣವಾಗಿದ್ದು, ಎಂದು ಆರ್. ವೇಲಾಯುಧನ್ ಸೂಚಿಸುತ್ತಾರೆ(88:p58). 1957ರ ಚುನಾವಣೆಯಲ್ಲಿ ಮೂಲತಃ ಕಮ್ಯುನಿಸ್ಟ್ ಪಕ್ಷವು ಯಾವುದಾದರೂ ಜಾತಿ-ಸಮುದಾಯದ ಸಂಘಟನೆಗಳೊಂದಿಗೆ ಯಾವುದೇ ತರಹದ ಸಂಪರ್ಕವನ್ನು ಹೊಂದಿತ್ತು ಎಂಬುದಕ್ಕೆ ಯಾವುದೇ ಪುರಾವೆಗಳಿಲ್ಲ.

ಅನೇಕ ವರ್ಷಗಳಿಂದ ಯಾತನೆ ಮತ್ತು ದಬ್ಬಾಳಿಕೆಗಳನ್ನು ಎದುರಿಸುತ್ತಾ ಬಂದಿದ್ದ, ಪಕ್ಷದ ಸಕ್ರಿಯ ಸದಸ್ಯರು, ಕಾರ್ಯಕರ್ತರ ಸಮರ್ಪಣಾ ಮನೋಭಾವ ಮತ್ತು ಸ್ವಯಂ ತ್ಯಾಗಮನೋಭಾವಗಳಲ್ಲಿ ಪ್ರಕಟಗೊಂಡ ಕಾರ್ಯ ಚಟುವಟಿಕೆಗಳಿಂದಾಗಿ ಕಮ್ಯುನಿಸ್ಟರಿಗೆ ದೊರಕಿದ ಮಹತ್ವಪೂರ್ಣ ಕೊಡುಗೆ ಇದಾಗಿತ್ತೆಂದು, ಮುಖಂಡ ಎ.ಕೆ. ಗೋಪಾಲನ್ ವಿವರಿಸಿದ್ದಾರೆ. ರಾಷ್ಟ್ರವ್ಯಾಪಿಯಿರುವ ಪ್ರಜಾಸತ್ತಾತ್ಮಕ ಸಮಾಜವಾದಿ ಶಕ್ತಿಗಳ ಮುನ್ನಡೆಯ ಅಲೆಗಳ ಪ್ರತಿಫಲನವಾಗಿತ್ತು, ಕೇರಳದ ಕಮ್ಯುನಿಸ್ಟರ ಯಶಸ್ಸು ಎಂದೂ ಅವರು ಹೇಳಿದರು. ಚುನಾಯಿತರಾದ ಕಮ್ಯುನಿಸ್ಟ್ ಅಭ್ಯರ್ಥಿಗಳ ಸಂಖ್ಯೆ ಪಶ್ಚಿಮ ಬಂಗಾಳದಲ್ಲಿ 28 ರಿಂದ 46ಕ್ಕೆ, ಬಾಂಬೆಯಲ್ಲಿ ಒಂದರಿಂದ 21ಕ್ಕೆ, ಉತ್ತರ ಪ್ರದೇಶದಲ್ಲಿ ಒಂದರಿಂದ 9ಕ್ಕೆ ಏರಿತು. ಮೊದಲ ಬಾರಿಗೆ ಮಧ್ಯಪ್ರದೇಶದಲ್ಲಿ 3 ಮತ್ತು ಬಿಹಾರದಲ್ಲಿ 7 ಕಮ್ಯುನಿಸ್ಟ್ ಅಭ್ಯರ್ಥಿಗಳು ಆಯ್ಕೆಯಾಗಿರುವುದು ಗಮನಾರ್ಹವಾದ ಸಂಗತಿಯಾಗಿತ್ತು(39:p95).

ಕಮ್ಯುನಿಸ್ಟ್ ಪಕ್ಷದ ಆಗಿನ ಕೇರಳ ರಾಜ್ಯ ಕಾರ್ಯದರ್ಶಿ, ಎಂ.ಎನ್.

ಗೋವಿಂದನ್ ನಾಯರ್ ಹೀಗೆ ಪ್ರತಿಕ್ರಿಯಿಸಿದ್ದಾರೆ: –

"ಕಾಂಗ್ರೆಸ್ ಮತ್ತು ಪಿ.ಎಸ್.ಪಿ. ಮಂತ್ರಿಮಂಡಲದ ಕಾರ್ಯಚಟುವಟಿಕೆಗಳ ಬಗ್ಗೆ ಮತ್ತು ರಾಷ್ಟ್ರಪತಿ ಆಡಳಿತದ ಬಗ್ಗೆಯ ನೆನಪುಗಳು ಜನರ ಮನಸ್ಸಿನಿಂದ ಮಾಸಿ ಹೋಗಿರಲಿಲ್ಲ. ಹಾಗೆಯೇ ಸ್ವಾತಂತ್ರ್ಯ ಹೋರಾಟಗಾರರು ಎನ್ನುವ ನೆಲೆಯಲ್ಲೂ ಸ್ಥಳೀಯ ಸಂಸ್ಥೆಗಳ ಆಡಳಿತಗಾರರು ಎನ್ನುವ ನೆಲೆಯಲ್ಲೂ ಪ್ರಕಾಶಮಾನವಾದ ಪ್ರತಿಬಿಂಬವನ್ನು ಹೊಂದಿದ್ದ ಅವರು, ಕಮ್ಯುನಿಸ್ಟರೊಂದಿಗೆ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಕಮ್ಯುನಿಸ್ಟರ ಬಗ್ಗೆ ಸಹಾನುಭೂತಿ ಇಲ್ಲದವರೂ ಸೇರಿದಂತೆ ಗಮನಾರ್ಹವರ್ಗದ ಮತದಾರರು ಕಮ್ಯುನಿಸ್ಟ್ ಪಕ್ಷಕ್ಕೆ ಒಮ್ಮೆ ಅವಕಾಶ ನೀಡಬೇಕು"(40:15.04.57p9)

ಡಿ.ಆರ್. ಮಂಕೇಕರ್ ಹೀಗೆ ಪ್ರತಿಕ್ರಿಯಿಸಿದ್ದರು:

"ಕಾಂಗ್ರೆಸ್‌ಗೆ ಹೆಮ್ಮೆ ತರುವಂಥ ರೀತಿಯಲ್ಲಿರದ ಹಿಂದಿನ ಆಡಳಿತ, 1957ರ ಚುನಾವಣೆಯಲ್ಲಿ ಕಮ್ಯುನಿಸ್ಟರ ಅಗಾಧ ವಿಜಯಕ್ಕೆ ಕಾರಣವಾಯಿತು"(207:p81).

ಜವಾಹರಲಾಲ್ ನೆಹರೂರವರ ಅವಲೋಕನ ಹೀಗಿತ್ತು:

"ಕೇರಳದಲ್ಲಿ ಕಾಂಗ್ರೆಸ್ ಸೋತಿದ್ದು ಮಾತ್ರವಲ್ಲ, ಕಮ್ಯುನಿಸ್ಟರು ಗೆದ್ದರು ಎನ್ನುವುದು ತುಂಬಾ ಪ್ರಸ್ತುತ. ಕಳೆದ ಹತ್ತು ವರ್ಷಗಳಿಂದ ಆಡಳಿತ ನಡೆಸುತ್ತಿದ್ದ ನನ್ನ ಪಕ್ಷ ಜನಮನ್ನಣೆಯನ್ನು ಕಳೆದುಕೊಂಡಿದೆ. ಆದ್ದರಿಂದ 1957ರ ಚುನಾವಣೆಯ ಫಲಿತಾಂಶಗಳು, ಕಾಂಗ್ರೆಸ್ ವಿರುದ್ಧದ ನಕಾರಾತ್ಮಕ ಮತವನ್ನಾಗಿ ಪರಿಗಣಿಸಬೇಕೇ ಹೊರತು, ಕಮ್ಯುನಿಸ್ಟರ ಪರವಾಗಿ ದೊರೆತ ಮತವೆಂದು ವೀಕ್ಷಿಸಲಾಗುವುದಿಲ್ಲ"(74:p83)*.

ಕಮ್ಯುನಿಸ್ಟ್ ಪಕ್ಷದ ಯಶಸ್ಸಿಗೆ ಕಾರಣಗಳನ್ನು ವಿಶ್ಲೇಷಿಸುತ್ತಾ ಕೆ.ದಾಮೋದರನ್ ಹೀಗೆ ಉಲ್ಲೇಖಿಸುತ್ತಾರೆ:

"ಕಾಲು ಶತಮಾನದಿಂದ ರೈತರು ಮತ್ತು ಕಾರ್ಮಿಕರ ಸಂಘಟನೆಯಲ್ಲಿ ತೊಡಗಿಕೊಂಡಿದ್ದ ಕಮ್ಯುನಿಸ್ಟ್ ಪಕ್ಷವು ನಿರ್ಣಾಯಕವಾದ ಪಾತ್ರವನ್ನು ವಹಿಸಿತು. ಪಕ್ಷವು ಕೇರಳದ ಸಾಮಾಜಿಕ–ಆರ್ಥಿಕ ಜೀವನದಲ್ಲಿ ಅಳಿಸಲಾಗದ ಮುದ್ರೆಯನ್ನು ಒತ್ತಿತು. ಅನೇಕ ಅಡೆತಡೆಗಳನ್ನು ನಿವಾರಿಸಿಕೊಂಡು, ತೀವ್ರ ತರಹದ ದಬ್ಬಾಳಿಕೆಗಳನ್ನು ಮೀರಿನಿಂತು, ಜನರ ಹಿತಾಸಕ್ತಿಗಳನ್ನು ಕಾಪಾಡುವುದಕ್ಕಾಗಿ ಪಕ್ಷದ ಕಾರ್ಯಕರ್ತರು ನಿರ್ಭೀತಿಯಿಂದ ಹೋರಾಟ ನಡೆಸಿದರು. ಪಕ್ಷವು ಕೇರಳದ ಸಾಮಾಜಿಕ–ಆರ್ಥಿಕ ಜೀವನದಲ್ಲಿ ಅಳಿಸಲಾಗದ ಗುರುತು ಹಾಕಿದೆ. ಕಾರ್ಯಕರ್ತರು ನಡೆಸಿದ ಶಾಂತ ರೀತಿಯ ಪ್ರತಿಭಟನೆಗಳು, ಹೋರಾಟಗಳು, ಪಕ್ಷದ ಜನಪರ ನೆಲೆಯನ್ನು ವಿಸ್ತರಿಸಿ, ಅದು ದೃಢಗೊಂಡಿರುವುದರ ಪ್ರಭಾವವನ್ನು ಸ್ಥಿರಗೊಳಿಸಿ,(74:p84-85), ತಾವು ಎದುರಿಸುತ್ತಿರುವ ಸಮಸ್ಯೆಗಳನ್ನು ತ್ವರಿತವಾಗಿ

* ಜವಾಹರಲಾಲ್ ನೆಹರು ಜೂನ್ 1957ರಲ್ಲಿ ಹೆಲ್ಸಿಂಕಿಯಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ಹೇಳಿದ್ದು.

ಪರಿಹರಿಸಲು, ಕಮ್ಯುನಿಸ್ಟ್ ಪಕ್ಷದಿಂದ ಮಾತ್ರ ಸಾಧ್ಯ ಎನ್ನುವ ನಿರೀಕ್ಷೆಯಲ್ಲಿ ಬಹುಸಂಖ್ಯೆಯ ಜನರು ಕಮ್ಯುನಿಸಂನ್ನು ತಮ್ಮ ಮನದಾಳದೊಳಕ್ಕೆ ಸ್ವೀಕರಿಸಿದರು. ಅವರು ಮುಂದಿನ ದಿನಗಳಲ್ಲಿ ತಮ್ಮ ರಾಷ್ಟ್ರೀಯ ಮತ್ತು ಪ್ರಜಾಸತ್ತಾತ್ಮಕ ಆಕಾಂಕ್ಷೆಗಳನ್ನು ಪೂರೈಸಲು ಸಮರ್ಥವಾಗಿರುವ ಪಕ್ಷದ ನಾಯಕತ್ವದಲ್ಲಿ ತಮ್ಮ ನಂಬಿಕೆಯನ್ನು ಇಟ್ಟುಕೊಂಡರು"(74:p84-85).

ಆ ಕಾಲದಲ್ಲಿ ಸಕ್ರಿಯ ಕಮ್ಯುನಿಸ್ಟ್ ವಿರೋಧಿ ನಾಯಕರಾಗಿದ್ದ ಫಾದರ್ ವಡಕ್ಕನ್, 1957ರ ಚುನಾವಣಾ ಫಲಿತಾಂಶಗಳನ್ನು ವಿಶ್ಲೇಷಿಸುತ್ತಾ ಮಾಡಿದ ಅವಲೋಕನಗಳು(58:p7-10).

1. ಪಕ್ಷದ ಸಂಘಟನಾ ಸಾಮರ್ಥ್ಯ ಮತ್ತು ದೃಢವಾದ ಹೊಂದಾಣಿಕೆ ಅದರ ಯಶಸ್ಸಿಗೆ ಕಾರಣವಾದವು. ಏಕತೆ, ಶಿಸ್ತು, ಶಿಕ್ಷಣ ಮುಂತಾದ ವಿಷಯಗಳಲ್ಲಿ ಕಮ್ಯುನಿಸ್ಟ್ ಪಕ್ಷವು ಇತರ ಪಕ್ಷಗಳಿಗಿಂತ ಉತ್ತಮವಾಗಿ ಮುನ್ನಡೆ ಸಾಧಿಸಿತ್ತು. ಮೇಲಿನಿಂದ ಸಿಗುವ ಆದೇಶಗಳನ್ನು ಪಾಲಿಸಲು ಹೋರಾಟಕ್ಕೆ ಸಿದ್ಧರಾದ ಸಂಗಾತಿಗಳಿದ್ದರು. ಕಮ್ಯುನಿಸ್ಟ್ ಪಕ್ಷವು ಕೆಳಸ್ತರಗಳಲ್ಲಿ ಸಾಮಾನ್ಯ ಜನರನ್ನು ಒಳಗೊಂಡಿದ್ದರೂ ಅದರ ನಾಯಕರು ಬುದ್ಧಿವಂತರು ಮತ್ತು ರಾಜಕೀಯವಾಗಿ ಪ್ರತಿಭಾಶಾಲಿಗಳೂ ಆಗಿದ್ದರು. ದಾನಶೀಲತೆ, ಶೌರ್ಯ, ತ್ಯಾಗ ಮನೋಭಾವ, ಶ್ರದ್ಧೆ, ಪರಿಶ್ರಮ ಇವೇ ಮುಂತಾದ ಸದ್ಗುಣಗಳು ಅವರ ಚುನಾವಣಾ ಯಶಸ್ಸಿಗೆ ಹೆಚ್ಚಿನ ಕೊಡುಗೆ ನೀಡಿವೆ. ಬಡವರ ವಿಮೋಚನೆಗಾಗಿ, ಸಾಮಾಜಿಕ ಹೋರಾಟ ಎನ್ನುವ ಘೋಷಣೆಗೆ ಆಕರ್ಷಿತರಾದ ದೀನದಲಿತ ಜನಸಾಮಾನ್ಯರು ಪಕ್ಷದ ಕೆಂಬಾವುಟ ಅಡಿಯಲ್ಲಿ ದನಿಗೂಡಿಸಿದರು(58:).
2. ಕಮ್ಯುನಿಸ್ಟ್ ವಿರೋಧಿ ಧೋರಣೆ ಅಳವಡಿಸಿಕೊಂಡ ರಾಜಕೀಯ ಪಕ್ಷಗಳಿಗೆ, ಜನಸಾಮಾನ್ಯರ ವಿಶ್ವಾಸ ಗಳಿಸಲು ಸಾಧ್ಯವಾಗಲಿಲ್ಲ. ಈ ನಿಟ್ಟಿನಲ್ಲಿ ಕಮ್ಯುನಿಸ್ಟರು ಇದರಲ್ಲಿ ಯಶಸ್ವಿಯಾದರು(58:).
3. ಭಾರತವು ರಷ್ಯಾ ಮತ್ತು ಚೀನಾದೊಂದಿಗೆ ಸ್ನೇಹ ಸಂಬಂಧವನ್ನು ಉಳಿಸಿಕೊಂಡಿದ್ದರಿಂದ, ಈ ದೇಶಗಳಲ್ಲಿನ ಕಮ್ಯುನಿಸ್ಟ್ ಆಡಳಿತಗಳೊಂದಿಗೆ ಜನರು ಗೌರವವನ್ನು ಬೆಳೆಸಿಕೊಂಡರು. ಕಮ್ಯುನಿಸ್ಟ್ ಯಶಸ್ಸಿಗೆ ಸಂಬಂಧಿಸಿದಂತೆ, ಈ ಅಂಶಗಳೆಲ್ಲವೂ ಬಹಳ ಪ್ರಸ್ತುತವಾಗಿದೆ(58:).

1957 ರ ಚುನಾವಣಾ ವಿಜಯದ ಬಗ್ಗೆ ಇಎಂಎಸ್ ನಂಬೂದಿರಿಪಾಡ್ ಅವರ ಮೌಲ್ಯಮಾಪನಗಳ ಸಾರಾಂಶವನ್ನು ಈ ಕೆಳಗೆ ನೀಡಲಾಗಿದೆ:

1. 1952 ಮತ್ತು 1954ರ ಚುನಾವಣೆಗಳಿಗಿಂತ ಭಿನ್ನವಾಗಿ, ಕಾಂಗ್ರೆಸ್ ಮತ್ತು ಅದರ ಮೈತ್ರಿಪಕ್ಷಗಳ ವಿರುದ್ಧ ಏಕಾಂಗಿಯಾಗಿ ಚುನಾವಣೆಯಲ್ಲಿ, ಕಮ್ಯುನಿಸ್ಟರು ಹೋರಾಡಿದರು. ಈ ಬಾರಿ ಕಮ್ಯುನಿಸ್ಟರು ದಣಿದಿದ್ದಾರೆ, ಅವರನ್ನು ಸುಲಭವಾಗಿ ಸೋಲಿಸಬಹುದು ಎಂಬುದು ಕಾಂಗ್ರೆಸ್‌ನ ಭ್ರಮೆಯಾಗಿತ್ತು. 1957ರ ಕಮ್ಯುನಿಸ್ಟರ ವಿಸ್ತೃತವಾದ ಜನಪರ ನೆಲೆಯ ಬಗ್ಗೆ ಕಾಂಗ್ರೆಸ್ಸಿಗರು ಅಷ್ಟಾಗಿ ತಲೆಕೆಡಿಸಿಕೊಳ್ಳಲಿಲ್ಲ.

ಆದ್ದರಿಂದ ಚುನಾವಣೆಯ ಬಗ್ಗೆ ಅವರ ಲೆಕ್ಕಾಚಾರಗಳೆಲ್ಲವೂ ಸಂಪೂರ್ಣವಾಗಿ ತಲೆಕೆಳಗಾಗಿಹೋದವು.

2. 1952ರ ನಂತರದ ರಾಜಕೀಯ ಬೆಳವಣಿಗೆಗಳನ್ನು ಎಚ್ಚರಿಕೆಯಿಂದ ಮೌಲ್ಯಮಾಪನ ಮಾಡಿದ ಕಮ್ಯುನಿಸ್ಟರು, ಚುನಾವಣಾ ವಿಜಯದ ಸಾಧ್ಯತೆಗಳಿಗನುಗುಣವಾದ ತಂತ್ರಗಳನ್ನು ಹೆಣೆದಿದ್ದರು.

3. 1954ರಲ್ಲಿ ಸಚಿವ ಸಂಪುಟ ಪತನಕ್ಕೆ ಕಾರಣವಾದ ಕಾಂಗ್ರೆಸ್‌ನ ಷಡ್ಯಂತ್ರಗಳಿಂದ ಅತೃಪ್ತರಾಗಿದ್ದ ಜನರು, ಸರಕಾರದ ಬದಲಾವಣೆಗೆ ಆಗ್ರಹಿಸಿದ್ದರು. ಎಡಪಕ್ಷಗಳ ಪೈಕಿ ಜನಪರವಾದ ನೆಲೆಯಿರುವ ಏಕೈಕ ಪಕ್ಷವಾದ ಕಮ್ಯುನಿಸ್ಟ್ ಪಕ್ಷ ಮಾತ್ರ ಸುಸ್ಥಿರ ಆಡಳಿತವನ್ನು ನೀಡಬಲ್ಲದು ಎನ್ನುವ ಆಶಾಭಾವನೆ ಜನರಲ್ಲಿತ್ತು. ಸಹಜವಾಗಿಯೇ ಅವರು ಪಕ್ಷದ ಬೆಂಬಲಕ್ಕೆ ಸಾಲುಗಟ್ಟಿ ನಿಂತಿದ್ದರು.

4. ವಿರೋಧ ಪಕ್ಷಗಳ ಸಾಲಿನಲ್ಲಿ ಒಗ್ಗಟ್ಟಿಲ್ಲದಿದ್ದರೂ ಕಾಂಗ್ರೆಸ್‌ಗೆ ಯಾವುದೇ ಕಮ್ಯುನಿಸ್ಟೇತರ ಪಕ್ಷಗಳ ಬೆಂಬಲ ಸಿಗಲಿಲ್ಲ. ಉದಾಹರಣೆಗೆ ಮಲಬಾರ್‌ನಲ್ಲಿ ಲೀಗ್ ಪಿಎಸ್‌ಪಿಯ ಬೆಂಬಲ ಪಡೆದು, ಕೇರಳದಾದ್ಯಂತ ತನ್ನ ಅಭ್ಯರ್ಥಿಗಳನ್ನು ಕಣಕ್ಕಿಳಿಸಿತು. ಇದು ಕಾಂಗ್ರೆಸ್ ಹಿತಾಸಕ್ತಿಗೆ ಪೂರ್ಣವಾಗಿ ಧಕ್ಕೆ ತಂದಿತು.

5. ಕಮ್ಯುನಿಸ್ಟ್ ಪಕ್ಷ ಮತ್ತು ಅದರ ಪ್ರಬಲ ಟ್ರೇಡ್ ಯೂನಿಯನ್ ಸಂಘಟನೆಗಳ ಬೆಂಬಲದೊಂದಿಗೆ ಪ್ರಬಲ ಚುನಾವಣಾ ತಂತ್ರ ರೂಪಿಸಿತು. ಕಮ್ಯುನಿಸ್ಟೇತರ ಮತಗಳನ್ನು ಸೆಳೆಯಲು ಸಾಮರ್ಥ್ಯವಿರುವವರನ್ನು, ಆಕರ್ಷಕ ವ್ಯಕ್ತಿತ್ವ ಹೊಂದಿದ ಸ್ವತಂತ್ರ ಅಭ್ಯರ್ಥಿಗಳನ್ನು ಕಮ್ಯುನಿಸ್ಟರು ತಂತ್ರಗಾರಿಕೆಯಿಂದ ಕಣಕ್ಕಿಳಿಸಿದರು. ಅವರಲ್ಲಿ ಐವರು ಯಶಸ್ಸನ್ನೂ ಪಡೆದರು.

6. ತಿರುವಾಂಕೂರು-ಕೊಚ್ಚಿ ಪ್ರದೇಶದ ಕಾಂಗ್ರೆಸ್ ಪಕ್ಷದಲ್ಲಿರುವ ಕ್ರಿಶ್ಚಿಯನ್ ಪ್ರಾಬಲ್ಯದಿಂದಾಗಿ, ನಾಯರ್‌ಗಳನ್ನು ಮತ್ತು ಈಟಿವರನ್ನು/ಈಡಿಗರನ್ನು ಕಾಂಗ್ರೆಸಿನಿಂದ ದೂರಕ್ಕೆ ಸರಿಸಿತು. ಅವರ ಅದುಮಿಟ್ಟದ್ದ ಅತೃಪ್ತಿಯು, ಕಮ್ಯುನಿಸ್ಟರ ಪರವಾಗಿ ಒದಗಿಬಂತು. ದುಡಿಯುವ ರೈತ ಮತ್ತು ಕಾರ್ಮಿಕರ ನಡುವೆ ಪಕ್ಷವು ನಡೆಸಿದ ಚಟುವಟಿಕೆಗಳಲ್ಲಿ, ಒಟ್ಟಾರೆಯಾಗಿ ಮೇಲ್ವರ್ಗದ ಹಿಂದೂಗಳಲ್ಲಿ ಮತ್ತು ಇತರೆ ಸಮುದಾಯಗಳಿಗೆ ಸೇರಿದವರಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆ ತರಲು ಸಹಕರಿಸಿತು. ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಮುದಾಯಗಳ ಒಂದು ವಿಭಾಗವೂ ಪಕ್ಷವನ್ನು ಬೆಂಬಲಿಸಿತು(12:p84-86;45:p125-128;39:p207).

ಕೇರಳದಲ್ಲಿ ಕಮ್ಯುನಿಸ್ಟರು ಸಾಧಿಸಿದ ಯಶಸ್ಸಿನ ಸಾಮಾಜಿಕ-ರಾಜಕೀಯ ಕಾರಣಗಳ ಬಗ್ಗೆ, ಬ್ರಿಟಿಷ್ ದಿನಪತ್ರಿಕೆ 'ಮ್ಯಾಂಚೆಸ್ಟರ್ ಗಾರ್ಡಿಯಾ' ನಡೆಸಿದ ವಿಶ್ಲೇಷಣೆ ಬಹಳ ಪ್ರಸ್ತುತವಾಗಿದೆ.

"ಭಾರತದಲ್ಲಿ ಹೆಚ್ಚು ಜನನಿಬಿಡ ರಾಜ್ಯವಾದ ಕೇರಳದಲ್ಲಿ ಕೈಗಾರಿಕಾ ಬೆಳವಣಿಗೆ ನಿಧಾನಗತಿಯಲ್ಲಿದ್ದು, ಇಲ್ಲಿನ ನಿರುದ್ಯೋಗ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ. ರಾಜ್ಯದ ಹೆಚ್ಚಿನ ಮಟ್ಟದಲ್ಲಿ ಸಾಕ್ಷರತೆ ಹೊಂದಿದವರಾಗಿದ್ದು,

ವಿದ್ಯಾವಂತ ಯುವಕರಲ್ಲಿ ನಿರುದ್ಯೋಗ ಸಮಸ್ಯೆ ತೀವ್ರ ಸ್ವರೂಪವನ್ನು ಪಡೆದುಕೊಂಡಿದೆ. ಕೇರಳದ ರೈತರು ಭೂಮಿರಹಿತರಾಗಿ ಬದುಕಬೇಕಾದ ಅವಸ್ಥೆಯಲ್ಲಿದ್ದಾರೆ. ಅವರ ದುಃಖವನ್ನು, ಕೊನೆಗಾಣಿಸುವ ಪ್ರಯತ್ನವನ್ನು ಕಾಂಗ್ರೆಸ್ ಸರ್ಕಾರ ಮಾಡಲಿಲ್ಲ. 1948 ಮತ್ತು 1955ರ ನಡುವಿನ ಕಡಿಮೆ ಅವಧಿಯಲ್ಲಿ ಐದು ಮುಖ್ಯಮಂತ್ರಿಗಳ ಸತತ ಪತನ ಮತ್ತು 1956ರಿಂದ ರಾಷ್ಟ್ರಪತಿ ಆಳ್ವಿಕೆಯಾಗಿತ್ತೆನ್ನುವುದು, ಒಂದು ಸುಸ್ಥಿರ ಸರ್ಕಾರದ ರಚನೆಗೆ ಕಾಂಗ್ರೆಸ್‌ನ ಅಸಮರ್ಥತೆ ಸ್ಪಷ್ಟವಾಗಿ ಬಯಲುಗೊಂಡಿತು. ಈ ಗುರಿಯನ್ನು ಕಮ್ಯುನಿಸ್ಟರು ಸಾಧಿಸಬಲ್ಲರು ಎಂಬ ನಂಬಿಕೆ ಜನರಲ್ಲಿ ಸೃಷ್ಟಿಸಲು ಪಕ್ಷಕ್ಕೆ ಸಾಧ್ಯವಾಯಿತು"(69:p69).

ಟಿ.ಜೆ. ನೋಸಿಟರ್ ಹೀಗೆ ಬರೆಯುತ್ತಾರೆ,

"ತಮ್ಮ ಕಲ್ಪನೆಯ ಪ್ರಕಾರ, ವಿಶ್ವ ಮಾಧ್ಯಮಗಳು ಕಮ್ಯುನಿಸ್ಟ್ ವಿಜಯದ ಶೀರ್ಷಿಕೆಯಾಗಿ ನೀಡಿದ್ದು ಹೀಗಿದ್ದವು. 'ಭಾರತದ ಮೇಲೆ ಕೆಂಪು ನಕ್ಷತ್ರ', 'ಭಾರತದ ಮೇಲೆ ಕೆಂಪು ವಿಪತ್ತು '(ರೆಡ್ ಸ್ಟಾರ್ ಅಥವಾ ರೆಡ್ ಪೆರಿಲ್ ಓವರ್ ಇಂಡಿಯಾ). ಇವು ಕೆಲವು ಉದಾಹರಣೆಗಳು ಮಾತ್ರ. ಕಮ್ಯುನಿಸ್ಟರ ಯಶಸ್ಸನ್ನು ವಿವರಿಸಲು ಹಲವು ಅಂಶಗಳ ಬಗ್ಗೆ ಹೆಚ್ಚಾಗಿ ಉಲ್ಲೇಖಿಸಲಾಗುತ್ತಿದೆ. ಪ್ರಾಂತೀಯ ಕಾಂಗ್ರೆಸ್‌ನಲ್ಲಿ ಭ್ರಷ್ಟಾಚಾರ ಮತ್ತು ಕೋಮುವಾದಗಳ ವಿಚಾರಗಳು ಒಂದೆಡೆಯಾದರೆ, ಸಿಪಿಐನ ಯಂತ್ರ ಸಮಾನವಾದ ಮತ್ತು ಜಾತ್ಯತೀತವಾದ ಸಂಘಟನಾ ವ್ಯವಸ್ಥೆ, ಮದ್ರಾಸಿನಿಂದ ತಿರುವಾಂಕೂರ್‌ವರೆಗಿನ ದಕ್ಷಿಣ ತಾಲೂಕುಗಳ ವಿಮೋಚನೆ, ಮದ್ರಾಸಿನಿಂದ ಕಮ್ಯುನಿಸ್ಟ್ ಮಲಬಾರಿಗೆ ಉಂಟಾದ ಮುನ್ನಡೆ, ಇಂಡೋ-ಸೋವಿಯತ್ ಸ್ನೇಹ-ಸೌಹಾರ್ದತೆ, ಡಿಸೆಂಬರ್ 1954ರಿಂದ ಸೋಷಿಯಲಿಸಂನ್ನು ಕಾಂಗ್ರೆಸ್ ತನ್ನ ಗುರಿಯನ್ನಾಗಿ ಅಳವಡಿಸಿಕೊಳ್ಳಲು ನಿರ್ಧರಿಸಿದ್ದು, ಮುಂತಾದ ಮೇಲೆ ಹೇಳಿಂದಂಥ ಅಂಶಗಳು ಮತ್ತೊಂದು ಕಡೆಯಾಗಿತ್ತು. ನೆಹರೂ ಒಂದು ಸಮಾಜವಾದಿ ವ್ಯವಸ್ಥೆಯನ್ನು ಭಾರತಕ್ಕೆ ಶಿಫಾರಸ್ಸು ಮಾಡಿದ್ದರೆ, ಖಂಡಿತವಾಗಿಯೂ ಕಾಂಗ್ರೆಸ್ ಪಕ್ಷಕ್ಕಿಂತ, ಅಚ್ಚುಕಟ್ಟಾಗಿ ಸಿಪಿಐಗೆ ಅದನ್ನು ಜಾರಿಗೆ ತರಲುಸಾಧ್ಯವಾಗುತ್ತಿತ್ತು. ಎಂದು ಕೇರಳದ ಕಾಂಗ್ರೆಸ್ಸೇತರರು ನಂಬಿದ್ದರು(61:p65).

'1957ರಲ್ಲಿ ಕಮ್ಯುನಿಸ್ಟರ ಯಶಸ್ಸಿಗೆ ಕಾರಣವಾದ ಅಂಶಗಳೆನ್ನುವುದು, ಒಂದು ದಶಕಗಳ ಕಾಲ, ದೌರ್ಬಲ್ಯಗಳಿಂದ ಕೂಡಿದ, ಅಸಮರ್ಥವಾದ ಮತ್ತು ಭ್ರಷ್ಟಾಚಾರಗಳಿಂದ ಆವರಿಸಿಕೊಂಡಿದ್ದ ರಾಜ್ಯದ ಕಾಂಗ್ರೆಸ್ ಅಡಿಯಲ್ಲಿದ್ದ ಆಡಳಿತನಿರ್ವಹಣಾ ಲೋಪಗಳೇ ಆಗಿದ್ದವು,'

ಎಂದು ನ್ಯೂಯಾರ್ಕ್ ಟೈಮ್ಸ್ ಗಮನಿಸುತ್ತದೆ(44:p32).

"ಕಾಂಗ್ರೆಸ್ ಪಕ್ಷದ ಬಗ್ಗೆ ಜನರ ನಂಬಿಕೆಯುಲ್ಲುಂಟಾದ ಸೋರಿಕೆ, ಮತ್ತು ಕಮ್ಯುನಿಸ್ಟ್ ಪಕ್ಷದ ಬಗ್ಗೆ ಜನರಲ್ಲಿ ಮೂಡಿಬಂದ ಹೊಸ ಭರವಸೆ, ಹೆಚ್ಚಿದ

ಆತ್ಮವಿಶ್ವಾಸ, ಇವುಗಳೇ 1957ರಲ್ಲಿ ಪಕ್ಷದ ಗೆಲುವಿಗೆ ಕಾರಣವಾದವು" ಎಂದು, 1959–60ರ ಉಪಚುನಾವಣೆಗಳಿಗಾಗಿ ಹೊರಡಿಸಿದ ಕಮ್ಯುನಿಸ್ಟ್ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ಸೂಚಿಸಲಾಗಿತ್ತು(40:10.02.57p8-12).

ಕೆ.ಜಿ.ಕೃಷ್ಣಮೂರ್ತಿ ಮತ್ತು ಜಿ. ಲಕ್ಷ್ಮಣರಾವ್ ಮುಂತಾದವರ ಪ್ರತಿಕ್ರಿಯೆ,

"ರಾಜಕೀಯವಾಗಿ ಪ್ರಬುದ್ಧರಾದ ತೋಟದ/ಎಸ್ಟೇಟ್ ಕಾರ್ಮಿಕರು ಮತ್ತು ಕೈಗಾರಿಕಾ ಕಾರ್ಮಿಕರು, ಕಮ್ಯುನಿಸ್ಟ್ ಸಿದ್ಧಾಂತದಿಂದ ಪ್ರೇರಿತರಾಗಿದ್ದರು. ಹೀಗಾಗಿ 1957ರಲ್ಲಿ ಪಕ್ಷವು ಸಮಾಜದ ಕೆಳಸ್ತರಕ್ಕೆ ಸೇರಿದ ಜನರ ಬೆಂಬಲವನ್ನು ಪಡೆಯಲು ಸಾಧ್ಯವಾಯಿತು"(76:p78).

ಕೇರಳದ ಕಮ್ಯುನಿಸ್ಟರು, ಟ್ರೇಡ್ ಯೂನಿಯನ್ ಮುಷ್ಕರಗಳನ್ನು, ಪ್ರತಿಭಟನಾ ಪ್ರದರ್ಶನಗಳನ್ನು, ಮತ್ತು ರ್‍ಯಾಲಿಗಳನ್ನು ಆಯೋಜಿಸುವಲ್ಲಿ ತಮ್ಮ ಕೌಶಲ್ಯವನ್ನು ಸಾಬೀತುಪಡಿಸಿದ್ದಾರೆ. ಆಡಳಿತ ಪಕ್ಷದ ದೌರ್ಬಲ್ಯ, ಲೋಪಗಳನ್ನು ಬಯಲಿಗೆಳೆಯುವುದರಲ್ಲಿ ಅವರು ದೃಢತೆಯಿಂದ ಕಾರ್ಯನಿರ್ವಹಿಸಿದರು. ಕಟ್ಟುನಿಟ್ಟಾಗಿದ್ದರು. ಹಾಗಾಗಿ ಅವರು ತುಳಿತಕ್ಕೊಳಗಾದವರ, ಬಡವರ ಮನಸ್ಸನ್ನು ಗೆದ್ದರು(77:p176).

ಅಂತರ್ಗತವಾಗಿದ್ದ ಶಕ್ತಿ, ಏಕತೆ, ಶಿಸ್ತು, ನಿಸ್ವಾರ್ಥತತೆ, ಉತ್ಸಾಹಭರಿತ ಕಾರ್ಯಕರ್ತರು, ಜನಮನ್ನಣೆ ಪಡೆದ ನಾಯಕತ್ವ, ಇವೇ ಮುಂತಾದವುಗಳು ಕಮ್ಯುನಿಸ್ಟ್ ಪಕ್ಷದ ಸದ್ಗುಣಗಳಾಗಿದ್ದವು. ಪ್ರಮುಖ ಪ್ರತಿಸ್ಪರ್ಧಿಯಾಗಿದ್ದ ಕಾಂಗ್ರೆಸ್, ಈ ವಿಚಾರಗಳಲ್ಲಿ ಬಹಳ ಹಿಂದೆ ಬಿದ್ದಿತ್ತು. ಜನರೊಂದಿಗೆ ಸಂಬಂಧಗಳನ್ನು ಸ್ಥಾಪಿಸುವಲ್ಲಿ, ವಿದ್ಯಾರ್ಥಿ, ಯುವಜನರ ಸಂಪರ್ಕ ಕಾರ್ಯಕ್ರಮಗಳಲ್ಲಿ, ಪಕ್ಷದ ಮುಖಂಡರು ಪಕ್ಷದಲ್ಲಿ ತೋರಿದ ಸಮರ್ಪಣಾ ಮನೋಭಾವ ಬಹಳ ಗಮನಾರ್ಹವಾಗಿತ್ತು. ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಕಲಾತ್ಮಕ

ಮುಖ್ಯಮಂತ್ರಿಗಳಾದ ಇ.ಎಂ.ಎಸ್ ರೊಂದಿಗೆ 1957ರ ಮೊದಲ ಮಂತ್ರಿಮಂಡಲದ ಸದಸ್ಯರು...



ರಂಗಗಳಲ್ಲಿ ಪಕ್ಷವು ನಡೆಸಿದ ಚಟುವಟಿಕೆಗಳು ಎದುರಾಳಿಗಳಿಂದಲೂ ಮೆಚ್ಚುಗೆ ಪಡೆದಿತ್ತು. ಭ್ರಷ್ಟಾಚಾರ, ಲಂಚ, ತಪ್ಪು ನಿರ್ವಹಣೆ, ಸ್ವಜನಪಕ್ಷಪಾತ, ಆಲಸ್ಯ ಮುಂತಾದ ಪದಗಳು ಕಮ್ಯುನಿಸ್ಟರ ನಿಘಂಟಿನಲ್ಲಿ ಇರಲಿಲ್ಲ. ಜಾತೀಯತೆ, ಕೋಮುಭಾವನೆ, ಪಕ್ಷದೊಳಗಿನ ಆಂತರಿಕ ಕಲಹ ಮತ್ತು ಮಂತ್ರಿಮಂಡಲದ ಅಸ್ಥಿರತೆಯನ್ನೊಳಗೊಂಡ ಶೈಲಿ, ಇವುಗಳೆಲ್ಲವೂ ಸಂಪೂರ್ಣವಾಗಿ ಕಮ್ಯುನಿಸ್ಟ್ ಪಕ್ಷಕ್ಕೆ ಒಗ್ಗದ ವಿಚಾರಗಳಾಗಿದ್ದವು. ಬಡವರ, ಕಡಿಮೆ ಆದಾಯದವರ, ಸಮಾಜದಲ್ಲಿ ತುಳಿತಕ್ಕೊಳಗಾದವರ ವಕ್ತಾರರಾಗಿದ್ದ ಕಮ್ಯುನಿಸ್ಟರಿಗೆ, ಆ ವರ್ಗದ ಬೆಂಬಲ ಮತ್ತು ನಿಷ್ಠೆಯನ್ನು ಗಳಿಸಲು ಸಾಧ್ಯವಾಯಿತು(44:p76).

1957ರ ಚುನಾವಣಾ ಯಶಸ್ಸಿನ ಬಗ್ಗೆ ವಿಭಿನ್ನ ದೃಷ್ಟಿಕೋನಗಳು, ಮೇಲಿನ ಅಭಿಪ್ರಾಯ ಮತ್ತು ಅವಲೋಕನಗಳನ್ನೇ ವಿಶ್ಲೇಷಣೆಗೊಳಪಡಿಸಿದ್ದು, ಈ ಮೇಲಿನ ಅಭಿಪ್ರಾಯಗಳು ಮತ್ತು ಮೌಲ್ಯಮಾಪನಗಳು, ಚಾರಿತ್ರಿಕ ವಾಸ್ತವಗಳ ವಿವಿಧ ಅಂಶಗಳನ್ನು ಅನಾವರಣಗೊಳಿಸುತ್ತದೆ ಎಂದು ಪರಿಶೋಧಿಸಿ ನೋಡಬಹುದಾಗಿರುತ್ತದೆ.

## ಮಂತ್ರಿಮಂಡಲ ರಚನೆ

ಚುನಾವಣಾ ಫಲಿತಾಂಶಗಳ ಘೋಷಣೆಯ ನಂತರ ಕಮ್ಯುನಿಸ್ಟ್ ಪಕ್ಷದ ಪ್ಲೀನಂ ಮಾರ್ಚ್ 8ರಂದು ಎರ್ನಾಕುಲಂನಲ್ಲಿ ನಡೆಯಿತು. ಕಮ್ಯುನಿಸ್ಟ್ ಶಾಸಕಾಂಗ ಸದಸ್ಯರು ಮತ್ತು ಅವರನ್ನು ಬೆಂಬಲಿಸುವ ಸ್ವತಂತ್ರರು, ಸಂಬಂಧಪಟ್ಟ ಸಭೆಯಲ್ಲಿ ಸಚಿವ ಸಂಪುಟ ರಚನೆಯ ಕುರಿತು ಚರ್ಚೆ ನಡೆಸಲಾಯಿತು. ಪ್ರಸ್ತಾವಿತ ಸಚಿವ ಸಂಪುಟದಲ್ಲಿ 11 ಸದಸ್ಯರಿದ್ದರು. ಮುಖ್ಯಮಂತ್ರಿ ಪದವಿಯನ್ನು ಇಎಂಎಸ್ ನಂಬೂದಿರಿಪಾಡ್ ವಹಿಸಿಕೊಂಡರು(37:p129). ಏತನ್ಮಧ್ಯೆ, ಆಗಿನ ಕೇರಳದ ರಾಜ್ಯಪಾಲರಾಗಿದ್ದ ಬಿ.ರಾಮಕೃಷ್ಣ ರಾವ್‌ರವರು,* ಪ್ರಜಾಪ್ರಭುತ್ವ ವಿರೋಧಿ ಕಾರ್ಯವಿಧಾನಗಳನ್ನು ಅನುಸರಿಸಿಕೊಂಡು ಕಮ್ಯುನಿಸ್ಟ್ ನಾಯಕತ್ವವನ್ನು ಅವಮಾನಿಸಲು ಪ್ರಯತ್ನಿಸಿದರು. ಐದು ಸ್ವತಂತ್ರ ಶಾಸಕರು ಕಮ್ಯುನಿಸ್ಟ್ ಪಕ್ಷದ ಬೆಂಬಲದೊಂದಿಗೆ ಆಯ್ಕೆಯಾಗಿದ್ದರು. ಕಮ್ಯುನಿಸ್ಟರಿಗೆ ಸ್ವತಂತ್ರರಾಗಿ ಚುನಾಯಿತರಾದ ಶಾಸಕರ ಬೆಂಬಲವನ್ನು ಖಾತ್ರಿಪಡಿಸುವ ಹೆಸರಿನಲ್ಲಿ, ಪ್ರತಿಯೋರ್ವ ಶಾಸಕನನ್ನು ವೈಯಕ್ತಿಕವಾಗಿ ಅವರ ಬೆಂಬಲವನ್ನು ಖಾತ್ರಿಪಡಿಸಿಕೊಳ್ಳುವುದಕ್ಕಾಗಿ ಪ್ರತಿಯೊಬ್ಬರನ್ನೂ ಕರೆದು ಮಾತನಾಡಿಸಲು ನಿರ್ಧರಿಸಿದರು(79:p51-52;37:p133;80:p11)**. ಈ ನಡೆ ಕಮ್ಯುನಿಸ್ಟರ

* ರಾಜ್ಯಪಾಲ ಬಿ. ರಾಮಕೃಷ್ಣ ರಾವ್ ಅವರು ನಿಷ್ಪಕ್ಷಪಾತವಾಗಿ ನಡೆದುಕೊಳ್ಳಲಿಲ್ಲ. ಕಾಂಗ್ರೆಸ್ ಸಂಸ್ಥೆಗೆ ನ್ಯಾಯ ದೊರಕಿಸಿಕೊಡಲು ಶ್ರಮಿಸುವ ಅವರು ಹೈದರಾಬಾದ್ ರಾಜ್ಯದ ಮಾಜಿ ಮುಖ್ಯಮಂತ್ರಿಯಾಗಿದ್ದರು.

** ಇಎಂಎಸ್, 'ಸಂಘರ್ಷ ಮತ್ತು ಬಿಕ್ಕಟ್ಟು' ಎಂಬ ಶೀರ್ಷಿಕೆಯ ಲೇಖನವನ್ನು ಇಎಂಎಸ್ ಬರೆದಿದ್ದರು. 'ರಾಜ್ಯಪಾಲರು ಐವರು ಸ್ವತಂತ್ರ ಶಾಸಕರನ್ನು ಖುದ್ದು ಭೇಟಿಯಾಗುವಂತೆ ಹೇಳಿದ್ದರು. ರಾಜ್ಯಪಾಲರನ್ನು ಉದ್ದೇಶಿಸಿ ಅವರು ಸಹಿ ಹಾಕಿದ ಪತ್ರ ನೀಡಿರುವ ಹಿನ್ನೆಲೆಯಲ್ಲಿ ಈ ಕ್ರಮ ಸಮರ್ಥನೀಯವಾಗಿರಲಿಲ್ಲ. ಪಕ್ಷದಿಂದ ಬೇರ್ಪಡಿಸಿ, ಸ್ವತಂತ್ರ

ಭಾವನೆಗಳಿಗೆ ಧಕ್ಕೆ ತಂದಿತು. ರಾಜ್ಯಪಾಲರ ಅಂತಹ ಪಕ್ಷಪಾತದ ನಡವಳಿಕೆಯನ್ನು ಸಾರ್ವಜನಿಕ ಅಣಕವೆಂಬಂತೆ ಚಿತ್ರಿಸುವಂಥ ನಿರ್ಣಯವನ್ನು ಅವರು ತಕ್ಷಣವೇ ಅಂಗೀಕರಿಸಿದರು(33:05.04.57).

ಸಿಪಿಐನ ಶಾಸಕಾಂಗ ಸಭೆಯ ನಾಯಕರಾಗಿ ಆಯ್ಕೆಯಾದ ಇಎಂಎಸ್ ಅವರು ಏಪ್ರಿಲ್ 3ರಂದು ರಾಜ್ಯಪಾಲರನ್ನು ಭೇಟಿಯಾಗಿ, ಸಮಗ್ರವಾದ ವಿವರಗಳನ್ನು ನೀಡಿ, ಚರ್ಚೆ ಮಾಡಿದ ನಂತರ ಸಚಿವ ಸಂಪುಟಕ್ಕೆ ನೇಮಕವಾಗುವ ಸದಸ್ಯರ ಪಟ್ಟಿಯನ್ನು ಸಲ್ಲಿಸಲಾಯಿತು(37:p124;69:p74;81:p83)*. ಇಎಮ್‌ಎಸ್‌ರವರ ಅವಲೋಕನದಲ್ಲಿ, 'ಬೇರೆ ದಾರಿಗಳ್ಯಾವುವೂ ಕಾಣದೆ ರಾಜ್ಯಪಾಲರು ಒಲ್ಲದ ಮನಸ್ಸಿನಿಂದಲೇ ಪ್ರಮಾಣವಚನದ ಕಾರ್ಯಕ್ರಮಕ್ಕೆ ವ್ಯವಸ್ಥೆ ಮಾಡಬೇಕಾಯಿತು(12:p88). ಕಮ್ಯುನಿಸ್ಟರು ಅಧಿಕಾರ ವಹಿಸಿಕೊಳ್ಳುವುದಕ್ಕಿಂತಲೂ ಸ್ವಲ್ಪ ಮೊದಲು, ಕೈಕೊಂಡ ಮತ್ತೊಂದು ಅವಮಾನಕರ ಕ್ರಮವನ್ನೂ ಕಟುವಾಗಿ ಟೀಕಿಸಲಾಯಿತು. ಆಂಗ್ಲೋ-ಇಂಡಿಯನ್ ಸಮುದಾಯವನ್ನು ಪ್ರತಿನಿಧಿಸುವ ಸಂಸ್ಥೆಯೊಂದಿಗೆ ಸಮಾಲೋಚನೆ ನಡೆಸದೆ, ಕಮ್ಯುನಿಸ್ಟ್ ಪಕ್ಷವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ, ರಾಜ್ಯಪಾಲರು ಏಕಪಕ್ಷೀಯವಾಗಿ ಮತ್ತು ದುರಹಂಕಾರದಿಂದ ವ್ಯಕ್ತಿಯೊಬ್ಬರನ್ನು ಆಂಗ್ಲೋ-ಇಂಡಿಯನ್ ಪ್ರತಿನಿಧಿಯಾಗಿ ಶಾಸನಸಭೆಗೆ ನಾಮನಿರ್ದೇಶನ ಮಾಡಿದರು(37:p124;84:28.06.2010).

ಸಿಪಿಐನ ರಾಜ್ಯ ಕಾರ್ಯದರ್ಶಿ ಮಂಡಳಿ ಅಂಗೀಕರಿಸಿದ ನಿರ್ಣಯವು ರಾಜ್ಯಪಾಲರ ಈ ಕ್ರಮವನ್ನು 'ಸಮರ್ಥನೀಯವಲ್ಲದ ಆತುರತೆ' ಎಂದು ಬಣ್ಣಿಸಿತು. ಏಕೆಂದರೆ ಹಿಂದಿನ ಸಂದರ್ಭಗಳಲ್ಲಿ ಅವರು ಕಾಂಗ್ರೆಸ್ಸಿಗರ ಬಲವನ್ನು ಹೆಚ್ಚಿಸಲು ನಾಮನಿರ್ದೇಶನದ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿದ್ದರು(48:p20).

ಏಪ್ರಿಲ್ 5, 1957ರಂದು ಇಎಂಎಸ್ ನಂಬೂದಿರಿಪಾಡ್ ಮುಖ್ಯಮಂತ್ರಿಯಾಗಿ, 11 ಮಂದಿ ಶಾಸಕರು ಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿ ಅಧಿಕಾರವನ್ನು ವಹಿಸಿಕೊಂಡರು. ಬೃಹತ್ ಸಮ್ಮೇಳನಗಳನ್ನು ಆಯೋಜಿಸಿ, ವರ್ಣರಂಜಿತವಾದ ಮೆರವಣಿಗೆಗಳನ್ನು ನಡೆಸುತ್ತಾ, ಕೇರಳದ ಜನರು, ಈ ಅಮೋಘ ಕ್ಷಣವನ್ನು ಸಂಭ್ರಮದಿಂದ ಆಚರಿಸಿದರು. ಜೀವನದ ವಿವಿಧ ಕ್ಷೇತ್ರಗಳ ಸಾಮಾನ್ಯ ಜನರು ಈ ಹೊಸ ಸಚಿವ ಸಂಪುಟಕ್ಕೆ ಭೌತಿಕ ಮತ್ತು ನೈತಿಕವಾದ ಬೆಂಬಲವನ್ನು ಒದಗಿಸಲು ಮನಃಪೂರ್ವಕವಾಗಿ ಸನ್ನದ್ಧರಾದರು(48:p21).

●

ಎ.ಎಲ್.ಎ.ಯವರೊಂದಿಗೆ, ರಾಜ್ಯಪಾಲರ ಸ್ಥಾನದ ಲಾಭ ಪಡೆದು ಖಾಸಗಿ ಸಭೆ ನಡೆಸುತ್ತಿದ್ದರು. ಆದರೆ ಈ ಪಾರದರ್ಶಕವಾದ ರಾಜಕೀಯ ಜೂಜಾಟ ನಿರೀಕ್ಷಿತ ಫಲ ನೀಡಲಿಲ್ಲ.

* ಮುಖ್ಯಮಂತ್ರಿ ಮತ್ತು ರಾಜ್ಯಪಾಲರ ನಡುವಿನ ಸಭೆ 110 ನಿಮಿಷಗಳ ಕಾಲ ನಡೆಯಿತು ಎನ್ನಲಾಗಿದೆ. ಕೇರಳದ ದಿನಪತ್ರಿಕೆಗಳು ಈ ಬಗ್ಗೆ ವರದಿ ಮಾಡಿವೆ. ಚರ್ಚೆಯ ವಿವರಗಳು ಬಹಿರಂಗಗೊಳ್ಳಲಿಲ್ಲ.

4

# ಸಾರ್ವಜನಿಕ ಕಲ್ಯಾಣ ಆಡಳಿತಾತ್ಮಕ ಸುಧಾರಣೆಗಳು

*(ಪೊಲೀಸ್, ಉದ್ಯೋಗ, ಕೈಗಾರಿಕೆ, ಹಣಕಾಸು, ಶಿಕ್ಷಣ, ಕೃಷಿ, ಆಹಾರ ಮತ್ತು ಸ್ಥಳೀಯ ಆಡಳಿತ ಕ್ಷೇತ್ರಗಳಲ್ಲಿ ಸರ್ಕಾರವು ಜಾರಿಗೆ ತಂದ ಜನಕಲ್ಯಾಣಪರ ಸುಧಾರಣೆಗಳನ್ನು ಈ ಅಧ್ಯಾಯ ಪರಿಶೀಲಿಸುತ್ತದೆ.)*

ಕೇರಳದ ಜನಜೀವನಕ್ಕೆ ಸಂಬಂಧಿಸಿದ ಎಲ್ಲಾ ಕ್ಷೇತ್ರಗಳ ಸರ್ವತೋಮುಖ ಪ್ರಗತಿಯನ್ನು ಸಾಧಿಸುವ ಗುರಿಯನ್ನಿಟ್ಟುಕೊಂಡು 1957ರ ಇಎಂಎಸ್‌ನಂಬೂದಿರಿಪಾಡ್ ಮಂತ್ರಿಮಂಡಲ ಕಾರ್ಯನಿರ್ವಹಿಸಲು ಪ್ರಾರಂಭಿಸಿತು. ಆ ಪ್ರಕಾರ ಈಗಾಗಲೇ ಗಮನಾರ್ಹ ಪ್ರಗತಿಯನ್ನು ಸಾಧಿಸುವ ನಿಟ್ಟಿನಲ್ಲಿ ಕಾರ್ಯ ಚಟುವಟಿಕೆಗಳನ್ನು ಆರಂಭಿಸಲಾದವು.ಅಲ್ಪ ಕಾಲದೊಳಗೆ ಕೇರಳದ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಕಾನೂನು ಮತ್ತು ಸುವ್ಯವಸ್ಥೆ, ಆರೋಗ್ಯ, ಕೈಗಾರಿಕೆ ಮತ್ತು ಕೃಷಿ ಚಟುವಟಿಕೆಗಳಿಂದಾಗಿ ಉಂಟಾಗಿರುವ ಅಭಿವೃದ್ಧಿಯೂ ಅಭೂತಪೂರ್ವವಾಗಿದೆ. ಕೇರಳ ಇಂದು ಭಾರತದ ಇತರ ರಾಜ್ಯಗಳಿಗೆ ಮಾತ್ರವಲ್ಲದೆ, ವಿಶ್ವಕ್ಕೆ ಅನೇಕ ಅಭಿವೃದ್ಧಿ ವಿಷಯಗಳಲ್ಲಿ ಮಾದರಿಯಾಗುತ್ತಿರುವುದರ ಆರಂಭವನ್ನು, ಇಎಂಎಸ್ ನಂಬೂದಿರಿಪಾಡ್ ಅವರ ನೇತೃತ್ವದಲ್ಲಿ ಆಳ್ವಿಕೆ ನಡೆಸಿದ ಮೊದಲ ಸರ್ಕಾರದ ಕಾರ್ಯಚಟುವಟಿಕೆಗಳಿಂದಾಗಿ ಸ್ಪಷ್ಟಗೊಳ್ಳುತ್ತಿರುವುದನ್ನು ಕಾಣಬಹುದಾಗಿರುತ್ತದೆ.

ಅಧಿಕಾರಕ್ಕೆ ಬಂದ ನಂತರ ಮುಖ್ಯಮಂತ್ರಿ ಇಎಂಎಸ್ ಅವರು ತಮ್ಮ ಸರ್ಕಾರದ ನೀತಿಯನ್ನು ಸ್ಪಷ್ಟಪಡಿಸಿದರು. ಸರ್ಕಾರದ ಹೊಸ ನೀತಿಗಳಿಗೆ, ಪ್ರಾಮುಖ್ಯತೆಯನ್ನು ನೀಡಿದ್ದು, ಸಾರ್ವಜನಿಕ ಸಹಕಾರದ ಮಹತ್ವ, ಒಕ್ಕಲೆಬ್ಬಿಸುವಿಕೆಯನ್ನು ತಡೆಯಲು ತ್ವರಿತ ಕ್ರಮ, ಭೂಸುಧಾರಣೆಯ ಅನಿವಾರ್ಯತೆ, ಕೈಗಾರಿಕಾ ವಲಯದಲ್ಲಿ ಶಾಂತಿ ನೆಲೆಗೊಳ್ಳುವುದರ ಅಗತ್ಯ, ಮತ್ತು ಮಲಯಾಳಂ ಭಾಷೆಗೆ ರಾಜ್ಯ ಭಾಷಾ ಸ್ಥಾನಮಾನ ನೀಡುವುದು, ಇವೇ ಮುಂತಾದ ವಿಚಾರಗಳಿಗೆ(97:V18p119-133) ಪ್ರಾಮುಖ್ಯತೆಯನ್ನು ನೀಡಲಾಗಿತ್ತು. ಈ ಹೆಚ್ಚಿನ ವಿಚಾರಗಳೆಲ್ಲವೂ ಕಮ್ಯುನಿಸ್ಟ್ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲೂ ಪ್ರಸ್ತಾವನೆಗೊಂಡಿದ್ದವು(86:13.04.57p480).

## ಸರ್ಕಾರದ ನೀತಿಗಳ ಘೋಷಣೆ

'ಕೇರಳವು ಒಂದು ಸಮಸ್ಯಾತ್ಮಕ ರಾಜ್ಯ' ಎಂದು ಕರೆಯಲಾಗುತ್ತದೆಯೆಂದೂ 'ಸಮಸ್ಯಾತ್ಮಕವಾದ ರಾಜ್ಯದ ಆಡಳಿತ ನಡೆಸುವುದು ಯಾರಿಗಾದರೂ ತುಂಬಾ ಆರಾಮದಾಯಕವಾದ ಕೆಲಸವಲ್ಲ' ಎಂದೂ ಮುಖ್ಯಮಂತ್ರಿ ಇಎಂಎಸ್ ತಮ್ಮ ಸರ್ಕಾರದ ನೀತಿಗಳನ್ನು ಪ್ರಸ್ತುತಪಡಿಸುವಾಗ ಹೇಳಿದರು(40:14.04.57). ಕಮ್ಯುನಿಸ್ಟರು ಆಡಳಿತ ನಡೆಸುವುದರಲ್ಲಿ ಅನನುಭವಿಗಳಾಗಿದ್ದರು. ಅಲ್ಲದೆ, ಅವರು 'ನಿರ್ದಯವಾದ ಹಲವು ನಿಯಮಗಳನ್ನು, ಕಾನೂನುಗಳನ್ನು, ಮತ್ತು ಅನುಸರಣಾ ಕ್ರಮಗಳನ್ನು ಒಳಗೊಂಡಿರುವ ವ್ಯವಸ್ಥೆಯ ಚೌಕಟ್ಟಿನೊಳಗೆ ನಿಂತು ಕಾರ್ಯನಿರ್ವಹಿಸಬೇಕಾದ ಅನಿವಾರ್ಯತೆಯಿತ್ತು(40:14.04.57;84:06.04.57). ಇವುಗಳೇ ಪ್ರತಿಕೂಲಕರವಾದ ಸಂದರ್ಭಗಳು. ಆದರೆ ಮುಖ್ಯಮಂತ್ರಿಗಳು ಎರಡು ಸಕಾರಾತ್ಮಕ ಅಂಶಗಳನ್ನೂ ಎತ್ತಿ ತೋರಿಸಿದ್ದರು.

> "ಮಹಾನ್ ಚಳುವಳಿಯೊಂದರ ಮುನ್ನಡೆಯ ಪ್ರತಿನಿಧಿಯಾಗಿ ಪಕ್ಷ ಅಧಿಕಾರಕ್ಕೆ ಬಂದಿದೆ, ಎನ್ನುವುದರಿಂದಾಗಿ ತನ್ನ ನೈತಿಕ ಧೈರ್ಯ ಮತ್ತು ಆತ್ಮವಿಶ್ವಾಸ ಹೆಚ್ಚಾಗಿದೆ"

ಎಂದು ಅವರು ಹೇಳಿದರು.

> "ಕಳೆದ ಕೆಲವು ದಿನಗಳಿಂದ ಎಲ್ಲಾ ತರಹದ ಜನವಿಭಾಗಗಳಿಂದ ನಾನು ಮತ್ತು ಸಂಗಾತಿಗಳಾದ ಪಕ್ಷದ ಕಾರ್ಯಕರ್ತರು ಸ್ವೀಕರಿಸಿದ ಶುಭಾಶಯಗಳು ಮತ್ತು ಅಭಿನಂದನೆಗಳಿಂದ ಇದು ಹೆಚ್ಚು ಸ್ಪಷ್ಟಗೊಂಡಿದೆ. 'ಕಮ್ಯುನಿಸ್ಟ್ ಪಕ್ಷ' ವಾಸ್ತವವಾಗಿ ಬಹುದೊಡ್ಡ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಿದೆ. ನಮ್ಮ ಪಕ್ಷದ ಹೆಸರಿನಲ್ಲಿ ಮಾತ್ರವಲ್ಲದೆ, ಹೊಸ ಪ್ರಜಾಸತ್ತಾತ್ಮಕ, ಸಮೃದ್ಧ ಕೇರಳವನ್ನು ನಿರ್ಮಿಸಲು ಬಯಸುವ ಸದುದ್ದೇಶವುಳ್ಳ ಸರ್ವರ ಹೆಸರಲ್ಲೂ ಈ ಜವಾಬ್ದಾರಿಯನ್ನು ವಹಿಸಿ ಕೊಳ್ಳಲಾಗುತ್ತಿದೆ"(40:14.04.57).

> "ಒಂದು ಪ್ರಜಾಸತ್ತಾತ್ಮಕ ಪ್ರಗತಿಶೀಲ ನವಕೇರಳವನ್ನು ನಿರ್ಮಿಸುವುದಕ್ಕೆ ಸಂಬಂಧಿಸಿದ ಕರಡನ್ನು ಚುನಾವಣಾ ಪ್ರಣಾಳಿಕೆಯಲ್ಲಿ ಸೇರಿಸಿ, ನಮ್ಮ ಪಕ್ಷ ಜನರ ಮುಂದೆ ಮಂಡಿಸಿತ್ತು. ಸರ್ಕಾರದ ವತಿಯಿಂದ ನಾವು ಈ ಯೋಜನೆಗಳೆಲ್ಲವನ್ನೂ ಕೈಗೆತ್ತಿಕೊಂಡು ಅನುಷ್ಠಾನಗೊಳಿಸಲು ಬದ್ಧರಾಗಿದ್ದೇವೆ. ಮೇಲಿನ ಯೋಜನೆಯ ಪ್ರತಿಯೊಂದನ್ನೂ ಬಹಳ ಎಚ್ಚರಿಕೆವಹಿಸಿ ಅನುಷ್ಠಾನಕ್ಕಾಗಿ ತನ್ನ ಮಂತ್ರಿಮಂಡಲ ವೈಯಕ್ತಿಕವಾಗಿಯೂ ಸಂಘಟಿತವಾಗಿಯೂ ಪ್ರಯತ್ನಿಸಲಾಗುವುದು"(97:Vol18p 119-133).

ಎಂದು ಇಎಂಎಸ್ ಘೋಷಿಸಿದರು. ಸದರಿ ಯೋಜನೆಯ ಭಾಗವಾಗಿ ಸರ್ಕಾರದಿಂದ ವಹಿಸಿಕೊಳ್ಳಲು ಉದ್ದೇಶಿಸಲಾದ ಕ್ರಿಯಾ ಯೋಜನೆಗಳ ಕುರಿತು ಮುಖ್ಯಮಂತ್ರಿಗಳು ಹೇಳಿಕೆ ನೀಡಿದರು. ವಿಕೇಂದ್ರೀಕರಣ, ಕೃಷಿ ಸುಧಾರಣೆಗಳು,

ಕಾರ್ಮಿಕಪರ ಕಾನೂನು, ಉದ್ಯೋಗದಾತ–ನೌಕರ ನಡುವೆ ಹೊಂದಾಣಿಕೆಯ ಮತ್ತು ಸೌಹಾರ್ದಯುತ ಸಂಬಂಧಗಳು; ರೈತರ ಮತ್ತು ಕೃಷಿ ಕಾರ್ಮಿಕರ ಹಿತಾಸಕ್ತಿಗಳನ್ನು ಖಾತ್ರಿಪಡಿಸಿಕೊಳ್ಳಲು ಭೂಸುಧಾರಣೆ ಇವೇ ಮುಂತಾದವುಗಳನ್ನು ಒಳಗೊಂಡಿರುತ್ತವೆ. ಸಾರ್ವಜನಿಕ ಸೇವೆಯಲ್ಲಿರುವ ಭ್ರಷ್ಟಾಚಾರ ನಿರ್ಮೂಲನೆ, ಆಡಳಿತ ಸುಧಾರಣೆಗಳು ಮತ್ತು ವಿಕೇಂದ್ರೀಕರಣದ ಬಗ್ಗೆಯೂ ಅವರು ಉಲ್ಲೇಖಿಸಿದರು(84:06.04.57)*. ವಿರೋಧಪಕ್ಷಗಳು ರಚನಾತ್ಮಕವಾದ ಟೀಕೆಗಳನ್ನು ಮಾಡಿ ಸರ್ಕಾರದ ವೈಫಲ್ಯಗಳನ್ನು ಬಯಲಿಗೆಳೆಯಬೇಕು ಎಂದು ಕರೆನೀಡಿದರು. ಸಮಾಜವಾದಿ ಸಮಾಜವೊಂದರ ಸ್ಥಾಪನೆ ತಮ್ಮ ಸರ್ಕಾರದ ನೀತಿ, ಎಂದು ಮುಖ್ಯಮಂತ್ರಿಯೆನ್ನುವ ನೆಲೆಯಲ್ಲಿ ಅವರು ಬಹಿರಂಗವಾಗಿ ಹೇಳಿದರು.

> "ಕಾಂಗ್ರೆಸ್ ಮತ್ತು ಕೇಂದ್ರ ಸರಕಾರಗಳು ಭರವಸೆ ನೀಡಿದ ಕಾರ್ಯಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ವಿಫಲವಾಗಿದ್ದು, ಕೇರಳದ ಹೊಸ ಸರ್ಕಾರವು ಭರವಸೆಯ ಪ್ರಕಾರ ಯೋಜನೆಗಳನ್ನು ಜಾರಿಗೆ ತರಲು ಪ್ರಯತ್ನಿಸುತ್ತದೆ"(84::06.04.57)

ಎಂದೂ ಅವರು ನಿಸ್ಸಂದಿಗ್ಧವಾಗಿ ಘೋಷಿಸಿದರು.

## ಕೈದಿಗಳ ಬಿಡುಗಡೆ

ಏಪ್ರಿಲ್ 5, 1957, ಕೇರಳದ ಜನರಿಗೆ ಸಂಬಂಧಿಸಿದಂತೆ ಅದೊಂದು ಅತ್ಯಂತ ಶುಭಕರವಾದ ದಿನವಾಗಿದೆ. ಏಕೆಂದರೆ, ಈದಿನ ರಾಜ್ಯಕ್ಕೆ ಚುನಾಯಿತ ಸರ್ಕಾರದ ಅಡಿಯಲ್ಲಿ ಕಾರ್ಯನಿರ್ವಹಿಸುವಂಥ ಸುಯೋಗ ಒದಗಿಬಂದಿದೆ. ಈ ಕ್ಷಣವನ್ನು ಸ್ಮರಿಸುವುದಕ್ಕಾಗಿ, ಏಪ್ರಿಲ್ 6, 1957ರಂದು ನಡೆದ ಕಮ್ಯುನಿಸ್ಟ್ ಸರ್ಕಾರದ ಮೊದಲ ಮಂತ್ರಿಮಂಡಲ ಸಭೆಯಲ್ಲಿ ಮರಣದಂಡನೆಯ ಶಿಕ್ಷೆಗೊಳಗಾದ ಎಲ್ಲಾ ಕೈದಿಗಳಿಗೆ, ಅವರ ಮರಣದಂಡನೆಯ ಶಿಕ್ಷೆಗಳನ್ನು ರದ್ದುಗೊಳಿಸುವ ತೀರ್ಮಾನ ಕೈಗೊಳ್ಳಲಾಯಿತು(102:p552-487). ಈ ಕ್ರಮದಿಂದಾಗಿ ವಿವಿಧ ವಲಯಗಳಿಂದ ಸರ್ಕಾರ ತೀವ್ರ ಟೀಕೆಗೆ ಗುರಿಯಾಗಬೇಕಾಯಿತು(84:18.04.57;99:p179;69:p93; 100:p3;86:22.06.57p676;102:)**. ಆದೇ ಸಮಯಕ್ಕೆ ಸರಿಯಾಗಿ, 1857ರ ಸ್ವಾತಂತ್ರ್ಯ

---

* ಅಧಿಕಾರವಧಿಗೆ ಸ್ಥಿರತೆಯನ್ನು ನೀಡಲು, ಭೂಮಿಗೆ ಮಿತಿಯನ್ನು ಗುರುತಿಸಲು, ಹೆಚ್ಚುವರಿ ಭೂಮಿಯನ್ನು ವಿತರಿಸಲು, ಭೂಸುಧಾರಣಾ ನೀತಿ ನಿರೂಪಣೆಯನ್ನು ನಿರ್ದಿಷ್ಟ ಕಾಲಮಿತಿಯೊಳಗೆ ಜಾರಿಗೊಳಿಸಲು ಭರವಸೆ ನೀಡಿದರು.

** ಎಐಸಿಸಿ ಕಾರ್ಯದರ್ಶಿ ಶ್ರೀಮನ್ನಾರಾಯಣನ್ ಅವರು ಇದನ್ನು ಕಟುವಾಗಿ ಟೀಕಿಸಿದ್ದಾರೆ. ಅವರು ಹೀಗೆ ಹೇಳಿದರು: 'ಕೊಲೆ, ದರೋಡೆ, ಹಿಂಸೆ ಇತ್ಯಾದಿ ಘೋರ ಅಪರಾಧಗಳಿಗೆ ಶಿಕ್ಷೆಗೊಳಗಾದ ರಾಜಕೀಯ ಅಪರಾಧಿಗಳು ಎಂದು ಕರೆಯಲ್ಪಡುವವರನ್ನು ಬಿಡುಗಡೆಮಾಡಲು, ಕೊಲೆಯ ಆರೋಪ ಸಾಬೀತಾದವರಿಗೆ ಮರಣದಂಡನೆಯ ಶಿಕ್ಷೆಯ ನಿರ್ಮೂಲನೆಯಂತಹ ಕಮ್ಯುನಿಸ್ಟ್ ಸರ್ಕಾರದ ಮೊದಲ ಕಾರ್ಯಗಳು ಬಹಳ ಆಶ್ಚರ್ಯಕರವಾಗಿವೆ. ಸಾಂವಿಧಾನಿಕವಾಗಿ, ಪ್ರಜಾಪ್ರಭುತ್ವದಲ್ಲಿ ಕಮ್ಯುನಿಸ್ಟರು ಈ ರೀತಿ ಕೆಲಸ ಮಾಡಬಾರದು.

ರಾಜ್ಯಪುನರ್ವಿಂಗಡನೆಯಾದ (ಕೇರಳ ರಾಜ್ಯದ ಉದಯ) ನಂತರದ ಮೊದಲ ಸ್ವಾತಂತ್ರ್ಯ ದಿನಾಚರಣೆಯ ಪೆರೇಡ್‌ನಲ್ಲಿ ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಗೌರವ ಸೆಲ್ಯೂಟ್ ಸ್ವೀಕರಿಸುತ್ತಿರುವುದು... (ಆಗಸ್ಟ್ 15, 1957)



ಹೋರಾಟದ ಶತಮಾನೋತ್ಸವದ ಆಚರಣೆಯ ಸಂದರ್ಭವೂ ಒದಗಿಬಂದಿತು. ರಾಜ್ಯದ ರಾಜಧಾನಿಯಲ್ಲಿ ನಡೆಯುವ ಆಚರಣಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಕ್ಕಾಗಿ ಭಾರತದ ರಾಷ್ಟ್ರಪತಿಗಳು ಕೇರಳಕ್ಕೆ ಬಂದಿದ್ದರು. ಈ ಸಂದರ್ಭದಲ್ಲಿ ಕೈದಿಗಳ ಶಿಕ್ಷೆಗಳಿಗೆ ವಿನಾಯಿತಿ ನೀಡಲು ಕೇರಳ ಸರ್ಕಾರ ಆದೇಶಿಸಿತು. ವಿವಿಧ ಅವಧಿಗಳಿಗಾಗಿ ಜೈಲುವಾಸ ಅನುಭವಿಸುತ್ತಿರುವ ಕೈದಿಗಳಿಗೆ, ವಿವಿಧ ಅವಧಿಗಳ ಸೆರೆವಾಸದಿಂದ ವಿನಾಯಿತಿ ನೀಡಿದ್ದಲ್ಲದೆ, ಅಲ್ಪಾವಧಿಯ ಜೈಲು ಶಿಕ್ಷೆಗೆ ಗುರಿಯಾದವರಿಗೆ ಪೂರ್ಣ ಕ್ಷಮಾದಾನ ನೀಡಿ ಬಿಡುಗಡೆಗೆ ಆದೇಶಿಸಲಾಯಿತು(45:p128).

ಇತ್ಯರ್ಥವಾದಂಥ ಕಾರ್ಮಿಕ ವಿವಾದಗಳು ಮತ್ತು ಕೃಷಿ ವಿವಾದಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು, ರಾಜಕೀಯ ಹೋರಾಟಗಳಿಂದ ಉಂಟಾಗುವ ಪ್ರಕರಣಗಳನ್ನು ಸಹ ಹಿಂಪಡೆಯಲು ಕೇರಳ ಸರ್ಕಾರ ಕೈಗೊಂಡ ನಿರ್ಧಾರ, ಮತ್ತೊಂದು ಪ್ರಮುಖ ಹೆಜ್ಜೆಯಾಗಿತ್ತು(100:p3). ತಿರುವಾಂಕೂರು–ಕೊಚ್ಚಿನ್ ರಾಜ್ಯದಲ್ಲಿ ಮುಖ್ಯಮಂತ್ರಿ ಪಟ್ಟಂತಾನು ಪಿಳ್ಳ ಮತ್ತು ಅವರ ಉತ್ತರಾಧಿಕಾರಿ ಪನಂಪಲ್ಲಿ ಗೋವಿಂದ ಮೇನನ್ ಅವರು ಪ್ರಕರಣಗಳನ್ನು ಹಿಂತೆಗೆದುಕೊಳ್ಳುವ, ಶಿಕ್ಷೆಯನ್ನು ಕಡಿಮೆ ಮಾಡುವ ಮತ್ತು ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡುವ ಸಂಪ್ರದಾಯವನ್ನು ಹುಟ್ಟುಹಾಕಿದ್ದರು. ಆದರೆ, ಕೇರಳದ ಕಮ್ಯುನಿಸ್ಟ್ ಸರ್ಕಾರದ ಇಂತಹದ್ದೇ ನಿರ್ಧಾರಗಳನ್ನು ಪ್ರತಿಪಕ್ಷಗಳು ತೀವ್ರವಾಗಿ ಟೀಕಿಸತೊಡಗಿದವು(40:28.07.57;137:p43-50).

ಮರಣದಂಡನೆಯನ್ನು ಜೀವಾವಧಿ ಶಿಕ್ಷೆಯನ್ನಾಗಿ ಪರಿವರ್ತಿಸಿದ್ದು, ಕೈದಿಗಳನ್ನು

---

ಕಡಕುಳಂಗರ ವಾಸುಪಿಳ್ಳ, ಮರಣದಂಡನೆಯ ನಿರೀಕ್ಷೆಯಲ್ಲಿದ್ದ ಕಮ್ಯುನಿಸ್ಟ್ ವ್ಯಕ್ತಿಯನ್ನು ಉಳಿಸಲುಕಮ್ಯುನಿಸ್ಟ್ ಸರ್ಕಾರವು ಮರಣದಂಡನೆಯ ಶಿಕ್ಷೆಯಲ್ಲಿ ರಿಯಾಯಿತಿ ಜಾರಿಗೊಳಿಸಲು ಉಪಕ್ರಮವನ್ನು ತೆಗೆದುಕೊಳ್ಳಲಾಗಿದೆಯೆಂದು ಪ್ರತಿಪಕ್ಷಗಳು ಮತ್ತು ಕೆಲವು ದಿನಪತ್ರಿಕೆಗಳು ಆರೋಪಿಸಿದವು.

ಬಿಡುಗಡೆಮಾಡಿದ್ದು, ಸಂಕೀರ್ಣವಾದ ಮತ್ತು ದೂರದೃಷ್ಟಿಯಿಲ್ಲದ ಕ್ರಮವಾಗಿದೆಯೆಂದು ಅಖಿಲ ಭಾರತ ಕಾಂಗ್ರೆಸ್ ನಾಯಕರಾಗಿದ್ದ ಶ್ರೀಮನ್‌ನಾರಾಯಣನ್‌ನವರು ಏಪ್ರಿಲ್ 7ರಂದು ವ್ಯಾಖ್ಯಾನಿಸಿದರು. ಏಪ್ರಿಲ್ 17ರಂದು ರಾಜ್ಯ ಕಾಂಗ್ರೆಸ್ ನಾಯಕ ಎ.ಪಿ. ಉದಯಭಾನು ಈ ಮಾತಿಗೆ ಸಂಪೂರ್ಣ ಸಹಮತ ವ್ಯಕ್ತಪಡಿಸಿದರು(69:p93). ಕಮ್ಯುನಿಸ್ಟ್ ಸರ್ಕಾರ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿ, ಕೇರಳದಲ್ಲಿ ಹಿಂಸಾಚಾರ ಮತ್ತು ಅರಾಜಕತೆ ಅನಾವರಣಗೊಳಿಸುತ್ತಿದೆ, ಎಂದು ಪ್ರತಿಪಕ್ಷ ನಾಯಕನಾರ ಪಿ.ಟಿ. ಚಾಕೋ ಆರೋಪಿಸಿದರು(102:06.05.57;100:;103:). ಆದರೆ ಕೇರಳ ಸರ್ಕಾರ ಈ ಟೀಕೆಗಳನ್ನು ಸಾರಾಸಗಟಾಗಿ ತಿರಸ್ಕರಿಸಿತು.

ಕೇರಳದ ಮೊದಲ ಜನಪರ ಸರ್ಕಾರ ಅಧಿಕಾರಕ್ಕೆ ಬಂದಿದ್ದರ ಹಿನ್ನಲೆಯಲ್ಲಿ, ಸಂತೋಷ ಸೂಚಕವಾಗಿ ರಾಜಕೀಯ ಕೈದಿಗಳ ಬಿಡುಗಡೆ ಮಾಡಿದ್ದೆಂದು, ಕಾನೂನು ಸಚಿವ ವಿ.ಆರ್. ಕೃಷ್ಣಯ್ಯರ್ ಆ ಕ್ರಮವನ್ನು ಸಮರ್ಥಿಸಿಕೊಂಡಿದ್ದರು(102:13.04.57 Vol1p452-487). ಶಿಕ್ಷೆಯನ್ನು ರದ್ದುಪಡಿಸುವ ಅಥವಾ ಬದಲಾಯಿಸಿ ವಿನಾಯಿತಿ ನೀಡುವ ಅಧಿಕಾರ ಮಂತ್ರಿಮಂಡಲ ಹೊಂದಿದೆ, ಎಂದು ಅವರು ಪ್ರತಿಪಾದಿಸಿದರು(84::10.04.57). ಭಾರತದ ಸಂವಿಧಾನದ 161ನೇ ವಿಧಿಯನ್ನು ಉಲ್ಲೇಖಿಸುವ ಮೂಲಕ ಕಾನೂನು ಸಚಿವರು, ರಾಜ್ಯಪಾಲರ ಅಂತಹ ಅಧಿಕಾರಗಳನ್ನು ಎತ್ತಿ ತೋರಿಸಿದರು. ಶಿಕ್ಷೆಯನ್ನು ತಗ್ಗಿಸಲು ಮತ್ತು ವಿನಾಯಿತಿ ನೀಡಲು ರಾಜ್ಯ ಸರ್ಕಾರದ ಅಧಿಕಾರಗಳು ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 401 ಮತ್ತು 402 ಮಾನ್ಯಮಾಡುತ್ತದೆ ಎಂದೂ ಅವರು ತಿಳಿಸಿದರು. ನ್ಯಾಯಾಲಯದ ಮುಂದೆ ಬಾಕಿ ಇರುವ ಪ್ರಕರಣಗಳಲ್ಲಿ ಸಹ ಶಿಕ್ಷೆಯನ್ನು ತಗ್ಗಿಸಲು, ವಿನಾಯಿತಿ ನೀಡಲು ಅಥವಾ ಪೂರ್ಣವಾಗಿ ಕ್ಷಮಿಸಲು. ಸರ್ಕಾರ ತನ್ನ ಅಧಿಕಾರವನ್ನು ಚಲಾಯಿಸಬಹುದು, ಎನ್ನುವುದನ್ನೂ ಅವರು ಈ ಬಗ್ಗೆ ಮಾತನಾಡುತ್ತಾ ಹೇಳಿದರು(84::10.04.57). 1942ರ ಆಂದೋಲನಕ್ಕೆ ಸಂಬಂಧಿಸಿದಂತೆ ಹಿಂಸಾಚಾರದಲ್ಲಿ ಶಿಕ್ಷೆಗೊಳಗಾದ ಕೈದಿಗಳ (ಕಾಂಗ್ರೆಸ್ ಸರ್ಕಾರ) ಬಿಡುಗಡೆ ಮಾಡಿದ್ದ ಆಕ್ಷೇಪಾರ್ಹವಾಗಿಲ್ಲದಿದ್ದ ಮೇಲೆ, ಇದೇ ವಿಷಯವಾಗಿ ಕಮ್ಯುನಿಸ್ಟ್ ಸರ್ಕಾರದ ಕಾರ್ಯವಿಧಾನವನ್ನು ವಿರೋಧಿಸುವುದರಲ್ಲಿ ಅರ್ಥವಿಲ್ಲ, ಎಂದು ಎ.ಕೆ.ಗೋಪಾಲನ್ ಪ್ರತಿಕ್ರಿಯೆ ನೀಡಿದ್ದರು (104:11.04.57;100:;103:p8-17;102:09.05.57)*. ಅನೇಕ ಅಪರಾಧಿಗಳನ್ನು ಬಿಡುಗಡೆ ಮಾಡಿರುವುದು, ಅವರು ಅಪರಾಧ ಮಾಡುವುದನ್ನು ಮುಂದುವರಿಸಿಕೊಂಡು ಹೋಗಲು ನೇರವಾಗಿ ಪ್ರೋತ್ಸಾಹಿಸಿದಂತಾಗುತ್ತದೆ ಎಂದು

---

* 1954ರಲ್ಲಿ ಆಂಧ್ರಪ್ರದೇಶ ರಾಜ್ಯ ರಚನೆಯಾದಾಗ ಆಂಧ್ರದ ಎಲ್ಲಾ ಜೈಲುಗಳ ಕೈದಿಗಳನ್ನು ಹೊಸರಾಜ್ಯದ ಉದಯದ ದಿನದಂದು ಬಿಡುಗಡೆ ಮಾಡಲಾಗಿತ್ತು. ತಿರು–ಕೊಚ್ಚಿಯಲ್ಲಿ ಪಟ್ಟತಾನುಪಿಳ್ಳ ಮುಖ್ಯಮಂತ್ರಿಯಾಗಿದ್ದಾಗ ಪುನ್ನಪ್ರ–ವಾಯಲಾರ್ ಹೋರಾಟದಲ್ಲಿ ಭಾಗಿಯಾದ ಕಾರಣಕ್ಕೆ ಜೈಲು ಶಿಕ್ಷೆ ಅನುಭವಿಸುತ್ತಿದ್ದ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಲಾಗಿತ್ತು. 1955ರಲ್ಲಿ ಶ್ರೀ ಪನಂಪಲ್ಲಿ ಗೋವಿಂದ ಮೇನನ್ ತಿರು–ಕೊಚ್ಚಿಯ ಮುಖ್ಯಮಂತ್ರಿಯಾಗಿದ್ದಾಗ ತಮಿಳುನಾಡು–ತಿರುವಾಂಕೂರು ಹೋರಾಟದಲ್ಲಿ ಭಾಗವಹಿಸಿದವರ ವಿರುದ್ಧ ಪ್ರಕರಣಗಳು ಹಿಂಪಡೆಯಲಾಗಿತ್ತು.

ಪ್ರತಿಪಕ್ಷಗಳು ತಮ್ಮ ಆರೋಪಗಳಿಗೆ ಒತ್ತು ನೀಡಿದರು(100:p2-6). ಇಎಂಎಸ್‌ರವರು ಈ ವಾದಗಳನ್ನು ನಿರಾಕರಿಸಿದರು. 'ಸತ್ಯಗಳು ನನ್ನ ಮಾತುಗಳಲ್ಲಿವೆ. ಅಂದರೆ, ಸಾಮಾನ್ಯ ಅಪರಾಧಗಳಿಗೆ ಶಿಕ್ಷೆಗೊಳಗಾದ ಕೈದಿಗಳನ್ನು ಬಿಡುಗಡೆಗೊಳಿಸಿರಲಿಲ್ಲ. ಸಂಪೂರ್ಣ ವಿನಾಯಿತಿ ನೀಡಿದ್ದು, ಅಲ್ಪಾವಧಿಯ ಸೆರೆವಾಸವನ್ನು ನೀಡಿದವರಿಗೆ ಮಾತ್ರವಾಗಿತ್ತು. ಅದು ಸಹ, 1857ರ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸಂಭ್ರಮದ ಸಂದರ್ಭವಾಗಿದ್ದರಿಂದ ಮಾತ್ರ. ಆಂಧ್ರಪ್ರದೇಶದಲ್ಲಿ ಕಾಂಗ್ರೆಸ್ ಸರ್ಕಾರ ಜಾರಿಗೊಳಿಸಿದ ಸಂಪೂರ್ಣ ಜೈಲು ಬಿಡುಗಡೆಯೊಂದಿಗೆ ಹೋಲಿಕೆ ಮಾಡಿದರೆ, ಕೇರಳ ಸರ್ಕಾರದ ಈ ಕ್ರಮ ತುಂಬಾ ಸರಳವಾದದ್ದು(45:p129).

ಕಾರ್ಮಿಕ ವಿವಾದಗಳು, ಕೃಷಿ ವಿವಾದಗಳು ಮತ್ತು ರಾಜಕೀಯ ಹೋರಾಟಗಳಲ್ಲಿ ಭಾಗವಹಿಸಿದ್ದಕ್ಕಾಗಿ ಶಿಕ್ಷೆಗೊಳಗಾದ ಮತ್ತು ಸರ್ಕಾರದ ನಿರ್ಧಾರದಿಂದ ಜೈಲಿನಿಂದ ಬಿಡುಗಡೆಯಾದ ಕೈದಿಗಳ ಪೈಕಿ, ಗಮನಾರ್ಹ ಸಂಖ್ಯೆಯ ಪ್ರಕರಣಗಳಲ್ಲಿ ಕೊಲೆ ಮತ್ತು ಬೆಂಕಿ ಹಚ್ಚುವಿಕೆ ಮುಂತಾದ ಗಂಭೀರ ಅಪರಾಧಗಳಿಗೆ ಅವರಿಗೆ ಶಿಕ್ಷೆಯಾಗಿತ್ತು, ಎಂಬುದು ಇನ್ನೊಂದು ಟೀಕೆ(100:p2-6). ಈ ಟೀಕೆಯ ಮುಂಚೂಣಿಯಲ್ಲಿ ತಿರು-ಕೊಚ್ಚಿ ರಾಜ್ಯದಲ್ಲಿ ಕಾಂಗ್ರೆಸ್-ಪಿಎಸ್‌ಪಿ ಸಮ್ಮಿಶ್ರ ಸರ್ಕಾರವು ಅದೇ ರೀತಿಯ ಕ್ರಮವನ್ನು ಕೈಗೊಂಡಿತ್ತು(103:p10), ಎನ್ನುವುದರಿಂದ ಈ ಟೀಕೆಗಳಿಗೆ ಹುರುಳಿಲ್ಲವೆಂದು ವಾದಿಸಿ ಆ ಟೀಕೆಗಳಿಗೆ ಉತ್ತರ ನೀಡಲಾಯಿತು. ಮತ್ತೊಂದು ಪ್ರಮುಖ ಆರೋಪವೆಂದರೆ,(99:p179;100:p4) ಜೈಲು ಬಿಡುಗಡೆಯ ಫಲಾನುಭವಿಗಳಲ್ಲಿ ಹೆಚ್ಚಿನವರು ಸಕ್ರಿಯ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರಾಗಿದ್ದರೂ ಎನ್ನುವುದು. ಮರಣದಂಡನೆ ಶಿಕ್ಷೆಯಲ್ಲಿ ವಿನಾಯಿತಿ ಪಡೆದ ಹತ್ತು ಜನರಲ್ಲಿ ಒಬ್ಬನೇ ಒಬ್ಬ ಮಾತ್ರ ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿವನಾಗಿದ್ದ, ಎಂಬ ಸತ್ಯವನ್ನು ಹೊರಹಾಕಿ, ಈ ಆರೋಪವನ್ನು ಇಎಂಎಸ್ ತಳ್ಳಿಹಾಕಿದರು(45:p129). ಮೇಲಾಗಿ, ಬಿಡುಗಡೆಯಾದ ಕೈದಿಗಳೆಲ್ಲರೂ ವಿವಿಧ ರಾಜಕೀಯ ಪಕ್ಷಗಳಿಗೆ ಸೇರಿದವರಾಗಿದ್ದರು(103:p1).

ಟೀಕಾಕಾರರ ಪರವಾಗಿ ಸಂಪೂರ್ಣವಾಗಿ ನಿಲ್ಲಲು ಸಾಧ್ಯವಾಗದೆ, ಪ್ರಧಾನಮಂತ್ರಿ ಜವಾಹರಲಾಲ್ ನೆಹರೂರವರು ಮಧ್ಯಮಾರ್ಗದ ಮೊರೆಹೊಕ್ಕರು. ಈ ವಿಚಾರದಲ್ಲಿ ತಮ್ಮ ಅಭಿಪ್ರಾಯ ಮಂಡನೆಗೆ ಸಂಬಂಧಿಸಿದಂತೆ, ಸರ್ಕಾರದೊಂದಿಗೆ ಮತ್ತು ಅದರ ವಿರೋಧಿಗಳೊಂದಿಗೆ ಸಮದೂರವನ್ನು ಕಾಯ್ದುಕೊಂಡರು. ಈ ಹಿಂದೆ ರಾಷ್ಟ್ರಪತಿಗಳು ತಿರಸ್ಕರಿಸಿದ್ದ ಮೂರು ಮರಣದಂಡನೆಗಳ ತೀರ್ಪಿನ ಬಗ್ಗೆ, ಜೀವಾವಧಿ ಶಿಕ್ಷೆಗೆ ಪರಿವರ್ತಿಸಲು ನೆಹರೂರವರ ಆಪ್ತರು ಮತ್ತು ಕೇಂದ್ರ ಗೃಹ ಸಚಿವರು ಆಗಿದ್ದ ಜಿ.ಬಿ.ಪಂತ್, ಅನುಮತಿ ನೀಡಿದ್ದರು. ಜೀವಾವಧಿ ಶಿಕ್ಷೆಗೊಳಗಾದ ಕೈದಿಗಳನ್ನು, ಅವರ ಶಿಕ್ಷಾವಧಿ ಪೂರ್ಣಗೊಳ್ಳುವುದರವರೆಗೆ ಬಿಡುಗಡೆ ಮಾಡುವುದಿಲ್ಲ, ಎನ್ನುವ ಖಾತ್ರಿಯ ಹೇಳಿಕೆಯನ್ನು ಮುಖ್ಯಮಂತ್ರಿ ಇಎಂಎಸ್ ನೀಡಿದರು. ಕೆಲವು ಬೆಳವಣಿಗೆಗಳನ್ನು ಗಮನಿಸಿದ ನೆಹರೂವವರಿಗೆ, ಸಂವಿಧಾನದ ಆಶಯಕ್ಕೆ ಅನುಗುಣವಾಗಿ ಮತ್ತು ಕೇಂದ್ರ

ಸರ್ಕಾರದ ಸಹಕಾರದೊಂದಿಗೆ ಸಚಿವ ಸಂಪುಟವು ಅತ್ಯಂತ ಸೂಕ್ತ ರೀತಿಯಲ್ಲಿ ಕೇರಳ ಸರ್ಕಾರ ಕಾರ್ಯನಿರ್ವಹಿಸುತ್ತಿದೆ, ಎಂದು ಮನವರಿಕೆಯಾಯಿತು(105:p55).

## ಪೊಲೀಸ್ ಆಡಳಿತ

ಇಎಂಎಸ್ ಅಧಿಕಾರಕ್ಕೆ ಬಂದ ಕೂಡಲೇ ಹೊಸ ಪೊಲೀಸ್ ನೀತಿಯನ್ನು ಪ್ರಕಟಿಸಲಾಯಿತು. ಈ ಹೊಸ ಪೊಲೀಸ್ ನೀತಿಯ ಅಡಿಯಲ್ಲಿ ಕಳ್ಳತನ, ವಂಚನೆ, ಕೊಲೆ ಇತ್ಯಾದಿ ಅಪರಾಧ ಕೃತ್ಯಗಳಲ್ಲಿ ಭಾಗಿಯಾಗಿರುವ ಸಮಾಜ ವಿರೋಧಿ ಶಕ್ತಿಗಳ ಬಗ್ಗೆ ತನಿಖೆ ನಡೆಸಿ, ಅವರನ್ನು ಪತ್ತೆ ಹಚ್ಚಿ ಕಾನೂನಿನ ಮುಂದೆ ತರುವುದು ಪೊಲೀಸರ ಕರ್ತವ್ಯವಾಗಿತ್ತು. ಸ್ವಾತಂತ್ರ್ಯದ ಮೊದಲು ವಿದೇಶಿ ಆಡಳಿತ ನಡೆಸುತ್ತಿದ್ದವರು ಮತ್ತು ಸ್ವತಂತ್ರ ಭಾರತದಲ್ಲಿ ಕಾಂಗ್ರೆಸ್ ಆಡಳಿತ ನಡೆಸುತ್ತಿದ್ದವರು ಮಾಡಿದಂತೆ ನ್ಯಾಯಯುತ ಹೋರಾಟ ಮಾಡುವ ರೈತರು ಮತ್ತು ಕಾರ್ಮಿಕರ ಮೇಲೆ ಪೊಲೀಸರು ದಬ್ಬಾಳಿಕೆ ಮಾಡಬಾರದು ಎಂದು ಸ್ಪಷ್ಟಪಡಿಸಲಾಯಿತು(40:28.07.57). 'ಟ್ರೇಡ್ ಯೂನಿಯನ್ ಚಟುವಟಿಕೆಗಳು, ರೈತ ಚಳುವಳಿಗಳು ಮತ್ತು ಯಾವುದೇ ರಾಜಕೀಯ ಪಕ್ಷದ ರಾಜಕೀಯ ಹೋರಾಟಗಳನ್ನು ದಮನ ಮಾಡುವುದು ಪೊಲೀಸರ ಹೊಣೆಯಲ್ಲ(40:28.07.57). ಕಾರ್ಮಿಕ ವಿವಾದಗಳು, ಇದೇ ರೀತಿಯ ಇತರ ವಿವಾದಗಳು ಕ್ರಮವಾಗಿ ಸರ್ಕಾರಿ ಕಾರ್ಮಿಕ ಇಲಾಖೆಗೆ ಸಂಬಂಧಿಸಿದ್ದು, ಅವುಗಳನ್ನು ಸಂಬಂಧಪಟ್ಟ ಇಲಾಖೆಗಳ ವಿವೇಚನೆಗೆ ಬಿಡಬೇಕು. ಇವುಗಳಲ್ಲಿ ಪೊಲೀಸರು ಹಸ್ತಕ್ಷೇಪ ಮಾಡಬಾರದು. ಕಾರ್ಮಿಕ ಮುಷ್ಕರಗಳು, ರೈತರ ಹೋರಾಟಗಳು ಮತ್ತು ಜನರಿಗೆ ಸಂಬಂಧಪಟ್ಟ ರಾಜಕೀಯ ಹೋರಾಟಗಳ ಸಂದರ್ಭಗಳಲ್ಲಿ ಕಾನೂನು ಸುವ್ಯವಸ್ಥೆ ಹದಗೆಟ್ಟರೆ ಅಥವಾ ಹಿಂಸಾಚಾರ ನಡೆದರೆ ಮಾತ್ರ ಪೊಲೀಸರು ಮಧ್ಯಪ್ರವೇಶಿಸಿ ಪರಿಸ್ಥಿತಿಯನ್ನು ಶಾಂತಗೊಳಿಸಬೇಕು. ಉದ್ಯೋಗದಾತರು ಮತ್ತು ಕಾರ್ಮಿಕರ ನಡುವಿನ ಯಾವುದೇ ವಿವಾದಗಳು, ವ್ಯಕ್ತಿ ಅಥವಾ ಜನರ ಜೀವ ಮತ್ತು ಆಸ್ತಿಗೆ ಬೆದರಿಕೆಯ ಸಮಸ್ಯೆ ಉಂಟಾದಾಗ ಮಾತ್ರ ಪೊಲೀಸರು ಘಟನಾ ಸ್ಥಳಕ್ಕೆ ಪ್ರವೇಶಿಸಬೇಕು(40:18.08.57). ಈ ಮೊದಲು ಪಟ್ಟಭದ್ರ ಹಿತಾಸಕ್ತಿಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸಲು ಪೊಲೀಸ್ ಪಡೆಗೆ ತರಬೇತಿ ನೀಡಲಾಗಿದ್ದರಿಂದ, ಹೊಸ ಪೊಲೀಸ್ ನೀತಿಯನ್ನು ಅದರ ಸಾರಾಂಶದೊಳಗೆ ಹೊಕ್ಕು ಕಾರ್ಯನಿರ್ವಹಿಸಲು ಪೋಲಿಸರಿಗೆ ಸಾಧ್ಯವಾಗಿರಲಿಲ್ಲ(12:V2p108). ಆದಾಗ್ಯೂ, ಈ ಪ್ರಕಟಣೆಯು ಬಹಳಷ್ಟು ಪ್ರಭಾವವನ್ನು ಬೀರಿತು. ಏಕೆಂದರೆ ತುಳಿತಕ್ಕೊಳಪಡಿಸುವುದರ ಬದಲು ಸೇವೆ ಮಾಡುವಷ್ಟು ಪ್ರಬುದ್ಧವಾಗಿರುವ ಜನಪರ ಸರಕಾರ ಇಲ್ಲಿ ಅಧಿಕಾರದಲ್ಲಿದೆ ಎಂಬುದು ದುಡಿಯುವ ಜನತೆಗೆ ಮನವರಿಕೆಯಾಗಿತ್ತು. ಪ್ರತಿಭಟನೆಗಳು ಮತ್ತು ಸಾಮೂಹಿಕ ಜನಪರ ಹೋರಾಟಗಳು ಹೆಚ್ಚಿನ ಪ್ರಚೋದನೆಯನ್ನು ಪಡೆದವು. ಉದ್ಯೋಗದಾತರು ಮತ್ತು ಭೂಮಾಲೀಕರು, ಮೊದಲಿನಂತೆ ತಮ್ಮ ಅಧೀನದಲ್ಲಿ ದುಡಿಯುವವರ ಮೇಲೆ ದಬ್ಬಾಳಿಕೆ ನಡೆಸಲು,

ಇನ್ನು ಮುಂದೆ ಪೊಲೀಸರ ಮೇಲೆ ಅವಲಂಬಿತರಾಗಲು ಸಾಧ್ಯವಿಲ್ಲ ಎಂದು ಅವರಿಗೆ ಮನವರಿಕೆಯಾಯಿತು(8:p326). ಆದ್ದರಿಂದ, ಹೆಚ್ಚಿನವರು ಪ್ರತಿಭಟನಾಕಾರರೊಂದಿಗೆ ಶಾಂತಿಯುತವಾಗಿ ವ್ಯಹರಿಸುವುದೇ ವಿವೇಕತನ ಎಂದು ಭಾವಿಸಿದರು. ದುಡಿಯುವ ಜನರ ವಿವಿಧ ವರ್ಗಗಳಿಗೆ ನಿರ್ಣಾಯಕ ಸಾಧನೆಗಳನ್ನು ಸಾಧಿಸಲು ಸಾಧ್ಯವಾದವು. ಜನಾಂದೋಲನಗಳ, ಚಳುವಳಿಗಳ ಬೆಳವಣಿಗೆ ಹಿಂದೆಂದಿಗಿಂತಲೂ ಹೆಚ್ಚಿದ ಉನ್ನತ ಮಟ್ಟ ತಲುಪಿತು(45:p135).

ಹಿಂದಿನ ತಿರು–ಕೊಚ್ಚಿ ರಾಜ್ಯ ಮತ್ತು ಮಲಬಾರ್ ಪ್ರದೇಶದಲ್ಲಿ ಪೊಲೀಸ್ ಪಡೆಯನ್ನು ಏಕೀಕರಣಗೊಳಿಸಿದ್ದು, ಸರ್ಕಾರದ ಪ್ರಮುಖ ಸಾಧನೆಗಳಲ್ಲೊಂದಾಯಿತು. ತಿರು–ಕೊಚ್ಚಿ ಪೊಲೀಸ್ ಐಜಿಯಾಗಿದ್ದ ಚಂದ್ರಶೇಖರನ್ ನಾಯರ್ ಅವರನ್ನು ಕೇರಳ ಪೊಲೀಸ್ ಐಜಿಯಾಗಿ ನೇಮಕ ಮಾಡಲಾಯಿತು. ಐಪಿಎಸ್ ಕೇಡರ್ ಜೊತೆಗೆ, ಸರ್ಕಾರವು ಕೇರಳ ಕೇಡರ್ ಎಂದು ಕರೆಯಲ್ಪಡುವ ಹೊಸ ಕೇಡರನ್ನು ಸಹ ರಚಿಸಿತು. ಮುಂದೆ ಸರಕಾರ ಭ್ರಷ್ಟಾಚಾರ ನಿಗ್ರಹ ಘಟಕವನ್ನು (ಇಂದಿನ ವಿಜಿಲೆನ್ಸ್ ವಿಭಾಗದ ಹಿಂದಿನ ಮಾದರಿ) ಸ್ಥಾಪಿಸಿತು. 1957ರಲ್ಲಿಯೇ ಇಲಾಖೆ 2985 ದೂರುಗಳನ್ನು ದಾಖಲಿಸಿ, ಅದರ ದಕ್ಷತೆಯನ್ನು ಪ್ರದರ್ಶಿಸಿತು. ಅದೇ ವರ್ಷದಲ್ಲಿ, ಕೇರಳ ಪೊಲೀಸ್ ಫೋರ್ಸ್‌ನ (ಎಂಎಸ್‌ಪಿ ಮತ್ತು ಅಗ್ನಿಶಾಮಕ ದಳವನ್ನು ಹೊರತುಪಡಿಸಿ) ಸದಸ್ಯತ್ವವನ್ನು 11,312 ಕ್ಕೆ ಹೆಚ್ಚಿಸಲಾಯಿತು(106:p176).

ಪೊಲೀಸ್ ಪಡೆಯ ಆಧುನೀಕರಣಕ್ಕೆ ಗಣನೀಯ ಪರಿಗಣನೆ ಲಭಿಸಿತು. ಪೋಲಿಸ್ ಮ್ಯಾನ್ಯುವಲ್/ಕೈಪಿಡಿ ತಯಾರಿಸುವ ಸಲುವಾಗಿ, ಸರಕಾರ ಸೂಪರಿಂಟೆಂಡೆಂಟ್ ಹುದ್ದೆಯನ್ನು ಸೃಷ್ಟಿಸಿತು(107:19.03.58). ಅಪರಾಧ ವಿಭಾಗ, ವಿಶೇಷ ವಿಭಾಗ, ಅಗ್ನಿಶಾಮಕ ಸೇವೆ ಮತ್ತು ಶಾರ್ಟ್ ಹ್ಯಾಂಡ್ ಬ್ಯೂರೋ ಮುಂತಾದ ಇಲಾಖೆಗಳು ರಾಜ್ಯದಾದ್ಯಂತ ಕಾರ್ಯನಿರ್ವಹಿಸಲು ಸ್ಥಾಪಿತಗೊಂಡವು. ಕಚೇರಿಯ ಕಾರ್ಯವಿಧಾನಕ್ಕೆ ಸಂಬಂಧಿಸಿದ ಕೈಪಿಡಿಯನ್ನು ಸಿದ್ಧಪಡಿಸಿ, ಇಲಾಖೆಯ ಚಟುವಟಿಕೆಗಳ ಕ್ರೋಡೀಕರಣದ ಮೇಲೆ ಪ್ರಮುಖವಾಗಿ ಗಮನ ಹರಿಸಲಾಯಿತು(34:p126). ಮೋಟಾರು ಸಾರಿಗೆ ಇಲಾಖೆಯು ಆರಂಭದಲ್ಲಿ ಪೊಲೀಸ್ ಇಲಾಖೆಯ ಭಾಗವಾಗಿತ್ತು. ಜೂನ್ 1958ರ ಮೊದಲ ವಾರದಲ್ಲಿ ಸ್ವತಂತ್ರ ಮೋಟಾರು ವಾಹನ ವಿಭಾಗವನ್ನು ರಚಿಸಲಾಯಿತು(107:03.06.58). ಎನ್.ಸಿ.ಚಟರ್ಜಿಯವರ ನೇತೃತ್ವದಲ್ಲಿ ಮೊದಲ ಪೊಲೀಸ್ ಮರುಸಂಘಟನಾ ಆಯೋಗದ (ಏಳು ಸದಸ್ಯರನ್ನು ಒಳಗೊಂಡ) ರಚನೆ(84:17.01.59). ಪೊಲೀಸ್ ವ್ಯವಸ್ಥೆಯ ಪುನರ್‌ರಚನಾ ಪ್ರಕ್ರಿಯೆಯಲ್ಲುಂಟಾದ ಒಂದು ಮೈಲಿಗಲ್ಲು(84:23.04.58). ಸಶಸ್ತ್ರ ಪಡೆಗಳ ರಚನೆ ಮತ್ತು ಕಾರ್ಯ ಚಟುವಟಿಕೆಗಳನ್ನು ಸಮಗ್ರವಾಗಿ ಮರುನಿರ್ಣಯಿಸಲು ಕ್ರಾಂತಿಕಾರಿ ಪ್ರಸ್ತಾಪಗಳನ್ನು ಆಯೋಗವು ಮುಂದಿಟ್ಟಿತು*. ಈ ವರದಿಯು ಪೊಲೀಸ್

---

* ಚಟರ್ಜಿ ಆಯೋಗವು ಆರ್. ಶಂಕರ್‌ರವರ ಮಂತ್ರಿಮಂಡಲದ ಕಾಲದಲ್ಲಿ ತನ್ನ ವರದಿಯನ್ನು ಸಮರ್ಪಿಸಲಾಗಿತ್ತು.

ವ್ಯವಸ್ಥೆಯನ್ನು ಒಂದು ಸೇವಾ ಕ್ಷೇತ್ರವೆಂದು ಪರಿಗಣಿಸಿತು. ಕ್ಯಾಂಪುಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವವರಿಗೆ ಅನುಕೂಲವಾಗುವ ರೀತಿಯಲ್ಲಿ ಸಶಸ್ತ್ರ ಪೊಲೀಸರನ್ನು ಸಮಾಜ ಸೇವೆಗೆ ಸಜ್ಜುಗೊಳಿಸಬೇಕು ಎನ್ನುವ ಸಲಹೆಯು, ಎನ್.ಸಿ. ಚಟರ್ಜಿ ಆಯೋಗದ ಉದಾತ್ತ ವಿಧಾನಕ್ಕೆ ಉದಾಹರಣೆಯಾಯಿತು(106:p176).

ಪೊಲೀಸ್ ಮತ್ತು ಸಾರ್ವಜನಿಕರ ನಡುವಿನ ಸಂಬಂಧವನ್ನು ಬಲಪಡಿಸುವ ಅಗತ್ಯತೆಯನ್ನು, 1957ರ ಪೊಲೀಸ್ ಆಡಳಿತದ ವರದಿಯಲ್ಲಿ ಒತ್ತು ನೀಡಲಾಯಿತು. ಪೊಲೀಸ್ ಪಡೆಯ ಸೌಲಭ್ಯಗಳ ಸುಧಾರಣೆಗೆ ಒತ್ತು ನೀಡಲಾಯಿತು. ಇಲಾಖೆಯ ಕಾರ್ಯನಿರ್ವಹಣೆಗೆ ಅನುಕೂಲವಾಗುವಂತೆ ಸರ್ಕಾರಿ ವಸತಿ, ಪೊಲೀಸ್ ತರಬೇತಿ ಕೇಂದ್ರಗಳು, ಪೊಲೀಸ್ ನಿಯಂತ್ರಣ ಕೊಠಡಿ ಮತ್ತು ವಿಧಿವಿಜ್ಞಾನ ಪ್ರಯೋಗಾಲಯ ಇವೇ ಮುಂತಾದವುಗಳನ್ನು ಸ್ಥಾಪಿಸಲಾದವು(84:20.05.59). ಕ್ರೋಢೀಕರಿಸಿದ, ಅಸ್ತಿತ್ವದಲ್ಲಿರುವ ಆದೇಶಗಳು ಮತ್ತು ಸ್ಟೋರ್ ಖಾತೆಗಳ ಅಕೌಂಟಿಂಗ್ ನಿಯಮಗಳು ಜಾರಿಗೆ ಬಂದವು. ಫಿಂಗರ್‌ಪ್ರಿಂಟ್ ಬ್ಯೂರೋವನ್ನು ಒಬ್ಬ ನಿರ್ದೇಶಕರ ಅಡಿಯಲ್ಲಿ ಸ್ಥಾಪಿಸಲಾಯಿತು. ಪೊಲೀಸರ ಕ್ಷೇಮಾಭಿವೃದ್ಧಿಯ ವಿಚಾರದಲ್ಲೂ ಸರ್ಕಾರ ಚಿಂತನೆ ನಡೆಸಿ, ಪೊಲೀಸ್ ಕಲ್ಯಾಣ ನಿಧಿ ಸ್ಥಾಪಿಸಿತು(107:23.04.53). ಪೊಲೀಸ್ ಠಾಣೆಗಳನ್ನು ವಿದ್ಯುದ್ದೀಕರಿಸಲು ಮತ್ತು ಅಲ್ಲಿ ದೂರವಾಣಿ ಸೌಲಭ್ಯಗಳನ್ನು ಸ್ಥಾಪಿಸಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲಾದವು. ಸೈನಿಕರ ಚಲನವಲನವನ್ನು ಖಚಿತಪಡಿಸಿಕೊಳ್ಳಲು ಬಸ್ ಮತ್ತು ಜೀಪ್‌ಗಳ ವ್ಯವಸ್ಥೆಗಳು ಸಿದ್ದಗೊಂಡವು(34:p126).

ಇಎಂಎಸ್ ಸರ್ಕಾರ ಮೂರನೇ ಡಿಗ್ರಿ ವ್ಯವಸ್ಥೆಯನ್ನೂ ಒಳಗೊಂಡಂತೆ ಪೋಲೀಸರ ಕಿರುಕುಳ (ಚಿತ್ರಹಿಂಸೆ) ನೀತಿಯನ್ನು ಅಂಗೀಕರಿಸಲಿಲ್ಲ(107:22.06.57). ಹಿಂದೆ ಕಮ್ಯುನಿಸ್ಟರಿಗೆ ಕಿರುಕುಳ ನೀಡಿದ್ದ ಅನೇಕ ಪೊಲೀಸ್ ಅಧಿಕಾರಿಗಳಿಗೆ, ಕಮ್ಯುನಿಸ್ಟ್ ಸರ್ಕಾರದ ಅಡಿಯಲ್ಲಿ ಕೆಲಸ ಮಾಡಲು ತ್ರಾಸದಾಯಕ ಅನುಭವಗಳು ಉಂಟಾದವು(106:p177). ಆದಾಗ್ಯೂ, ಪೊಲೀಸರ ಇಮೇಜ್ ಅನ್ನು ಭಾಗಶಃ ಕಳಂಕಗೊಳಿಸುವಂಥ ಕೆಲವು ಘಟನೆಗಳು ಮೊದಲ ಕಮ್ಯುನಿಸ್ಟ್ ಸರ್ಕಾರದ ಕಾಲದಲ್ಲೂ ನಡೆದವು. 1958ರಲ್ಲಿ ನಾಲ್ಕು ಕಡೆಗಳಲ್ಲಿ ಗುಂಡಿನ ದಾಳಿ ನಡೆದಿವೆ. ಕೊಲ್ಲಂ ಜಿಲ್ಲೆಯ ಶ್ರೀಗಂಧದ ಎಸ್ಟೇಟ್‌ನಲ್ಲಿ, ಮುನ್ನಾರ್ ಪ್ರದೇಶದ ಎಲ್ಲಾ ಮೂರು ಎಸ್ಟೇಟ್‌ಗಳಲ್ಲಿ ಆ ಗುಂಡಿನ ದಾಳಿಗಳು ನಡೆದಿದ್ದವು. ಗೋಡಂಬಿ ಕಾರ್ಖಾನೆಗೆ ಬೀಗಮುದ್ರೆ ಹಾಕಿದ್ದನ್ನು ವಿರೋಧಿಸಿ ಶ್ರೀಗಂಧದ ಕಾರ್ಮಿಕರು ಮುಷ್ಕರ ಹೂಡಿದ್ದರು.* ಆರ್‌ಎಸ್‌ಪಿಯ ಟ್ರೇಡ್ ಯೂನಿಯನ್‌ಗೆ ಸೇರಿದ ಯು.ಟಿ.ಯು.ಸಿ. ಸಂಘಟನೆಯ ನೇತೃತ್ವದಲ್ಲಿ ನಡೆದ ಮುಷ್ಕರ

---

* ಮೂಲ: ಯುಟಿಯುಸಿ ನೇತೃತ್ವದ ಚಂದನತೋಪ್ ಕಾರ್ಮಿಕ ಮುಷ್ಕರದಲ್ಲಿ ಅವರ ನಾಯಕರಾಗಿದ್ದ ಶ್ರೀ ಟಿ.ಎಂ. ಪ್ರಭಾರೊಂದಿಗೆ 4 ಮೇ 2010ರಂದು ಕೊಲ್ಲಂ ಆಶ್ರಮಂ ಎಂಬಲ್ಲಿ ಅವರ ನಿವಾಸದಲ್ಲಿ ಸಂದರ್ಶನ

ಹಿಂಸಾಚಾರಕ್ಕೆ ತಿರುಗಿತ್ತು. ಪೊಲೀಸರ ಗುಂಡಿಗೆ ಇಬ್ಬರು ಕಾರ್ಮಿಕರು ಸಾವನ್ನಪ್ಪಿದರು.* ಅನೇಕರು ಲಾಠಿಚಾರ್ಜ್‌ಗೆ ಗುರಿಯಾದರು. ಈ ಹಿಂಸಾತ್ಮಕ ಘಟನೆಯ ತನಿಖೆಗಾಗಿ ಸರ್ಕಾರವು ನ್ಯಾಯಮೂರ್ತಿ ಶಂಕರನ್ ಆಯೋಗವನ್ನು ನೇಮಿಸಿತು. ಪೊಲೀಸರ ಕ್ರಮವನ್ನು ಆಯೋಗ ಸಮರ್ಥಿಸಿಕೊಂಡಿತು. ಹಿಂಸಾಚಾರವನ್ನು ಕೊನೆಗೊಳಿಸಲು ಮತ್ತು ಶಾಂತಿಯನ್ನು ಪುನಃಸ್ಥಾಪಿಸಲು ಗುಂಡಿನ ದಾಳಿ ಅನಿವಾರ್ಯವಾಗಿತ್ತು ಎಂದು ಆಯೋಗ ಸೂಚಿಸಿತು(104:18.12.58;107:17.12.58;118:06.01.79). ಮುನ್ನಾರ್ ಪ್ರದೇಶ ಗುಡ್ರೆಲ್ ಎಸ್ಟೇಟ್‌ನಲ್ಲಿ ನಡೆದ ಮುಷ್ಕರವೂ ಹಿಂಸಾಚಾರದಲ್ಲಿ ಕೊನೆಗೊಂಡಿತು. ಒಬ್ಬ ಸಬ್‌ಇನ್ಸ್‌ಪೆಕ್ಟರ್ ಸೇರಿದಂತೆ ಪೊಲೀಸರ ಜೀವಗಳನ್ನು ರಕ್ಷಿಸಲು ಪೊಲೀಸರು ಗುಂಡು ಹಾರಿಸಿದ್ದರು(106:p17734:p128). ಅಂದಿನ ಕಮ್ಯುನಿಸ್ಟ್ ನಾಯಕರು ತಮ್ಮ ಪಕ್ಷದ ಆಳ್ವಿಕೆಯಲ್ಲಿ ಪೊಲೀಸ್ ಫೈರಿಂಗ್ ನಡೆದಿದ್ದರೂ ಅದನ್ನು ಟೀಕಿಸುವಲ್ಲಿ ಪ್ರಾಮಾಣಿವಾಗಿ ಆಸಕ್ತಿವಹಿಸಿ ಮುಂದೆ ಬಂದಿದ್ದರು(129:24-27.10.58;7:20.11.58;107:24-26.10.58).

ಕೇರಳ ಪೊಲೀಸರ ಗುಣಮಟ್ಟ ಮತ್ತು ಕೆಲಸದ ಪರಿಸ್ಥಿತಿಗಳನ್ನು ಸರ್ಕಾರ ಸುಧಾರಿಸಿತು. ಈ ಹಿಂದೆ ಕ್ರೌರ್ಯ ಮೆರೆದ ಪೊಲೀಸರು ಜನರ ಕಾವಲುಗಾರರಾಗಿ, ಕಾನೂನುಪಾಲಕರಾಗಿ ಬದಲಾದರು(107:18.03.58). ತೀವ್ರ ಹಿಂಸಾಚಾರದ ಸಂದರ್ಭದಲ್ಲಿಯೂ ಪೊಲೀಸರು ಮಾದರಿಯಾಗಿ, ಅತ್ಯಂತ ಜಾಗರೂಕತೆ ಮತ್ತು ನಿಷ್ಪಕ್ಷಪಾತದ ವರ್ತನೆಯನ್ನು ಪ್ರದರ್ಶಿಸಿದರು. ತಮ್ಮ ಆತ್ಮಚರಿತ್ರೆಯಲ್ಲಿ ಫಾದರ್ ವಡಕ್ಕನ್‌ರವರು ಕೇರಳ ಪೊಲೀಸರ ಬಗ್ಗೆ ತಮಗುಂಟಾದ ಅನುಭವ ಸಾರಾಂಶವನ್ನು ಹೀಗೆ ಸಂಗ್ರಹಿಸಲಾಗಿದೆ,

> "ಒಂದು ವಿಷಯವಂತು ಸ್ಪಷ್ಟವಾಗಿದೆ. ಕಮ್ಯುನಿಸ್ಟರ ಗೂಂಡಾಗಳು ಮತ್ತು ವಿಮೋಚನಾ ಹೋರಾಟದ ಗೂಂಡಾಗಳು, ಹಲವೆಡೆ ಹಿಂಸಾಚಾರಗಳಲ್ಲಿ ತೊಡಗಿಕೊಂಡಿದ್ದರೂ ಪೊಲೀಸರು ಸಾಮಾನ್ಯವಾಗಿ ಸಂಪೂರ್ಣ ಜಾಗರೂಕತೆ ಮತ್ತು ನಿಷ್ಪಕ್ಷಪಾತತನವನ್ನು ತೋರಿದರು(46:p125). ಅವರು ಎಲ್ಲಾ ಪ್ರಚೋದನೆಗಳನ್ನು ತಾಳ್ಮೆಯಿಂದ ನಿಭಾಯಿಸಿದರು. ತ್ರಿಶೂರ್ ಕಲೆಕ್ಟರೇಟ್‌ನಲ್ಲಿ ನಡೆದ ಪಿಕೆಟಿಂಗ್ ಮುಷ್ಕರ ನನ್ನ ನೆನಪಿಗೆ ಬರುತ್ತದೆ. ಪಿಕೆಟಿಂಗ್‌ನಲ್ಲಿ ಭಾಗವಹಿಸಲು ಕನಿಷ್ಠ ಐದು ಸಾವಿರ ಪುರುಷರು ಮತ್ತು ಮಹಿಳೆಯರು ಸೇರಿದ್ದರು. ಮುಂದೆ ಮುಂದೆ ಹಾರುತ್ತಾ ಮಹಿಳೆಯರು ಪೊಲೀಸರನ್ನು ತಳ್ಳುತ್ತಿರುವುದರ ದೃಶ್ಯಗಳನ್ನು ನಾನು ನೋಡಿದೆ. ನಾನು ಅವರನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸಿದೆ. ಇಂದಿನ ಸಿಆರ್‌ಪಿಗೆ ಅಂತಹ ಪ್ರಚೋದನೆ ಇದ್ದಿದ್ದರೆ ಏನಾಗಿಬಿಡುತ್ತಿತ್ತು...?"(46:p125)

---

* ಯುಟಿಯುಸಿ ಸಂಘದ ಕಾರ್ಯಕರ್ತರಾದ ಸುಲೈಮಾನ್ ಮತ್ತು ರಾಮನ್ ಪೊಲೀಸ್ ಫೈರಿಂಗ್‌ನಲ್ಲಿ ಸ್ಥಳದಲ್ಲೇ ಸಾವನ್ನಪ್ಪಿದ್ದರು. ಮುಷ್ಕರದಲ್ಲಿ ಭಾಗವಹಿಸಿದ್ದಕ್ಕಾಗಿ ಪೊಲೀಸರಿಂದ ಥಳಿತಕ್ಕೊಳಗಾಗಿದ್ದ ಚಂದನತೋಪ್‌ನ ಗೋಡಂಬಿ ಕಾರ್ಖಾನೆಯ ಕಾರ್ಮಿಕ ಕುಂದರ ದಾಮೋದರನ್ ಪಿಳ್ಳರೊಂದಿಗೆ ಮೇ 3, 2010ರಂದು ಅವರ ನಿವಾಸದಲ್ಲಿ ಸಂದರ್ಶನ.

ಪೊಲೀಸರ ಸರ್ವತೋಮುಖ ಕಲ್ಯಾಣದ ಬಗ್ಗೆ ಸರ್ಕಾರಕ್ಕೆ ಕಾಳಜಿಯಿತ್ತು. ಪೋಲೀಸರ ಕಡೆಯಿಂದ ಸದ್ವರ್ತನೆ ಎನ್ನುವ ಆದರ್ಶವನ್ನು ಸರ್ಕಾರ ಎತ್ತಿ ಹಿಡಿದಿತ್ತು. ಏಕೀಕರಣ, ನವೀಕರಣ, ಮರುಸಂಘಟನೆ ಮತ್ತು ವಿವೇಕಪೂರ್ವವಾದ ನಿಷ್ಪಕ್ಷಪಾತ ಮುಂತಾದ ವಿಚಾರಗಳಿಗೆ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ ಪೋಲೀಸರು ಕೇಂದ್ರಬಿಂದುವಾಗಿದ್ದರು.

## ಪೊಲೀಸ್ ಪರಿಶೀಲನಾ ವ್ಯವಸ್ಥೆ (Police Verification)

ಸರ್ಕಾರಿ ಸೇವೆಗೆ ಸೇರುವ ಮುನ್ನ ಜಾರಿಯಲ್ಲಿದ್ದ ದೋಷಪೂರಿತ ಪೊಲೀಸ್ ತಪಾಸಣಾ ವ್ಯವಸ್ಥೆಯನ್ನು ಕಮ್ಯುನಿಸ್ಟ್ ಸರ್ಕಾರ ಕೊನೆಗೊಳಿಸಿರುವುದು ಸ್ವಾಗತಾರ್ಹ ಕ್ರಮವಾಗಿತ್ತು. ಕಮ್ಯುನಿಸ್ಟ್-ಚಿಂತನೆಯುಳ್ಳ ಜನರು, ಮತ್ತುಳಿದ ನಿರ್ದಿಷ್ಟ ಅರ್ಹತೆ ಹೊಂದಿದ್ದರೂ, ಸರ್ಕಾರಿ ಸೇವೆಗೆ ಪ್ರವೇಶಿಸದಂತೆ ಕೇಂದ್ರ ಸರ್ಕಾರ ಹೊರಡಿಸಿದ್ದ ಒಂದು ನಿರ್ದೇಶನವು, ಮುಖ್ಯಮಂತ್ರಿ ಇಎಂಎಸ್‌ನಂಬೂದಿರಿಪಾಡ್‌ರವರ ಗಮನಕ್ಕೆ ಬಂದಿತ್ತು. ಕಾಂಗ್ರೆಸ್ ಅಥವಾ ಇತರ ಪಕ್ಷಗಳೊಂದಿಗೆ ಸಂಬಂಧವಿದ್ದರೂ ನೇಮಕಾತಿಗೆ ಅಡ್ಡಿಯಾಗುವುದಿಲ್ಲ ಎನ್ನುವ ಸ್ಥಿತಿ ಇರುವಾಗ, ಇದು ಕಮ್ಯುನಿಸ್ಟ್ ಪಕ್ಷದ ವಿರುದ್ಧವಿರುವ ಸ್ಪಷ್ಟವಾದ ತಾರತಮ್ಯವಾಗಿತ್ತು. ಆದ್ದರಿಂದ, ಒಂದು ಪಕ್ಷದ ಪರವಾಗಿರುವವರಿಗೆ ಮಾತ್ರ ಅನ್ವಯಿಸುವ ಈ ತಾರತಮ್ಯವನ್ನು ಕೊನೆಗೊಳಿಸಲು ಸರ್ಕಾರ ಕ್ರಮ ಕೈಗೊಂಡಿತು(39:p213).

## ಉದ್ಯೋಗ ಮತ್ತು ಕೈಗಾರಿಕೆ

ಕಮ್ಯುನಿಸ್ಟರು ಕೇರಳದ ಟ್ರೇಡ್ ಯೂನಿಯನ್ ಚಳಿವಳಿಯ ಕಾರ್ಯಕರ್ತರು ಮತ್ತು ಸಂಘಟಕರು ಆಗಿದ್ದರು. ಸ್ವಾಭಾವಿಕವಾಗಿ ಹಿಂದಿನ ಸರ್ಕಾರಗಳಿಗಿಂತ ಭಿನ್ನವಾದ ಕಾರ್ಮಿಕ ನೀತಿಯನ್ನು ಕಮ್ಯುನಿಸ್ಟ್ ನೇತೃತ್ವದ ಮೊದಲ ಸರ್ಕಾರ ಅನುಸರಿಸಿತು. ಕಾರ್ಮಿಕವರ್ಗದ ಏಕತೆಯನ್ನು ಪೋಷಿಸಲು ಮತ್ತು ಅವರ ಸಾಮೂಹಿಕ ಚೌಕಸೀ ಶಕ್ತಿಯನ್ನು ಹೆಚ್ಚಿಸಲು, ಆ ಮೂಲಕ ಕಾರ್ಮಿಕ ಸಂಘಗಳನ್ನು ಬಲಪಡಿಸಲು, ಕಮ್ಯುನಿಸ್ಟ್ ಸರ್ಕಾರ ಅವಿರತವಾಗಿ ಶ್ರಮಿಸಿತು (97:V18p119-133). ಕಾರ್ಮಿಕವರ್ಗದ ಹೋರಾಟಗಳೊಂದಿಗಿನ ಈ ಕಾರ್ಯವಿಧಾನವು ಅದರ ಸ್ವಂತಿಕೆಗಳಿಂದಾಗಿ ಗಮನಾರ್ಹವಾಗಿದ್ದು, ಸಾಂಪ್ರದಾಯಿಕ ವಿಧಾನಗಳಿಂದ ಅದರ ಮೂಲಭೂತ ಬದಲಾವಣೆಯನ್ನು ಸೂಚಿಸುವಂಥದ್ದೂ ಆಗಿತ್ತು. ತಮ್ಮ ಕೆಲಸದ ಪರಿಸ್ಥಿತಿ ಮತ್ತು ಜೀವನ ಪರಿಸ್ಥಿತಿಗಳನ್ನು ಸುಧಾರಣೆಗೊಳಿಸುವುದಕ್ಕಾಗಿ ನಡೆಸುವ ಹೋರಾಟವನ್ನು ಮುನ್ನಡೆಸಲು ಲಕ್ಷಾಂತರ ದುಡಿಯುವ ಜನರನ್ನು ಸಜ್ಜುಗೊಳಿಸುವಲ್ಲಿ ತಮ್ಮ ಸರ್ಕಾರ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ, ಎಂದು ಇಎಂಎಸ್ ಘೋಷಿಸಿದರು (49:pVII).

ಕಾರ್ಮಿಕರ ನಾಗರಿಕ ಸ್ವಾತಂತ್ರ್ಯಗಳು ಮತ್ತು ವೈಯಕ್ತಿಕ ಹಕ್ಕುಗಳನ್ನು ಅಭಿವೃದ್ಧಿಪಡಿಸುವಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರವು ಪ್ರತಿಜ್ಞಾಬದ್ಧವಾಗಿತ್ತು (97:V32P119-123;12:p103-104). ಕಾರ್ಮಿಕರ ಮತ್ತು ರೈತರ ವಿವಾದಗಳನ್ನು ಕಾರ್ಮಿಕ ಇಲಾಖೆ ಮತ್ತು ಅದಕ್ಕೆ ಸಮಾನಂತರವಾದ ಇಲಾಖೆಗಳೇ ವ್ಯವಹರಿಸಬೇಕು, ಇದನ್ನು ಪೊಲೀಸರು ನಿಭಾಯಿಸುವಂತಿಲ್ಲ ಎಂದೂ ಸರ್ಕಾರ ಸ್ಪಷ್ಟಪಡಿಸಿತು(45:p134;48:p38). ಉದ್ಯೋಗದಾತರ ಮತ್ತು ಕಾರ್ಮಿಕರ ನಡುವಿನ ವಿವಾದಗಳ ಸಂದರ್ಭಗಳಲ್ಲಿ, ನಾಗರಿಕ ಹಕ್ಕುಗಳ ಉಲ್ಲಂಘನೆ ಅಥವಾ ಜನರ ಆಸ್ತಿ ನಾಶಕ್ಕೆ ಕಾರಣವಾಗುತ್ತದೆ ಎನ್ನುವುದು ಖಾತ್ರಿಯಾಗುವಾಗ ಮಾತ್ರ ಪೊಲೀಸರು ಮಧ್ಯೆ ಪ್ರವೇಶಿಸಬೇಕಾಗುತ್ತದೆ, ಎಂದು ಯಾವುದೇ ಅನುಮಾನ ಅಥವಾ ಗೊಂದಲಕ್ಕೆ ಕಾರಣವಾಗದ ರೀತಿಯಲ್ಲಿ ಸರ್ಕಾರ ಸ್ಪಷ್ಟಪಡಿಸಿತು(107:22.06.57;97:V18p282.)(ಕಾರ್ಮಿಕರ–ಉದ್ಯೋಗದಾತ ಸರ್ಕಾರದ ನೀತಿ ಮತ್ತು ವಿವಾದಗಳಲ್ಲಿ ಪೋಲೀಸರ ಹಸ್ತಕ್ಷೇಪದ ಮಾರ್ಗಸೂಚಿಗಳನ್ನು ಹಿಂದಿನ ಪುಟಗಳಲ್ಲಿನ 'ಪೊಲೀಸ್ ನೀತಿ' ವಿಭಾಗದಲ್ಲಿ ವಿವರಿಸಲಾಗಿದೆ.)

ಕಾರ್ಮಿಕ–ಮಾಲೀಕ ದ್ವಂದ್ವತೆಯ ವರ್ಗಪರವಾದ–ವೈರುಧ್ಯಗಳಿಗೆ ಅವಲಂಬಿತವಾದ–ಸಂಬಂಧವನ್ನು ಗಣನೆಗೆ ತೆಗೆದುಕೊಳ್ಳದೇ ಹೇಳುವುದಾದರೆ, ಈ ನವೀನ ನೀತಿಯು ಸರ್ಕಾರದ ಭಾಗವಹಿಸುವಿಕೆಯಲ್ಲುಂಟಾದ ಗಮನಾರ್ಹ ಬದಲಾವಣೆ, ಎಂದು ಗುರ್ತಿಸಬಹುದಾಗಿದೆ. ಮೂರನೇ ಕಕ್ಷಿದಾರನ ಹಸ್ತಕ್ಷೇಪವಿಲ್ಲದೆ ಕಾರ್ಮಿಕ ವಿವಾದಗಳನ್ನು, ಅಡೆತಡೆಯಿಲ್ಲದೆ ಪರಸ್ಪರ ಅವರ ನಡುವೆಯೇ ಪರಿಹಾರ ಕಂಡುಕೊಳ್ಳಬೇಕೆನ್ನುವ ನಿಲುವಿನಿಂದಾಗಿ ಈ ನೀತಿಯು ಹುಟ್ಟಿಕೊಂಡಿದೆ. ವ್ಯಕ್ತಿಗಳ ನಡುವಿನ ಸಂಧಿಯ ಮಾತುಕತೆಗಳ ಮೂಲಕ, ಸಂಬಂಧಪಟ್ಟ ಜನವಿಭಾಗಗಳ ಸಂಘಟಿತವಾದ ಚೌಕಾಸಿ–ಮಾತುಕತೆಗಳ ಮೂಲಕ, ವಿವಾದಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಂಡು, ಪರಿಹಾರ ಕಂಡುಕೊಳ್ಳಬೇಕು ಎಂದು ಸರ್ಕಾರ ಅಭಿಪ್ರಾಯಪಟ್ಟಿರುತ್ತದೆ(97:V18p125-127).

ಭಾರತೀಯ ರಾಷ್ಟ್ರೀಯ ಯೋಜನೆಯ ಭಾಗವಾದ, ಉತ್ಪಾದನಾ ಹೆಚ್ಚಳ ಎನ್ನುವ ಗುರಿ ಮುಟ್ಟಲು ಸಾಧ್ಯವಾಗಿಸುವ ನೀತಿಯನ್ನೇ, ಉದ್ಯೋಗ ಮತ್ತು ಕೈಗಾರಿಕಾ ವಲಯಗಳಲ್ಲಿ ಕೇರಳ ಸರ್ಕಾರವು ಅಳವಡಿಸಿಕೊಂಡಿರುವಂಥದ್ದು(97:V18p119). ಇಎಮ್ಎಸ್‌ರವರ ಮಾತುಗಳಲ್ಲಿ ಹೇಳುವುದಾದರೆ,

> "ದೊಡ್ಡ ಪ್ರಮಾಣದ ಕೈಗಾರಿಕಾ ಅಭಿವೃದ್ಧಿಗೆ ಅನುಕೂಲವಾಗುವಂಥ ವಾತಾವರಣವನ್ನು ಸೃಷ್ಟಿಸಲು ಕೇರಳ ಸರ್ಕಾರ ಎಲ್ಲಾ ಪ್ರಯತ್ನಗಳನ್ನು ಮಾಡುತ್ತಿದೆ. ಅಂತಹ ವಾತಾವರಣದಲ್ಲಿ ಕಾರ್ಮಿಕ ವರ್ಗದ ನ್ಯಾಯಯುತವಾದ ಹಿತಾಸಕ್ತಿಗಳು ಮತ್ತು ಹಕ್ಕುಗಳನ್ನು ಸಂರಕ್ಷಿಸಲಾಗುವುದಲ್ಲದೆ, ಲಾಭ ಗಳಿಸಲು ಕೈಗಾರಿಕೆಗಳನ್ನು ಶಕ್ತಗೊಳಿಸುವ ಕೆಲಸವನ್ನೂ ಮಾಡಲಾಗುತ್ತದೆ"(50:26.12.57).

ಹೊಸ ಸರ್ಕಾರದ ಪೊಲೀಸ್ ನೀತಿಯ ಫಲಾನುಭವಿಗಳಾಗಲು ಕಾರ್ಮಿಕ ಸಂಘಗಳಿಗೂ ಕಿಸಾನ್‌ಸಭಾಗಳಿಗೂ ಸಾಧ್ಯವಾಗಿರುತ್ತದೆ(12:p18). ಕಾರ್ಮಿಕವರ್ಗವು, ಬಂಡವಾಳಶಾಹಿಗಳು ಮತ್ತು ಭೂಮಾಲೀಕರೊಂದಿಗೆ ಸಮನ್ವಯದ ಆಧಾರದ ಮೇಲೆ, ಭಯವಿಲ್ಲದೆ ಮಾತುಕತೆಗಳ ಮೂಲಕ ಚೌಕಾಸಿ ಮಾತುಕತೆ ನಡೆಸಲು ಸಾಧ್ಯವಾಗಿದೆ(34:p128). ಈ ನೀತಿಯ ಮೇಲೆ ದೊಡ್ಡ ಕೋಲಾಹಲವೇ ಉಂಟಾಯಿತು.* ದೊಡ್ಡ ಪ್ರಮಾಣದ ವಿರೋಧಗಳ ಹೊರತಾಗಿಯೂ ಈ ನೀತಿಯು ಕೈಗಾರಿಕಾಕ್ಷೇತ್ರದಲ್ಲಿ ಉಂಟಾಗುತ್ತಿದ್ದ ಅಶಾಂತಿಯ ವಿಚಾರದಲ್ಲಿ ಹೆಚ್ಚಿನ ರೀತಿಯ ಸುಧಾರಣೆ ಕಂಡು ಬಂದಿತು.

ಕೈಗಾರಿಕಾ ವಿವಾದಗಳನ್ನು ಇತ್ಯರ್ಥಗೊಳಿಸಲು, ಕೇರಳದ ಮೊದಲ ಕಮ್ಯುನಿಸ್ಟ್ ನೇತೃತ್ವದ ಸರ್ಕಾರ, ಎರಡೂ ಕಡೆಯವರು ಪರಸ್ಪರ ಕುಳಿತು, ಸಂಧಿ–ಸಮಾಲೋಚನೆಗಳನ್ನು ಮತ್ತು ಸಂಧಿಯ ಮಾತುಕತೆಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದು(97:V18). ಇದು ಹಿಂದಿನ ಸರ್ಕಾರಗಳು ಅನುಸರಿಸಿದ ಕಠಿಣ, ಸಂಕುಚಿತವಾದ ನೀತಿಗಳಿಂದ ಸ್ಪಷ್ಟವಾದ ನಿರ್ಗಮನವಾಗಿದೆ. ಕಾರ್ಮಿರು ಮತ್ತು ಉದ್ಯೋಗದಾತರು ತಮ್ಮ ನಡುವಿನ ದೀರ್ಘಾವಧಿ ಒಪ್ಪಂದದ ಮೂಲಕ ಕಾರ್ಮಿಕ ಇಲಾಖೆಯಲ್ಲಿ ಒಬ್ಬ ಅಧಿಕಾರಿಯ ಸಹಾಯದಿಂದ, ಎಲ್ಲಾ ಕೈಗಾರಿಕಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸರ್ಕಾರ ನೀತಿಯನ್ನು ರಚಿಸಿರುತ್ತದೆ(97:V18). ಟ್ರೇಡ್ ಯೂನಿಯನ್ ಪ್ರತಿನಿಧಿಗಳು, ಉದ್ಯೋಗದಾತರು ಮತ್ತು ಸರ್ಕಾರವನ್ನು ಒಳಗೊಂಡ ತ್ರಿಪಕ್ಷೀಯ ಕೈಗಾರಿಕಾ ಸಂಬಂಧಗಳ ಸಮಿತಿಯೊಂದನ್ನು, ಕಾರ್ಮಿಕ ಸಚಿವರಾದ ಟಿವಿ ಥಾಮಸ್ ಅವರು ಮುತುವರ್ಜಿ ವಹಿಸಿ ಸ್ಥಾಪಿಸಿದರು(34:p116). ಉದ್ಯೋಗ ಸಂಬಂಧಿತ ಸಮಸ್ಯೆಗಳನ್ನು ಚರ್ಚಿಸಲು ಮತ್ತು ಪರಿಹರಿಸಿಕೊಳ್ಳಲು ಈ ವ್ಯವಸ್ಥೆಯನ್ನು ಆವಿಷ್ಕರಿಸಲಾಯಿತು. ಟ್ರೇಡ್ ಯೂನಿಯನ್‌ಗಳಿಗೆ ಮತ್ತು ಉದ್ಯೋಗದಾತರಿಗೆ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು, ನಂತರ ಅವುಗಳನ್ನು ಸರ್ಕಾರದ ಪ್ರತಿನಿಧಿಗಳೊಂದಿಗೆ ಸಮಾಲೋಚಿಸಿ, ಎಲ್ಲರಿಗೂ ಸಮ್ಮತವಾಗುವಂಥ ತೀರ್ಮಾನದೆಡೆಗೆ ತಲುಪಲು ಸಾಧ್ಯವಾಗುವಂತೆ, ಈ ವ್ಯವಸ್ಥೆಯು ಸಹಾಯ ಮಾಡಿತು(34:). ಕಾಯರ್, ತೈಲ ಗಿರಣಿಗಳು, ಎಂಜಿನಿಯರಿಂಗ್, ಜವಳಿ, ಟೈಲ್ಸ್, ರಾಸಾಯನಿಕಗಳು, ತೋಟ/

* 96:p84-119; 7:15.10.57,14.11.57,19.04.58; 208:20.03.58,09.10.58; 32:19.10.58,24.12.58; 163:25.10.58,19.07.58; 182:22.10.58; 50:17.10.58; 108:19.07.58,01.11.58,14.11.58;

ಸರ್ಕಾರದ ಹೊಸ ಕೈಗಾರಿಕಾ ಕಾರ್ಮಿಕ ನೀತಿಗಳನ್ನು ಭಾಷಣಗಳ ಮೂಲಕ ತೀವ್ರವಾಗಿ ಟೀಕಿಸಲಾಯಿತು. ಸರ್ಕಾರದ ಹೊಸ ಉದ್ಯೋಗ – ಕೈಗಾರಿಕಾ ನೀತಿಯ ವಿರುದ್ಧ ಹಲವು ನೋಟೀಸ್ ಮತ್ತು ಕರಪತ್ರಗಳನ್ನು ಹರಿಯಬಿಡಲಾಯಿತು. ಕಾರ್ಮಿಕ ಮತ್ತು ಕೈಗಾರಿಕಾ ನೀತಿಯ ಮೇಲೆ ಬಿಸಿ ಬಿಸಿಯಾದ ಚರ್ಚೆಗಳು ನಡೆದವು. ಶಾಸಕಾಂಗ ಪ್ರಕ್ರಿಯೆಗಳು.(1)22-02-1958 to 02/04/58, vol IV Nos.1-30;(2) 30/06/58 to 09/07/58, vol. V Nos. 1-8;(3) 24/11/58 to 13/12/58, vol. VI Nos. 1-18, Secretary, Kerala Legislative Assembly, Thiruvananthapuram.

ಎಸ್ಟೇಟ್ ಮುಂತಾದವುಗಳಿಗೆ ಸಂಬಂಧಿಸಿದ ಕೈಗಾರಿಕೆಗಳಲ್ಲಿ, 'ಕೈಗಾರಿಕಾ ನಿಯಂತ್ರಣ ಸಮಿತಿ'ಗಳನ್ನು ಸ್ಥಾಪಿಸಲಾಯಿತು(48:p40).

ಕಾರ್ಮಿಕರು ಮತ್ತು ಉದ್ಯೋಗದಾತರ ನಡುವಿನ ರಚನಾತ್ಮಕವಾದ ಸಹಯೋಗದ ಮೂಲಕ ರಾಜ್ಯದ ಆರ್ಥಿಕ ಅಭಿವೃದ್ಧಿ ಖಚಿತಪಡಿಸಿಕೊಳ್ಳಲು ಸರಕಾರ ಸೂಕ್ತ ನೀತಿಯನ್ನು ರೂಪಿಸಿತು. ಕಾರ್ಯಸಾಧನೆಯ ಸಲುವಾಗಿ ಮಾಲೀಕವರ್ಗವನ್ನು ಬೆದರಿಸಿ, ಅವರನ್ನು ಅಧಿನಪಡಿಸಿಕೊಳ್ಳುವಂತಹ ವಿಚಾರಗಳು ಈ ನೀತಿಗೆ ಹೊರತಾದ ವಿಚಾರವಾಗಿತ್ತು(97:V32p121). ರಾಜ್ಯದಲ್ಲೂ ಕೈಗಾರಿಕಾ ಘಟಕಗಳ ವಿಚಾರಗಳಲ್ಲೂ ಕಾರ್ಮಿಕ–ಮಾಲೀಕ ಸಂಬಂಧಗಳು ಒಳ್ಳೆಯ ರೀತಿಯಲ್ಲಿರುವಂತೆಯೂ ವಿವಾದಗಳನ್ನು ಸೌಹಾರ್ದಯುತವಾಗಿ ಪರಿಹರಿಸಿಕೊಳ್ಳುವುದಕ್ಕಾಗಿಯೂ ಏನು ಮಾಡಬೇಕೆಂಬುದರ ಬಗ್ಗೆ, ಎಐಟಿಯುಸಿಯ ಡಿಸೆಂಬರ್ 1957ರ ಕೊನೆಯ ವಾರದಲ್ಲಿ ಎರ್ನಾಕುಲಂನಲ್ಲಿ ನಡೆದ ಸಮ್ಮೇಳನದಲ್ಲಿ, ಇಎಂಎಸ್ ಹೀಗೆ ಪ್ರಸ್ತಾಪಿಸಿದರು:

> "ಕಾರ್ಮಿಕವರ್ಗದ ಸಮಸ್ಯೆಯ ಈ ಅಂಶವು ಅರ್ಹವಾಗಿರುವಷ್ಟೇ ಪ್ರಾಮುಖ್ಯತೆಯನ್ನು ವೇತನ ಮತ್ತು ಬೋನಸ್‌ಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವಲ್ಲೂ ನೀಡಬೇಕಾಗುತ್ತದೆ. ಈ ಸಮಸ್ಯೆಯನ್ನು ರಾಷ್ಟ್ರೀಯ ಆಧಾರದ ಮೇಲೆ ನಿರ್ವಹಿಸದಿದ್ದಲ್ಲಿ, ಖಾಸಗಿ ಬಂಡವಾಳ ಸೇರಿದಂತೆ ರಾಜ್ಯದ ಸಂಪನ್ಮೂಲಗಳನ್ನು ಸರಿಯಾಗಿ ಬಳಸಿಕೊಳ್ಳದಿದ್ದಲ್ಲಿ, ಅಸ್ತಿತ್ವದಲ್ಲಿರುವ ಸಂಪನ್ಮೂಲಗಳನ್ನು ವಿಸ್ತರಿಸುವುದಕ್ಕೂ ಮತ್ತು ಬಲಪಡಿಸುವುದಕ್ಕೂ ಸಾಧ್ಯವಾಗದಿದ್ದಲ್ಲಿ, ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸದಿದ್ದಲ್ಲಿ, ಕೇರಳದಲ್ಲಿ ಕಾರ್ಮಿಕ ವರ್ಗಕ್ಕೆ ಶಾಶ್ವತ ಮುಕ್ತಿ ಸಾಧ್ಯವಾಗುವುದಿಲ್ಲ"(50:26.12.57).

ಈ ತ್ರಿಪಕ್ಷೀಯ ನೀತಿ ವಿಸ್ತರಣೆಯ ಭಾಗವಾಗಿ, ಸರ್ಕಾರವು ಕೈಗಾರಿಕಾ ಸಂಪರ್ಕ ಮಂಡಳಿಯನ್ನು ಸ್ಥಾಪಿಸಿತು. ಕಾರ್ಮಿಕರು ಮತ್ತು ಉದ್ಯೋಗದಾತರು ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಪ್ರತಿಪಾದಿಸಲು ಪ್ರಸ್ತುತ ಮಂಡಳಿಯ ಉಪಸಮಿತಿಯೊಂದಕ್ಕೆ ಜವಾಬ್ದಾರಿಯನ್ನು ನೀಡಲಾಯಿತು. ಈ ಸಮಿತಿ ಸಲ್ಲಿಸಿದ ವರದಿಯಲ್ಲಿ ಕಾರ್ಮಿಕರು ಮತ್ತು ಮಾಲೀಕರ ನಡುವಿನ ಅಭಿಪ್ರಾಯಗಳ ಐಕ್ಯತೆಗೆ ಒತ್ತು ನೀಡಲಾಯಿತು(48:p40). ವೇತನಗಳು, ಬೋನಸ್‌ಗಳು, ಉದ್ಯೋಗ ಸಮಿತಿಗಳು, ರಾಜಿ ವ್ಯವಸ್ಥೆ, ಉದ್ಯಮಕ್ಷೇತ್ರಗಳ ಶಿಸ್ತು, ಕೈಗಾರಿಕಾ ಶಾಂತಿ ಇವೇ ಮುಂತಾದ ವೈವಿಧ್ಯಮಯವಾದ ವಿಷಯಗಳನ್ನು ಸಮಿತಿಯ ನಿರ್ದೇಶನಗಳನ್ನು ಗಣನೀಯವಾಗಿ ಸ್ಪರ್ಶಿಸಿತು.

ಕಾರ್ಮಿಕರ ಸಮಂಜಸವಾದ ಮತ್ತು ನ್ಯಾಯಯುತವಾದ ಅಗತ್ಯಗಳನ್ನು ಪೂರೈಸಲು ಪ್ರಮುಖ ಸಲಹೆಗಳು:–

1. ಕಾರ್ಮಿಕನ ಕನಿಷ್ಠ ವೇತನವನ್ನು ನಿಗದಿಪಡಿಸುವುದು.
2. ಸೇವಾ ಅವಧಿಯ ನಂತರ ನಿವೃತ್ತಿಯಗುವುದನ್ನೋ ಅದಕ್ಕೂ ಮೊದಲು ತಾವಾಗಿ ಕೆಲಸ ತೊರೆಯುವುದನ್ನೋ ಮಾಡುವ ಕಾರ್ಮಿಕರಿಗೆ ಗ್ರಾಚ್ಯುಟಿ

ಒದಗಿಸುವ ವ್ಯವಸ್ಥೆ ಮಾಡುವುದು.

3. ಕೈಗಾರಿಕಾ ಉದ್ಯಮದ ಲಾಭನಷ್ಟಗಳನ್ನು ಪರಿಗಣಿಸದೆ ಕಾರ್ಮಿಕರ ವಾರ್ಷಿಕ ಆದಾಯದ ಕನಿಷ್ಠ 6.25%ರಷ್ಟು ಬೋನಸ್ ಒದಗಿಸುವ ವ್ಯವಸ್ಥೆ ಮಾಡುವುದು.
4. ಸಂಸ್ಥೆಯ ಲಾಭದಿಂದ ವಾರ್ಷಿಕವಾಗಿ ಹೆಚ್ಚುವರಿ ಬೋನಸ್ಸನ್ನೂ ನೀಡುವುದು(48:p41).

ಕಮ್ಯುನಿಸ್ಟ್ ನೇತೃತ್ವದ ಮೊದಲ ಮಂತ್ರಿಮಂಡಲದ ಸಭೆಯು, ಸರ್ಕಾರದ ಒಡೆತನದಲ್ಲಿರುವ ಸಂಸ್ಥೆಗಳ ಕಾರ್ಮಿಕರ ವಿಷಯದಲ್ಲಿ ವಿಶೇಷಗಮನ ಹರಿಸಿತು. ರಾಜ್ಯ ಸಾರಿಗೆ ಇಲಾಖೆಯ ಎಲ್ಲಾ ವಿಭಾಗಗಳ ಕಾರ್ಮಿಕರ ವೇತನ ಹೆಚ್ಚಳವನ್ನು ಅನುಮೋದಿಸಿದ ಸರ್ಕಾರ, ವಾರ್ಷಿಕ ಗಳಿಕೆಯ ಕನಿಷ್ಠ 3.33% ಬೋನಸನ್ನು ಲೆಕ್ಕಾಚಾರ ಹಾಕಿ ಖಚಿತಪಡಿಸಿಕೊಳ್ಳುವ ಕೆಲಸವೂ ನಡೆಯಿತು. ಎಲ್ಲಾ ಕಾರ್ಮಿಕ ಕಾನೂನುಗಳನ್ನು ಇಲಾಖೆಯ ಕಾರ್ಮಿಕರಿಗೂ ಅನ್ವಯಿಸುವಂತೆ ಮಾಡಲಾಯಿತು(60:p60). ಅನುಮಾನಾಸ್ಪದ ಕಾರಣಗಳಿಗಾಗಿ ಸೇವೆಯಿಂದ ಸ್ಥಗಿತಗೊಳಿಸಲ್ಪಟ್ಟ ಕಾರ್ಮಿಕರಿಗೆ, ಅವರ ವಿವಾದಗಳ ನ್ಯಾಯಯುತವಾದ ವಿಚಾರಣೆಯ ಸಮಯದಲ್ಲಿ ಆರ್ಥಿಕ ನೆರವನ್ನು ನೀಡಲು ಸಹ ಸರ್ಕಾರ ನಿರ್ಧರಿಸಿತು(48:p42).

ಸರ್ಕಾರವು ಅನೇಕ ಕೈಗಾರಿಕೆಗಳನ್ನು ಕನಿಷ್ಠ ವೇತನ ಕಾಯಿದೆಯ ವ್ಯಾಪ್ತಿಗೆ ತಂದಿತು(103:p77). ಕೇರಳದಲ್ಲಿ ವ್ಯಾಪಕವಾದ ತೋಟ/ಎಸ್ಟೇಟ್‌ಗಳ ವಿಚಾರದಲ್ಲಿ, ಒಂದು ಸಂಯುಕ್ತ ವೇತನ ದರವನ್ನು ನಿರ್ಧರಿಸಲು ಕಾರ್ಮಿಕರ ಮತ್ತು ಮಾಲೀಕರ ಪ್ರತಿನಿಧಿಗಳನ್ನು ಒಳಗೊಂಡ ಸಮಿತಿಯನ್ನು ರಚಿಸಲಾಯಿತು. ಕೃಷಿ ವಲಯದಲ್ಲಿ ಕೆಲಸ ಮಾಡುವ ವಿವಿಧ ರೀತಿಯ ಕಾರ್ಮಿಕರಿಗೆ ಹೆಚ್ಚಿದ ದರದಲ್ಲಿ ವೇತನವನ್ನು ನಿಗದಿಪಡಿಸಲಾಯಿತು(209:p28;187:p22;34:p110).

ವ್ಯರ್ಥವಾಗುತ್ತಿದ್ದ ಮಾನವ ಸಂಪನ್ಮೂಲಗಳ ಸಮರ್ಥ ಬಳಕೆಗಾಗಿ ಸರ್ಕಾರವು ರಾಜ್ಯದಲ್ಲಿ ಉದ್ಯೋಗ ಮತ್ತು ನಿರ್ಮಾಣ ಸಹಕಾರ ಸಂಘಗಳನ್ನು ಆಯೋಜಿಸಿತು. ಇದು ಜನರಿಗೆ ತಮ್ಮನ್ನು ಆರ್ಥಿಕವಾಗಿ ಸುಧಾರಿಸಿಕೊಳ್ಳಲು ಸಾಧ್ಯವಾಗಿಸಿತು. ಅದರಿಂದಾಗಿ, ಈ ಸಹಕಾರ ಸಂಘಗಳು ಜನರಿಗೆ ಅನುಕೂಲಕರವಾಯಿತು(102: 21.04.59p18). ಸಮಂಜಸವಾದ ಸ್ಥಿತಿಯಲ್ಲಿ ಅವರಿಗೆ ಉದ್ಯೋಗದ ಅಕಾಶಗಳನ್ನು ಒದಗಿಸುವುದರ ಜೊತೆಗೆ, ಅಗತ್ಯವಾದ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯನ್ನು ಈ ಸಂಘವು ಒದಗಿಸಿತು(187:p3-38;100:p29-40).

ಕಮ್ಯುನಿಸ್ಟ್ ಸರ್ಕಾರವು ಕಾರ್ಮಿಕರ ಕಾನೂನುಬದ್ಧ ಅಗತ್ಯಗಳನ್ನು ಮತ್ತು ಹಕ್ಕುಗಳನ್ನು ಅಂಗೀಕರಿಸುವ ನೀತಿಯನ್ನು ಅನುಸರಿಸಿತು. ಅದೇ ಸಮಯದಲ್ಲಿ, ಕಾರ್ಮಿಕವರ್ಗದ ಜವಾಬ್ದಾರಿಗಳ ಮತ್ತು ಕರ್ತವ್ಯಗಳ ಬಗ್ಗೆಯೂ ನೆನಪಿಸಲಾಯಿತು. ಏಪ್ರಿಲ್ 26, 1958ರಂದು ತಿರುವನಂತಪುರದಲ್ಲಿ ಕಾರ್ಮಿಕರ ಸಮಾವೇಶವನ್ನು

ಉದ್ದೇಶಿಸಿ ಕಾರ್ಮಿಕ ಸಚಿವ ಟಿ.ವಿ.ಥಾಮಸ್ ಹೀಗೆ ಹೇಳಿದ್ದಾರೆ.

> "ಎಲ್ಲಾ ಉದ್ಯೋಗಕ್ಷೇತ್ರಗಳಲ್ಲಿ ಕಾರ್ಮಿಕರಿಗೆ ಯೋಗ್ಯವಾದ ಮತ್ತು ನ್ಯಾಯಯುತವಾದ ಜೀವನ ಮಟ್ಟವನ್ನು ಖಚಿತಪಡಿಸಿಕೊಳ್ಳುವುದು ಸಮಾಜದ ಕರ್ತವ್ಯವಾಗಿದೆ. ಕಾರ್ಮಿಕರಿಗೆ ಸಂಬಂಧಿಸಿದಂತೆ, ಹಕ್ಕುಗಳನ್ನು ಪ್ರತಿಪಾದಿಸುವವರು, ತಮ್ಮ ಜವಾಬ್ದಾರಿಗಳ ಬಗ್ಗೆಯೂ ಗಮನ ಹರಿಸಬೇಕಾಗುತ್ತದೆ. ಏಕೆಂದರೆ, ನಿಖರವಾದ ಹಕ್ಕುಗಳಿಗಿರುವ ಅರ್ಹತೆಯನ್ನು ನಿರ್ಧರಿಸುವುದು ಸಹ ಕರ್ತವ್ಯ ನಿರ್ವಹಣೆಯೇ ಆಗಿದೆ. ತಮ್ಮ ಜವಾಬ್ದಾರಿಯನ್ನು ಮರೆತು, ಕಾರ್ಮಿಕರು ಕೈಗಾರಿಕಾ ಪ್ರಗತಿಯನ್ನು ನಿಧಾನಗೊಳಿಸುವ ರೀತಿಯಲ್ಲಿ ಮುಷ್ಕರಗಳಲ್ಲಿ ನಿರತರಾಗಿದ್ದಾರೆ. ಖಂಡಿತವಾಗಿ, ಇದು ಸೂಕ್ತವಾದ ಕಾರ್ಯವಿಧಾನವಲ್ಲ, ಎನ್ನುವುದನ್ನು ಗಮನಿಸಬೇಕು. ಎಲ್ಲಾ ಚಳವಳಿಗಳಿಗೂ ಹೋರಾಟಗಳಿಗೂ ಜನಬೆಂಬಲ ಅತ್ಯಗತ್ಯ. ಸಾರ್ವಜನಿಕ ಅನುಕಂಪವನ್ನು ಖಚಿತಪಡಿಸಿಕೊಳ್ಳಲು ಕಾರ್ಮಿಕರು ಮಂಡಿಸುವ ಬೇಡಿಕೆಗಳು ತಾರ್ಕಿಕವಾಗಿರಬೇಕು, ಎನ್ನುವ ವಿಚಾರ ಮನಸ್ಸಿನ ನೆನಪಿನಲ್ಲಿರಬೇಕು"(84::28.04.58).

ತ್ವರಿತಗತಿಯಲ್ಲಿರುವ ಕೈಗಾರಿಕಾ ಬೆಳವಣಿಗೆಯನ್ನು ಸಾಧಿಸುವುದು, ಪ್ರಮುಖ ಗುರಿಗಳಲ್ಲಿ ಒಂದಾಗಿತ್ತು(118:06.01.79p31). ಇದು ಕೇರಳ ವಿಧಾನಸಭೆಯಲ್ಲಿ ರಾಜ್ಯಪಾಲರ ಭಾಷಣದಲ್ಲಿ ಸ್ಪಷ್ಟವಾಗಿ ಪ್ರತಿಫಲಿಸುತ್ತದೆ. 'ರಾಜ್ಯವನ್ನು ಸಮಗ್ರವಾಗಿ ಪರಿಗಣಿಸಿದರೆ, ಒಟ್ಟಾರೆಯಾಗಿ ಅಭಿವೃದ್ಧಿಯು ಕೆಲವು ಸ್ಪಷ್ಟ ಉದ್ದೇಶಗಳನ್ನು ಈಡೇರಿಸುವಂತಿರಬೇಕು.'

1. ರಾಜ್ಯದಲ್ಲಿ ಕೆಲವು ದೊಡ್ಡ ಪ್ರಮಾಣದ ಕೈಗಾರಿಕಾ ಘಟಕಗಳ ಆರಂಭ. ಕೇಂದ್ರ ಸರ್ಕಾರದ ಪರಿಗಣನೆಯಲ್ಲಿರುವ, ಪ್ರಸ್ತಾವಿತ ಎರಡನೇ ಶಿಪ್ ಯಾರ್ಡ್ ರಾಜ್ಯದಲ್ಲಿ ಸ್ಥಾಪಿಸಲು ಸರ್ಕಾರ ಪ್ರಯತ್ನಿಸಲಿದೆ. ಹಾಗೆಯೇ ಪರಿಗಣನೆಯಲ್ಲಿರುವ ಕೆಲವು ಕೈಗಾರಿಕಾ ಘಟಕಗಳನ್ನು (ಉದಾ. ಪೇಪರ್ ಮಿಲ್, ಬೈಸಿಕಲ್ ಫ್ಯಾಕ್ಟರಿ, ರಬ್ಬರ್, ಟೈರ್ ಫ್ಯಾಕ್ಟರಿ, ಇತ್ಯಾದಿ) ರಾಜ್ಯದಲ್ಲಿ ಸ್ಥಾಪಿಸಲು ಸರಕಾರ ಪ್ರಯತ್ನಿಸಲಿದೆ.
2. ಸಣ್ಣ ಮತ್ತು ಮಧ್ಯಮ ಉದ್ಯಮಗಳಿಗೆ ಸಾಧ್ಯವಾದಷ್ಟು ನೆರವು ನೀಡಲು ವ್ಯವಸ್ಥೆ ಮಾಡಲಾಯಿತು. ಮಧ್ಯಮ ಮತ್ತು ಸಣ್ಣ ವ್ಯವಹಾರಗಳಿಗೆ ಸುಲಭವಾಗಿ ಸಾಲ ಲಭ್ಯವಾಗುವಂತೆ ಮಾಡಲು ಸರ್ಕಾರ ಗಮನಹರಿಸುತ್ತದೆ. ಕೈಗಾರಿಕಾ ಹಣಕಾಸು ಕಾರ್ಪರೇಷನ್‌ನಲ್ಲಿ ತರಬೇಕಾದ ಸುಧಾರಣೆಗಳನ್ನು ಸರ್ಕಾರವು ಪರಿಗಣಿಸಲಾಗುತ್ತದೆ.
3. ಗುಡಿ ಕೈಗಾರಿಕೆಗಳಿಗಾಗಿ ಕೈಗಾರಿಕಾ ಸಹಕಾರ ಸಂಘಗಳನ್ನು ರಚಿಸುವುದಕ್ಕೂ ಅವುಗಳನ್ನು ಬಲಪಡಿಸುವುದಕ್ಕೂ ಮಾರ್ಗಗಳನ್ನು ಕಂಡುಕೊಳ್ಳಬೇಕಾಗಿದೆ.
4. ನೀರಾವರಿ ಸೌಕರ್ಯಗಳನ್ನು ಮತ್ತು ವಿದ್ಯುತ್‌ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಲಾಗುವುದು (102:21.04.59p4).

ಜೂನ್ 7, 1957ರ ಬಜೆಟ್ ಭಾಷಣದಲ್ಲಿ ರಾಜ್ಯಕ್ಕೆ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಆಧುನಿಕ ಕೈಗಾರಿಕೆಗಳನ್ನು ಪ್ರಾರಂಭಿಸುವ ಅಗತ್ಯವನ್ನು ಹಣಕಾಸು ಸಚಿವ ಸಿ.ಅಚ್ಯುತ ಮೆನನ್ ಒತ್ತಿ ಹೇಳಿದರು(107:10.06.58;86:22.06.57). ಇದು ಉದ್ಯೋಗಗಳ ಅವಕಾಶವನ್ನು ಹೆಚ್ಚಿಸುತ್ತದೆ. ಸಾಂಪ್ರದಾಯಿಕ ರೀತಿಯ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಮರುಸಂಘಟಿಸುವಲ್ಲಿ ಗಮನ ಹರಿಸಲಾಗುವುದು(97:O18p206).

ಆಧುನಿಕ ಮತ್ತು ವಿಪುಲವಾದ ಕೈಗಾರಿಕಾ ಘಟಕಗಳ ಸ್ಥಾಪನೆ ದೇಶದ ಕೈಗಾರಿಕೀಕರಣ ಪ್ರಕ್ರಿಯೆಯನ್ನು ತ್ವರಿತಗೊಳಿಸಿ ನಿರುದ್ಯೋಗ ಸಮಸ್ಯೆಗೆ ಅಂತಿಮ ಪರಿಹಾರ ಕಂಡುಕೊಳ್ಳುವುದು ಸ್ಪಷ್ಟವಾಗಿದೆ. ಆದಾಗ್ಯೂ, ಈ ಸಮಸ್ಯೆಗೆ ಅಲ್ಪಾವಧಿಯ ಪರಿಹಾರವೆಂದರೆ ಸಣ್ಣ ಮತ್ತು ಗುಡಿ ಕೈಗಾರಿಕೆಗಳನ್ನು ದೊಡ್ಡ ಪ್ರಮಾಣದಲ್ಲಿ ಉತ್ತೇಜಿಸುವುದು. ದೊಡ್ಡ ಪ್ರಮಾಣದ ಮಾನವ ಪ್ರಯತ್ನ ಮತ್ತು ಜನರ ಸಂಘಟನೆಯೂ ಅತ್ಯಗತ್ಯ. ಏಕೆಂದರೆ, ಕೆಲವು ದೊಡ್ಡ ಘಟಕಗಳನ್ನು ಸಂಘಟಿಸುವುದಕ್ಕಿಂತ ಹೆಚ್ಚಿನ ಸಂಖ್ಯೆಯ ಸಣ್ಣ ಘಟಕಗಳನ್ನು ಆಯೋಜಿಸುವುದು ಸುಲಭ ಸಾಧ್ಯವಾಗಿರುತ್ತದೆ. ಕೈಮಗ್ಗ ಮಂಡಳಿ ಮತ್ತು ಕೈಮಗ್ಗ ಸಹಕಾರ ಗುಂಪುಗಳ ಕೆಲಸದ ಅನುಭವಗಳಿಂದ ಇದು ಸಂದೇಹವಿಲ್ಲದಂತೆ ಸಾಬೀತಾಗಿದೆ. ಕೈಗಾರಿಕಾ ಸಹಕಾರ ಸಂಘಗಳನ್ನು ರಚಿಸಬೇಕಾಗಿರುತ್ತದೆ. ವಿಶೇಷವಾಗಿ ತೆಂಗು, ಮೀನುಗಾರಿಕೆ ಮತ್ತು ಬಿದಿರು ಸಂಸ್ಕರಣೆ ಮುಂತಾದವುಗಳಿಗಾಗಿ ಕೈಗಾರಿಕಾ ಸಹಕಾರ ಸಂಘಗಳನ್ನು ಸಂಘಟಿಸಲು ನನ್ನ ಸರ್ಕಾರ ಸಾಕಷ್ಟು ಕ್ರಮಗಳನ್ನು ಕೈಗೊಳ್ಳುವಂತೆ ಒತ್ತಾಯಿಸುತ್ತದೆ.

ಕೈಗಾರಿಕಾ ಸಹಕಾರ ಸಂಘಗಳನ್ನು ಸಂಘಟಿಸುವುದರ ಜೊತೆಗೆ, ಮತ್ತೊಂದು ಪ್ರಮುಖವಾದ ವಿಚಾರವೆಂದರೆ, ಗರಿಷ್ಠ ಸಂಖ್ಯೆಯ ಜನರಿಂದ ಅವರ ಗಳಿಕೆಯನ್ನು ಸಣ್ಣ ಉದ್ಯಮಗಳಲ್ಲಿ ಹೂಡಿಕೆ ಮಾಡಲು ಪ್ರೋತ್ಸಾಹಿಸುವುದು. ಕೇರಳ ರಾಜ್ಯದಲ್ಲಿ ಹೆಚ್ಚಿನ ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಲು ಯೋಜನಾ ಆಯೋಗ ಮತ್ತು ಕೇಂದ್ರ ಕೈಗಾರಿಕಾ ಮತ್ತು ವಾಣಿಜ್ಯ ಸಚಿವಾಲಯವು ಅಂತಹ ಹೂಡಿಕೆದಾರರನ್ನು ಪ್ರೋತ್ಸಾಹಿಸುವುದಕ್ಕಾಗಿ ಮಾನ್ಯತೆ ನೀಡಲಾಗಿದೆ( 102:22.02.58p12).

ಹಗ್ಗ, ಕರಕುಶಲ ಮತ್ತು ಕೃಷಿಯ ಜೊತೆಗೆ, ಹೆಚ್ಚು ಉದ್ಯೋಗಗಳ ಅವಕಾಶಗಳನ್ನು ಸೃಷ್ಟಿಸುವ ಕ್ಷೇತ್ರವೆಂದರೆ ಕೈಗಾರಿಕೆ. ಚಿಕ್ಕ, ಮಧ್ಯಮ ಕೈಗಾರಿಕೆಗಳಲ್ಲಿ ಖಾಸಗಿ ಉದ್ಯಮಿಗಳನ್ನು ಪ್ರೋತ್ಸಾಹಿಸುವ ನೀತಿಯನ್ನು ಸರ್ಕಾರ ಅಂಗೀಕರಿಸಿರುತ್ತದೆ (118:06.01.79p31;34:p121). ಖಾಸಗಿ ಬಂಡವಾಳದಿಂದ ಸ್ಥಾಪಿಸಲಾದ ಕೈಗಾರಿಕೆಗಳಲ್ಲಿ ಹಣವನ್ನು ಹೂಡಿಕೆ ಮಾಡಲು ಸರ್ಕಾರ ಸಿದ್ಧವಾಗಿದೆ(97:V32P120). ಅದಕ್ಕೆ ಅಗತ್ಯವಾದ ಹಣವನ್ನು ಬಜೆಟ್‌ನಲ್ಲಿ ಮೀಸಲಿಡಲಾಗಿದೆ. ಹಗ್ಗ, ಕೈಮಗ್ಗ, ಸಹಕಾರಿ ಉದ್ಯಮಗಳ ಸುಗಮ ನಿರ್ವಹಣೆಗಾಗಿ ಸಕಲ ಸೌಲಭ್ಯಗಳನ್ನೂ ಒದಗಿಸಲಾಗಿದೆ(187:p35;34:p121).

ಹೆಚ್ಚಿನ ಜಿಲ್ಲೆಗಳಲ್ಲಿ ಕೈಗಾರಿಕಾ ಎಸ್ಟೇಟ್‌ಗಳನ್ನು ಸ್ಥಾಪಿಸಲಾಗುವುದು.

> "ಕೈಗಾರಿಕಾ ವಲಯದಲ್ಲಿ ಖಾಸಗಿ ಹೂಡಿಕೆಯನ್ನು ಆಕರ್ಷಿಸಲು ನಾವು ನಮ್ಮ ಕೈಲಾದಷ್ಟು ಪ್ರಯತ್ನ ಮಾಡುತ್ತಿದ್ದೇವೆ"

ಎಂದು ಇಎಂಎಸ್ ಹೇಳಿದರು(97:V32p119). ಖಾಸಗಿ ವಲಯದಲ್ಲಿ ಹೆಚ್ಚಿನ ಸಂಖ್ಯೆಯ ಕೈಗಾರಿಕೆಗಳು ಹೊರಹೊಮ್ಮಬಹುದೆಂದು ಸರ್ಕಾರ ನಿರೀಕ್ಷಿಸಿದೆ. ಅದಕ್ಕಾಗಿ ಗರಿಷ್ಠ ಸಾಲ ಸೌಲಭ್ಯ ಕಲ್ಪಿಸಲು ಸರಕಾರ ಸಿದ್ಧವಿದೆ. ಕೈಗಾರಿಕಾ ಉದ್ಯಮಗಳ ಬಂಡವಾಳ ಹೂಡಿಕೆಯಲ್ಲಿ ಭಾಗಿಯಾಗುವ ಸಾಹಸವನ್ನು ಸಹ ಸರ್ಕಾರ ತೋರಿಸಿತು(97:V32p120). ವಿದೇಶಿ ಬಂಡವಾಳದ ವಿಷಯದಲ್ಲೂ ಅದೇ ತರಹದ ಭಾಗವಹಿಸುವಿಕೆ ಕಂಡುಬಂದಿದೆ. ಉದಾಹರಣೆಗೆ, ಜಪಾನಿನ ಕೇಬಲ್ ಕಂಪನಿಯ ಕಾರ್ಖಾನೆ ಸ್ಥಾಪನೆಗೆ ಸರ್ಕಾರವು ಹೆಚ್ಚು ಹೂಡಿಕೆ ಮಾಡಿದೆ(60:p59).

ಕೇರಳ ಜಲ ಸಾರಿಗೆ ನಿಗಮವನ್ನು ಏಪ್ರಿಲ್ 1958ರಲ್ಲಿ ಸ್ಥಾಪಿಸಲಾಯಿತು(48:p100). ಕೈಗಾರಿಕಾ ವಲಯದ ರಾಷ್ಟ್ರೀಕರಣ ಜಲಸಾರಿಗೆ ಕಾರ್ಪರೇಷನ್ ಪಾಲಿಗೆ ಸೀಮಿತವಾಯಿತು. ಒಂದು ಸಾವಿರದ ಐನೂರು ಕೆಲಸಗಾರರನ್ನು ಒಳಗೊಂಡ ಈ ನಿಗಮವು ಜನರ ಪ್ರಯಾಣ ಮತ್ತು ಸರಕು ಸಾಗಾಣಿಕೆಗಳಿಗಾಗಿ, ಯಾಂತ್ರೀಕೃತ ದೋಣಿ ಸೇವೆಯ ಒಡೆತನ ಹೊಂದಿತ್ತು(60:p59). ಭಾರತದ ಅತಿದೊಡ್ಡ ಕೈಗಾರಿಕೋದ್ಯಮಿಗಳಲ್ಲೊಬ್ಬರಾದ ಜಿ.ಡಿ. ಬಿರ್ಲಾ ಅವರು ಕೇರಳದಲ್ಲಿ ಹೂಡಿಕೆ ಮಾಡಲು ನಿರ್ಧರಿಸಿದರು. ಒಬ್ಬ ವಾಣಿಜ್ಯೋದ್ಯಮಿ, ಕಮ್ಯುನಿಸ್ಟ್ ಆಳ್ವಿಕೆಯ ರಾಜ್ಯದಲ್ಲಿ ಅವರ ಹೂಡಿಕೆಯ ನಿರ್ಧಾರ ಭಾರತೀಯ ಉದ್ಯಮಕ್ಕೆ ಒಂದು ಮಾದರಿಯಾಗಿಬಿಟ್ಟಿತು(60:Cp59). ಬಿರ್ಲಾ ಪಲ್ಪ್ ಫ್ಯಾಕ್ಟರಿಯನ್ನು ಜೂನ್ 1958ರಲ್ಲಿ ಕೋಳಿಕ್ಕೋಡ್ ಬಳಿಯ ಮಾವೂರ್‌ನಲ್ಲಿ ಸ್ಥಾಪಿಸಲಾಯಿತು. ಈ ಫ್ಯಾಕ್ಟರಿಗಾಗಿ ಕಚ್ಚಾ ಸಾಮಗ್ರಿಗಳನ್ನು ಒದಗಿಸುವ ಎಲ್ಲಾ ಸೌಲಭ್ಯಗಳನ್ನು ಸರ್ಕಾರ ಒದಗಿಸಿತು(34:p121).

ವಾಸ್ತವವಾಗಿ ಸರ್ಕಾರದ ಕೈಗಾರಿಕಾ ನೀತಿಯು ಮತ್ತು ಯೋಜನಾ ನಿರ್ವಹಣೆಯು ಸಂಪೂರ್ಣವಾಗಿ ಯಶಸ್ವಿಯಾಯಿತು. ಅಕ್ಕಿ, ಎಣ್ಣೆ ಗಿರಣಿಗಳು, ಜವಳಿ, ತೆಂಗು, ಮುದ್ರಣ ಮತ್ತು ರಬ್ಬರ್ ಉತ್ಪನ್ನಗಳಂತಹ ಸಾಂಪ್ರದಾಯಿಕ ವಲಯಗಳಲ್ಲಿ ಮಾತ್ರವಲ್ಲದೆ ಮೋಟಾರ್ ರಿಪೇರಿ, ಸಾಮಾನ್ಯ ಇಂಜಿನಿಯರಿಂಗ್, ಕೃತಕ ಗೊಬ್ಬರ ತಯಾರಿಕೆ, ನಿರ್ಮಾಣ, ಹಡಗು ನಿರ್ಮಾಣ ಇವೇ ಮುಂತಾದವುಗಳ ಹೊಸ ಕಾರ್ಖಾನೆಗಳನ್ನು ತೆರೆಯಲಾದವು(187:p39-40). ಕೇರಳ ಸರ್ಕಾರ ಉದಾರ ಹಣಕಾಸು ಸಾಲ ರಾಜ್ಯ ಆರ್ಥಿಕ ಅಭಿವೃದ್ಧಿಗೆ ಉತ್ತೇಜನ ನೀಡಿತು. ಭಾರತದ ರಾಜ್ಯಗಳ ಪೈಕಿ, ಕೇರಳವೇ ಸಣ್ಣಕೈಗಾರಿಕೆಗಳಿಗೆ ಅತ್ಯಂತ ಹೆಚ್ಚು ಮೊತ್ತವನ್ನು ಸಾಲವಾಗಿ ನೀಡಿದ್ದು(60:p64).

ಕೈಗಾರಿಕಾ ಉತ್ಪಾದನೆಯನ್ನು ಕ್ರಮೇಣ ಹೆಚ್ಚಿಸುವ ಮೂಲಕ ನಿರುದ್ಯೋಗವನ್ನು

ಕಡಿಮೆ ಮಾಡಲು ಮತ್ತು ಜನರ ಜೀವನ ಮಟ್ಟವನ್ನು ಸುಧಾರಿಸಲು ಸರ್ಕಾರ ಸರಿಯಾದ ದಿಕ್ಕನ್ನು ತೋರಿಸಿತು(34:p123). ಕೈಗಾರಿಕಾ ಉತ್ಪಾದನೆಯನ್ನು ಹೆಚ್ಚಿಸುವುದು, ಖಾಸಗಿ ಉದ್ಯಮಿಗಳನ್ನು ಪ್ರೋತ್ಸಾಹಿಸುವುದು, ಕೇಂದ್ರ ಯೋಜನೆಗಳಿಂದ ಕೇರಳದ ನ್ಯಾಯವಾದ ಪಾಲನ್ನು ಪಡೆದುಕೊಳ್ಳುವುದು, ರಾಜ್ಯದಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಲಯಗಳಲ್ಲಿ ಕೈಗಾರಿಕೆಗಳನ್ನು ವಿಸ್ತರಿಸುವುದು, ಇವೇ ಮುಂತಾದ ವಿಷಯಗಳಲ್ಲಿ ಸರ್ಕಾರದ ಮಧ್ಯಸ್ಥಿಕೆ ವಹಿಸುವ ಬಗ್ಗೆ ಸರ್ಕಾರ ಆದ್ಯತೆ ನೀಡಿತು. ರಾಜ್ಯದಲ್ಲಿ ಲಭ್ಯವಿರುವ ಕಚ್ಚಾ ವಸ್ತುಗಳನ್ನು ದೀರ್ಘಾವಧಿಯ ಆಧಾರದ ಮೇಲೆ, ಬಳಸಿಕೊಳ್ಳಲು ಮತ್ತು ಕೈಗಾರಿಕಾ ಉದ್ಯಮವನ್ನು ಸಮರ್ಥವಾಗಿ ನಡೆಸಲು ಹೊಸ ಪೀಳಿಗೆಗೆ ಸಾಕಷ್ಟು ಶಿಕ್ಷಣ ಮತ್ತು ತರಬೇತಿಯನ್ನು ಒದಗಿಸುವುದು ಇವೇ ಮುಂತಾದವುಗಳು ಸರ್ಕಾರದ ಉದ್ದೇಶ ಮತ್ತು ಗುರಿಗಳಾಗಿದ್ದವು(97:V32p119-121).

### ಲೇಬರ್ ಕಾಂಟ್ರಾಕ್ಟ್ ಸೊಸೈಟಿಗಳು(Labour Contract Societies)

ಸಹಕಾರ ಸಂಘಗಳ ರಚನೆ ಮತ್ತು ಬೆಳವಣಿಗೆಯನ್ನು ಯೋಜನಾ ಆಯೋಗವು ನಿರ್ದಿಷ್ಟವಾಗಿ ಪ್ರೋತ್ಸಾಹಿಸುವುದು, ಅಖಿಲ ಭಾರತ ಮಟ್ಟದ ನೀತಿಗಳಾಗಿವೆ. ಕಾರ್ಮಿಕರು ತಮ್ಮ ಸ್ವಂತ ಪ್ರದೇಶಗಳಲ್ಲಿಯೇ ಅಗತ್ಯವಾದ ಕೆಲಸಗಳನ್ನು ಮಾಡಲು ಮನವೊಲಿಸುವುದು ಇದರ ಉದ್ದೇಶ. ಕಾರ್ಮಿಕರ ಸಹಕಾರ ಗುಂಪುಗಳು ಕರಾರು/ಒಪ್ಪಂದಗಳ ಆಧಾರದ ಮೇಲೆ ಸಾರ್ವಜನಿಕ ಯೋಜನೆಗಳನ್ನು ನಿರ್ವಹಿಸಬೇಕೆನ್ನುವುದೇ ಇದರ ಹಿಂದೆ ಇರುವಂಥ ಪರಿಕಲ್ಪನೆ. ಒಪ್ಪಂದವನ್ನು ಒದಗಿಸುವ ಸರ್ಕಾರ ಮತ್ತು ಸಂಘಗಳ ನಡುವೆ ಮಧ್ಯವರ್ತಿಗಳ್ಯಾರು ಇರಬಾರದು. ಸಹಕಾರಿ ಸಂಘಗಳು ಕಾರ್ಮಿಕರಿಗೆ ಸವಲತ್ತುಗಳನ್ನು ಒದಗಿಸಲು ಬಾಧ್ಯಸ್ತರಾಗಿರಬೇಕು(168:p125). ಇಂತಹ ಮಹತ್ತರ ವಿಚಾರಗಳನ್ನು ಜಾರಿಗೆ ತರಲು ಕಾಂಗ್ರೆಸ್ ಸರಕಾರಗಳು ಸಿದ್ಧವಿರಲಿಲ್ಲ.

ಕೇರಳದ ಮೊದಲ ಕಮ್ಯುನಿಸ್ಟ್ ಮಂತ್ರಿಮಂಡಲವು ಈ ತತ್ವವನ್ನು ಜಾರಿಗೆ ತರುವಲ್ಲಿ ಸೂಕ್ತಕ್ರಮಗಳನ್ನು ತೆಗೆದುಕೊಂಡಿತು(60:p112). ಉದ್ಯೋಗ ಪಾಲುದಾರಿಕೆಯ ವಲಯಗಳಲ್ಲಿಯ ಅತ್ಯಂತ ಉತ್ತಮ ಭಾಗವೆಂದರೆ, ಉದ್ಯೋಗ ಗುತ್ತಿಗೆ/ಒಪ್ಪಂದ ಸಹಕಾರ ಸಂಘಗಳಿಗೆ ನೀಡಿದ ಪ್ರೋತ್ಸಾಹ. ಲೋಕೋಪಯೋಗಿ ಇಲಾಖೆ/ಸಾರ್ವಜನಿಕ ಇಲಾಖೆ, ಹಗ್ಗ/ಕಾಯರ್ ಕೈಗಾರಿಕೆ, ಕಳ್ಳು ತೆಗೆಯುವಿಕೆ ಇವೇ ಮೂರು ಕ್ಷೇತ್ರಗಳಲ್ಲಿ ಗುತ್ತಿಗೆದಾರರ ಮತ್ತು ಮಧ್ಯವರ್ತಿಗಳ ಶೋಷಣೆಯಿಂದ ಸಂರಕ್ಷಣೆ ಮಾಡುವುದರ ಗುರಿಯನ್ನಿಟ್ಟುಕೊಂಡು, ಕಮ್ಯುನಿಸ್ಟ್ ಸರ್ಕಾರ ಯೋಜನೆಗಳನ್ನು ಆಯೋಜಿಸಿತು(60:p112).

ಸರ್ಕಾರ 42 ಉದ್ಯೋಗ ಗುತ್ತಿಗೆ ಸಹಕಾರಿ ಸಂಘಗಳನ್ನು ಸ್ಥಾಪಿಸಿತು. ರಸ್ತೆಗಳು, ಸೇತುವೆಗಳು, ಕಟ್ಟಡಗಳು, ಕಾಲುವೆಗಳು ಇವೇ ಮುಂತಾದವುಗಳಿಗೆ ಸಂಬಂಧಪಟ್ಟ

ಸರಕಾರದ ನಿರ್ಮಾಣ ಕಾಮಗಾರಿಗಳನ್ನು, ಸರಕಾರದ ಇಂಜಿನಿಯರುಗಳು ನೀಡುವ ಅಂದಾಜು ವೆಚ್ಚಕ್ಕಿಂತ ಶೇಕಡ 50ರಷ್ಟು ಹೆಚ್ಚಿಸಿ ಪ್ರಸ್ತುತ ಸಹಕಾರಿ ಸಂಘಗಳಿಗೆ ಹಸ್ತಾಂತರಿಸಬೇಕು, ಎಂದೂ ಸೂಚಿಸಲಾಯಿತು(40:02.08.59). ಸಾರ್ವಜನಿಕ ಕಾರ್ಯಗಳನ್ನು, ಒಪ್ಪಂದದ ನಿಯಮ ಮತ್ತು ಷರತ್ತುಗಳನ್ನು ಜಾರಿಗೊಳಿಸಲು ಸ್ಥಾಪಿಸಲಾದ ಈ ಸೊಸೈಟಿಗಳಲ್ಲಿ ಕಾರ್ಮಿಕರು ಮಾತ್ರ ಸದಸ್ಯರಾಗಿದ್ದರು. ಮಧ್ಯವರ್ತಿಗಳನ್ನು ಸಂಪೂರ್ಣವಾಗಿ ತೆಗೆದುಹಾಕಲಾಯಿತು(40:02.08.59). ಆರಂಭದಲ್ಲಿ 25 ಪ್ರಾಯೋಗಿಕ (ಪೈಲಟ್) ಯೋಜನೆಗಳನ್ನು ವಿವಿಧ ಎನ್.ಇ.ಎಸ್. ಬ್ಲಾಕ್‌ಗಳಲ್ಲಿ ಪ್ರಾರಂಭಿಸಲಾಯಿತು. ಇದು ಯಶಸ್ವಿಯಾದ ನಂತರ 84 ಬ್ಲಾಕ್‌ಗಳಲ್ಲಿ ಉದ್ಯೋಗ ಗುತ್ತಿಗೆ ಸಂಘಗಳನ್ನು ರಚಿಸಲಾಯಿತು. ನಂತರ ಸರ್ಕಾರ ಸುಮಾರು 25,000 ರೂ. ವೆಚ್ಚದ ಗುತ್ತಿಗೆ ಕಾಮಗಾರಿಯನ್ನು ನೇರವಾಗಿ ಕಾರ್ಮಿಕರಿಗೆ ಪಾವತಿಸಲಾಯಿತು. ಎಂಭತ್ತನಾಲ್ಕು ಬ್ಲಾಕ್‌ಗಳಲ್ಲಿ ಕೇವಲ 42 ಬ್ಲಾಕ್‌ಗಳಿಂದ ಅರ್ಜಿಗಳನ್ನು ಸಲ್ಲಿಸಲಾಗಿತ್ತು. ಇವೆಲ್ಲವುಗಳ ನೋಂದಣಿ ಕೆಲಸಗಳನ್ನು ನಿಖರವಾಗಿ ಪೂರ್ಣಗೊಳಿಸಲಾದವು. ಆದರೂ ವಿರೋಧಪಕ್ಷವು ಟೀಕಿಸದಿರಲಿಲ್ಲ. ಕಮ್ಯುನಿಸ್ಟ್ ಸಹಕಾರಿ ಸಂಘಗಳಿಗೆ ಮಾತ್ರ ಅರ್ಜಿಸಲ್ಲಿಸಲು ಅವಕಾಶ ನೀಡಲಾಯಿತು ಎಂದೂ ಕಮ್ಯುನಿಸ್ಟೇತರ ಸಹಕರಿ ಸಂಘಗಳಿಗೆ ಅನುಮತಿಸದೆ ಹೊರಗಿಡಲಾಗಿದೆ ಎಂದೂ ಅವರು ಆರೋಪಿಸಿದರು (60:p112-113;84:12.07.59;96:p173).

ಒಂದು ದಶಲಕ್ಷ ಜನರಿಗೆ ಉದ್ಯೋಗವನ್ನು ಒದಗಿಸುವ ಕೇರಳದ ಅತಿ ಪ್ರಮುಖ ಪರಂಪರಾಗತ ಗುಡಿ ಕೈಗಾರಿಕೆಯಾದ ಕಾಯರ್/ಹಗ್ಗದ ಕೈಗಾರಿಕೆಯು ಮಧ್ಯವರ್ತಿಗಳ ಮತ್ತು ಹುಂಡಿ ವ್ಯಾಪಾರಿಗಳ/ದಂಧೆಕೋರರ ಕಪಿಮುಷ್ಠಿಯಲ್ಲಿ ಸಿಕ್ಕಿಬಿದ್ದಿತ್ತು(40:02.08.59). ಹೀಗೆ 1950ರಲ್ಲಿ ಕಾಂಗ್ರೆಸ್ ಸರಕಾರ ಕಾಯರ್ ಸಹಕಾರಿ ಯೋಜನೆಯನ್ನು ರೂಪಿಸಲಾಗಿತ್ತು. ಮಧ್ಯವರ್ತಿಗಳು ಮತ್ತು ಹುಂಡಿ ವ್ಯಾಪಾರಿಗಳನ್ನು ತಪ್ಪಿಸುವುದಕ್ಕಾಗಿ ಪರಿಷ್ಕರಿಸಿದ ಪ್ರಸ್ತುತ ಯೋಜನೆ ಅವರಿಗೆ ಸಹಾಯ ಮಾಡುವ ರೀತಿಯಲ್ಲಿ ಜಾರಿಗೆ ತಂದಿತ್ತೆಂದು ಕಮ್ಯುನಿಸ್ಟ್ ಮಂತ್ರಿಮಂಡಲ ಮೌಲ್ಯಮಾಪನ ಮಾಡಿತ್ತು. ಕಾರ್ಮಿಕ ವರ್ಗದ ವಿಮೋಚನೆಯ ಗುರಿಯನ್ನು ಹೊಂದಿರುವ ಈ ಯೋಜನೆಯು ಪರಿಣಾಮಕಾರಿಯಾಗಿ ಅವರನ್ನು ಸಂಕಷ್ಟಕ್ಕೆ ಸಿಲುಕುವಂತೆ ಮಾಡಿತು(60:p113). ಸರ್ಕಾರವು 187ಸೊಸೈಟಿಗಳ ಪೈಕಿ, 25ರಲ್ಲಿ ತಿದ್ದುಪಡಿ ಸಮಿತಿಗಳನ್ನು ನೇಮಿಸಿತು. ಕಾಯರ್ ವಿಶೇಷ ಅಧಿಕಾರಿಯನ್ನು ಮತ್ತೊಂದು ಹುದ್ದೆಗೆ ವರ್ಗಾವಣೆ ಮಾಡಲಾಯಿತು. ಸಹಕಾರಿ ಸಂಘಗಳಿಂದ ಷೇರುಗಳನ್ನು ಖರೀದಿಸುವ ಅನುಕೂಲಕ್ಕಾಗಿ ಬಡ ಕಾರ್ಮಿಕರಿಗೆ ಸಾಲವನ್ನೂ ನೀಡಲಾಯಿತು(60:p113). ಈ ರೀತಿಯಲ್ಲಿ ಹಲವಾರು ಹೊಸ ಸಹಕಾರ ಸಂಘಗಳು ಸರ್ಕಾರದ ಕಾರ್ಯಕ್ರಮಗಳ ಅನುಷ್ಠಾನದ ಫಲವಾಗಿ ಅಸ್ತಿತ್ವಕ್ಕೆ ಬಂದವು(40:02.08.59).

ಮೊದಲ ಕಮ್ಯುನಿಸ್ಟ್ ನೇತೃತ್ವದ ಸರ್ಕಾರದ ಬಜೆಟ್, ಕಾಂಗ್ರೆಸ್ ಆಡಳಿತದ ರಾಜ್ಯಗಳಿಗಿಂತ ಭಿನ್ನವಾಗಿದ್ದರಿಂದ ಇಡೀ ದೇಶದ ಗಮನ ಸೆಳೆಯಿತು(86:22.06.57p767)*. ಮೊದಲ ಕಮ್ಯುನಿಸ್ಟ್ ಸರ್ಕಾರದ ಬಜೆಟ್ ಬಗ್ಗೆ; 'ಬಿಹೈಂಡ್ ದಿ ಕಾಯಿರ್ ಕರ್ಟನ್-IV' (ಜೂನ್ 22, 1957), ಎನ್ನುವ ಶೀರ್ಷಿಕೆಯ ಪ್ರೋ. ಐ.ಎಸ್ ಗುಲಾಟಿರವರ ಲೇಖನವು ಈ ಪ್ರಕಾರ ತೋರಿಸುತ್ತದೆ:

> "ಕೇರಳಕೆ ಹಣಕಾಸು ಆಯೋಗದ ಮುಂದೆ ಮಂಡಿಸಲು ಒಂದು ವಿಷಯವನ್ನು ಕೈಗೆತ್ತಿಕೊಂಡಿದೆ. ರಾಜ್ಯಕ್ಕೆ ಹಣಕಾಸು ಆಯೋಗ ತೋರಿದ ಅನ್ಯಾಯದಿಂದಾಗಿ ಕೇರಳಕ್ಕೆ 2.25 ಕೋಟಿ ರೂ ಆದಾಯ ಕೊರತೆ ಉಂಟಾಯಿತೆಂದು, ಕೇರಳದ ಹಣಕಾಸು ಸಚಿವರಿಗೆ ಸಮರ್ಥಿಸಿಕೊಳ್ಳಬಹುದಾಗಿತ್ತು. ಈ ಅನ್ಯಾಯವನ್ನು ಸರಿಪಡಿಸುವುದಕ್ಕಾಗಿ ರಾಜ್ಯಕ್ಕೆ ಹೆಚ್ಚುವರಿಯಾಗಿ 2ರಿಂದ 3 ಕೋಟಿ ಮಂಜೂರು ಮಾಡಬೇಕೆಂದು ಅವರು ಕೇಳಬಹುದಿತ್ತು. ಆ ಮೂಲಕ ಅವರು ಹೆಚ್ಚುವರಿ ತೆರಿಗೆ ಮತ್ತು ಎಲ್ಲಾ ಮೂಲೆಗಳಿಂದ ಚಪ್ಪಾಳೆಗಳನ್ನು ಗಿಟ್ಟಿಸಿಕೊಳ್ಳಬಹುದಾಗಿತ್ತು. ಏಕೆಂದರೆ ಅವರು ಕೇರಳದ ಪರವಾಗಿ ನ್ಯಾಯವಾದ ವಾದಗಳನ್ನು ಮಂಡಿಸುವ ಒಬ್ಬ ಮಂತ್ರಿ. ಆದರೆ ಅವರು ಸರಳವಾದ ಮಾರ್ಗವನ್ನು ಆಯ್ಕೆ ಮಾಡಿಕೊಳ್ಳಲಿಲ್ಲ. ಬದಲಿಗೆ, ಸುಮಾರು 2.32 ಕೋಟಿಯಷ್ಟು ರೂ ಆದಾಯ ಉತ್ಪಾದನೆಗೊಳ್ಳುವ ಒಂದು ಹೊಸ ತೆರಿಗೆ ರಚನೆಯನ್ನು ಪ್ರಸ್ತಾಪಿಸಿ, ಆದಾಯ ಕೊರತೆಯನ್ನು ನೀಗಿಸಿಕೊಂಡು ಹೆಚ್ಚುವರಿ ಆದಾಯವಾಗಿ ಪರಿವರ್ತನೆಯಾಗುವಂತೆ ಮಾಡಿದರು. ಹೆಚ್ಚುವರಿ ತೆರಿಗೆ ವಿಧಿಸಿದ ಯೋಜನಾ ಕಾಲಾವಧಿಯೊಳಗೆ 9 ಕೋಟಿ ರೂಪಾಯಿಗಳನ್ನು ಗಳಿಸಬಹುದೆಂದು ಅವರು ಲೆಕ್ಕಾಚಾರ ಮಾಡಿದರು. ಇದು ರಾಜ್ಯಕ್ಕೆ ನೀಡಿದ ಗುರಿಯೊಳಗೆ ಇರುತ್ತಿತ್ತು. ಆದರೆ ನಿಜವಾದ ಉದ್ದೇಶ ರಾಜ್ಯದ ಯೋಜನೆಗಳನ್ನು ಅಭಿವೃದ್ಧಿಪಡಿಸುವುದೇ ಆಗಿತ್ತು"(86:22.06.57p768).

ಅವರು ಹೊಸ ತೆರಿಗೆಗಳ ಬಗ್ಗೆ ಈ ರೀತಿ ಪ್ರತಿಕ್ರಿಯಿಸಿದರು.

> "ಹೊಸ ತೆರಿಗೆಗಳನ್ನು ಸಮರ್ಥಿಸುವಲ್ಲಿ ಕೇರಳ ಹಣಕಾಸು ಸಚಿವರು ಅದ್ಭುತ ಕಲ್ಪನೆಯನ್ನು ವ್ಯಕ್ತಪಡಿಸಿದ್ದಾರೆ. ಕೃಷಿ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಂಪನಿಗಳಿಗೆ ವಿಧಿಸುವ ಮೇಲ್‌ತೆರಿಗೆ ಸಮರ್ಥನೀಯವಾಗಿದೆ(86:22.06.57p768). ಮೂಲ ದರ ವ್ಯವಸ್ಥೆಯನ್ನು ಬಜೆಟ್‌ನಲ್ಲಿ ವಿಸ್ತರಿಸಲಾಗಿದೆ. ಕೇರಳದ ವಿವಿಧ ಭಾಗಗಳಲ್ಲಿ ಅಸ್ತಿತ್ವದಲ್ಲಿರುವ ವಿಭಿನ್ನ ಆದಾಯದ ಸಂಪ್ರದಾಯಗಳನ್ನು

* 'Kerala has produced its first budget. That is also the communists' first excise in constructive work in India... The budget by C.Achuthamenon to the Kerala legislature gives sufficient proof of the determination on the part of his party to apply itself devoutly to the building up of the economy of Kerala. This attitude is in striking contrast to that reflected in the budgets of some of the other state governments ...'

ಸಮನ್ವಯಗೊಳಿಸಬಹುದೆನ್ನುವ ಶ್ರೀ ಅಚ್ಯುತ ಮೆನನ್‌ರವರ ಸಲಹೆಯನ್ನು ಯಾರೂ ಪ್ರಶ್ನಿಸುವುದಿಲ್ಲ. ಭೂ ತೆರಿಗೆಯ ಮೂಲ ದರ ವ್ಯವಸ್ಥೆಯನ್ನು ಮಲಬಾರ್ ಪ್ರದೇಶಕ್ಕೂ ವಿಸ್ತರಿಸಿರುವುದು ಸ್ವಾಗತಾರ್ಹವಾಗಿದೆ, ಏಕೆಂದರೆ ಇದು ತೆರಿಗೆಯ ಸರಳ ವಿಧಾನವೂ ಆಗಿದೆ. ಹಾಗಾಗಿ ತೆರಿಗೆ ಸಂಗ್ರಹದ ವೆಚ್ಚ ಕಡಿಮೆ ಆಗಲಿದೆ. ಮತ್ತು ತೆರಿಗೆದಾರರಿಗೆ ಹೆಚ್ಚಿನ ಹೊರೆಯಾಗುವುದಿಲ್ಲ,"

ಎನ್ನುವುದು ಐ.ಎಸ್.ಗುಲಾಟಿಯವರ ಅವಲೋಕನವಾಗಿತ್ತು (86:22.06.57p768). ಆದಾಯ ಕೊರತೆಯನ್ನು ಕಡಿಮೆ ಮಾಡುವುದಕ್ಕಾಗಲೀ ಅಥವಾ ತಪ್ಪಿಸುವುದಕ್ಕಾಗಲೀ ಹಣಕಾಸು ಸಚಿವ ಅಚ್ಯುತ ಮೆನನ್‌ರವರು ಕೈಗೊಂಡ ಕ್ರಮಗಳು ಶ್ಲಾಘನೀಯವಾಗಿವೆ. ಅಭಿವೃದ್ಧಿ ಚಟುವಟಿಕೆಗಳಿಗಾಗಿ ಸಂಪನ್ಮೂಲ ಕ್ರೋಢೀಕರಣ ಮಾಡಲು ಅವರು ಪ್ರಯತ್ನಿಸಿದರು(187:p4). ಆದಾಯ ಕೊರತೆಯನ್ನು ತಪ್ಪಿಸಲು, ಬಜೆಟ್‌ನ್ನು ಗುರಿಯನ್ನಾಗಿಸಿಕೊಂಡರು. ಈ ಗುರಿಯನ್ನು ಸಾಧಿಸಲು, ಸಾಮಾಜಿಕ ಕಲ್ಯಾಣಕ್ಕಾಗಿ ಮೀಸಲಿಟ್ಟಿರುವ ವೆಚ್ಚವನ್ನು ಕಡಿತಗೊಳಿಸಲು ಅರ್ಥಮಂತ್ರಿಗಳು ಸಿದ್ಧರಿರಲಿಲ್ಲ. ಹಣವನ್ನು ಸಂಗ್ರಹಿಸುವುದಕ್ಕಾಗಿ ಅವರು ಹೊಸ ತೆರಿಗೆಗಳನ್ನು ಅವಲಂಬಿಸಿದರು. ಮಾತ್ರವಲ್ಲದೆ ತಾರ್ಕಿಕವಾದ ಕಾರಣಗಳನ್ನು ಪ್ರಸ್ತುತಪಡಿಸಿಕೊಡು ಹೆಚ್ಚಿನ ನಿಧಿಗಾಗಿ ಹಣಕಾಸು ಆಯೋಗವನ್ನು ಸಂಪರ್ಕಿಸಿದರು( 187:p29). ಕೆಲವು ವಿಷಯಗಳಲ್ಲಿ ಕಮ್ಯುನಿಸ್ಟ್ ಸರ್ಕಾರದ ತೆರಿಗೆ ವ್ಯವಸ್ಥೆಯು ನವೀನವಾಗಿತ್ತು. ಬಡವರನ್ನು ತೆರಿಗೆಯ ಪರಿಧಿಯ ಹೊರಗಿಟ್ಟು, ಶ್ರೀಮಂತರ ಸಂಪತ್ತು ಮತ್ತು ಆಡಂಬರಗಳಿಗೆ ತೆರಿಗೆಯನ್ನು ಹೆಚ್ಚಿಸಿತು. ತೆರಿಗೆ ರಚನೆಯ ಕ್ರೋಢೀಕರಣದ ಮತ್ತು ಸರಳೀಕರಣದ ವಿಚಾರದಲ್ಲಿ ಸರ್ಕಾರದ ಕಡೆಯಿಂದ ಉಂಟಾದ ಶ್ರಮ ನಿಜವಾಗಿಯೂ ಉಲ್ಲೇಖಾರ್ಹ (120:p24;86:22.06.57p768).

## ಆಡಳಿತ ಸುಧಾರಣಾ ಸಮಿತಿ ಮತ್ತು ವಿಕೇಂದ್ರೀಕರಣ

ಕಮ್ಯುನಿಸ್ಟ್ ನೇತೃತ್ವದ ಮೊದಲ ಸರ್ಕಾರದ ಆಡಳಿತ ವ್ಯವಸ್ಥೆಯ ಪುನರ್‌ರಚನೆಯ ಅಗತ್ಯವನ್ನು ಗುರುತಿಸಿಕೊಂಡು ಆಡಳಿತ ಸುಧಾರಣಾ ಸಮಿತಿಯೊಂದನ್ನು ರಚಿಸಲಾಯಿತು(84:17.08.57). ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಇದರ ಅಧ್ಯಕ್ಷರಾಗಿಯು ಮತ್ತು ಶಿಕ್ಷಣ ಸಚಿವ ಜೋಸೆಫ್ ಮುಂಡಸ್ಸೆರಿ ಅದರ ಸದಸ್ಯರಾಗಿಯು ಸಮಿತಿಯಲ್ಲಿದ್ದರು. ಸಮಿತಿಯ ಇತರ ಸದಸ್ಯರುಗಳಾದ ವಿ.ಕೆ. ನಂದನ್ ಮೆನನ್, ಪಿ ಎಸ್ ನಟರಾಜ ಪಿಳ್ಳ ಹರ್ಷದೇವ್ ಮಾಳವೀಯ, ಜಿ ಪರಮೇಶ್ವರನ್ ಪಿಳ್ಳ, ಕೆ.ಎಸ್. ಮೇನನ್ ಮುಂತಾದವರು ಆಡಳಿತ ಸುಧಾರಣಾ ವಿಷಯಗಳಲ್ಲೂ ರಾಜಕೀಯ ತಂತ್ರಗಳಲ್ಲೂ ಪರಿಣತರಾಗಿದ್ದವರು. ಕಲ್ಯಾಣ ರಾಷ್ಟ್ರಕ್ಕಾಗಿ ಪ್ರಜಾಸತ್ತಾತ್ಮಕ ಆಡಳಿತವನ್ನು ಸಮರ್ಪಕವಾಗಿ ಕಾರ್ಯನಿರ್ವಹಿಸುವಂತೆ ಮಾಡಲು, ಪ್ರಸ್ತುತ ಆಡಳಿತ ವ್ಯವಸ್ಥೆಯನ್ನು ಅವಲೋಕಿಸಿ, ವಿವಿಧ ಹಂತಗಳಲ್ಲಿ ಸಮನ್ವಯ ಮತ್ತು ವಿಕೇಂದ್ರೀಕರಣವನ್ನು

ಸುಧಾರಿಸಲು ಕೈಕೊಳ್ಳಬೇಕಾದ ಕ್ರಮಗಳ ಬಗ್ಗೆ ಶಿಫಾರಸುಗಳನ್ನು ಮಾಡುವುದು, ಆಡಳಿತಾತ್ಮಕ ಸಂಸ್ಥೆಗಳು ಪರಿಣಾಮಕಾರಿ ಭಾಗವಹಿಸುವಿಕೆಗಾಗಿ ಆಡಳಿತ ಇಲಾಖೆಗಳ ಪ್ರಜಾಪ್ರಭುತ್ವೀಕರಣಕ್ಕೆ ಅಗತ್ಯವಾದ ವಿಧಾನಗಳನ್ನು ಶಿಫಾರಸು ಮಾಡುವುದು, ಮುಂತಾದವುಗಳು ಸಮಿತಿಯು ಪರಿಗಣಿಸಬೇಕಾದ ವಿಷಯಗಳಾಗಿದ್ದವು(42:p166). ಒಂದು ವರ್ಷ ಕಾಲದ ಸುದೀರ್ಘ ಅಧ್ಯಯನ ಮತ್ತು ಚರ್ಚೆಗಳ ನಂತರ, ಆಗಸ್ಟ್ 1958ರಲ್ಲಿ ಸಮಿತಿಯು ಸಮಗ್ರವಾದ ವರದಿಯನ್ನು ಸಲ್ಲಿಸಿತು(40:15.08.58;12:p123).

ಅಧಿಕಾರದ ವಿಕೇಂದ್ರೀಕರಣ, ಪರಿಣಾಮಕಾರಿ ಮತ್ತು ತ್ವರಿತವಾಗಿ ನೆರವೇರಿಸುವ ಆಡಳಿತ ವ್ಯವಸ್ಥೆಯ ಚಟುವಟಿಕೆಗಳು, ಸಾರ್ವಜನಿಕರ ಮತ್ತು ಅಧಿಕಾರಶಾಹಿಯ ನಡುವಿನ ಅರ್ಥಪೂರ್ಣ ಸಂಬಂಧ, ಮುಂತಾದವು ವರದಿಯಲ್ಲಿ ಪ್ರಸ್ತಾಪಿಸಲಾದ ಪ್ರಮುಖ ವಿಷಯಗಳಾಗಿದ್ದವು(12:). ಎಚ್.ಡಿ.ಮಾಳವೀಯ ಈ ಬಗ್ಗೆ ಹೀಗೆ ಪ್ರತಿಕ್ರಿಯಿಸುತ್ತಾರೆ:

> "ಆಡಳಿತ ಸುಧಾರಣಾ ವಿಷಯದ ಬಗ್ಗೆ ಹಿಂದೆಂದೂ ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಗಮನಹರಿಸಿರಲಿಲ್ಲ ಮತ್ತು ಪರಿಗಣನೆಗೆ ತೆಗೆದುಕೊಂಡಿರಲಿಲ್ಲ(48:p100). ಅಸ್ತಿತ್ವದಲ್ಲಿರುವ ಆಡಳಿತ ನಿರ್ವಹಣಾ ವ್ಯವಸ್ಥೆಗಳು ಸಾಂಪ್ರದಾಯಿಕವಾಗಿ ವಿದೇಶಿ ಪ್ರಾಬಲ್ಯ ಮತ್ತು ರಾಜಪ್ರಭುತ್ವದ ಚೌಕಟ್ಟಿಗೆ ಸೀಮಿತವಾಗಿದ್ದವು. ಅದರಿಂದಾಗಿಯೇ ಆಡಳಿತ ವ್ಯವಸ್ಥೆಯ ನ್ಯೂನತೆ ಮತ್ತು ಕೊರತೆಗಳನ್ನು ಪರಿಹರಿಸುವುದಕ್ಕಾಗಿ ಪ್ರಸ್ತಾವನೆಗಳನ್ನು ಮುಂದಿಟ್ಟಿದೆ. ಆಧುನಿಕ ಪ್ರಜಾಪ್ರಭುತ್ವ ರಾಷ್ಟ್ರದ ಅಗತ್ಯಗಳನ್ನು ಪೂರೈಸುವ ದಕ್ಷ ಆಡಳಿತ ವ್ಯವಸ್ಥೆಯನ್ನು ರೂಪಿಸಲು ಬೇಕಾದ ಎಲ್ಲಾ ವಿಚಾರಗಳನ್ನೂ ಸಮಿತಿಯು ಪರಿಶೀಲನೆಗೆ ಒಳಪಡಿಸಿತ್ತು"(12:p123).

ಈ ಬಗ್ಗೆ ಇಎಂಎಸ್ ಹೀಗೆ ಬರೆಯುತ್ತಾರೆ,

> "ಅಧಿಕಾರ ವಿಕೇಂದ್ರೀಕರಣದ ಕುರಿತು ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೆ ತರಲು ಅಗತ್ಯವಾದ ಮಸೂದೆಯ ಕರಡನ್ನು ಸರ್ಕಾರ ಸಿದ್ಧಪಡಿಸಿದೆ, ಹಾಗೂ ವಿಧಾನಸಭೆಯಲ್ಲಿ ಮಂಡಿಸಲಾಗಿದೆ. ಈ ಮಸೂದೆಯ ಕರಡನ್ನು ಜಿಲ್ಲಾ ಕೌನ್ಸಿಲ್ ಮಸೂದೆ ಎಂದು ಕರೆಯಲಾಗುತ್ತದೆ. ಈ ಮಸೂದೆಯು ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ವ್ಯಾಪಕವಾದ ಅಧಿಕಾರವನ್ನು ಒದಗಿಸುತ್ತದೆ. ರಾಜ್ಯ ಸರ್ಕಾರ ಮತ್ತು ಪಂಚಾಯಿತಿಗಳ ನಡುವಿನ ಮಧ್ಯವರ್ತಿ ವ್ಯವಸ್ಥೆಯ ನೆಲೆಯಲ್ಲಿ, ಮೇಲಿನ ಮಸೂದೆಯು ಜಿಲ್ಲಾ ಕೌನ್ಸಿಲ್ ಸ್ಥಾಪಿಸಲು ಅವಕಾಶ ಕಲ್ಪಿಸುತ್ತದೆ. ಚುನಾಯಿತ ಸದಸ್ಯರನ್ನು ಒಳಗೊಂಡಿರುವ ಗೊತ್ತುಪಡಿಸಿದ ಜಿಲ್ಲಾ ಕೌನ್ಸಿಲ್‌ಗೆ ವ್ಯಾಪಕ ಅಧಿಕಾರಗಳನ್ನು ಬಿಟ್ಟುಕೊಡುವ ಅವಕಾಶವನ್ನು ಮಸೂದೆಯು ಒದಗಿಸುತ್ತದೆ. ಜಿಲ್ಲಾ ಕೌನ್ಸಿಲಿನ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಹೆಚ್ಚಿಸುವ ವಿಧದಲ್ಲಿ ರಾಜ್ಯ ಸಚಿವಾಲಯದ ವಿಕೇಂದ್ರೀಕರಣವನ್ನೂ ಮಾಡಿತು. ಚುನಾಯಿತ ಗ್ರಾಮ ಪಂಚಾಯತ್‌ಗಳ ಅಧಿಕಾರಗಳಲ್ಲೂ ಗಮನಾರ್ಹ ಹೆಚ್ಚಳ ಪ್ರಕಟಗೊಂಡವು.

ಅಧಿಕಾರ ವಿಕೇಂದ್ರೀಕರಣ, ಆಡಳಿತ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವೀಕರಣ ಎನ್ನುವ ಎರಡು ಗುರಿಯನ್ನು ಒಂದೇ ಮಸೂದೆಯಡಿಯಲ್ಲಿ ತರಲು ಸಾಧ್ಯವಾಯಿತು (12:p124).

ಆಡಳಿತ ಸುಧಾರಣಾ ಸಮಿತಿಯ ಶಿಫಾರಸ್ಸುಗಳನ್ನು ಆಧರಿಸಿ ಪಂಚಾಯತ್ ರಾಜ್, ಪುರಸಭೆ ಮುಂತಾದವುಗಳಿಗೆ ಸಂಬಂಧಿಸಿದ ಎರಡು ಮಸೂದೆಗಳನ್ನು ಸರ್ಕಾರವು ವಿಧಾನಸಭೆಯಲ್ಲಿ ಮಂಡಿಸಿತು(187:p25). ಸ್ಥಳೀಯ ಸಂಸ್ಥೆಗಳ ಆಡಳಿತದ ಇಲಾಖಾ ಘಟಕ ಅಥವಾ ಯೂನಿಟ್ ಎನ್ನುವುದರಿಂದ, ಅದರ ಉದ್ದೇಶವೇನು ಎನ್ನುವುದು ಮಸೂದೆಯ ಪೀಠಿಕೆಯಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನಿಸಲಾಗಿದೆ(84:18.12.58). ಮಸೂದೆಗಳ ಪ್ರಕಾರ ಸಾಮಾಜಿಕ-ಆರ್ಥಿಕ-ಕೃಷಿ ಅಭಿವೃದ್ಧಿ, ಕಂದಾಯ ದಾಖಲೆಪತ್ರಗಳನ್ನುಸಂರಕ್ಷಣೆ ಮಾಡುವುದು, ಸಮಾಜ ಕಲ್ಯಾಣ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವುದು ಇವೇ ಮುಂತಾದ ಹಲವಾರು ಕಲ್ಯಾಣ ಕ್ರಮಗಳನ್ನು ಪಂಚಾಯಿತಿಗಳು ಕೈಗೊಳ್ಳಬೇಕಾಗಿದೆ. ಸಂಕ್ಷಿಪ್ತವಾಗಿ ಪಂಚಾಯತ್ ರಾಜ್ ಗ್ರಾಮೀಣ ಅಭಿವೃದ್ಧಿಯ ಎಲ್ಲ ಅಂಶಗಳನ್ನೂ ಅಳವಡಿಸಿಕೊಳ್ಳುವಂಥವುಗಳೇ ಆಗಿರುತ್ತವೆ(34:p84). ಸ್ಥಳೀಯ ಸಂಸ್ಥೆಗಳಿಗೆ ಸರ್ಕಾರ ವ್ಯಾಪಕ ಅಧಿಕಾರವನ್ನು ನೀಡುವ ಉದ್ದೇಶದಿಂದ ಎರಡು ಹಂತದ ವ್ಯವಸ್ಥೆಯನ್ನು ಮಸೂದೆಯು ಒದಗಿಸುತ್ತದೆ. ಇದರ ಪ್ರಕಾರ ಪಂಚಾಯತ್, ಪುರಸಭೆಗಳಿಗೆ ಕೆಳಸ್ತರಗಳಲ್ಲಿ ಮತ್ತು ಜಿಲ್ಲಾ ಕೌನ್ಸಿಲ್‌ಗಳಿಗೆ ಮೇಲ್‌ಸ್ತರಗಳಲ್ಲಿ ಸ್ಥಾನಗಳನ್ನು ನೀಡಲಾಗಿದೆ. ಅಭಿವೃದ್ಧಿ ಚಟುವಟಿಕೆಗಳನ್ನು ಆಯೋಜಿಸುವುದಕ್ಕಿರುವ ಅಧಿಕಾರ, ಪ್ರಾದೇಶಿಕ ಸ್ಥಳಿಯ ಸ್ವ-ಸರ್ಕಾರ ಸಂಸ್ಥೆಗಳ ಕಾರ್ಯಚಟುವಟಿಕೆಗಳು, ಜಿಲ್ಲಾ ಕೌನ್ಸಿಲುಗಳ ಆದಾಯ ಸಂಗ್ರಹ ಕಾರ್ಯಗಳನ್ನು ಸಮನ್ವಯಗೊಳಿಸಿಕೊಂಡು ಕಾರ್ಯನಿರ್ವಹಿಸುವುದಕ್ಕೆ ಬೇಕಾದ ಅಗತ್ಯದ ಅಧಿಕಾರ ಮುಂತಾದವು ಜಿಲ್ಲಾ ಕೌನ್ಸಿಲ್‌ಗೆ ಹಸ್ತಾಂತರ ಮಾಡುವ ಗುರಿಯನ್ನು ಈ ಮಸೂದೆ ಹೊಂದಿದೆ. ಜಿಲ್ಲಾ ಕೌನ್ಸಿಲ್ ಎನ್ನುವುದು ಜಿಲ್ಲಾಡಳಿತ ಎನ್ನುವ ನೆಲೆಯಲ್ಲಿ 1958ರ ಮಸೂದೆಯು ಕಲ್ಪಿಸಿರುತ್ತದೆ. ಕೃಷಿ ಸುಧಾರಣೆಗಳಿಗೆ ನಿರಂತರವಾಗಿ ಅಧಿಕಾರದ ವಿಕೇಂದ್ರೀಕರಣವನ್ನು ಸರ್ಕಾರ ಪರಿಗಣಿಸಿತು. ವಿಕೇಂದ್ರೀಕರಣ ಎನ್ನುವುದು ಕೇವಲ ಆಡಳಿತ ಸುಧಾರಣೆ ಮಾತ್ರವಲ್ಲ, ಬದಲಿಗೆ ಜನರ ಜೀವನೋಪಾಯದ ಮಾರ್ಗಗಳನ್ನು ಸುಧಾರಿಸುವುದಕ್ಕೆ ವ್ಯಾಪಕವಾದ ಅಥವಾ ಸಮರ್ಥವಾದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನಾಗಿಯೇ ಸರ್ಕಾರ ಪರಿಗಣಿಸಿರುವುದು( 187:p25;97:V20p93).

ಸಾಕಷ್ಟು ಸಂಪನ್ಮೂಲಗಳ ಕೊರತೆಯಿಂದಾಗಿ, ಸ್ಥಳೀಯಾಡಳಿತ ಸಂಸ್ಥೆಗಳ ಘಟಕಗಳಿಗೆ ನಿಯೋಜಿಸಲಾದ ಅಥವಾ ನೀಡಿದಂಥ ಕರ್ತವ್ಯಗಳನ್ನು ನಿರ್ವಹಿಸಲು ಸಾಧ್ಯವಾಗಲಿಲ್ಲ(34:p84). ಆದ್ದರಿಂದ ಸ್ಥಳೀಯಾಡಳಿತ ಸಂಸ್ಥೆಗಳು ಅವರ ಕೆಲವು ಜವಾಬ್ದಾರಿಗಳನ್ನು ವಹಿಸಿಕೊಳ್ಳಲು ಹೊಸ ಸರ್ಕಾರದ ಹತ್ತಿರ ಕೇಳಿಕೊಂಡರು. ಆದರೆ, ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್‌ರವರು ಸ್ಥಳೀಯಾಡಳಿ ಸಂಸ್ಥೆಗಳ

ಘಟಕಗಳನ್ನು ಬಲಪಡಿಸುವ ಕ್ರಮಕ್ಕೆ ಪ್ರಯತ್ನಿಸಿದರು. ಸ್ಥಳೀಯ ಸಂಸ್ಥೆಗಳಿಗೆ ಅಗತ್ಯವಾದ ಆರ್ಥಿಕ ಸ್ಥಿರತೆಯನ್ನು ತಂದುಕೊಡುವಂಥ ಕ್ರಮಗಳನ್ನು ಕೈಗೊಂಡರು(97:V18p207). ವಸತಿ ತೆರಿಗೆ, ಉದ್ಯೋಗ ತೆರಿಗೆ, ವಾಹನ ತೆರಿಗೆ, ಭೂ ತೆರಿಗೆ, ಮುದ್ರಾಂಕ ಶುಲ್ಕದ ಮೇಲಿನ ಅಧಿಕ ತೆರಿಗೆ, ನೀರಾವರಿ ಮೇಲಿನ ಸೆಸ್ ಮುಂತಾದ ಹೊಸ ಕರಗಳನ್ನು ಸಂಗ್ರಹಿಸಲು ಈ ಮಸೂದೆ ಪಂಚಾಯತ್‌ಗಳಿಗೆ ಅಧಿಕಾರ ನೀಡಿತು(34:p84).

ಕ್ರಮವಾಗಿ ಪಂಚಾಯತ್ ರಾಜ್ ಮಸೂದೆ ಮತ್ತು ಜಿಲ್ಲಾ ಕೌನ್ಸಿಲ್ ಮಸೂದೆಗಳನ್ನು 1958 ಮತ್ತು 1959ರಲ್ಲಿ ವಿಧಾನಸಭೆಯಲ್ಲಿ ಮಂಡಿಸಲಾಯಿತು(12:p124). ಆದರೆ ಆಕಸ್ಮಿಕವಾಗಿ ಸರ್ಕಾರ ಬರ್ಖಾಸ್ತುಗೊಂಡಿದ್ದರಿಂದ ಎರಡೂ ಮಸೂದೆಗಳು ಕಾನೂನಾಗಿ ರೂಪುಗೊಳ್ಳಲಿಲ್ಲ.

ಅಧಿಕಾರದ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣಎನ್ನುವ ಮಹತ್ತಾದ ಈ ಪರಿಕಲ್ಪನೆಯು 1957–59ರ ಅವಧಿಯಲ್ಲಿ ಕೇರಳದಲ್ಲಿ ಬೇರೂರಿತು. ಎರಡನೇ ಪಂಚವಾರ್ಷಿಕ ಯೋಜನೆಯ ಭಾಗವಾಗಿ ಪ್ರಸ್ತುತಪಡಿಸಲಾದ ಕಮ್ಯುನಿಟಿ ಡೆವಲಪ್‌ಮೆಂಟ್ ಬ್ಲಾಕ್ ಎನ್ನುವ ಪರಿಕಲ್ಪನೆಯ ಹಿಂದೆ ಇದ್ದಂಥ ಪ್ರಮುಖ ಆಶಯ ಇದುವೇ ಆಗಿತ್ತು(84:02.12.58). ಸಂಬಂಧಪಟ್ಟ ಸಮಿತಿಗಳ ಚುನಾಯಿತ ಪ್ರತಿನಿಧಿಗಳ ನಿರ್ದೇಶನದಂತೆ ಮಾತ್ರ ವಿವಿಧ ಶ್ರೇಣಿಯ ಅಧಿಕಾರಿಗಳು ಕಾರ್ಯನಿರ್ವಹಿಸಬೇಕು, ಎನ್ನುವುದೇ 'ಅಧಿಕಾರದ ಪ್ರಜಾಪ್ರಭುತ್ವದ ವಿಕೇಂದ್ರೀಕರಣ' ಎಂದು ವ್ಯಾಖ್ಯಾನಿಸಲಾಗಿದೆ. ಈ ನಿಟ್ಟಿನಲ್ಲಿ ಕಮ್ಯುನಿಟಿ ಅಥವಾ ಸಮುದಾಯ ಅಭಿವೃದ್ಧಿ ಬ್ಲಾಕ್ ಪರಿಕಲ್ಪನೆಯೊಂದಿಗೆ ದೊಡ್ಡ ಅಂತರವಿದ್ದಿತು. ಇಎಂಎಸ್‌ರವರ ಅವಲೋಕನ ಹೀಗಿದೆ:

> "ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟಗಳ ಯಶಸ್ಸು ಸ್ಥಾಯಿಯಾಗಿ ಉಳಿಯಬೇಕಾದರೆ, ರಾಷ್ಟ್ರದ ಉಪಕರಣವು ಪ್ರಜಾಪ್ರಭುತ್ವೀಕರಣ ಮತ್ತು ವಿಕೇಂದ್ರೀಕರಣಗೊಂಡಿರಬೇಕಾಗುತ್ತದೆ. ಚುನಾಯಿತ ಪ್ರತಿನಿಧಿಗಳು ಜನರಿಗೆ ಜವಾಬ್ದಾರರಾಗಿರಬೇಕು. ಜನರ ಬಗ್ಗೆ ಸರ್ಕಾರಿ ಅಧಿಕಾರಿಗಳ ವರ್ತನೆ ಸಮಗ್ರವಾಗಿ ಬದಲಾಗಬೇಕು. ಆದರೆ, ಅಧಿಕಾರದ ವ್ಯಾಮೋಹದಲ್ಲಿರುವ ಸರ್ಕಾರಿ ಅಧಿಕಾರಿಗಳು ಜನರೊಂದಿಗೆ ವ್ಯವಹರಿಸುವಾಗ ವಿವೇಕದಿಂದ ವರ್ತಿಸುವುದಿಲ್ಲ(97:V19p194).

ಪಂಚಾಯಿತಿಗಳ ದಕ್ಷ ಕಾರ್ಯನಿರ್ವಹಣೆಯನ್ನು ಖಚಿತಪಡಿಸಿಕೊಳ್ಳಲು ಮತ್ತು ಪಂಚಾಯಿತಿಗಳ ಮತ್ತು ಗ್ರಾಮಾಡಳಿತ ವ್ಯವಸ್ಥೆಗಳ ನಡುವಿನ ಅಂತರವನ್ನು ಇಲ್ಲವಾಗಿಸುವ ಸಲುವಾಗಿ ಅಧಿಕಾರಿಗಳ ಮರುಸಂಘಟನೆ ಅಥವಾ ಮರುಸಮನ್ವಯಗೊಳಿಸಲು ಪ್ರಸ್ತುತ ಕರಡು ಮಸೂದೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು. 'ಗ್ರಾಮೀಣ ಅಧಿಕಾರಿಗಳು, ಬ್ಲಾಕ್ ಅಭಿವೃದ್ಧಿ ಅಧಿಕಾರಿಗಳು, ಕಂದಾಯ ಅಧಿಕಾರಿಗಳು ಮತ್ತು ಪಂಚಾಯತ್ ಅಧಿಕಾರಿಗಳು ಸೇರಿದಂತೆ ಒಂದೇ ಕೇಡರ್‌ನ್ನು ರಚಿಸಲಾಯಿತು

(97:V20;87:02.12.58).

ಅತಿಯಾದ ಕೇಂದ್ರೀಕರಣ, ನಿರ್ಧಾರ ತೆಗೆದುಕೊಳ್ಳುವಿಕೆಯಲ್ಲಿ ಆಗುತ್ತಿದ್ದ ಅತಿಯಾದ ಸಮಯ ವಿಳಂಬ ಇವುಗಳೇ ಪ್ರಸ್ತುತ ಆಡಳಿತದ ಎರಡು ಅಂಶಗಳಾಗಿವೆ, ಎಂದು ಇಎಂಎಸ್‌ರವರು ವಿಮರ್ಶಾತ್ಮಕವಾಗಿ ಅವಲೋಕಿಸುತ್ತಾರೆ.

> "ಗ್ರಾಮ ಮಟ್ಟದಿಂದ ಉನ್ನತ ಮಟ್ಟದವರೆಗಿನ ಜನರು ಸಣ್ಣ ವಿಚಾರಗಳಿಗು ಸಹ ರಾಜ್ಯ ಮತ್ತು ಕೇಂದ್ರ ಸಚಿವಾಲಯಗಳಿಂದ ಮಾರ್ಗದರ್ಶನ ಪಡೆಯುವಂಥ ಸಂಪ್ರದಾಯ ಅಥವಾ ವ್ಯವಸ್ಥೆ ಅಸ್ತಿತ್ವದಲ್ಲಿತ್ತು"(97:V19p195).

ವಿವಿಧ ಇಲಾಖೆಗಳು ಅಬೇದ್ಯ ಕೋಟೆಗಳಂತೆ ಪರಸ್ಪರ ಸಂಬಂಧ ಹೊಂದಿಲ್ಲದಂತೆ ಕಾರ್ಯ ನಿರ್ವಹಿಸುತ್ತಿತ್ತು. ಪರಿಣಾಮವಾಗಿ, ಆಡಳಿತದಲ್ಲಿ ಜನರ ಭಾಗವಹಿಸುವಿಕೆಯಿಲ್ಲದೆ ಇದು ಅಮುಖ್ಯವಾಗಿಬಿಟ್ಟಿತ್ತು. ಇದರಿಂದಾಗಿ, ವಿಷಯಗಳನ್ನು ಇತ್ಯರ್ಥಪಡಿಸುವಲ್ಲಿ ಬಹಳ ವಿಳಂಬವಾಗುತ್ತಿತ್ತು. ಸಂಪರ್ಕರಹಿತವಾದ ಇಲಾಖಾ ವಿಭಜನೆ, ರೆಡ್ ಟೇಪ್/ಕೆಂಪುಪಟ್ಟಿ ಆಡಳಿತ ಮುಂತಾದವುಗಳಿಗೆ ಐಕ್ಯಕ ಪರಿಹಾರವಾಗಿ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣವನ್ನು ಸಮಿತಿ ಶಿಫಾರಸು ಮಾಡಿತು.

ರಾಜ್ಯದಲ್ಲಿನ ಆಡಳಿತ ವ್ಯವಸ್ಥೆಯ ಪರಿಣಾಮಕಾರಿ ಕಾರ್ಯನಿರ್ವಹಣೆಯ ಕುರಿತು ಆಡಳಿತ ಸುಧಾರಣಾ ಸಮಿತಿಯ ವರದಿಯು, ಅತ್ಯಂತ ಪ್ರಗತಿಪರವಾದ ಮಾರ್ಗ ಸೂತ್ರಗಳನ್ನು ಸೂಚಿಸುತ್ತದೆ. ದುರದೃಷ್ಟವಶಾತ್, ಸಮಿತಿಯ ಯಾವುದೇ ಪ್ರಮುಖ ಶಿಫಾರಸುಗಳು ನಂತರದ ದಿನಗಳಲ್ಲಿ ಆರೋಗ್ಯಕರ ಚರ್ಚೆಯ ವಿಷಯವಾಗದೇ ಹೋಯಿತು(12:p125). ಬದಲಿಗೆ, ಸಮಿತಿಯ ಶಿಫಾರಸುಗಳಲ್ಲೊಂದಾದ, ಜಾತಿ ಮೀಸಲಾತಿಯ ಮಾನದಂಡವೇ ರಾಜ್ಯಾದ್ಯಂತ ಸದ್ದುಗಳ ಅಲೆಯನ್ನುಂಟು ಮಾಡಿ, ವಿವಾದದ ವಿಷಯವಾಗಿಬಿಟ್ಟಿತು. ಇದು ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಳವಳಿಯನ್ನು ಬಲಪಡಿಸಿತು ಎಂಬುದನ್ನು ಗಮನಿಸಬೇಕು(37:p197;69:p143).

## ಆಹಾರ ವಲಯ

ರಾಜ್ಯದಲ್ಲಿ ಆಹಾರಧಾನ್ಯದ ಕೊರತೆ ಸದಾ ಕಾಡುವಂಥ ಸ್ಥಿತಿ ಸೃಷ್ಟಿಗೊಂಡಿತ್ತು. 1957ರ ಮೊದಲಾರ್ಧದಲ್ಲಿ ರಾಷ್ಟ್ರವ್ಯಾಪಿಯಾಗಿದ್ದ ಆಹಾರದ ಕೊರತೆ ತೀವ್ರಗೊಳ್ಳುತ್ತಲೇ ಇತ್ತು(84:18.08.47)*. ಕೇರಳದ ಪರಿಸ್ಥಿತಿಯು ಸಹ ಉತ್ತಮವಾಗಿರಲಿಲ್ಲ. ಮೊದಲ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ, ಕೇರಳದ ಆಹಾರದ ಕೊರತೆಯು ಅದರ

---

* ಪ್ರಧಾನ ಮಂತ್ರಿ ಜವಾಹರಲಾಲ್ ನೆಹರು ಅವರು ಆಗಸ್ಟ್ 17, 1957ರಂದು ನವದೆಹಲಿಯಲ್ಲಿ ಆಹಾರ ಧಾನ್ಯಗಳ ಬೆಲೆಯನ್ನು ನಿಯಂತ್ರಿಸಲು ಕೆಲವು ಕಠಿಣ ಕ್ರಮಗಳನ್ನು ತೆಗೆದುಕೊಳ್ಳಲು ಉದ್ದೇಶಿಸಿದ್ದಾರೆ ಎಂದು ಘೋಷಿಸಿದರು. ಅದೇ ದಿನ ಕೇಂದ್ರ ಆಹಾರ ಸಚಿವ ಎ.ಪಿ. ಜೈನ, ದೇಶದಲ್ಲಿ ಆಹಾರ ಧಾನ್ಯದ ಪರಿಸ್ಥಿತಿ ಬೆಲೆ ಏರಿಕೆಯ ಬಗ್ಗೆ ಲೋಕಸಭೆಯಲ್ಲಿ ಹೇಳಿಕೆ ಮತ್ತು ಕಾರಣವನ್ನು ನೀಡಿದರು.

ಬೇಡಿಕೆಯ 50%ರಷ್ಟಿತ್ತು(86:20.12.58p1570). ಮೊದಲ ಹಂತದಲ್ಲಿ ಆಹಾರ ಉತ್ಪಾದನೆಯನ್ನು ತ್ವರಿತಗೊಳಿಸುವಲ್ಲಿ ಸರ್ಕಾರವು ದಯನೀಯವಾಗಿ ವಿಫಲವಾಗಿತ್ತು.

ಏಪ್ರಿಲ್ 27, 1957ರಂದು ರಾಜ್ಯ ವಿಧಾನಸಭೆಯನ್ನುದ್ದೇಶಿಸಿ ಈ ಸಂದರ್ಭದಲ್ಲಿ ಮಾತನಾಡಿದ ರಾಜ್ಯಪಾಲರು,

> "ಹಾಲಿ ಇರುವ ಆಹಾರದ ಕೊರತೆಯ ಬಗ್ಗೆ ಸರ್ಕಾರಕ್ಕಿರುವ ತೀವ್ರ ಕಳವಳದ ಬಗ್ಗೆ ತಿಳಿಸಿತು. ಅತೃಪ್ತಿಕರವಾದ ಆಹಾರ ಪರಿಸ್ಥಿತಿಯ ಮೂಲ ಕಾರಣ ಹಾಗೆ ಉಳಿದಿರುವಾಗಲೇ, ಕೆಲವು ಇತ್ತೀಚಿನ ಬೆಳವಣಿಗೆಗಳು ಹೆಚ್ಚಿನ ತೊಂದರೆಗಳನ್ನು ಸೃಷ್ಟಿಸಿದವು. ಮೊದಲನೆಯದಾಗಿ, ನಮ್ಮ ರಾಜ್ಯ ಜನರು ಆಸಕ್ತಿ ಹೊಂದಿರುವ ಅಥವಾ ಹೆಚ್ಚಾಗಿ ಉಪಯೋಗಿಸಲ್ಪಡುವ ಕುಚಲಕ್ಕಿ/ಕುಸುಬಲಕ್ಕಿ ಲಭ್ಯವಿರುವುದಿಲ್ಲ. ಉಗ್ರಾಣದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿರುವುದು ಬೆಳ್ತಕ್ಕಿ/ಕಚ್ಚಾ ಅಕ್ಕಿ. ಎರಡನೆಯದಾಗಿ, ತರಕಾರಿಗಳ ವಿಚಾರಕ್ಕೆ ಬಂದರೆ, ಅವುಗಳ ಬೆಲೆ ತೃಪ್ತಿಕರವಾಗಿಲ್ಲ. ಬೆಳ್ತಕ್ಕಿ/ಕಚ್ಚಾ ಅಕ್ಕಿ ವಿತರಣಾ ಕೇಂದ್ರಗಳಲ್ಲಿ ಅದರ ಬೆಲೆ ಹೆಚ್ಚುತ್ತಿರುವುದರ ಪ್ರವೃತ್ತಿಯನ್ನೇ ಕಾಣುತ್ತಾ ಇದ್ದಿದ್ದು. ಆದರೂ ಕೇಂದ್ರ ಸರಕಾರ ಭರವಸೆ ನೀಡಿದ ಧಾನ್ಯದ ಪಾಲುಗಳ ನೆರವಿನಿಂದ ಮುಂಬರುವ 'ಬರ'ದ ತಿಂಗಳುಗಳಲ್ಲಿ, ಸರ್ಕಾರವು ಪ್ರಸ್ತುತ ತೊಂದರೆಗಳನ್ನು ಹಿಮ್ಮೆಟ್ಟಿಸುವ ಅಥವಾ ಮೀರುವ ನಿರೀಕ್ಷೆಯಿದೆ"(102:p6).

ಅಕ್ಕಿಯ ಕೊರತೆಯ ಹಿನ್ನೆಲೆಯಲ್ಲಿ ಆಹಾರ ಸಚಿವ ಕೆ.ಸಿ. ಜಾರ್ಜ್ ಅವರು ಜನರ ಆಹಾರ ಪದ್ಧತಿಯನ್ನು ಬದಲಾಯಿಸುವ ವಿನಮ್ರ ಪ್ರಯತ್ನವನ್ನು ಮಾಡಿದರು. ಅವರು ಅಕ್ಕಿ ಬದಲಿಗೆ ಗೋಧಿ ಮತ್ತು ಮೆಕ್ರೋನಿ ಬಳಸಲು ಜನರಿಗೆ ಸಲಹೆ ನೀಡಿದರು(84:20.08.57). ಟಪಿಯೋಕಾ ಅಥವಾ ಮರಗೆಣಸಿನಿಂದ ತಯಾರಿಸಿದ ಮೆಕ್ರೋನಿ ಒಂದು ಪ್ರಮುಖ ಆಹಾರವಾಗಿದೆ. ಮೈಸೂರಿನಲ್ಲಿರುವ ಅದರ ತಯಾರಿಕಾ ಘಟಕದಿಂದ ಕೇರಳಕ್ಕೆ ಮೆಕ್ರೋನಿ ಪೂರೈಕೆ ಮಾಡಲು ಕೇಂದ್ರ ಸರ್ಕಾರ ಮುಂದಾಗಿದೆ ಎನ್ನುವ ವರದಿಗಳು ಬಂದಿದ್ದವು. ಮೆಕ್ರೋನಿಯ ವಿಷಯವು, ಸರ್ಕಾರದ ವಿರುದ್ಧ ಆರೋಪ ಮತ್ತು ಅಪಹಾಸ್ಯಗಳನ್ನು ಮಾಡುವುದಕ್ಕೆ ದಾರಿ ಮಾಡಿಕೊಟ್ಟಿತು. ಅಲಪ್ಪುಳದಲ್ಲಿ ಕಾರ್ಮಿಕನಾಗಿದ್ದ ಕೆ.ಎಸ್. ರಾಜನ್, 'ಭಗವಾನ್ ಮೆಕ್ರೋನಿ' ಎನ್ನುವ ಕಥಾಪ್ರಸಂಗಂ (ಹರಿಕಥೆಯಂಥ ಕೇರಳದ ಒಂದು ಕಲಾಪ್ರಕಾರ)ಆ ದಿನಗಳಲ್ಲಿ ಕೇರಳದಾದ್ಯಂತ ಕಾಂಗ್ರೆಸ್ ಸಭೆಗಳಲ್ಲಿ ಮುಖ್ಯ ಕಾರ್ಯಕ್ರಮವನ್ನಾಗಿ ಹಮ್ಮಿಕೊಳ್ಳಲಾಗುತ್ತಿತ್ತು. ಅಶ್ಲೀಲವಾದ ದ್ವಂದ್ವಾರ್ಥ ಪದಪ್ರಯೋಗಗಳೇ ತುಂಬಿಕೊಂಡಿದ್ದ ಈ ಕಥಾಪ್ರಸಂಗವು, ಸರ್ಕಾರದ ವಿರುದ್ಧದ ಸಭೆಗಳಲ್ಲಿ ಜನರನ್ನು ಪ್ರಚೋದಿಸಿತು. 1957ರ ಆಹಾರ ಬಿಕ್ಕಟ್ಟಿನ ಸಂದರ್ಭದಲ್ಲಿ, ಜನರ ಆಹಾರಕ್ರಮದಲ್ಲಿ ತಾತ್ಕಾಲಿಕವಾಗಿಯಾಗಿ ಬದಲಾವಣೆ ತರುವ ಪ್ರಯತ್ನಗಳನ್ನು ಆಹಾರ ಸಚಿವರಾಗಿದ್ದ ಕೆ.ಸಿ ಜಾರ್ಜ್ ಮತ್ತು ಸರ್ಕಾರವು

ನಡೆಸಿತ್ತಾದರೂ, ಅದು ಫಲಕಾರಿಯಾಗಲಿಲ್ಲ*(69:p142).

ಫೆಬ್ರವರಿ 22, 1958ರಂದು ಶಾಸಕಾಂಗ ಸಭೆಯನ್ನು ಉದ್ದೇಶಿಸಿ ಮಾತನಾಡಿದ ರಾಜ್ಯಪಾಲರು, ಆಹಾರದ ಕೊರತೆಯ ಗಂಭೀರತೆಯ ಬಗ್ಗೆ ಪುನರುಚ್ಚರಿಸಿದರು.

> "ಕಳೆದ ವರ್ಷದ ಏಪ್ರಿಲ್ ಅಂತ್ಯದಲ್ಲಿ ಕೇರಳದಲ್ಲಿ ಹದಗೆಡುತ್ತಿರುವ ಆಹಾರಧಾನ್ಯದ ಕೊರತೆಯ ಬಗ್ಗೆ ನಾನು ನನ್ನ ಸರಕಾರಕ್ಕಿದ್ದ ಕಳವಳ ವ್ಯಕ್ತಪಡಿಸಿದ್ದೆ. ನಂತರದ ಬೆಳವಣಿಗೆಗಳು ಈ ಸಮಸ್ಯೆಯು ಇಡೀ ದೇಶದ ಮೇಲೆ ಗಂಭೀರ ಪರಿಣಾಮ ಬೀರುತ್ತಿದೆ ಎನ್ನುವುದನ್ನು ತೋರಿಸುತ್ತಿವೆ... ಆದರೂ ಈ ಸಮಸ್ಯೆ ಬೇರೆ ಯಾವುದೇ ರಾಜ್ಯಗಳಿಗಿಂತ ನಮ್ಮ ರಾಜ್ಯದಲ್ಲಿ ಹೆಚ್ಚು ಗಂಭೀರವಾಗಿ ಕಂಡು ಬರುತ್ತಿದೆ. ಮೊದಲನೆಯದಾಗಿ, ಇತರ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ರಾಜ್ಯವು ಅತಿ ಹೆಚ್ಚು ಆಹಾರ ಕೊರತೆಯನ್ನು ಅನುಭವಿಸುತ್ತಿದೆ. ಎರಡನೆಯದಾಗಿ, ಪ್ರಸ್ತುತ ಆಹಾರ ಧಾನ್ಯಗಳ ಕೊರತೆಯೆನ್ನುವುದು, ಮುಖ್ಯವಾಗಿ ಅಕ್ಕಿಯ ಕೊರತೆಯಾಗಿದೆ. ನಮ್ಮ ರಾಜ್ಯದ ಪ್ರಮುಖ ಆಹಾರ ಅಕ್ಕಿ. ಈ ಕಾರಣಗಳಿಂದಾಗಿ ಮುಂದಿನ ಕೆಲವು ವರ್ಷಗಳವರೆಗೂ ಈ ಪರಿಸ್ಥಿತಿ ಮುಂದುವರಿಯುವುದರ ಎಲ್ಲಾ ಲಕ್ಷಣಗಳು ಕಾಣುತ್ತಿದೆ"(102:p10).

ಈ ಬಗ್ಗೆ ಒಂದು ಶಾಶ್ವತ ಪರಿಹಾರ ಕಂಡುಕೊಳ್ಳಲು ಸಾಕಷ್ಟು ಸಮಯ ಬೇಕಾಗುವುದರಿಂದ, ಎಲ್ಲಾ ಪಕ್ಷಗಳು ಈ ನಿಟ್ಟಿನಲ್ಲಿ ಸಹಕರಿಸಬೇಕೆಂದು ರಾಜ್ಯಪಾಲರು ವಿನಂತಿಸಿದರು. ಹಣಕಾಸು ಸಚಿವ ಸಿ. ಅಚ್ಯುತ ಮೆನನ್ ತಮ್ಮ ಬಜೆಟ್ ಭಾಷಣದಲ್ಲೂ ಅದನ್ನೇ ಪುನರುಚ್ಚರಿಸಿದ್ದಾರೆ (107:08.06.58). ಆದರೆ ವಿರೋಧಪಕ್ಷಗಳು ಮತ್ತು ಹೆಚ್ಚಿನ ಪತ್ರಿಕೆಗಳು ಸರಕಾರದ ಮನವಿಯನ್ನು ಸ್ವಾಗತಿಸಲಿಲ್ಲ. ಅವರ ಕಮ್ಯುನಿಸ್ಟ್ ವಿರೋಧಿ ಮತ್ತು ಸರ್ಕಾರ ವಿರೋಧಿ ನಿಲುವುಗಳೇ ಇದಕ್ಕೆ ಕಾರಣ(183:p21). ಆಹಾರದ ಸಮಸ್ಯೆಯನ್ನು ಪರಿಹರಿಸಲು ಅಕ್ಕಿ ಉತ್ಪಾದನೆಯನ್ನು ಈಗಿರುವುದಕ್ಕಿಂತ ನಾಲ್ಕುಪಟ್ಟು ಹೆಚ್ಚಿಸಬೇಕು ಎಂದು ರಾಜ್ಯಪಾಲರು ಸೂಚಿಸಿದರು. ಆದರೆ ಪ್ರಸ್ತುತ ವಾಸ್ತವತೆಗಳನ್ನು ಪರಿಗಣಿಸಿ ಪ್ರಸ್ತುತ ಉತ್ಪಾದಕತೆಯನ್ನು ದ್ವಿಗುಣಗೊಳಿಸುವುದಕ್ಕಾದರೂ ಪ್ರಯತ್ನಿಸುವುದು ಅನಿವಾರ್ಯ ಎಂದು ಅವರು ಹೇಳಿದರು(102:p11). ಆದರೆ ಕಮ್ಯುನಿಸ್ಟ್ ಸರ್ಕಾರದ ಈ ಗುರಿಯನ್ನು ಸಹ ಸಾಧಿಸಲು ಸಾಧ್ಯವಾಗಲಿಲ್ಲ.

ಆಹಾರ ಉತ್ಪಾದನೆಯನ್ನು ಹೆಚ್ಚಿಸಲು ಸರ್ಕಾರವು ಹಲವಾರು ನೀರಾವರಿ ಯೋಜನೆಗಳನ್ನು ಪ್ರಾರಂಭಿಸಿ, ಹಸಿರು ಗೊಬ್ಬರದ ದೊಡ್ಡ ಪ್ರಮಾಣದ ಬಳಕೆಯನ್ನು ಉತ್ತೇಜಿಸುವ ಉದ್ದೇಶದಿಂದ ಹಲವಾರು ಕ್ರಮಗಳನ್ನು ಸರ್ಕಾರ ಕೈಗೊಂಡಿತು(107:12.05.58;167:). ಜೂನ್ 1958ರಲ್ಲಿ, ಹಸಿರು ಗೊಬ್ಬರದ ಲಭ್ಯತೆಯನ್ನು ಖಚಿತಪಡಿಸಿಕೊಳ್ಳಲು ಸರ್ಕಾರವು ಗ್ಲಿರಿಸಿಡಿಯಾ (ಶಿಮಕೊನ್ನ) ಎನ್ನುವ

* ಲೇಖಕ ಮತ್ತು ಕಾಂಗ್ರೆಸ್ ಕಾರ್ಯಕರ್ತ ಕೆ.ಎಂ.ಚುಮ್ಮರ್‌ರೊಂದಿಗೆ 26.1.2010ರಂದು ಪಾಲಾ ಪ್ರವಿತಾನಂನಲ್ಲಿರುವ ಅವರ ನಿವಾಸದಲ್ಲಿ ನಡೆಸಿದ ಸಂದರ್ಶನ

ಒಂದು ತಳಿಯನ್ನು ವ್ಯಾಪಕವಾಗಿ ಬೆಳೆಸಲು ಪ್ರಚಾರ ಪ್ರಾರಂಭಿಸಿತು(48:p96). ಜೂನ್ 1958ರ ಮೊದಲವಾರ 'ಗ್ಲಿರಿಸಿಡಿಯಾ ವಾರ' (Glyricidia Week) ಎನ್ನುವ ಹೆಸರಿನಲ್ಲಿ ಇಡೀ ಕೇರಳದಲ್ಲಿ ಆಚರಿಸಿತು(120:p12). ಗ್ಲಿರಿಸಿಡಿಯಾ ಸಪ್ತಾಹ ಆಚರಣೆಯಲ್ಲಿ ರೈತ ಸಂಘಟನೆಗಳು, ಜನಪರ ಸಂಘಟನೆಗಳು, ರಾಜಕೀಯದ ಕಾರ್ಯಕರ್ತರು, ಮತ್ತು ಸಾಮಾಜಿಕ ಕಾರ್ಯಕರ್ತರೆಲ್ಲರೂ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ ಪರಿಣಾಮವಾಗಿ ಅಭಿಯಾನಕ್ಕೆ ಜನಪ್ರಿಯ ಪ್ರತಿಕ್ರಿಯೆ ದೊರೆಯಿತು(107:08.06.58). ಗ್ಲಿರಿಸಿಡಿಯಾದ ಈ ಅಭಿಯಾನದಿಂದ ಪ್ರಭಾವಿತರಾದ ಯೋಜನಾ ಆಯೋಗವು ಕೇರಳದ ಮಾದರಿಯನ್ನು ಅನುಸರಿಸಲು ಇತರ ರಾಜ್ಯಗಳಿಗೆ ಕರೆಕೊಟ್ಟಿತು(50:12.06.58).

### ಆಂಧ್ರ ಅಕ್ಕಿ ಒಪ್ಪಂದ

1956–57ರ ಅವಧಿಯಲ್ಲಿ ದೇಶದಾದ್ಯಂತ ಆಹಾರ ಪರಿಸ್ಥಿತಿ ತುಂಬಾನೇ ಭಯಾನಕವಾಗಿತ್ತು (84:18.08.57; 166:p2). ಲಾಭಕೋರತನದ, ದುರಾಸೆತನದ ವ್ಯಾಪಾರಸ್ಥರಿಂದ ಜನರನ್ನು ರಕ್ಷಿಸಲು, ಸರ್ಕಾರ ಸಂಸ್ಕರಿಸಿದ ಅಕ್ಕಿ ಮತ್ತು ಇತರ ಆಹಾರ ಧಾನ್ಯಗಳನ್ನು ಸಮಂಜಸವಾದ ಬೆಲೆಯಲ್ಲಿ ಖರೀದಿಸಿ. ಜನರ ನಡುವೆ ವಿತರಿಸಲು ಉದ್ದೇಶಿಸಲಾಗಿದೆ, ಎಂದು ಹಣಕಾಸು ಸಚಿವರಾದ ಸಿ.ಅಚ್ಯುತ ಮೆನನ್‌ರವರು ಜೂನ್ 1957ರ ತಮ್ಮ ಚೊಚ್ಚಲ ಬಜೆಟ್ ಭಾಷಣದಲ್ಲಿ ಘೋಷಿಸಿದರು(107:10.06.57;69:).

1956ರಲ್ಲಿ, ಕೇಂದ್ರ ಸರ್ಕಾರವು ಆಹಾರ ಕೊರತೆಯನ್ನು ಎದುರಿಸುತ್ತಿರುವ ಕೇರಳದ ಬಗ್ಗೆ ತನ್ನ ಜವಾಬ್ದಾರಿಯನ್ನು ಪೂರೈಸುವುದರ ಭಾಗವಾಗಿ ಆಹಾರ ಧಾನ್ಯಗಳ ಒಂದು ಪಾಲು ಲಭ್ಯವಾಗುವಂತೆ ಮಾಡಿತು. 1956–57ರ ಅವಧಿಯಲ್ಲಿ ಇಂತಹ ಕೇಂದ್ರ ಹಂಚಿಕೆಯ ಫಲವಾಗಿ ಪ್ರತಿ ತಿಂಗಳಿಗೆ ಸುಮಾರು 25,000 ಟನ್‌ಗಳಷ್ಟು ಆಹಾರ ಬಂದಿತ್ತು(45:p139). ಈ ಬಗ್ಗೆ ಇಎಂಎಸ್ ಹೀಗೆ ಬರೆಯುತ್ತಾರೆ.

> "ನಮ್ಮ ಸರಕಾರ ಅಧಿಕಾರಕ್ಕೆ ಬಂದ ಎರಡು ತಿಂಗಳ ನಂತರ ಕೇಂದ್ರ ಸರಕಾರ ಏಕಾಏಕಿ ಕೇರಳಕ್ಕೆ ಹಣ ಮಂಜೂರು ಮಾಡುವುದನ್ನು ನಿಲ್ಲಿಸಿದೆ. 1957ರ ಜೂನ್‌ನಲ್ಲಿ ನಡೆದ ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಸಭೆಯಲ್ಲಿ ಪ್ರಸ್ತಾಪಿಸಲಾದ 'ದಕ್ಷಿಣ ಆಹಾರ ವಲಯ' ಜುಲೈನಲ್ಲಿ ಅಸ್ತಿತ್ವಕ್ಕೆ ಬಂದಿತು. ಆಂಧ್ರಪ್ರದೇಶದ ಹೆಚ್ಚುವರಿ ಆಹಾರಧಾನ್ಯವನ್ನು ಬಳಸಿಕೊಂಡು ಕೇರಳದ ದೊಡ್ಡ ಕೊರತೆಯನ್ನೂ, ಮದ್ರಾಸ್ ಮತ್ತು ಮೈಸೂರಿನ ಸಣ್ಣ ಕೊರತೆಯನ್ನೂ ಸರಿದೂಗಿಸಬಹುದೆನ್ನುವ ತಿಳುವಳಿಕೆಯೇ ಈ ಆಹಾರ ವಲಯವನ್ನು ರಚಿಸುವ ನಿರ್ಧಾರದ ಹಿಂದೆ ಇದ್ದಿದ್ದು. ಈ ವಲಯದಿಂದ ಇತರ ರಾಜ್ಯಗಳಿಗೆ ಆಗುತ್ತಿದ್ದ ಪೂರೈಕೆಯನ್ನು ಸಂಪೂರ್ಣವಾಗಿ ನಿಲ್ಲಿಸುವುದು ಮತ್ತು ಈ ವಲಯದ ಸರಕುಗಳ ಮುಕ್ತ ಸಾಗಾಣಿಕೆಗೆ ಅನುಮತಿ ನೀಡುವುದು, ಈ ತಿಳುವಳಿಕೆಯ ಭಾಗವಾಗಿತ್ತು. ನಮ್ಮ ಪ್ರತಿನಿಧಿಗಳು ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಮತ್ತು ಆಹಾರ

ಸಚಿವಾಲಯದೊಂದಿಗಿನ ಮುಂದುವರಿದ ಚರ್ಚೆಗಳಲ್ಲಿ ಈ ವ್ಯವಸ್ಥೆಯ ಕಾರ್ಯ ಸಾಧ್ಯತೆಗಳ ಬಗ್ಗೆ ಕಳವಳ ವ್ಯಕ್ತಪಡಿಸಿದರು. ಕೇಂದ್ರ ಸರ್ಕಾರ ನಮಗೆ ವಿತರಿಸಲಾಗುತ್ತಿದ್ದ ರಾಜ್ಯದ ದರದಲ್ಲೇ ನಿರ್ದಿಷ್ಟ ರಾಜ್ಯದ ಅಗತ್ಯಗಳನ್ನು ಪೂರೈಸಲು ಸಾಕಾಗುವಷ್ಟು ಪಾಲು ಪ್ರಸ್ತಾವಿತ ದಕ್ಷಿಣ ಆಹಾರ ವಲಯದಲ್ಲಿ ಸರಕುಗಳ ಮುಕ್ತ ಸಾಗಾಣಿಕೆಯ ಮೂಲಕ ಹಂಚಿಕೊಳ್ಳುವ ವ್ಯವಸ್ಥೆ ಲಭ್ಯವಿದ್ದರೆ, ನಮ್ಮ ಪ್ರತಿನಿಧಿಗಳಿಗೆ ಈ ವ್ಯವಸ್ಥೆಯನ್ನು ವಿರೋಧಿಸುವ ಅಗತ್ಯವಿರುವುದಿಲ್ಲ. ಒಂದು ವೇಳೆ, ಈ ವ್ಯವಸ್ಥೆಯು ಪರಿಣಾಮಕಾರಿಯಾಗದಿದ್ದರೆ, ಈ ರಾಜ್ಯದ ಪಾಲಿನ ವಿತರಣೆಯ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಕೇಂದ್ರ ಹಿಂದೇಟು ಹಾಕಬಾರದು ಎಂದು ವಾದಿಸಿದರು(45:p139).

ಕಮ್ಯುನಿಸ್ಟ್ ನೇತೃತ್ವದ ಸರ್ಕಾರದ ಕಾಳಜಿ ಅಥವಾ ಆತಂಕ ಆಧಾರರಹಿತವಾದದ್ದಲ್ಲ ಎಂದು ಅತಿ ಶೀಘ್ರದಲ್ಲೇ ಅರಿವಾಯಿತು. ಸೀಲಿಂಗ್ ಬೆಲೆಯಂತೆ ಕೇಂದ್ರ ಸರ್ಕಾರವು ಘೋಷಿಸಿದ ದರಗಳಲ್ಲಿಯೇಸಾಮಾನ್ಯ ವ್ಯಾಪಾರ ಚಕ್ರದಂತೆ ಆಂಧ್ರಪ್ರದೇಶದಿಂದ ಅಕ್ಕಿ ದೊರೆಯಿತು(183:p20). ದಕ್ಷಿಣ ಆಹಾರ ವಲಯ* ಅಸ್ತಿತ್ವಕ್ಕೆ ಬಂದ ಮೊದಲ ಕೆಲವು ತಿಂಗಳುಗಳಲ್ಲಿ ಮಾತ್ರ ಈ ತರಹದ ವಿತರಣೆಗಳು ನಡೆದವು. ಪ್ರದೇಶದೊಳಗಿನ ಸರಕುಗಳ ಮುಕ್ತ ಸಾಗಾಣಿಕೆಯಿಂದಾಗಿ, ಸೀಲಿಂಗ್‌ಗಿಂತ ಕೆಳಗಿನ ಬೆಲೆಗೆ ತಂದು ನಿಲ್ಲಿಸಲು ಸಾಧ್ಯವಾಗಲಿಲ್ಲ. ಖಾಸಗಿ ವ್ಯಾಪಾರಿಗಳಿಗೆ ಸೀಲಿಂಗ್‌ಗಿಂತ ಮೇಲಿನ ಬೆಲೆಯನ್ನು ಪಾವತಿಸಲು ಮತ್ತು ಸರಕುಗಳನ್ನು ಪಡೆಯಲು ಸಾಧ್ಯವಾದವು. ಕಾರ್ಯಸಾಧ್ಯತೆಗಾಗಿ ಖಾಸಗಿ ವ್ಯಾಪಾರಿಗಳು, ಅಕ್ರಮ ಬೆಲೆಯನ್ನು ಅವಲಂಬಿಸಿದರು(183:). ಸೀಲಿಂಗ್‌ಗಿಂತ ಹೆಚ್ಚು ಹಣ ನೀಡಿ ಆಂಧ್ರಪ್ರದೇಶದಿಂದ ಅಕ್ಕಿಯನ್ನು ಖಾಸಗಿ ವ್ಯಾಪಾರಿಗಳು ಖರೀದಿಸಿ, ಕೇರಳದಲ್ಲಿ ಹೆಚ್ಚಿನ ಬೆಲೆಗೆ ಮಾರಾಟ ಮಾಡುವ ದಂಧೆ ಆರಂಭವಾಯಿತು(164:p20). ಅದಕ್ಕಾಗಿಯೇ ಆಂಧ್ರಪ್ರದೇಶದಲ್ಲಿ ಬೆಲೆ ನಿಯಂತ್ರಣಕ್ಕೆ ವ್ಯವಸ್ಥೆ ಮಾಡುವಂತೆ, ಕೇಂದ್ರ ಸರ್ಕಾರಕ್ಕೆ ರಾಜ್ಯ ಸರ್ಕಾರ ಮನವಿ ಮಾಡಿದ್ದು(164:p30). ಆ ಪ್ರಕಾರ ಆಂಧ್ರಪ್ರದೇಶದಿಂದ ಕೇರಳಕ್ಕೆ ನಿಯಂತ್ರಿತ ಬೆಲೆಯಲ್ಲಿ ಸರಕುಗಳು ಖರೀದಿಸಬಹುದಾಗಿರುತ್ತದೆ. ಹಾಗಲ್ಲವಾದಲ್ಲಿ, ಇತರ ಯಾವುದೇ ಸ್ಟಾಕ್/ ಉಗ್ರಾಣಗಳಿಂದ ಕೇರಳಕ್ಕೆ ಅಗತ್ಯದ ಪಾಲನ್ನು ಕೇಂದ್ರವು ಅಗತ್ಯವಾಗಿ ನೀಡಬೇಕಾಗಿತ್ತು. ಆದರೆ ಕೇಂದ್ರ ಸರಕಾರ ನಿಷ್ಕ್ರಿಯತೆ ತೋರಿಸಿತು. ಆಂಧ್ರಪ್ರದೇಶದಿಂದ ಸೀಲಿಂಗ್ ಬೆಲೆಗೋ ಅದಕ್ಕೂ ಕಡಿಮೆದರದ ಬೆಲೆಗೋಅಕ್ಕಿಯನ್ನು ಕೊಳ್ಳಲು ಕೇಂದ್ರ ಸರ್ಕಾರವು ಕೇರಳ ಸರ್ಕಾರವನ್ನು ಕೇಳಿತು(183:p4).

ಕಮ್ಯುನಿಸ್ಟ್ ಸರ್ಕಾರ ಆಂಧ್ರಪ್ರದೇಶಕ್ಕೆ ಅಧಿಕಾರಿಗಳನ್ನು ಕಳುಹಿಸಿ ಅಕ್ಕಿಯನ್ನು ಖರೀದಿಸಿತು. ಏಕೆಂದರೆ ಅಗತ್ಯವು ತುರ್ತು ಸ್ವಭಾವದ್ದಾಗಿದ್ದರಿಂದ, ಟೆಂಡರ್ ಕರೆಯುವುದು, ಅತ್ಯಂತ ಕಡಿಮೆ ದರದಲ್ಲಿ ವಿತರಣೆ ಮಾಡಲು ಸಿದ್ಧರಿರುವ

* ಜುಲೈ 1957 ರಲ್ಲಿ ಹೈದರಾಬಾದ್‌ನಲ್ಲಿ ದಕ್ಷಿಣ ಭಾರತದ ರಾಜ್ಯಗಳ 'ದಕ್ಷಿಣ ಆಹಾರ ವಲಯ' ರಚನೆಯಾಯಿತು.

ವ್ಯಕ್ತಿಗಳೊಂದಿಗೆ ಒಪ್ಪಂದ ಮಾಡಿಕೊಳ್ಳುವುದು ಮುಂತಾದ ಔಪಚಾರಿಕತೆಗಳನ್ನು ಪಾಲಿಸಲು ಸಾಧ್ಯವಾಗಲಿಲ್ಲ(152:). ಟಿ. ಶ್ರೀರಾಮಲು ಮತ್ತು ಪಿ.ಸೂರ್ಯನಾರಾಯಣ ಎನ್ನುವವರ ಒಡೆತನವಿರುವ ಕಂಪನಿಯೊಂದಿಗೆ ಸರ್ಕಾರ ಒಪ್ಪಂದಕ್ಕೆ ಸಹಿ ಹಾಕಿತು. ಪ್ರಸ್ತುತ ಮಾರುಕಟ್ಟೆ ಬೆಲೆಗೆ ಅಕ್ಕಿ ಲಭ್ಯವಾಗುವಂತೆ ಮಾಡಬೇಕು ಎನ್ನುವ ಬಗ್ಗೆ ಒಪ್ಪಂದವಾಗಿತ್ತು. ತಡವಾಗದೆ ಅಕ್ಕಿ ಬಂದು ತಲುಪಿತು(107:05.04.59;84:08.04.59). ಆದರೆ ಟೆಂಡರ್‌ಗೆ ಆಹ್ವಾನಿಸಲಿಲ್ಲ ಎನ್ನುವ ಗಲಾಟೆ ಭುಗಿಲೆದ್ದಿತು(102:02.09.57,27.12 .57;96:p45). ವರ್ತಕರಿಗೆ ಲಭಿಸಬೇಕಾಗಿರುವುದಕ್ಕಿಂತಲೂ ಹೆಚ್ಚಿನ ಹಣ ನೀಡಲಾಗಿದೆ ಎನ್ನುವ ಆರೋಪವೂ ಕೇಳಿಬಂತು. ಬೆಲೆಯ ವ್ಯತ್ಯಾಸವು ಲಂಚದ ರೂಪದಲ್ಲಿ ಕಮ್ಯುನಿಸ್ಟ್ ಪಕ್ಷದ ಜೇಬಿಗೆ ಇಳಿಸಿದೆ ಎನ್ನುವ ಆಪಾದನೆಯನ್ನೂ ಮಾಡಲಾಯಿತು. ಕಮ್ಯುನಿಸ್ಟ್ ಸರ್ಕಾರ ಮತ್ತು ಕಮ್ಯುನಿಸ್ಟ್ ಪಕ್ಷದ ವಿರುದ್ಧದ ನಂತರ ನಡೆದ ಪ್ರಚಾರಗಳಲ್ಲಿ, ಈ ವಿಚಾರ ಪ್ರಮುಖ ಸ್ಥಾನ ಪಡೆಯಲು ಎಡೆಮಾಡಿಕೊಟ್ಟಿತು(102:p163;7:13.03.59;107: 15.13.59;84:18.04.59)*.

## ಜನತಾ ಸಲಹಾ ಸಮಿತಿಗಳು

ಆಡಳಿತದಲ್ಲಿ ಜನರ ಭಾಗವಹಿಸುವಿಕೆಯನ್ನು ಹೆಚ್ಚಿಸುವ ಸಲುವಾಗಿ ಮೊದಲ ಕಮ್ಯುನಿಸ್ಟ್ ಸರ್ಕಾರ ಸಲಹಾ ಸಮಿತಿಗಳನ್ನು ರಚಿಸಿತು. ಆಹಾರ ಸಮಸ್ಯೆಯನ್ನು ಪರಿಹರಿಸಲು ವಿವಿಧ ಕಾರ್ಯಕ್ರಮಗಳ ಭಾಗವಾಗಿ ಸರ್ಕಾರ 'ಜನತಾ ಆಹಾರ ಸಮಿತಿ' ರಚಿಸಿತು. ಎಲ್ಲಾ ಪ್ರಮುಖ ರಾಜಕೀಯ ಪಕ್ಷಗಳ ಪ್ರತಿನಿಧಿಗಳನ್ನು ಒಳಗೊಂಡಿರುವ ಈ ಸಮಿತಿಯು, ತಾಲೂಕಿನಲ್ಲಿ ನ್ಯಾಯಬೆಲೆ ಅಂಗಡಿಗಳ ಸಂಖ್ಯೆಯನ್ನು ನಿರ್ಧರಿಸುವಲ್ಲಿ ತಹಸಿಲ್ದಾರರಿಗೆ ಸಲಹೆ ನೀಡುವುದು, ಅಂಗಡಿಗಳಿಗಾಗಿ ಸೂಕ್ತವಾದ ಸ್ಥಳವನ್ನು ಕಂಡುಕೊಳ್ಳುವುದು, ಅಂಗಡಿ ನಡೆಸಲು ಸೂಕ್ತವಾದ ವ್ಯಕ್ತಿಯನ್ನು ಕಂಡುಕೊಳ್ಳುವುದು ಇವೇ ಮುಂತಾದ ಜವಾಬ್ದಾರಿಗಳನ್ನು ಸಮಿತಿಯು ಹೊಂದಿದ್ದವು. ಗುರುತಿನ ಚೀಟಿಗೆ ಅರ್ಹರಾಗಿರುವ, ಕಡಿಮೆ ಆದಾಯವಿರುವ ಕುಟುಂಬಗಳನ್ನು ಕಂಡುಕೊಳ್ಳುವುದಕ್ಕಾಗಿ ಇದೇ ತರಹದ ಸಮಿತಿಗಳು ರೂಪುಗೊಂಡವು. ನ್ಯಾಯಬೆಲೆ ಅಂಗಡಿಗಳು ಸಮರ್ಥವಾಗಿ ಕಾರ್ಯನಿರ್ವಹಿಸುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಸಹ ಸಮಿತಿಗೆ ವಹಿಸಲಾಗಿತ್ತು. ಅಂತಹ ತಾಲೂಕು/ಗ್ರಾಮ ಆಹಾರ ಸಮಿತಿಗಳು, ರಾಜ್ಯ ಮಟ್ಟದ ಸರ್ವಪಕ್ಷ ಆಹಾರ ಸಲಹಾ ಸಮಿತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತದೆ.

---

* ಆಂಧ್ರ ಅಕ್ಕಿ ಒಪ್ಪಂದಕ್ಕೆ ಸಂಬಂಧಿಸಿದಂತೆ ಉದ್ಭವಿಸಿರುವ ಭ್ರಷ್ಟಾಚಾರದ ಆರೋಪಗಳು ತನಿಖೆಗೆ ನ್ಯಾಯಮೂರ್ತಿ ಪಿ. ಟಿ. ರಾಮನ್ ನಾಯರ್‌ರವರ ನೇತೃತ್ವದಲ್ಲಿ, ಸರ್ಕಾರ ಆಂಧ್ರ ಅಕ್ಕಿ ಡೀಲ್ ವಿಚಾರಣಾ ಆಯೋಗವನ್ನು ನೇಮಿಸಲಾಯಿತು. ಸಾಕ್ಷಿಗಳನ್ನು ಪರೀಕ್ಷಿಸಿ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸುವ ಮೂಲಕ ವಿವರವಾದ ತನಿಖೆ ನಡೆಸಲಾಯಿತು. ಆಯೋಗವು ತನ್ನ ವರದಿಯನ್ನು ಸಲ್ಲಿಸಿದ ನಂತರ, ಸರ್ಕಾರಕ್ಕೆ ಆಂಧ್ರ ಅಕ್ಕಿ ಒಪ್ಪಂದದಿಂದಾಗಿ ತಪ್ಪಿಸಬಹುದಾದ ರೂ.112,500 ನಷ್ಟ ಉಂಟಾಗಿದೆ ಎಂದು ಆಯೋಗದ ವಿಚಾರಣಾ ಫಲಗಳು ತಿಳಿಸಿವೆ

ಪ್ರತಿಪಕ್ಷಗಳ ಸಂವಿಧಾನೇತರ ವಿಧಾನಗಳು ಮತ್ತು ಕೇರಳ ಸರಕಾರಕ್ಕೆ ಸಾರ್ವಜನಿಕ ಬೆಂಬಲ
ವ್ಯಂಗ್ಯಚಿತ್ರ: ರಂಗನಾಥನ್

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು



ಆಹಾರ ವಿತರಣೆಯಲ್ಲಿನ ಅಕ್ರಮಗಳನ್ನು ತಪ್ಪಿಸುವುದು ತಾಲೂಕು/ಗ್ರಾಮ ಸಮಿತಿಗಳ ಕರ್ತವ್ಯವಾಗಿರುತ್ತದೆ. ಹೀಗೆ ರಾಜ್ಯಕ್ಕೆ ಕೇಂದ್ರದ ಪಾಲು ಸರಿಯಾಗಿ ವಿತರಣೆಯಾಗುವುದನ್ನು ಖಾತ್ರಿಪಡಿಸಲಾಯಿತು(40:01.09.57). ನಿಖರವಾಗಿ ವ್ಯಾಖ್ಯಾನಿಸಲಾದ ಕೆಲವು ಚಟುವಟಿಕೆಗಳನ್ನು ಕೈಗೊಳ್ಳಲು ವಿವಿಧ ಹಂತಗಳಲ್ಲಿ ಜನತಾ ಸಮಿತಿಗಳನ್ನು ರಚಿಸುವುದು, ಪ್ರತಿ ಇಲಾಖೆಯು ಜನರ ನಿರೀಕ್ಷೆಗೆ ತಕ್ಕಂತೆ ದಕ್ಷತೆಯಿಂದ ಸ್ಪಂದಿಸಲು ಸಹಾಯ ಮಾಡುತ್ತದೆ ಎಂದು ಸರ್ಕಾರ ಭಾವಿಸಿತು. ಆದ್ದರಿಂದ ಅರಣ್ಯ ಭೂಮಿ, ಶಿಕ್ಷಣ, ಆರೋಗ್ಯ ಮತ್ತು ಲೋಕೋಪಯೋಗಿ ಇಲಾಖೆ, ಭೂಕಂದಾಯ ಮತ್ತಿತರ ಇಲಾಖೆಗಳಲ್ಲಿ ಸರ್ಕಾರ ಅಧಿಕಾರಿಗಳಿಗೆ ನೆರವಾಗಲು ಜನತಾ ಸಮಿತಿಗಳನ್ನು ರಚಿಸಲಾಯಿತು. ಬಂಜರು ಭೂಮಿಯ ವಿತರಣೆ, ಹೊಸ ಆಸ್ಪತ್ರೆ ಮತ್ತು ಶಾಲೆಗಳಿಗೆ ಸ್ಥಳನಿರ್ಣಯ, ಹೊಸ ರಸ್ತೆಗಳ ನಿರ್ಮಾಣ ಇವೇ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಈ ಸಮಿತಿಗಳು ಜನಬೆಂಬಲದೊಂದಿಗೆ ಯಶಸ್ವಿಯಾಗಿ ಕೆಲಸ ಮಾಡಿವೆ(40:10.08.58).

## ಶಿಕ್ಷಣ ಕ್ಷೇತ್ರ

ಮೊದಲ ಕಮ್ಯುನಿಸ್ಟ್ ಮಂತ್ರಿಮಂಡಲ ಮತ್ತು ಅದರ ಶಿಕ್ಷಣ ಸಚಿವ ಜೋಸೆಫ್ ಮುಂಡಸ್ಸೆರಿಯವರು, ರಾಜ್ಯದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿಪರವಾದ ಬದಲಾವಣೆಗಳನ್ನು ತರಲು ಅವಿರತವಾಗಿ ಶ್ರಮಿಸಿದರು. ಶಿಕ್ಷಣದ ಸಮಗ್ರ ಅಭಿವೃದ್ಧಿಗೆ ಹಲವಾರು ಕ್ರಮಗಳನ್ನು ಕೈಗೊಂಡರು.ಕೇರಳ ಶಿಕ್ಷಣ ಕಾಯಿದೆ, 1958, ಐಕ್ಯಕೇರಳದ ಇತಿಹಾಸದಲ್ಲಿಯೇ ಅತ್ಯಂತ ವಿವಾದಾತ್ಮಕ ಶಾಸನವಾಗಿತ್ತು(150:p84,85). ಕಮ್ಯುನಿಸ್ಟ್ ಮಂತ್ರಿಮಂಡಲ ಮಂಡಿಸಿದ ಮಸೂದೆಯು, ಖಾಸಗಿ ಶಿಕ್ಷಣದ ಏಜೆನ್ಸಿಗಳನ್ನು ನಿಯಂತ್ರಿಸಲು, ಶಾಲಾ ಶಿಕ್ಷಣವನ್ನು ಆಮುಲಾಗ್ರವಾಗಿ ಪುನರ್‌ರಚಿಸಲು ಗುರಿಯಾಗಿರಿಸಿಕೊಂಡಿದ್ದರೂ ಈ ಕಾಯಿದೆಯು, ರಾಜ್ಯದಲ್ಲಿ ಕೋಮು–ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ತೀವ್ರ ವಿರೋಧಕ್ಕೆ ಒಳಗಾಯಿತು. ಖಾಸಗಿ ಶಿಕ್ಷಣ ಸಂಸ್ಥೆಗಳು ಜನರ ಕೋಮು ಮತ್ತು ಧಾರ್ಮಿಕ

ಭಾವನೆಗಳನ್ನು ದುರ್ಬಳಕೆಮಾಡಿಕೊಂಡಿದ್ದಲ್ಲದೆ, ಕಮ್ಯುನಿಸ್ಟ್ ವಿರೋಧಿ ರಾಜಕೀಯ ಬಣಗಳನ್ನು, ಊಳಿಗಮಾನ್ಯ ಘಟಕಗಳನ್ನು ತಮ್ಮ ಅನುಕೂಲಕ್ಕಾಗಿ ತಮ್ಮ ಕಡೆಗೆ ತಿರುಗಿಸಿಕೊಂಡವು(86:--.07.59p891).

1957ರಲ್ಲಿ ಕಮ್ಯುನಿಸ್ಟ್ ಸರ್ಕಾರ ಅಧಿಕಾರಕ್ಕೆ ಬರುವ ಸಮಯದವರೆಗೆ ಕೇರಳದ ಶಿಕ್ಷಕ ಸಮುದಾಯದ ಸ್ಥಿತಿ, ಅದರಲ್ಲೂ ಖಾಸಗಿ ವಲಯದ ಸ್ಥಿತಿ ಶೋಚನೀಯವಾಗಿತ್ತು.* ಅದೇ ವರ್ಗಕ್ಕೆ ಸೇರಿದವರಾಗಿದ್ದರು ಆಗಿನ ಶಿಕ್ಷಣ ಸಚಿವರಾದ ಜೋಸೆಫ್ ಮುಂಡಸ್ಸೆರಿ. ಪ್ರತಿಭಾನ್ವಿತ ಪ್ರಾಧ್ಯಾಪಕರು ಎನ್ನುವುದಕ್ಕಿಂತಲೂ ಅವರೊಬ್ಬ ಪ್ರಸಿದ್ಧ ಬರಹಗಾರ ಮತ್ತು ಪ್ರಖ್ಯಾತ ಶೈಕ್ಷಣಿಕ ಚಿಂತಕರಾಗಿದ್ದರು. ಶಿಕ್ಷಣ ಇಲಾಖೆಯ ಸರಕಾರಿ ಕಾರ್ಯದರ್ಶಿ ಪಿ.ಕೆ. ನಂಬಿಯಾರ್ ಅವರ ಸಹಾಯದೊಂದಿಗೆ ಪ್ರೊಫೆಸರ್ ಮುಂಡಸ್ಸೆರಿಯವರು ಕೇರಳ ಶಿಕ್ಷಣ ಮಸೂದೆಯನ್ನು ಸಿದ್ಧಪಡಿಸಿ ಜುಲೈ 30, 1957ರಂದು ವಿಧಾನಸಭೆಯಲ್ಲಿ ಮಂಡಿಸಿದರು(35:p259-295). ಆಯ್ಕೆ ಸಮಿತಿಯ (Select Committee) ಪರಿಶೀಲನೆ ಮತ್ತು ಮರು–ಓದುವಿನ ನಂತರ, ಸೆಪ್ಟೆಂಬರ್ 2, 1957ರಂದು ಮಸೂದೆಯನ್ನು ಅಂಗೀಕರಿಸಲಾಯಿತು(102:22.08.57-02.09.57V2Pg1-9). ಆದರೆ ಅದನ್ನು ರಾಷ್ಟ್ರಪತಿಗಳ ಅನುಮೋದನೆಗೆ ಕಳುಹಿಸುವುದಕ್ಕಿಂತ ಸ್ವಲ್ಪ ಮುನ್ನವೇ ಮಸೂದೆಯು ಸುಪ್ರೀಂ ಕೋರ್ಟ್‌ನ ಪರಿಗಣನೆಗೆ ಬಂದಿತು. ಜೂನ್ 1958ರಲ್ಲಿ, ಸುಪ್ರೀಂ ಕೋರ್ಟ್ ಈ ಮಸೂದೆಯ ಪ್ರಮುಖ ನಿಬಂಧನೆಗಳನ್ನು ಅನುಮೋದಿಸಿತು. ಸುಪ್ರೀಂ ನ್ಯಾಯಾಲಯದ ಅಭಿಪ್ರಾಯಗಳು ಮತ್ತು ಅವಲೋಕನಗಳ ಬೆಳಕಿನಲ್ಲಿ ಈ ಮಸೂದೆಯನ್ನು ಭಾಗಶಃ ತಿದ್ದುಪಡಿ ಮಾಡಿ, ನವೆಂಬರ್ 28, 1958ರಂದು ಕೇರಳ ಶಿಕ್ಷಣ ಕಾಯಿದೆಯನ್ನಾಗಿ ಅಂಗೀಕರಿಸಲಾಯಿತು(102:24.11.58-19.12.58V6p1-18).

ವಿಧೇಯಕವನ್ನು ಅಂಗೀಕರಿಸುವ ಪ್ರಕ್ರಿಯೆಯ ವಿವಿಧ ಹಂತಗಳಲ್ಲಿ, ಶಾಸಕಾಂಗದ ಒಳಗೆ ಮತ್ತು ಹೊರಗೆ ತೀವ್ರ ಟೀಕೆಗಳು ವ್ಯಕ್ತವಾಗಿದ್ದವು. ಸರ್ ಸಿ.ಪಿ. ರಾಮಸ್ವಾಮಿ ಅಯ್ಯರ್ ಅವರು 1945ರಲ್ಲೂ(117:p74) ತಿರು–ಕೊಚ್ಚಿ ಪ್ರದೇಶದ ಪಿಎಸ್‌ಪಿ–ಕಾಂಗ್ರೆಸ್ ಮಂತ್ರಿಮಂಡಲದ 1957ಕ್ಕಿಂತ ಮೊದಲು,** ಸುಧಾರಣೆಗೊಳಿಸಲು ಉದ್ದೇಶಿಸಿದ್ದ ಶೈಕ್ಷಣಿಕ ಸುಧಾರಣೆಗಳಿಗಿಂತಲೂ ಸಂಪೂರ್ಣವಾಗಿ ಭಿನ್ನವಾಗಿರಲಿಲ್ಲ, ಜೋಸೆಫ್ ಮುಂಡಸ್ಸೆರಿ ವಿನ್ಯಾಸಗೊಳಿಸಿದ ಕೇರಳ ಶಿಕ್ಷಣ ಮಸೂದೆ.

ಕೇರಳ ಶಿಕ್ಷಣ ಮಸೂದೆಯು ಅದರ ಮೂಲ ರೂಪದಲ್ಲಿ 36 ವಿಭಾಗಗಳನ್ನು

---

* ತ್ರಿಶೂರ್‌ನಿಂದ ಪ್ರಕಟವಾದ 'ಎಕ್ಸ್‌ಪ್ರೆಸ್' ದಿನಪತ್ರಿಕೆಯ ಪ್ರಧಾನ ಸಂಪಾದಕರು ಶ್ರೀ ಟಿ.ವಿ. 25.10 ಅಚ್ಯುತ ವಾರಿಯರ್ ಅವರೊಂದಿಗೆ ಒಲ್ಲೂರಿನ ಅವರ ನಿವಾಸದಲ್ಲಿ.

** ಕಾಂಗ್ರೆಸ್ ಕ್ಯಾಬಿನೆಟ್ 1950ರಲ್ಲಿ ಹೊಸ ಯೋಜನೆಯನ್ನು ಜಾರಿಗೊಳಿಸಿತು. ಇದನ್ನು 'ಖಾಸಗಿ ಮಾಧ್ಯಮಿಕ ಶಾಲಾ ಯೋಜನೆ (ಪಿಎಸ್‌ಎಸ್)' ಎಂದು ಕರೆಯಲಾಗುತಿತ್ತು. ಇತರ ವ್ಯವಸ್ಥೆಗಳೊಂದಿಗೆ ಈ ಯೋಜನೆಯು ಶಿಕ್ಷಕರ ವೇತನ ಮತ್ತು 'ಭಾಗಶಃ ಸೇವೆಯನ್ನು ಸುರಕ್ಷತೆಯನ್ನು ಹೆಚ್ಚಿಸುವುದಕ್ಕೆ ಖಾತ್ರಿಪಡಿಸಲಾಯಿತು. ಆದರೆ ಅದು ಜಾರಿಗೆ ಬರಲಿಲ್ಲ. 1955ರಲ್ಲೂ ಇದೇ ರೀತಿಯ ಪ್ರಯತ್ನ ನಡೆದಿತ್ತು.

ಒಳಗೊಂಡಿತ್ತು(170:16.07.57). ಅವುಗಳಲ್ಲಿ ಅರ್ಧದಷ್ಟು ವಿಚಾರಗಳು ಶಿಕ್ಷಕರ ನೇಮಕಾತಿ ಮತ್ತು ಸೇವಾ ನಿಯಮಗಳ ಬಗ್ಗೆಯೇ ಆಗಿದ್ದವು. ಇದರ ವ್ಯವಸ್ಥೆಗಳ ಆಧಾರದ ಮೇಲೆ, ಸರ್ಕಾರಿ–ಖಾಸಗಿ ಶಾಲೆಗಳಲ್ಲಿ ನೇಮಕಗೊಳ್ಳುವುದಕ್ಕೆ ತರಬೇತಿ ಪಡೆದ ಅರ್ಹ ಶಿಕ್ಷಕರ ರಾಜ್ಯಮಟ್ಟದ ರಿಜಿಸ್ಟರನ್ನು ಸರ್ಕಾರವು ರಚಿಸಿ ನಿರ್ವಹಣೆ ಮಾಡಲಾಗುತ್ತದೆ. ಶಿಕ್ಷಕರಿಗೆ ಸರಕಾರವೇ ನೇರವಾಗಿ ವೇತನ ಪಾವತಿಸಲು ಮಸೂದೆಯಲ್ಲಿ ವ್ಯವಸ್ಥೆ ಮಾಡಲಾಗಿರುತ್ತದೆ. ವಿದ್ಯಾರ್ಥಿಗಳ ಹಿತಾಸಕ್ತಿಗಳಿಗನುಗುಣವಾಗಿ ಶಾಲೆಯನ್ನು ನಿರ್ವಹಿಸುವ ಜವಾಬ್ದಾರಿ ವ್ಯವಸ್ಥಾಪಕರದ್ದಾಗಿರುತ್ತದೆ. ಕಾನೂನುಬದ್ಧ ಜವಾಬ್ದಾರಿಗಳನ್ನು ಕಾರ್ಯಗತಗೊಳಿಸಲು ವ್ಯವಸ್ಥಾಪಕರು ವಿಫಲರಾದ ಪಕ್ಷದಲ್ಲಿ, ಸರಕಾರವು ನೀಡುತ್ತ ಬಂದಿರುವ ಅನುದಾನವನ್ನು ಸ್ಥಗಿತಗೊಳಿಸುವುದನ್ನೋ ಅಥವಾ ಅಂತಹ ಶಾಲೆಗಳ ನಿಯಂತ್ರಣವನ್ನು ಸರಕಾರ ಗರಿಷ್ಠ 5 ವರ್ಷಗಳವರೆಗೆ ನೇರವಾಗಿ ವಹಿಸಿಕೊಳ್ಳುವುದನ್ನೋ ಮಾಡಲಾಗುತ್ತಿತ್ತು(170:). ನಿಗದಿತ ಕಾಯಿದೆ ಅಡಿಯಲ್ಲಿ ಶಾಲೆ ದಿನನಿತ್ಯದ ಆಡಳಿತದ ಜವಾಬ್ದಾರಿಯನ್ನು ವ್ಯವಸ್ಥಾಪಕರು ಮುಂದುವರಿಸುತ್ತಿರುತ್ತಾರೆ. ಅದೇ ಸಮಯದಲ್ಲಿ ಶಾಲೆಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆಯ ಜವಾಬ್ದಾರಿಯು ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಗೆ ಸೇರಿದ್ದಾಗಿರುತ್ತದೆ. ಸಾರ್ವಜನಿಕ ಶಿಕ್ಷಣದಲ್ಲಿ ರಾಜ್ಯಾದ್ಯಂತ ನಿರ್ದಿಷ್ಟ ಗುಣಮಟ್ಟವನ್ನು ಕಾಯ್ದುಕೊಳ್ಳುವುದಕ್ಕಾಗಿಯೇ ಈ ವ್ಯವಸ್ಥೆಯನ್ನು ಮಾಡಲಾಗಿದ್ದು( 149:p394).

ಹದಿನಾಲ್ಕು ವರ್ಷದವರೆಗಿನ ಮಕ್ಕಳಿಗೆ ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣವನ್ನು ಕೇರಳ ಶಿಕ್ಷಣ ಮಸೂದೆ ಕಲ್ಪಿಸಿರುತ್ತದೆ. ಮಧ್ಯಾಹ್ನದ ಬಿಸಿಯೂಟ, ಪುಸ್ತಕಗಳು ಮತ್ತು ಲೇಖನ ಸಾಮಗ್ರಿಗಳನ್ನು ಉಚಿತವಾಗಿ ನೀಡುವಂಥದ್ದು ಸಹ ಮಸೂದೆಯಲ್ಲಿ ಸೇರಿತ್ತು(170:). ಹೊಸ ಕಾಯಿದೆಯ ಪ್ರಕಾರ, ಕರ್ತವ್ಯಗಳ ನಿರ್ವಹಣೆಯ ಕುರಿತು ಶಿಕ್ಷಣ ಇಲಾಖೆಗೆ ಸಲಹೆ ನೀಡಲು, ರಾಜ್ಯ ಶಿಕ್ಷಣ ಸಲಹಾ ಮಂಡಳಿಯನ್ನು ರಚಿಸಿದ್ದಲ್ಲದೆ, ಸ್ಥಳೀಯ ಮಟ್ಟದ ಶಿಕ್ಷಣ ಅಧಿಕಾರಿಗಳನ್ನೂ ನೇಮಿಸಲಾಯಿತು( 170:).



ಶಿಕ್ಷಣ ಮಂದಿರದಲ್ಲಿ
ಪಟ್ಟಭದ್ರ ಹಿತಾಸಕ್ತಿಗಳು
ಕೃಪೆ: ಶಂಕರ್ಸ್ ವೀಕ್ಲಿ

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಭಾರತದ ಸಂವಿಧಾನದ 30ನೇ ವಿಧಿಯನ್ನು ಅವಲಂಬಿಸಿ ಈ ಮಸೂದೆಯ ಅಂಗೀಕಾರಕ್ಕೆ ಕ್ಯಾಥೋಲಿಕ್ ಚರ್ಚ್‌ಗಳು ತೀವ್ರ ವಿರೋಧ ವ್ಯಕ್ತಪಡಿಸಿ, ಒತ್ತಡ ಹಾಕಿದವು. ಇದು ಖಾಸಗಿ ವ್ಯವಸ್ಥಾಪಕ ವ್ಯವಸ್ಥೆಗೆ ಹಾನಿಯುಂಟುಮಾಡಲು ಉದ್ದೇಶಪೂರ್ವಕವಾಗಿ ನಡೆಸಿದ ಪ್ರಯತ್ನವಾಗಿದೆಯೆಂದು ಅವುಗಳು ಕೇರಳ ಶಿಕ್ಷಣ ಮಸೂದೆಯನ್ನು ಚಿತ್ರೀಕರಿಸಿದವು. ನವೆಂಬರ್ 28ರಂದು ಅಂಗೀಕರಿಸಿದ ಮಸೂದೆಯು ರಾಷ್ಟ್ರಪತಿಗಳ ಅನುಮೋದನೆಗೆ ಕಾಯುತ್ತಿರುವಾಗ, ಅವರು ಸರ್ಕಾರದ ವಿರುದ್ಧವಿದ್ದ ವಿರೋಧವನ್ನು ಕೇಂದ್ರದವರೆಗೂ ಹರಡಿದರು. ಕ್ರಿಶ್ಚಿಯನ್ ಚರ್ಚುಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಕಾಂಗ್ರೆಸ್ಸಿಗರ ಒತ್ತಡಕ್ಕೆ ಮಣಿದ ಕೇಂದ್ರ ಸರ್ಕಾರ ಮಸೂದೆಯನ್ನು ಸುಪ್ರೀಂ ಕೋರ್ಟ್‌ಗೆ ವರ್ಗಾಯಿಸಿತು(48:p37).

ಕೇರಳ ಶಿಕ್ಷಣ ಕಾಯ್ದೆಯ ಏಕೈಕ ಉದ್ದೇಶ, ಎಲ್ಲಾ ಅರ್ಹ ವ್ಯಕ್ತಿಗಳು ಶಿಕ್ಷಕವೃತ್ತಿಯನ್ನು ಪಡೆಯುವ ಸಮಾನ ಅವಕಾಶವನ್ನು ಖಚಿತಪಡಿಸುವುದಾಗಿತ್ತು ಎಂದು ಕೇರಳ ಸರ್ಕಾರದ ಪರವಾಗಿ ಹಾಜರಾಗಿದ್ದ, ಡಿ.ಎನ್. ಪ್ರಿಟ್ ನ್ಯಾಯಾಲಯಕ್ಕೆ ಮನವರಿಕೆ ಮಾಡಿಕೊಡುವಂಥ ವಿಧದಲ್ಲಿ ಬಲವಾಗಿ ವಾದಿಸಿದರು. ಕ್ಯಾಥೋಲಿಕ್ ಚರ್ಚ್‌ಗಳು ಸೇರಿದಂತೆ, ಯಾವುದೇ ಜನಸಮುದಾಯದ ವಿರುದ್ಧ ಸರ್ಕಾರವು ತಾರತಮ್ಯ ಮಾಡುವ ಉದ್ದೇಶವನ್ನು ಹೊಂದಿಲ್ಲ ಎಂದು ಅವರು ಸ್ಪಷ್ಟಪಡಿಸಿದರು(48:p40). ಸರ್ವೋಚ್ಚ ನ್ಯಾಯಾಲಯದ ತೀರ್ಪು (ಜೂನ್ 1958ರಲ್ಲಿ ನೀಡಿದ ತೀರ್ಪು), ಪ್ರಮುಖವಾದ ಎಲ್ಲಾ ವಿಷಯಗಳ ಬಗ್ಗೆ ರಾಜ್ಯ ಸರ್ಕಾರದ ಪರವಾಗಿತ್ತು. ಕೇರಳ ಶಿಕ್ಷಣ ಕಾಯ್ದೆಯನ್ನು ಬಹಿರಂಗವಾಗಿ ಬೆಂಬಲಿಸುತ್ತಾ ಸುಪ್ರೀಮ್ ಕೋರ್ಟ್ ಈ ಪ್ರಕಾರ ಸೂಚಿಸಿತು:

> "ಶಾಲೆಗಳನ್ನು ಆಳುವ ಹಕ್ಕು ಎಂದರೆ ಅವುಗಳನ್ನು ತಪ್ಪಾಗಿ ನಿರ್ವಹಿಸುವುದು ಎಂದಲ್ಲ. ಅಲ್ಲದೆ ಅವರು ಸರ್ಕಾರದಿಂದ ಹಣವನ್ನು ಪಡೆಯುವಾಗ, ಕೆಲವು ನಿಯಂತ್ರಣಗಳನ್ನು ವಿಧಿಸಲು ಸರ್ಕಾರವು ಕಾನೂನುಬದ್ಧ ಹಕ್ಕನ್ನು ಹೊಂದಿರುತ್ತದೆ"(146:11.77p9).

ಕೇರಳ ಶಿಕ್ಷಣ ಕಾಯಿದೆಯ ಎಲ್ಲಾ ಪ್ರಮುಖ ನಿಬಂಧನೆಗಳು ಟೀಕಿಸಲ್ಪಟ್ಟವು. ಕಮ್ಯುನಿಸ್ಟ್ ಸರ್ಕಾರವು ಜಾರಿಗೊಳಿಸಿದ ಈ ಕಾನೂನಿನ ಮೇಲೆ ವಿವಿಧ ಕಾಲ್ಪನಿಕ ನ್ಯೂನತೆಗಳನ್ನು ಆರೋಪಿಸಲಾದವು(34:p71).

ಈ ಕಾನೂನಿನ ಮುಖ್ಯ ಉದ್ದೇಶ, 'ಸಾರ್ವಜನಿಕ ಶಿಕ್ಷಣದ ವ್ಯವಸ್ಥೆ'ಯನ್ನು ಉತ್ತಮಪಡಿಸುವುದೇ ಆಗಿತ್ತು. ಶಿಕ್ಷಕರ ವೇತನ ವಿತರಣೆಯಲ್ಲಿ, ಅವರ ಸೇವಾಸುರಕ್ಷಿತೆಯನ್ನು ಖಾತ್ರಿಗೊಳಿಸುವಲ್ಲಿ ಮತ್ತು ಸಂಸ್ಥೆಯ ಆಡಳಿತದ ಮೇಲೆ ಅಗತ್ಯವಾದ ನಿಯಂತ್ರಣವನ್ನು ಹೊಂದುವಲ್ಲಿ ಹೆಚ್ಚು ಸ್ಪಷ್ಟತೆಗೆ ತೆರೆದುಕೊಳ್ಳುವುದೇ ಪ್ರಸ್ತುತ ಶಿಕ್ಷಣ ಕಾಯಿದೆಯ ಧರ್ಮವಾಗಿತ್ತು(146:p8). 1958ರ ಕೇರಳ ಶಿಕ್ಷಣ ಕಾಯಿದೆಯ ಮುಖ್ಯ ಸಾಧನೆಯೆನ್ನುವುದು, ಅದು ಶಿಕ್ಷಕ ಸಮುದಾಯವನ್ನು

ಗುಲಾಮಗಿರಿಯಿಂದ ರಕ್ಷಿಸುತ್ತದೆ ಮತ್ತು ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅರ್ಥಪೂರ್ಣ ಪಾತ್ರವನ್ನು ವಹಿಸಲು ಅನುವು ಮಾಡಿಕೊಡುತ್ತದೆ, ಎನ್ನುವುದಾಗಿತ್ತು.

ಪಠ್ಯಪುಸ್ತಕ ಸಮಿತಿಗಳನ್ನು ಸ್ಥಾಪಿಸಲು ಸರ್ಕಾರವು ಉಪಕ್ರಮವನ್ನು ತೆಗೆದುಕೊಂಡಿತು(84:28.10.57). ಮುಂದಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಪ್ರಾಥಮಿಕ ತರಗತಿಗಳಿಗೆ ಹೊಸ ಪಠ್ಯಪುಸ್ತಕಗಳನ್ನು ತಯಾರಿಸಲು, 1957ರಲ್ಲಿ ಸರ್ಕಾರವು ವಿವಿಧ ಪಠ್ಯಪುಸ್ತಕ ಸಮಿತಿಗಳನ್ನು ನೇಮಿಸಿತು(35:p330). ಹೊಸ ಪಠ್ಯಪುಸ್ತಕಗಳನ್ನು ನಿರ್ಮಿಸಿ ಹೊರತರುವಲ್ಲೂ ಶಿಫಾರಸುಗಳಲ್ಲೂ ಕಮ್ಯುನಿಸ್ಟರ 'ಮರೆಮಾಡಿಟ್ಟಿದ್ದ ಕುಟಿಲೋದ್ದೇಶಗಳು ಬಹಿರಂಗಗೊಂಡಿದ್ದಾಗಿ' 1958ರ ಮಧ್ಯದಲ್ಲಿ ಆರೋಪ ಕೇಳಿಬಂದವು. ಕಟ್ಟುನಿಟ್ಟಾದ ಪಠ್ಯಕ್ರಮಕ್ಕೆ ಸರ್ಕಾರ ನಿರ್ಬಂಧಗಳನ್ನು ಹೇರುವ ಮೂಲಕ ವಿದ್ಯಾರ್ಥಿಗಳ ಮನಸ್ಸನ್ನು ಆಳುವವರ ಸಿದ್ಧಾಂತಕ್ಕೆ ಒಳಪಡಿಸಲು ಪ್ರಯತ್ನಿಸಿತು. 'ಎಲ್ಲಾ ಏಕಪಕ್ಷೀಯ ನಿರಂಕುಶ ಪ್ರಭುತ್ವಗಳಿಗೂ ಸಾಮಾನ್ಯವಾಗಿರುವಂಥ ಸ್ವಭಾವಗಳ' ಇಂಥ ಆರೋಪಗಳು ಕೇಳಿಬರುತ್ತಲೇ ಇರುತ್ತವೆ(143:05.11.58;100:p22 ;96:p145). ಈ ಆರೋಪಗಳ ಬಗ್ಗೆ ತನಿಖೆ ಮಾಡಲು ಶೈಕ್ಷಣಿಕ ತಜ್ಞರ ಸಮಿತಿಯನ್ನು ಸರಕಾರ ನಿಯೋಜಿಸಿತು. ಪಠ್ಯಪುಸ್ತಕ ವಿಚಾರಣಾ ಸಮಿತಿಗೆ ಅಧ್ಯಕ್ಷರಾಗಿ ಡಾ. ಕುರುವಿಲ್ಲ ಜೇಕಬ್ ಇದ್ದರು. ಒ.ಸಿ.ಶ್ರೀನಿವಾಸನ್, ಎಂ.ವಿ. ನಾರಾಯಣ ಪಿಳ್ಳ, ಸಮಿತಿಯ ಇತರ ಸದಸ್ಯರಾಗಿದ್ದರು(96:p152). ತನಿಖಾ ಸಮಿತಿಯು ಪಠ್ಯಪುಸ್ತಕಗಳಲ್ಲಿ ಕೆಲವು ಅಸಮರ್ಪಕ ಭಾಗಗಳನ್ನು ಕಂಡುಹಿಡಿದರಾದರೂ ಅವುಗಳು ಮೇಲ್ವಿಚಾರಣಾ ವ್ಯವಸ್ಥೆಯ ಕೊರತೆಯಿಂದಾಗಿ ಆದಂಥ ತಪ್ಪುಗಳು ಎಂದು ತಿಳಿಸಲಾಯಿತು(146:p9). ಧರ್ಮವಿರೋಧಿ ಸಿದ್ಧಾಂತಗಳನ್ನಾಗಲೀ ಕಮ್ಯುನಿಸ್ಟ್ ಸಿದ್ಧಾಂತಗಳನ್ನಾಗಲೀ ವಿದ್ಯಾರ್ಥಿಗಳ ಮನಸ್ಸಿನಲ್ಲಿ ತುಂಬಲೋ ಅಥವಾ ಭಾರತದ ಸಾಧನೆಗಳ ಬಗ್ಗೆ ಅಗೌರವ ಸೂಚಿಸಲೋ ಅಧಿಕಾರಿಗಳ ಕಡೆಯಿಂದ ಯಾವುದೇ ಸಂಘಟಿತ ಪ್ರಯತ್ನಗಳು ನಡೆದಿಲ್ಲ ಎಂಬುದು ವರದಿಯಿಂದ ಮುಖ್ಯವಾಗಿ ಕಂಡುಕೊಂಡ ವಿಚಾರವಾಗಿತ್ತು(103:p43-44). ಜನವರಿ 1959 ರಲ್ಲಿ ಡಾ. ಕುರುವಿಲ್ಲ ಜೇಕಬ್‌ರ ವರದಿ ಸಲ್ಲಿಕೆಯಾಯಿತು.

ವೈಕಂ ಮೊಹಮ್ಮದ್ ಬಶೀರ್, ವೈಲೋಪ್ಪಿಲ್ಲಿ ಶ್ರೀಧರನ್ ಮೆನನ್, ಜಿ. ಕುಮಾರ ಪಿಳ್ಳ, ಸುಗತಕುಮಾರಿ, ಉಳ್ಳೂರು ಎಸ್ ಪರಮೇಶ್ವರ ಅಯ್ಯರ್, ಒಳಪ್ಪಮಣ್ಣ, ಜಿ.ಶಂಕರ ಕುರುಪ್, ಟಿ.ಎನ್. ಗೋಪಿನಾಥನ್ ನಾಯರ್, ವಯಲಾರ್ ರಾಮವರ್ಮ, ಎಸ್.ಗೋಪಾಲ್ ಪಿಳ್ಳ, ಎನ್.ವಿ. ಕೃಷ್ಣವಾರ್ಯರ್, ಎಡಸ್ಸೆರಿ ಗೋವಿಂದನ್ ನಾಯರ್, ಸರ್ದಾರ್ ಕೆ.ಎಂ.ಪಣಿಕ್ಕರ್ ಅವರಂತಹ ಪ್ರತಿಭಾವಂತ ಲೇಖಕರ ಕೃತಿಗಳ ವಿರುದ್ಧವೂ ಟೀಕಾಕಾರರು ಮಾತನಾಡಿದರು( 102:08.07.58, 12.12.8; 107:05.10.58p6; 98:;35:p333;69:p168-170).

### ಉನ್ನತ ಶಿಕ್ಷಣ

ಕೇರಳ ವಿಶ್ವವಿದ್ಯಾನಿಲಯದ ರಚನೆಯು ಉನ್ನತ ಶಿಕ್ಷಣ ಕ್ಷೇತ್ರದ ಪ್ರಮುಖ ಸಾಧನೆಗಳಲ್ಲಿ ಒಂದಾಗಿದೆ. ಹಳೆಯ ತಿರುವಾಂಕೂರ್ ವಿಶ್ವವಿದ್ಯಾನಿಲಯವನ್ನು ಕೊಚ್ಚಿ-ಮಲಬಾರ್ ಪ್ರದೇಶದ ಕಾಲೇಜುಗಳೊಂದಿಗೆ ಮರುಸಂಘಟಿಸಲಾಯಿತು. ರಾಜ್ಯ ಕಾಲೇಜುಗಳ ಇಡೀ ಶಿಕ್ಷಣ ಕ್ಷೇತ್ರವು ಕೇರಳ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟಿತು. ವಿಶ್ವವಿದ್ಯಾನಿಲಯ ಮಸೂದೆಯನ್ನು ಜೂನ್ 11, 1957ರಂದು ಶಾಸಕಾಂಗದಲ್ಲಿ ಮಂಡಿಸಲಾಯಿತು(33:12.09.57;107:13.06.57;84:24.08.57;69:p168-170). ವಿಶ್ವವಿದ್ಯಾನಿಲಯಕ್ಕೆ ಪ್ರಜಾಸತ್ತಾತ್ಮಕವಾಗಿ ಚುನಾಯಿಸಲ್ಪಟ್ಟ ಸೆನೆಟ್ ಮತ್ತು ಸಿಂಡಿಕೇಟ್ ಇದ್ದವು. ಇವುಗಳು ಹೆಚ್ಚಿನ ಸ್ವಾಯತ್ತತೆಯನ್ನು ಹೊಂದಿತ್ತು. ವಿಶ್ವವಿದ್ಯಾಲಯದ ಸಿಬ್ಬಂದಿಗಳನ್ನು ಸಾರ್ವಜನಿಕ ಸೇವಾ ಆಯೋಗದ ಮೂಲಕ ನೇಮಕಾತಿ ಮಾಡಲಾಗುತ್ತಿದ್ದವು. ಖಾಸಗಿ ಕಾಲೇಜು ಶಿಕ್ಷಕರಿಗೆ ಸಂಬಂಧಿಸಿದ ಸೇವಾ ಮಾನದಂಡಗಳನ್ನು ನಿರ್ಣಯಿಸಲು ಈ ಕಾನೂನು ವಿಶ್ವವಿದ್ಯಾನಿಲಯಕ್ಕೆ ಅಧಿಕಾರ ನೀಡಿತು. ಖಾಸಗಿ ಕಾಲೇಜು ಶಿಕ್ಷಕರ ಮತ್ತು ವ್ಯವಸ್ಥಾಪಕರ ನಡುವಿನ ವಿವಾದಗಳ ಬಗ್ಗೆ ತೀರ್ಪು ನೀಡುವ ಅಧಿಕಾರ ವಿಶ್ವವಿದ್ಯಾಲಯದ ಪರಿಧಿಗೆ ಬಂತು(84:3524.08.57;35:p312). ಪ್ರಖ್ಯಾತ ಅರ್ಥಶಾಸ್ತ್ರಜ್ಞಮತ್ತು ಕೇಂದ್ರದ ಮಾಜಿ ಸಚಿವರಾಗಿದ್ದ,ಡಾ. ಜಾನ್ ಮಥಾಯ್, ಕೇರಳ ವಿಶ್ವವಿದ್ಯಾಲಯದ ಮೊದಲ ಉಪಕುಲಪತಿಯಾಗಿ ನೇಮಕಗೊಂಡರು(35:p312). ಅವರು ಕೇರಳ ವಿಶ್ವವಿದ್ಯಾಲಯದ ಸರ್ವತೋಮುಖ ಅಭಿವೃದ್ಧಿಗಾಗಿ ಅತ್ಯುತ್ತಮ ಸೇವೆ ಸಲ್ಲಿಸಿದರು. ಯುಜಿಸಿ ಅನುದಾನ ಮತ್ತು ಇತರ ವಿವಿಧ ಮೂಲಗಳಿಂದ ಧನಸಹಾಯದೊಂದಿಗೆ ವಿಶ್ವವಿದ್ಯಾಲಯದ ಅಂಗಸಂಸ್ಥೆಗಳನ್ನು, ಕಾಲೇಜುಗಳಲ್ಲಿ ಶಿಕ್ಷಕರ ಸ್ಥಾನಮಾನ ಮತ್ತು ಗುಣಮಟ್ಟ ಇತ್ಯಾದಿಗಳನ್ನು ಮುಗಿಲೆತ್ತರಕ್ಕೆ ಬೆಳೆಸಿದರು.*

1957–59ರ ಮೊದಲ ಕಮ್ಯುನಿಸ್ಟ್ ಸರ್ಕಾರ, ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆಗಳನ್ನು ಎಂದಿಗೂ ಕಡಿಮೆಯಾಗಿ ಅಂದಾಜಿಸಲು ಸಾಧ್ಯವಿಲ್ಲ. ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಇಂಜಿನಿಯರಿಂಗ್ ಕಾಲೇಜುಗಳನ್ನು ಆರಂಭಿಸಲಾಯಿತು. ವಿವಿಧ ಜಿಲ್ಲೆಗಳಲ್ಲಿ ಪಾಲಿಟೆಕ್ನಿಕ್ ಮತ್ತು ಜೂನಿಯರ್ ತಾಂತ್ರಿಕ ಶಾಲೆಗಳನ್ನು ಸ್ಥಾಪಿಸಲಾಯಿತು(35:335-336). ಮಲಬಾರ್‌ನ ಹಿಂದುಳಿದ ಪ್ರದೇಶದಲ್ಲಿ ವೈದ್ಯಕೀಯ ಶಿಕ್ಷಣವನ್ನು ವಿಸ್ತರಿಸಲು ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಉತ್ತಮಗೊಳಿಸಲು ಸಾಧ್ಯವಾಯಿತು(84:06.08.57). ಕೋಳಿಕ್ಕೋಡ್‌ನಲ್ಲಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲಾಯಿತು. ಕೋಳಿಕ್ಕೋಡ್ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವುದರಲ್ಲೂ ಅದನ್ನು ಭಾರತದ ವೈದ್ಯಕೀಯ ಶಿಕ್ಷಣ ಕ್ಷೇತ್ರದಲ್ಲೇ ಪ್ರಮುಖ ಸಂಸ್ಥೆಗಳಲ್ಲೊಂದ

---

* ಮಾಜಿ ಪ್ರಾಂಶುಪಾಲರು ಮತ್ತು ಶಿಕ್ಷಣತಜ್ಞ, ಸೇಂಟ್ ಥಾಮಸ್ ಕಾಲೇಜು, ತ್ರಿಶೂರ್ ಪ್ರೊ. ಟಿ. ಓ. ಮ್ಯಾಥ್ಯೂ ಅವರೊಂದಿಗೆ ತ್ರಿಶೂರಿನ ಅವರ ನಿವಾಸದಲ್ಲಿ ಸಂದರ್ಶನವನ್ನು ಜನವರಿ 11, 2010ರಂದು ನಡೆಸಲಾಯಿತು.

ನ್ನಾಗಿಸುವುದರಲ್ಲೂ ಆರೋಗ್ಯ ಸಚಿವ ಡಾ. ಎ.ಆರ್. ಮೇನನ್ ವಿಶೇಷ ಆಸಕ್ತಿ ತೆಗೆದುಕೊಂಡಿದ್ದರು(34:p144).

ಹೀಗೆ ಕೇರಳದ ಮೊದಲ ಕಮ್ಯುನಿಸ್ಟ್ ಮಂತ್ರಿಮಂಡಲ ತನ್ನ 28 ತಿಂಗಳ ಆಡಳಿತದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಶ್ಲಾಘನೀಯ ಸಾಧನೆ ಮಾಡಿ ತೋರಿಸಿತು. ಆದರೆ ವಿರೋಧಾಭಾಸವೆಂದು ಹೇಳದೆ ಇರಲು ಸಾಧ್ಯವಿಲ್ಲ, ಪ್ರಗತಿಶೀಲ ಶೈಕ್ಷಣಿಕ ಸುಧಾರಣೆಗಳು, ವಿಶೇಷವಾಗಿ 1957ರ ಕೇರಳ ಶಿಕ್ಷಣ ಮಸೂದೆಯು ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಳುವಳಿಯನ್ನು ಹುಟ್ಟುಹಾಕುವಲ್ಲಿ ಪ್ರಮುಖ ಘಟಕವಾಗಿಬಿಟ್ಟಿತು.

### ಕೃಷಿ ವಲಯ

ಮೊದಲ ಕಮ್ಯುನಿಸ್ಟ್ ಸರ್ಕಾರವು ಕೃಷಿ ಕ್ಷೇತ್ರದಲ್ಲಿ ಧನಾತ್ಮಕ ಬದಲಾವಣೆಗಳನ್ನು ತರಲು ಅನೇಕ ಕ್ರಮಗಳನ್ನು ತೆಗೆದುಕೊಂಡಿತು. ಇವುಗಳಲ್ಲಿ ಅತ್ಯಂತ ಗಮನಾರ್ಹವಾದದ್ದು ಕೇರಳದ ಕೃಷಿ ಸಂಬಂಧಗಳ ಮಸೂದೆಯ ಅಂಗೀಕಾರ. ಮಸೂದೆಯು ಸಾಂಪ್ರದಾಯಿಕ ಊಳಿಗಮಾನ್ಯ ಉತ್ಪಾದನಾ ವಿಧಾನಗಳಲ್ಲೂ ಉತ್ಪಾದನಾ ಸಂಬಂಧಗಳಲ್ಲೂ ಆಮೂಲಾಗ್ರ ಬದಲಾವಣೆಗಳನ್ನುಂಟು ಮಾಡಿದವು.

ಅನೇಕ ಸರ್ಕಾರಿ ಭೂ ಕಾನೂನುಗಳು ಕೆಳಸ್ತರಗಳಲ್ಲಿರುವ ಜನರ ಜೀವನ ಮಟ್ಟವನ್ನು ಸುಧಾರಿಸುವ ಉದ್ದೇಶಗಳನ್ನು ಹೊಂದಿದ್ದವು. ಕೃಷಿ ಕಾರ್ಮಿಕರಿಗೆ ಕನಿಷ್ಠ ಕೂಲಿ ನಿಗದಿಪಡಿಸಲಾಯಿತು(84:05.07.57;118:06.01.79p34;119:p230). ಸರ್ಕಾರದ ವಶದಲ್ಲಿದ್ದ ಹೆಚ್ಚುವರಿ ಭೂಮಿಯನ್ನು ಭೂರಹಿತ ಕೃಷಿಕಾರ್ಮಿಕರಿಗೆ ಜನತಾ ಸಮಿತಿಗಳ ಮೂಲಕ ಹಂಚಲಾಯಿತು. ಸಾಲ ಪರಿಹಾರಕ್ಕೆ ಪರಿಣಾಮಕಾರಿ ಕ್ರಮಗಳನ್ನು ತೆಗೆದುಕೊಳ್ಳಲಾದವು. ಕೃಷಿ ಉತ್ಪಾದನೆಗಳನ್ನು ಹೆಚ್ಚಿಸಲು ಸಹ ಪರಿಣಾಮಕಾರಿ ಕ್ರಮಗಳನ್ನು ತೆಗೆದುಕೊಳ್ಳಲಾಯಿತು(48:p106-153). ಗೋಡಂಬಿ ಕೃಷಿಯ ವಿಸ್ತರಣೆಗೆ ವಿಶೇಷ ಗಮನ ನೀಡಲಾಯಿತು. ಕೃಷಿ ಜ್ಞಾನದ ಪ್ರಸಾರಕ್ಕೆ ಸಾಕಷ್ಟು ಪರಿಗಣನೆ ನೀಡಲಾಯಿತು(120:p17-18). ಸೂಕ್ತ ವ್ಯವಸ್ಥೆಗಳನ್ನು ಮಾಡಲಾಗಿದ್ದರಿಂದ, ಕೃಷಿ ಉತ್ಪನ್ನಗಳಿಗೆ ನ್ಯಾಯಯುತ ಬೆಲೆ ದೊರೆಯುವಂತಾಯಿತು.

ಇದು ಶಿಕ್ಷಣ ಕ್ಷೇತ್ರದ ಭಾಗದಲ್ಲಿ ಕಾಣಿಸಿಕೊಳ್ಳಬೇಕು... ಈಗ ಕೃಷಿ ವಲಯದಲ್ಲಿದೆ.

ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡ ಬಳಿಕ ಇಎಂಎಸ್ ನಂಬೂದಿರಿಪಾಡ್, ಅವರು ತಮ್ಮ ಸರ್ಕಾರದ ನೀತಿ ಹೇಳಿಕೆಯಲ್ಲಿ, ಕೃಷಿ ಕ್ಷೇತ್ರವನ್ನು ಪುನರ್ರಚಿಸಲು ಅಗತ್ಯ ಕ್ರಮಗಳ ಬಗ್ಗೆ ಸವಿಸ್ತಾರವಾಗಿ ವಿವರಿಸಿದ್ದಾರೆ.

> "ನ್ಯಾಯಯುತವಾದ ಗೇಣಿಯನ್ನು (ತೆರಿಗೆ) ಖಾತ್ರಿಗೊಳಿಸಿಕೊಳ್ಳಲು, ಗೇಣಿ/ಹಿಡುವಳಿದಾರರಿಗೆ ಅವರ ಭೂಮಿಯ ಮೇಲೆ ಶಾಶ್ವತ ಹಕ್ಕು ನೀಡಬೇಕು. ಕೇರಳದ ವಿಶೇಷ ಸನ್ನಿವೇಶಗಳಿಗೆ ಹೊಂದುವ ರೀತಿಯಲ್ಲಿ ಭೂಮಿತಿಯನ್ನು

ನಿರ್ಣಯಿಸಬೇಕು. ತೊಂದರೆ ಅನುಭವಿಸುತ್ತಿರುವ ಸಣ್ಣರೈತರಿಗೆ ಮತ್ತು ಭೂರಹಿತರಿಗೆ ಸಹಾಯಹಸ್ತ ಚಾಚಲು,ದೊಡ್ಡ ಭೂಮಾಲೀಕರ ಹೆಚ್ಚುವರಿ ಭೂಮಿಗಳನ್ನು ವಿತರಿಸಲು, ಹೊಸ ಭೂಸುಧಾರಣಾ ಕ್ರಮಗಳಿಂದಾಗಿ ಸಾಧ್ಯವಾಯಿತು. ಮುಂದಿನ ದಿನಗಳಲ್ಲಿ ವಸ್ತುನಿಷ್ಠ ಬದಲಾವಣೆಗಳನ್ನು ಒಳಗೊಂಡಂಥ ಎರಡು ಮಸೂದೆಗಳನ್ನು ಮಂಡಿಸಲು ಸಾಧ್ಯವಾಗುತ್ತದೆ ಎಂದು ನಾವು ಭಾವಿಸುತ್ತೇವೆ. ಗೇಣಿದಾರರಿಗೆ ತಕ್ಷಣದ ತಾತ್ಕಾಲಿಕ ಪರಿಹಾರವನ್ನು ಒದಗಿಸಲು ನಾವೊಂದು ತುರ್ತು ಕಾನೂನನ್ನು ಜಾರಿಗೊಳಿಸಲು ಸಹ ಬಯಸಿದ್ದೇವೆ..." (97:V18P127-128).

ಗೇಣಿದಾರರನ್ನುಮತ್ತು ಗೇಣಿದಾರರಾದ ಗುಡಿಸಲು ನಿವಾಸಿಗಳನ್ನು ಒಕ್ಕಲೆಬ್ಬಿಸುವ ಕ್ರಮಗಳನ್ನು, ಅವರಿಂದ ಗೇಣಿಬಾಕಿ ಸಂಗ್ರಹಿಸುವುದನ್ನು, ಏಪ್ರಿಲ್ 11, 1957ರಂದು ಹೊರಡಿಸಿದ ಸರ್ಕಾರದ ಆದೇಶದಂತೆ ಅಮಾನತುಗೊಳಿಸಲಾಯಿತು(84:11.04.57;149:p194). ನಂತರ ಅದರ ಬದಲಿಗೆ, 1957ರ ಕೇರಳ ಒಕ್ಕಲೆಬ್ಬಿಸುವಿಕೆ ನಿಷೇಧಿಸಿದ ಕಾಯಿದೆ ಜಾರಿಗೆ ಬಂದಿತು(102:V1No5p383). ಎಲ್ಲಾ ವರ್ಗಗಳ ಹೊಸ ಗೇಣಿದಾರರು ಮತ್ತುಗೇಣಿದಾರ ಗುಡಿಸಲು ನಿವಾಸಿಗಳನ್ನು ಒಳಗೊಂಡಂಥ ಎಲ್ಲಾ ಗೇಣಿದಾರರನ್ನು ಒಕ್ಕಲೆಬಿಸುವುದನ್ನು ಈ ಕಾಯಿದೆಯ ಮೂಲಕ ಅಮಾನತುಗೊಳಿಸಲಾಯಿತು (122:p895).

27, ನವೆಂಬರ್ 1957ರಂದು, 'ಜನ್ಮಿಕರ' (ಅಥವಾ ಜಮೀನುದಾರನಿಗೆ ಕೊಡಬೇಕಾದ ಗೇಣಿ) ರದ್ದು ಮಾಡುವ ಮಸೂದೆಯನ್ನು ಪ್ರಕಟಿಸಲಾಯಿತು. ಇದಕ್ಕೂ ಎರಡು ದಿನ ಮೊದಲು, ಕೃಷಿಸಾಲ ಪರಿಹಾರ ಮಸೂದೆ ಅಂಗೀಕಾರವಾಗಿತ್ತು. 1958ರ ಅಂತ್ಯಕ್ಕೂ ಮೊದಲು, 21733 ರೈತರಿಗೆ ಸುಮಾರು 2 ಕೋಟಿಯಷ್ಟು ರೂಪಾಯಿಗಳ ಪರಿಹಾರವನ್ನು ಪ್ರಸ್ತುತ ಕಾನೂನು ಒದಗಿಸಿತ್ತು. 1958ರಲ್ಲಿ ಅಂಗೀಕಾರಗೊಂಡ 'ಕೇರಳ ಕಾಂಪನ್ಸೇಷನ್ ಫಾರ್ ಟೆನಂಟ್ಸ್ ಇಂಪ್ರೂವ್‌ಮೆಂಟ್ ಆಕ್ಟ್', ಕಮ್ಯುನಿಸ್ಟ್ ಸರ್ಕಾರದ ಮತ್ತೊಂದು ಸುಧಾರಣೆಯಾಗಿದೆ. ಗೇಣಿದಾರರ ಸ್ಥಿತಿಯನ್ನು ಸುಧಾರಿಸುವುದಕ್ಕಾಗಿ, ಪರಿಹಾರ ದರ ಹೆಚ್ಚಿಸುವುದು ಮೇಲಿನ ಕಾನೂನಿನ ಉದ್ದೇಶವಾಗಿತ್ತು(102:21.04.59p6).

ಭೂಸುಧಾರಣೆಗೆ ಆದ್ಯತೆ ನೀಡುವಂತೆ ಸರ್ಕಾರಕ್ಕೆ ವಿಧಾನಸಭೆಯ ಮೊದಲ ಅಧಿವೇಶನವನ್ನು ಉದ್ದೇಶಿಸಿ ಮಾತನಾಡಿದ ರಾಜ್ಯಪಾಲರು ಹೀಗೆ ಸೂಚಿಸಿದ್ದಾರೆ:

"ಭೂಸುಧಾರಣೆಯ ಅಧ್ಯಯನಕ್ಕೆ ಸಮಿತಿ ರಚಿಸಬೇಕು ಎನ್ನುವ ಮೂಲಭೂತ ನಿರ್ದೇಶನವನ್ನು ಸರ್ಕಾರ ಕೈಬಿಟ್ಟು, ನೇರವಾಗಿ ಮಸೂದೆಯನ್ನು ರಚಿಸುವುದಕ್ಕೆ ತಯಾರಿ ಆರಂಭಿಸಿದರು"(146:p82).

ಯೋಜನಾ ಆಯೋಗದ ಸೂಕ್ಷ್ಮ ಪರಿಶೀಲನೆಯ ನಂತರ, ಕೇರಳ ಕೃಷಿ ಸಂಬಂಧಗಳ ಮಸೂದೆ 1957 ಡಿಸೆಂಬರ್ 18ರಂದು ಕೇರಳದ ಗೆಜೆಟ್‌ನಲ್ಲಿ

ಪ್ರಕಟಿಸಲಾಯಿತು. ಡಿಸೆಂಬರ್ 21, 1957ರಂದು ಕಂದಾಯ ಸಚಿವೆ ಕೆ.ಆರ್. ಗೌರಿ ಅವರು ರಾಜ್ಯ ವಿಧಾನಸಭೆಯಲ್ಲಿ ಮಸೂದೆಯನ್ನು ಮಂಡಿಸಿದರು. ನಂತರ ಅದನ್ನು ಸಾರ್ವಜನಿಕ ಅಭಿಪ್ರಾಯಕ್ಕಾಗಿ ಪ್ರಕಟಿಸಲಾಯಿತು.

86 ವಿಭಾಗಗಳನ್ನು ಹೊಂದಿರುವ ಕೇರಳ ಕೃಷಿ ಸಂಬಂಧಗಳ 1957ರ ಮಸೂದೆಯನ್ನು, 4 ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಪ್ರಾಥಮಿಕ: (ವಿಭಾಗಗಳು 1 ಮತ್ತು 2), ಗೇಣಿಪದ್ಧತಿಗೆ ಸಂಬಂಧಿಸಿದ ವ್ಯವಸ್ಥೆಗಳು (ವಿಭಾಗಗಳು 3 ರಿಂದ 59), ಸೀಲಿಂಗ್ ಪ್ರದೇಶವನ್ನು ಮೀರಿದ ಭೂಮಿಯ ಸ್ವಾಧೀನಪಡಿಸಿಕೊಳ್ಳಲಿಕ್ಕಿರುವ ನಿಯಂತ್ರಗಳು ಮತ್ತು ಹೆಚ್ಚುವರಿ ಭೂಮಿಯನ್ನು ಬಿಟ್ಟುಕೊಡುವ (ವಿಭಾಗ 60 ರಿಂದ 74), ವಿವಿಧ ವ್ಯವಸ್ಥೆಗಳು (ವಿಭಾಗ 75 ರಿಂದ 86), ಎರಡು ಅನುಸೂಚಿಗಳು ಹೀಗೆ

> "ಸ್ವಾಧಿನದಲ್ಲಿರುವ ಭೂಮಿಯ ಪ್ರಮಾಣವನ್ನು ನಿರ್ಧರಿಸಲು, ಮೂಲತಃ ಎಲ್ಲಾ ವರ್ಗದ ಗೇಣಿ/ಹಿಡುವಳಿದಾರರ ಹಕ್ಕುಗಳು ಮತ್ತು ಜವಾಬ್ದಾರಿಗಳನ್ನು ಕ್ರೋಢೀಕರಿಸಿ ವ್ಯಾಖ್ಯಾನಿಸಲು ಇರುವಂಥ ನಡವಳಿಕಾ ಕ್ರಮವನ್ನಾಗಿ ವಾಸ್ತವದಲ್ಲಿ ಈ ಮಸೂದೆಯನ್ನು ವಿನ್ಯಾಸಗೊಳಿಸಲಾಗಿದೆ.ರೈತರು ಮತ್ತು ಹಿಡುವಳಿದಾರರು ಅಸುರಕ್ಷಿತ ಗೇಣಿಗೆ ಪಡೆಯುವ ಆಸ್ತಿಯ ಕಾಲಾಧಿಯನ್ನು ಸಹ ವ್ಯಾಖ್ಯಾನಿಸಲಾಗಿದೆ"(125:p46).

ಈ ಮಸೂದೆಯನ್ನು ಶಾಸಕಾಂಗಸಭೆಯಲ್ಲೂ ಆಯ್ಕೆ ಸಮಿತಿಯ ಮಟ್ಟದಲ್ಲೂ ಸವಿಸ್ತಾರವಾದ ಚರ್ಚೆಗೆ ಒಳಪಡಿಸಿರುತ್ತದೆ. ಆಯ್ಕೆ ಸಮಿತಿಯಲ್ಲಿ 60 ದಿನಗಳ ಕಾಲದ ದೀರ್ಘ ಚರ್ಚೆ ನಡೆಯಿತು. ಜಿಲ್ಲಾ ಕೇಂದ್ರದಿಂದ ಸಾಕ್ಷ್ಯ ಸಂಗ್ರಹಿಸಲು 20 ದಿನಗಳು ಬೇಕಾದವು. ಒಟ್ಟು 249 ಸಾಕ್ಷಿಗಳು ವಿಚಾರಣೆಗೆ ಹಾಜರಾಗಿದ್ದರು(117:p126).

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪ್ರಜಾ ಸಮಾಜವಾದಿ ಪಕ್ಷ, ಮುಸ್ಲಿಂಲೀಗ್ ಮುಂತಾದ ವಿರೋಧಪಕ್ಷಗಳು, ಮತ್ತು ನಾಯರ್ ಸರ್ವೀಸ್ ಸೊಸೈಟಿ, ಕ್ಯಾಥೋಲಿಕ್ ಚರ್ಚ್‌ನಂತಹ ಜಾತಿ ಮತ್ತು ಸಮುದಾಯ ಸಂಘಟನೆಗಳು ಕೂಡ ಮಸೂದೆಯನ್ನು ತೀವ್ರವಾಗಿ ವಿರೋಧಿಸಿದರು. ಅವರು ಮಸೂದೆಯನ್ನು ಸೋಲಿಸಲು ಶಾಶಕಾಂಗಸಭೆಯ ಒಳಗೆ ಮತ್ತು ಹೊರಗೆ ದಣಿವರಿವಿಲ್ಲದೆ ಪ್ರಯತ್ನಿಸಿದರು(126:p1-15). ಮಸೂದೆಯ ನಿಬಂಧನೆಗಳ ಮೇಲಿನ ಚರ್ಚೆಯು ನಿರಂತರವಾಗಿ 124 ಗಂಟೆಗಳ ಕಾಲ ನಡೆಯಿತು. ಒಟ್ಟು 1296 ತಿದ್ದುಪಡಿಗಳನ್ನು ಪ್ರಸ್ತಾಪಿಸಲಾಯಿತು. ಅವುಗಳಲ್ಲಿ 175 ಸಂಖ್ಯೆಗಳಿಗೆ ಮಾತ್ರ ವಿಧಾನಸಭೆ ಅನುಮೋದನೆ ನೀಡಿತು(126:p1-15).

ಭಾರತದ ರಾಷ್ಟ್ರಪತಿಗಳ ಅನುಮೋದನೆಗಾಗಿ ಕೇರಳ ಶಾಸನ ಸಭೆಯು ಕಳುಹಿಸಿದ ಮಸೂದೆಯನ್ನು 27 ಜುಲೈ 1960ರಂದು ತಿರಸ್ಕರಿಸಲಾಯಿತು. 1957 ಡಿಸೆಂಬರ್ 18 ಮತ್ತು ಜುಲೈ 27, 1960ರ ನಡುವಿನ ಭೂಮಿಗೆ ಸಂಬಂಧಿಸಿದೆ ಮಧ್ಯಸ್ಥಿಕೆ ವಹಿವಾಟುಗಳನ್ನು ರದ್ದುಗೊಳಿಸುವ ನಿಬಂಧನೆಯನ್ನು ತೆಗೆದುಹಾಕಲು

ಕೇಂದ್ರ ಸರ್ಕಾರವು ರಾಷ್ಟ್ರಪತಿಗಳಿಗೆ ಸೂಚಿಸಿತು. ನಂತರ ಬಂದ ಸರ್ಕಾರವು ಅಂತಹ ತಿದ್ದುಪಡಿಯನ್ನು ಮಾಡಿತು. ಮೇಲಿನ ಅವಧಿಯಲ್ಲಿ ಭೂ ಕ್ರಯವಿಕ್ರಯಗಳಸಂಖ್ಯೆಗಳು ಎರಡು ಲಕ್ಷಕ್ಕೂ ಅಧಿಕವಾಗಿತ್ತು(34:p52). ಭೂ ವಿಂಗಡಣೆಯ ಪ್ರಕ್ರಿಯೆಯನ್ನು ದುರ್ಬಲಗೊಳಿಸುವುದೇ ಈ ಕ್ರಮದ ಹಿಂದಿನ ಉದ್ದೇಶವಾಗಿತ್ತೆನ್ನುವ ವಿಚಾರ ಬಹಿರಂಗಗೊಂಡಿತು. ಇದರ ಪರಿಣಾಮವಾಗಿ ಲಕ್ಷಾಂತರ ಭೂರಹಿತರು ಇದರ ದುಷ್ಪರಿಣಾಮಗಳನ್ನು ಅನುಭವಿಸಿದರು.

ಕಮ್ಯುನಿಸ್ಟ್ ಸರ್ಕಾರವು ಸಾಲಗಾರ ರೈತರ ನೋವನ್ನು ನಿವಾರಿಸಲು ಇನ್ನೂ ಎರಡು ಕಾನೂನುಗಳನ್ನು ಜಾರಿಗೆ ತಂದಿತು. ಕಾಯಿದೆ ಸಂಖ್ಯೆ 31 'ಋಣ ಪರಿಹಾರ ಕಾಯಿದೆ, 1958', ಕಾಯಿದೆ ಸಂಖ್ಯೆ 35 'ಹುಂಡಿಕಾ ವ್ಯಾಪಾರಿಗಳನ್ನು ನಿಯಂತ್ರಿಸಲಿರುವ ಕಾನೂನು' ಮುಂತಾದವುಗಳೇ ಪ್ರಸ್ತುತ ಕಾನೂನುಗಳು. ಈ ಕಾನೂನುಗಳು ರಾಜ್ಯಾದ್ಯಂತ ಜಾರಿಯಲ್ಲಿದ್ದವು(187:p21). ಅನ್ಯಾಯದ ಬಡ್ಡಿಗೆ ಸಾಲಕೊಡುವವರನ್ನು ತಡೆಯುವುದು ಈ ಒಂದು ಕಾನೂನುಗಳ ಉದ್ದೇಶ. ಹುಂಡಿ ವ್ಯಾಪಾರಿಗಳು ಪರವಾನಗಿ ತೆಗೆದುಕೊಳ್ಳಬೇಕು, ತಮ್ಮ ವ್ಯವಹಾರಗಳನ್ನುಸುಸ್ಪಷ್ಟವಾದ ಮತ್ತು ಪಾರದರ್ಶಕವಾದ ಲೆಕ್ಕದ ಖಾತೆಯನ್ನು ಹೊಂದಿರಬೇಕೆನ್ನುವ ವ್ಯವಸ್ಥೆಯನ್ನೂ ಈ ಕಾನೂನು ಒದಗಿಸಿತು(34:p52).

ಕೆಲವು ನಿರ್ಬಂಧಗಳನ್ನು ಹೇರುವುದಕ್ಕಾಗಿಯೂ ಖಾಸಗಿ ಅರಣ್ಯ ಭೂಮಿ ಒತ್ತುವರಿಯಂಥ ದುರ್ಬಳಕೆಯನ್ನು ತಡೆಯುವುದಕ್ಕಾಗಿಯೂ ಎರಡು ಕಾನೂನುಗಳನ್ನು ಅಂಗೀಕರಿಸಲಾಯಿತು(120:p6). ಖಾಸಗಿ ಅರಣ್ಯ ಸಂರಕ್ಷಣಾ ತಿದ್ದುಪಡಿ ಕಾಯಿದೆ (ಕಾಯಿದೆ ಸಂಖ್ಯೆ. 10, 1958), ಖಾಸಗಿ ಅರಣ್ಯ ನಿರ್ವಹಣಾ ಕಾಯಿದೆ (ಕಾಯಿದೆ ಸಂಖ್ಯೆ 13,1958). ಮುಂತಾದ ಖಾಸಗಿ ಅರಣ್ಯ ಕ್ಷೇತ್ರಗಳ ಕಾನೂನುಗಳು, ಸರ್ಕಾರಕ್ಕೆ ಐದು ವರ್ಷಗಳ ಕಾಲ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಅಧಿಕಾರ ನೀಡಿತು,(107:17.10.58)

ಕಮ್ಯುನಿಸ್ಟ್ ಸರ್ಕಾರವು ಕೃಷಿ ಉತ್ಪಾದನೆಯನ್ನು ಉತ್ತೇಜಿಸಲು ಹಲವಾರು ಕ್ರಮಗಳನ್ನು ತೆಗೆದುಕೊಂಡಿತು(48:p159). ಅವುಗಳಲ್ಲಿ ಕೆಲವುಗಳು ವಿಶೇಷವಾಗಿ ಉಲ್ಲೇಖನಾರ್ಹಗಳಾಗಿವೆ.

1. ರಸಗೊಬ್ಬರಗಳು, ಕೀಟನಾಶಕಗಳು ಮತ್ತು ರಾಸಾಯನಿಕಗಳ ತಯಾರಿಕೆ ಮತ್ತು ಪೂರೈಕೆ;
2. ಕೃಷಿ ಸಂಶೋಧನಾ ಕೇಂದ್ರಗಳ ಸ್ಥಾಪನೆ,
3. ಬೀಜ ಉತ್ಪಾದನಾ ಕೇಂದ್ರಗಳ ಸ್ಥಾಪನೆ ಮತ್ತು ಗುಣಮಟ್ಟದ ಬೀಜಗಳ ಪೂರೈಕೆ
4. ಸಣ್ಣ ನೀರಾವರಿ ಸೌಲಭ್ಯಗಳ ಸ್ಥಾಪನೆ
5. ಕೃಷಿ ವ್ಯವಸ್ಥೆಯ ಮರುಸಂಘಟನೆ
6. ಜಪಾನಿನ ಕೃಷಿ ಪದ್ಧತಿಗಳ ಅನುಕರಣೆ ಇತ್ಯಾದಿಗಳು..(48:p13-18;102:p17-18).

ಕೇರಳ ಸರಕಾರವೆಂಬ ಆನೆ ಮತ್ತು ಪಿಎಸ್‌ಪಿ, ಕಾಂಗ್ರೆಸ್, ಮುಸ್ಲಿಂ ಲೀಗ್, ಆರ್‌ಎಸ್‌ಪಿ ಮುಂತಾದ ಕುರುಡರು
*ವ್ಯಂಗ್ಯಚಿತ್ರ: ರಂಗನಾಥನ್*

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಕಾಂಪೋಸ್ಟ್ ಗೊಬ್ಬರ ತಯಾರಿಸಲು ಸರ್ಕಾರ ಉತ್ತೇಜನ ನೀಡಿತು. ರೈತರಿಗೆ ಕಾಂಪೋಸ್ಟ್ ಹಾಕಲು ರೈತರಿಗೆ ತರಬೇತಿ ನೀಡಲು ಸುಶಿಕ್ಷಿತ ಅಧಿಕಾರಿಗಳನ್ನು ನೇಮಿಸಲಾಯಿತು(107:21.04.58). ಗೋಡಂಬಿ, ರಬ್ಬರ್ ಕೃಷಿಯನ್ನು ವಿಸ್ತರಿಸಲು ಪರಿಣಾಮಕಾರಿ ಕ್ರಮಗಳನ್ನುಕೈಗೊಳ್ಳಲಾಯಿತು. ಕೃಷಿ ಸಹಕಾರ ಸಂಘಗಳು ಮತ್ತು ಸಾಮೂಹಿಕ ಕೃಷಿ ಸಂಘಗಳನ್ನು ರಚಿಸಲಾಯಿತು( 120:p21-22).

ಕೃಷಿ ಸಂಪನ್ಮೂಲಗಳಿಗೆ ನ್ಯಾಯಯುತ ಬೆಲೆ ಸಿಗುವ ವ್ಯವಸ್ಥೆ ಮಾಡಿದ ಸರ್ಕಾರ, 'ರಾಜ್ಯ ವ್ಯಾಪಾರ ನಿಗಮ'ವನ್ನು ಸ್ಥಾಪಿಸಿ, ಆ ಮೂಲಕ ಕೇರಳದಿಂದ ರಫ್ತಾಗುವ ಸರಕುಗಳಿಗೆ, ನ್ಯಾಯಯುತ ಬೆಲೆಯನ್ನು ಖಾತ್ರಿಪಡಿಸಲಾಯಿತು( 129:11-09-158).

ಸರ್ಕಾರದ ಒಡೆತನದ ಹೆಚ್ಚುವರಿ ಕಂದಾಯ ಭೂಮಿ (ಪೊರಂಪೋಕ್ ಭೂಮಿ)ಗಳನ್ನು ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ನಡುವೆ ವಿತರಣೆ ಮಾಡಲಾಯಿತು(84:13.12.58). ಈ ಗುರಿಯನ್ನು ಸಾಧಿಸಲು ಅರ್ಹರಾದ ಜನರನ್ನು/ಫಲಾನುಭವಿಗಳನ್ನು ಗುರುತಿಸಲು ಜನತಾ ಸಮಿತಿಗಳನ್ನು ರಚಿಸಲಾಯಿತು(48:p115-116). ವಿತರಣಾ ಪ್ರಕ್ರಿಯೆಗಳಲ್ಲೂ ಅಂತಹ ಸಮಿತಿಗಳು ನಿರ್ಣಾಯಕ ಪಾತ್ರವನ್ನು ವಹಿಸಿವೆ. ಏಳೂವರೆ ಲಕ್ಷ ಎಕರೆಯಷ್ಟು ಸರಕಾರಿ ಭೂಮಿಯನ್ನು ಬಡ ರೈತರಿಗೆ ಹಂಚಲಾಯಿತು. ಅದರ ಫಲಾನುಭವಿಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದವರೂ ಇದ್ದಾರೆ( 130:p7).

ಸಂಕೀರ್ಣ ಕೃಷಿ ಸಮಸ್ಯೆಗಳನ್ನು ಪರಿಹರಿಸಲು ಮೊದಲನೆಯ ಕಮ್ಯುನಿಸ್ಟ್

ಸರ್ಕಾರ ಜಾರಿಗೆ ತಂದ ದೂರದೃಷ್ಟಿಯ ಯೋಜನೆಗಳು ಕೇರಳದ ದುಡಿಯುವ ರೈತರಿಗೆ ದೊಡ್ಡ ಪರಿಹಾರಗಳನ್ನೊದಗಿಸಿವೆ. ಉತ್ಪಾದನಾ ಸಾಧನಗಳಲ್ಲಿ ಮತ್ತು ಉತ್ಪಾದನಾ ಸಂಬಂಧಗಳಲ್ಲಿ ಧನಾತ್ಮಕ ಬದಲಾವಣೆಗಳು ಪ್ರಕಟಗೊಂಡಿವೆ. ಉತ್ಪಾದನಾ ಪ್ರಕ್ರಿಯೆಯ ವೇಗ ಮತ್ತು ಉತ್ಪನ್ನಗಳ ಪ್ರಮಾಣವು ಸ್ಪಷ್ಟವಾಗಿ ಹೆಚ್ಚಾಗಿವೆ. ಹೀಗೆ ಮೊದಲ ಕಮ್ಯುನಿಸ್ಟ್ ಸರ್ಕಾರ ಜಾರಿಗೆ ತಂದ ಕೃಷಿ ಸುಧಾರಣೆಗಳಲ್ಲಿ ಉತ್ಕೃಷ್ಟವಾದ ಯಶಸ್ಸುಗಳು ಕೇರಳದ ರೈತರಿಗೆ ಅನುಭವವೇದ್ಯವಾಗಿವೆ. ಕೆಳಸ್ತರದ ಜನರ ಜೀವನಮಟ್ಟ ಉನ್ನತಮಟ್ಟಕ್ಕೇರಿಸಲ್ಪಟ್ಟಂತೆ ಕಂಡುಬರುತ್ತಿದೆ. ಸರಳವಾಗಿ ಹೇಳುವುದಾದರೆ, ಕೇರಳದಲ್ಲಿ ಅಸ್ತಿತ್ವದಲ್ಲಿದ್ದ ಊಳಿಗಮಾನ್ಯ ಉತ್ಪಾದನಾ ಸ್ವರೂಪಕ್ಕೆ, ಮೊದಲ ಇಎಂಎಸ್ ಸರ್ಕಾರದ ಕೃಷಿ ಸುಧಾರಣೆಗಳು ಭಾರೀ ಹೊಡೆತವನ್ನೇ ನೀಡಿರುತ್ತದೆ.



5

# ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಏಕೀಕರಣ

*(ರಾಜ್ಯದಲ್ಲಿ ಕಮ್ಯುನಿಸ್ಟ್ ವಿರೋಧಿ ಗುಂಪುಗಳ ಬೆಳವಣಿಗೆ ಸಮನ್ವಯ ಮತ್ತು ಸಬಲೀಕರಣ ಇವೇ ಮುಂತಾದವು ಈ ಅಧ್ಯಾಯದ ವಿಶ್ಲೇಷಣಾ ವಿಷಯವಾಗಿವೆ. ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್, ಕಮ್ಯುನಿಸ್ಟ್ ವಿರೋಧಿರಂಗ, ಕ್ರಿಸ್ಟೋಫರ್ ಚಳುವಳಿ, ನಾಯರ್ ಸರ್ವೀಸ್ ಸೊಸೈಟಿ, ಶ್ರೀನಾರಾಯಣ ಧರ್ಮ ಸಂರಕ್ಷಣಾ ಸಭೆ, ಇಂಡಿಯನ್ ಯೂನಿಯನ್ ಮುಸ್ಲಿಂ ಲೀಗ್ ಹೀಗೆ ವಿವಿಧ ಜಾತಿ/ಸಮುದಾಯ ಮತ್ತು ಧಾರ್ಮಿಕ-ರಾಜಕೀಯ ಗುಂಪುಗಳ ಪಾತ್ರ, ಈ ಅಧ್ಯಾಯದಲ್ಲಿ ಪ್ರಮುಖವಾಗಿ ಪ್ರಸ್ತುತಪಡಿಸಲಾಗಿದೆ. ಕರಪತ್ರಗಳು, ಆಧ್ಯಾತ್ಮಿಕ ಪ್ರವಚನಗಳು, ನಾಟಕಗಳು ಮತ್ತು ವ್ಯಾಖ್ಯಾನಗಳು ಇವೇ ಮುಂತಾದವುಗಳನ್ನು, ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಟುವಟಿಕೆಗಳನ್ನು ಹೇಗೆ ತೀವ್ರಗೊಳಿಸಲು ಬಳಸಲಾಗಿದೆ ಎಂದು ಸೂಚಿಸುತ್ತದೆ.)*

ಕೇರಳದಲ್ಲಿ ಕಮ್ಯುನಿಸ್ಟ್ ಚಳುವಳಿ ಮತ್ತು ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರದ ನಾಶಕ್ಕಾಗಿ, ಕಮ್ಯುನಿಸ್ಟ್ ವಿರೋದಿಗಳ ಶಕ್ತಿ ಬಲಗೊಂಡಿದ್ದು ಅತ್ಯಂತ ಗಮನಾರ್ಹ ವಿದ್ಯಮಾನವಾಗಿತ್ತು. ಕೇರಳದ ಕಮ್ಯುನಿಸ್ಟ್ ಚಳುವಳಿಯ ವಿಕಸನದೊಂದಿಗೆ, ಕಮ್ಯುನಿಸ್ಟ್ ವಿರೋಧಿ ಪ್ರಚಾರವೂ ಹೆಚ್ಚಾಗುತ್ತಾ ಹೋಯಿತು. ಕ್ಯಾಥೋಲಿಕರ ನೇತೃತ್ವದಲ್ಲಿ ಕಮ್ಯುನಿಸ್ಟ್ ವಿರೋಧಿ ಪ್ರಚಾರ ಒಂದು ಬೇರ್ಪಟ್ಟ ವಿಷಯವಾಗಿರಲಿಲ್ಲ. ಅಂತರಾಷ್ಟ್ರೀಯವಾಗಿ ಕ್ಯಾಥೋಲಿಕರ ಕಮ್ಯುನಿಸಂ ವಿರೋಧಿ ಚಟುವಟಿಕೆಗಳನ್ನು ಪ್ರತ್ಯೇಕಿಸಿ ನೋಡಲು ಸಾಧ್ಯವಿಲ್ಲ. ಪಾಶ್ಚಾತ್ಯ ಜಗತ್ತಿನಲ್ಲಿ ಕಮ್ಯುನಿಸಂನ ಹುಟ್ಟು ಮತ್ತು ಅದರ ವಿಕಾಸವು ವಾಸ್ತವವಾಗಿ ರೋಮನ್ ಕ್ಯಾಥೋಲಿಕ್ ಚರ್ಚ್‌ನ ನಾಯಕತ್ವದಲ್ಲಿ ನಡೆದ ಕಮ್ಯುನಿಸ್ಟ್ ವಿರೋಧಿ ಅಭಿಯಾನದ ಮೂಲದೊಂದಿಗೆ ಹೆಣೆದುಕೊಂಡಿತ್ತು. ಇದರ ಪ್ರಬಲವಾದ ಪುರಾವೆ ಬಹಳ ಹಿಂದೆಯೇ, 1846ರ ಕಾಲಘಟ್ಟದಲ್ಲಿ, ಪೋಪ್ ಪಯಸ್-IX ಹೊರಡಿಸಿದ ಅವಹೇಳನಕಾರಿ ಹೇಳಿಕೆಯಲ್ಲಿದೆ:

"ಪ್ರಕೃತಿಯ ನಿಯಮಕ್ಕೆ ವಿರುದ್ಧವಾದ ಕಮ್ಯುನಿಸಂ ಎನ್ನುವ ಹೆಸರಿನ ಕುಖ್ಯಾತವಾದ ತತ್ವ-ಸಿದ್ಧಾಂತ/ಸಂಹಿತೆ, ಒಮ್ಮೆ ಜಾರಿಗೊಂಡುಬಿಟ್ಟರೆ ಅದು ಎಲ್ಲಾ ಮಾನವರ ಹಕ್ಕುಗಳನ್ನು ಮತ್ತು ಆಸ್ತಿಗಳನ್ನು ಇಡಿಯಾಗಿ ನಾಶಪಡಿಸುತ್ತದೆ

ಮತ್ತು ಸಮಾಜವನ್ನು ಸುಟ್ಟು ಭಸ್ಮಮಾಡಿಬಿಡುತ್ತದೆ"(131:).

1878ರಲ್ಲಿ ಪೋಪ್, ಕಮ್ಯುನಿಸಂ ಅನ್ನು ವ್ಯಾಖ್ಯಾನಿಸುವಲ್ಲಿ ಲಿಯೋ XIII, ಮತ್ತೂ ಒಂದು ಹೆಜ್ಜೆ ಮುಂದಕ್ಕೆ ಹೋದರು.

"ಮಾನವ ಸಮಾಜದ ಮಜ್ಜೆ/ಮೆದುಳಿನೊಳಗೆ ನುಸುಳಿಕೊಂಡು ಸಮಾಜವನ್ನು ಸರ್ವನಾಶದೆಡೆಗೆ ಕೊಂಡೊಯ್ಯುವ ಮಹಾರೋಗ...."(131:)

ಇಂಥ ಹೇಳಿಕೆಗಳಿಂದ ಕಮ್ಯುನಿಸ್ಟ್ ಚಳವಳಿಯ ಬಗ್ಗೆ ಕ್ಯಾಥೋಲಿಕ್ ಚರ್ಚ್‌ಗಿರುವುದು ಹಗೆತನ ಮತ್ತು ದ್ವೇಷ, ಅವುಗಳನ್ನು ಹೊರತುಪಡಿಸಿ ಬೇರೇನೂ ಅಲ್ಲ, ಎನ್ನುವುದು ಸ್ಪಷ್ಟ. ಕಮ್ಯುನಿಸಂ ಅನ್ನು ಅದರ ಭ್ರೂಣಾವಸ್ಥೆಯಲ್ಲೇ ಇಲ್ಲವಾಗಿಸಲು ಶಕ್ತವಾದ ಭಾಷೆಯಲ್ಲೇ ಅದನ್ನು ನಾಶಪಡಿಸುತ್ತಾ ಪೋಪ್ ಸಮೂಹ ಚಾಕ್ರಿಕ (ಚರ್ಚ್ ಅಧಿಕಾರಶ್ರೇಣಿಗಳು ಆಗಾಗ್ಗೆ ಹೊರಡಿಸುವ ಸುತ್ತೋಲೆಗಳು/ ಎನ್‌ಸೈಕ್ಲಿಕಲ್) ಲೇಖನಗಳನ್ನು ಬರೆದಿದ್ದರು. ಕಮ್ಯುನಿಸಂಗಾಗಿ ಶವಪೆಟ್ಟಿಗೆ ನಿರ್ಮಿಸಲು ಪರಿಣಾಮಕಾರಿಯಾದ ನೀತಿಗಳನ್ನು ಯೋಜಿಸಲು, ಅಂತಹ ಲೇಖನಗಳು ಬಿಷಪ್‌ಗಳಿಗೂ ಮತ್ತಿತರ ಪಾದ್ರಿಗಳಿಗೂ ಉಪಯೋಗಕ್ಕೆ ಬಂದವು.

### ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಳುವಳಿಯ ಮೂಲ

ಕೇರಳದಲ್ಲಿ 1920ರ ಕಾಲಘಟ್ಟದಿಂದಲೇ ಕಮ್ಯುನಿಸ್ಟ್ ವಿರೋಧಿ ಚಳುವಳಿಯ ಮೂಲವನ್ನು ನೋಡಬಹುದು. 1939ರಲ್ಲಿ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾದ ಕೇರಳ ಘಟಕದ ರಚನೆ ಮತ್ತು 1951ರಲ್ಲಿ ಫಾದರ್ ವಡಕ್ಕನ್‌ರ 'ಕಮ್ಯುನಿಸ್ಟ್ ವಿರೋಧಿ ರಂಗ'ದ ರಚನೆಯಾಗುವುದಕ್ಕಿಂತಲೂ ಬಹಳ ಹಿಂದೆಯೇ ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಳುವಳಿಗಳು ಪ್ರಾರಂಭಗೊಂಡಿದ್ದವು. ಕ್ರಿಶ್ಚಿಯನ್ ಚರ್ಚ್‌ನ ನಿಯಂತ್ರಣದಲ್ಲಿರುವ ಆಲುವಾ ಬಳಿಯ ಮಂಗಳಪ್ಪುಳದ ಕ್ಯಾಥೋಲಿಕ್ ಸೆಮಿನರಿಯು, 1920ರಿಂದ ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಅಭಿಯಾನದ ಮುಖ್ಯ ಕೇಂದ್ರವಾಗಿ ಕಾರ್ಯನಿರ್ವಹಿಸಿತ್ತಾ ಇತ್ತು. ಸೇಕ್ರೆಡ್ ಹಾರ್ಟ್ ಲೀಗ್, ಮಂಗಳಪ್ಪುಳ ಸೆಮಿನರಿಯ ಪ್ರಕಾಶನ ವಿಭಾಗವಾದ, 'ಸೇಕ್ರೆಡ್ ಹಾರ್ಟ್ ಲೀಗ್', ಕಮ್ಯುನಿಸ್ಟ್ ವಿರೋಧಿ ಸಾಹಿತ್ಯದ ಹಲವಾರು ಪುಸ್ತಕ ಮತ್ತು ಕರಪತ್ರಗಳನ್ನೂ ಪ್ರಕಟಿಸುತ್ತಿತ್ತು. ಈ ಕಾಲಘಟ್ಟದಲ್ಲಿಯೇ ಇತರ ಕೆಲವು ಪ್ರಕಾಶನ ಸಂಸ್ಥೆಗಳು ಕಮ್ಯುನಿಸ್ಟ್ ವಿರೋಧಿ ಸಾಹಿತ್ಯಗಳಿಗೆ ಉತ್ತಮ ಕೊಡುಗೆಯನ್ನು ನೀಡಿದ್ದವು.*3 ಸೇಂಟ್ ಜೋಸೆಫ್ ಪ್ರೆಸ್, ಮನ್ನಾನಂ, ಡೆಮಾಕ್ರಟಿಕ್

* ಇದೇ ವರ್ಗಕ್ಕೆ ಸೇರಿದ ಹೆಚ್ಚಿನ ಸಂಖ್ಯೆಯ ಕೃತಿಗಳನ್ನು ವಡವತ್ತೂರು ಮತ್ತು ಮಂಗಳಪುಳದಲ್ಲಿರುವ ಥಿಯೋಲಾಜಿಕಲ್ ಸೆಮಿನರಿಗಳಲ್ಲಿ ಸಂರಕ್ಷಣೆ ಮಾಡಿಡಲಾಗಿದೆ. 'ಪಾಲಾ'ದ ಓಶಾನಮೌಂಟ್‌ನಲ್ಲಿರುವ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಕ್ರಿಶ್ಚಿಯನ್ ಸ್ಟಡೀಸ್' ಲೈಬ್ರರಿಯಲ್ಲೂ ಎಂ.ಎ. ಜಾನ್, ಕೆಎಂ ಚುಮ್ಮಾರ್ ಮತ್ತು ಇತರರ ವೈಯಕ್ತಿಕ ಸಂಗ್ರಹಗಳಲ್ಲೂ ಬಹಳಷ್ಟು ಕಮ್ಯುನಿಸ್ಟ್ ವಿರುದ್ಧ ಲೇಖನಗಳು, ಕರಪತ್ರಗಳು ಮತ್ತು ಕೃತಿಗಳು ಲಭ್ಯವಿದೆ.

ಪಬ್ಲಿಕೇಷನ್ಸ್ ಎರ್ನಾಕುಲಂ, ಎಸಿಎಫ್ ಬುಕ್ ಸ್ಟಾಲ್ ತ್ರಿಶೂರ್, ವಾಯ್ಸ್ ಆಫ್ ಕೇರಳ ಎರ್ನಾಕುಲಂ, ಮಲಯಾಳ ಮನೋರಮಾ ಪಬ್ಲಿಕೇಷನ್ಸ್ ಕೊಟ್ಟಾಯಂ, ದೀಪಿಕಾ ಪಬ್ಲಿಕೇಷನ್ಸ್, ಕೊಟ್ಟಾಯಂ, ಮುಂತಾದವು ಈ ವಿಷಯದಲ್ಲಿ ವಿಶೇಷ ಉಲ್ಲೇಖಕ್ಕೆ ಅರ್ಹವಾಗಿವೆ.

ಈ ಅವಧಿಯಲ್ಲಿ ಕೇರಳದಲ್ಲಿ ಪ್ರಚಾರ ಪಡೆದ ಕಮ್ಯುನಿಸ್ಟ್ ವಿರುದ್ಧದ ಸಾಹಿತ್ಯದ ಕೆಲವು ಉದಾಹರಣೆಗಳು ಇಲ್ಲಿ ಉಲ್ಲೇಖನಕ್ಕೆ ಒಳಪಡಿಸಲಾಗಿದೆ. ಕೆ.ಸಿ. ವರ್ಕಿ, ಬಿಎಎಲ್‌ಟಿ, 1929ರಲ್ಲಿ ಬರೆದು ಪ್ರಕಾಶನಗೊಂಡ ಬೆನಿಟೊ ಮುಸೊಲಿನಿಯ ಜೀವನಚರಿತ್ರೆಯು '(ಸಿನೋರ್ ಮುಸೊಲಿನಿ)' ಕಮ್ಯುನಿಸ್ಟ್ ವಿರೋಧಿ ಪ್ರಚಾರವನ್ನು ಒಳಗೊಂಡಿತ್ತು(132:). ಮನ್ನಾನ್‌ನಲ್ಲಿರುವಸೇಂಟ್ ಜೋಸೆಫ್ ಪ್ರೆಸ್‌ನ ಅಧೀಕ್ಷಕರಾಗಿದ್ದ ಸಿ.ಡಿ.ಯ ಮತ್ತು 'ನಸ್ರಾಣಿ ದೀಪಿಕಾ'ದ ಮ್ಯಾನೇಜರ್ ಆಗಿದ್ದ ಫಾದರ್ ಸೈಮನ್ ಸಿ.ಡಿ.ಯವರ ಪ್ರೇರಣೆಯಿಂದಲೇ ಪ್ರಸ್ತುತ ಪುಸ್ತಕ ಬರೆಯಲಾಗಿದ್ದೆಂದು ಸ್ವತಃ ವರ್ಕಿ ಹೇಳಿಕೊಂಡಿದ್ದಾರೆ(132:). ಈ ಪುಸ್ತಕ ಮುಸೊಲಿನಿಯ ಫ್ಯಾಸಿಸ್ಟ್ ಬಣಗಳನ್ನು ಚರ್ಚ್‌ಗಳ ಬೆಂಬಲದೊಂದಿಗೆ ಪ್ರಶಂಸಿಸುತ್ತದೆ. ಸೋವಿಯತ್ ರಷ್ಯಾದ ಘಟನೆಗಳನ್ನು ವಿರೂಪಗೊಳಿಸಿಕೊಂಡು, ಅವುಗಳನ್ನು ತಿರಸ್ಕಾರಗೊಳಿಸಿ ಈ ಪುಸ್ತಕದಲ್ಲಿ ಪ್ರಸ್ತುತಪಡಿಸಲಾಗಿದೆ.

ಈ ನಿಟ್ಟಿನಲ್ಲಿ ಅತ್ಯಂತ ಪ್ರಮುಖವಾದ ಪುಸ್ತಕ 'ಕಮ್ಯುನಿಸಂ ದೇವರ ಶತ್ರು' (ಕಮ್ಯುನಿಸಂ ದಿ ಎನಿಮಿ ಆಫ್ ಗಾಡ್) ಆಗಿರುತ್ತದೆ. 'ಡಿವೈನ್ ರೆಡೆಂಪ್ಷನ್ಸ್'/'ಡಿವೈನ್ ರೆಡೆಂಟೆರಿಸ್' ಎನ್ನುವ ಶೀರ್ಷಿಕೆಯಡಿಯಲ್ಲಿ ಲ್ಯಾಟಿನ್ ಭಾಷೆಯಲ್ಲಿ ಪಿಯಸ್-XI ಪೋಪ್ ಬರೆದ ಪತ್ರ, ಇದರ ಮೂಲರೂಪವಾಗಿತ್ತು. ಈ ಪತ್ರವನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿಯೇ, ಪಿತೃಪ್ರಧಾನ/ಪಿತೃಪ್ರಭುತ್ವ, ಆರ್ಚ್‌ಬಿಷಪ್‌ಗಳು, ಬಿಷಪ್‌ಗಳು ಮತ್ತು ಸಾಮಾನ್ಯ ಪಾದ್ರಿಗಳಿಗೆ ಕಳುಹಿಸಲಾಗಿತ್ತು. ಇದರ ಇಂಗ್ಲಿಷ್ ಅನುವಾದವನ್ನು ಡಬ್ಲಿನ್‌ನಲ್ಲಿರುವ 'ಕ್ಯಾಥೋಲಿಕಾ ಟ್ರೂತ್ ಸೊಸೈಟಿ ಆಫ್ ಐರ್ಲೆಂಡ್', ಏಪ್ರಿಲ್ 1937ರಲ್ಲಿ ಪ್ರಕಟಿಸಲಾಯಿತು. ಕಮ್ಯುನಿಸಂನೊಂದಿಗೆ ಚರ್ಚುಗಳಿಗಿರುವ ಅಧಿಕೃತ ಮನೋಭಾವನ್ನು ಪ್ರಸ್ತುತ ಈ ಪುಸ್ತಕ ಪ್ರತಿಫಲಿಸುತ್ತದೆ(131:P.4). ಈ ಪುಸ್ತಕದಲ್ಲಿ, ಕಮ್ಯುನಿಸ್ಟರನ್ನು 'ಚರ್ಚಿನ ನಿರಂತರ ಶತ್ರುಗಳು' ಎಂದು ಚಿತ್ರಿಸಲಾಗಿದೆ(131:P.4). ಕಮ್ಯುನಿಸಂನ ಸಿದ್ಧಾಂತ ಮತ್ತು ಅದರ ಪ್ರಯೋಗವನ್ನು ಬಹಿರಂಗವಾಗಿ (ದಿವ್ಯದರ್ಶನ/ Revealation) ಪ್ರಕಟಪಡಿಸುವಿಕೆಯ ರೀತಿಯಲ್ಲಿ ವ್ಯಾಖ್ಯಾನಿಸಿದ ನಂತರ, ಕಮ್ಯುನಿಸಂನ್ನು ಇನ್ನಿಲ್ಲದಂತೆ ಮಾಡಲು ಪೋಪ್‌ರವರು ವಿವಿಧ ಮಾರ್ಗಗಳನ್ನು ಮತ್ತು ವಿಧಾನಗಳನ್ನು ಸೂಚಿಸುತ್ತಾರೆ.

ಫಾದರ್ ಇಲ್ಡಿಫಿನೋಸ್ ಬರೆದು, 1938ರ ಮೇ ತಿಂಗಳಲ್ಲಿ ಆಲುವಾದಲ್ಲಿರುವ ಎಸ್.ಎಚ್. ಲೀಗ್ ಪ್ರಕಟಿಸಿದ 'ಸಮಾಜವಾದ, ಕಮ್ಯುನಿಸಂ ಮತ್ತು ಬೊಲ್ಶೆವಿಸಂ'

ಎನ್ನುವ ಅವರ ಪುಸ್ತಕ ಇನ್ನೊಂದು ಉದಾಹರಣೆಯಾಗಿದೆ. ಲೇಖಕರು ಮೇಲಿನ ಸಿದ್ಧಾಂತವನ್ನು ಕಮ್ಯುನಿಸ್ಟ್ ವಿರೋಧಿ ಪ್ರಚಾರಕ್ಕೆ ಅನುಕೂಲಕರವಾಗುವ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವರು ಹೀಗೆ ಉಲ್ಲೇಖಿಸುತ್ತಾರೆ:

> "ಕಮ್ಯುನಿಸ್ಟ್ ಮಾರ್ಗದೊಂದಿಗೆ ಕ್ಯಾಥೋಲಿಕ್ ಚರ್ಚ್‌ನ್ನು ಯಾವುದೇ ರೀತಿಯಲ್ಲಿ ಸಂಬಂಧ ಕಲ್ಪಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಕಮ್ಯುನಿಸಂನಲ್ಲಿ ದೇವರನ್ನು ನಿಂದಿಸಲಾಗುತ್ತದೆ, ನೈತಿಕತೆಯು ಕಾನೂನುಬಾಹಿರವಾಗಿದೆ, ಮನುಕುಲವನ್ನು ಸ್ವೇಚ್ಛಾಧಿಕಾರಿ ರಾಷ್ಟ್ರದ ಆರ್ಥಿಕ ಗುಲಾಮನನ್ನಾಗಿಸಿಬಿಡುತ್ತದೆ" (133:p.48).

ಇ.ಎಲ್.ಕರಾನ್ ರಚಿಸಿದ 'ಕಮ್ಯುನಿಸಂ ಕುರಿತ ಸತ್ಯಗಳು'(Facts About Communism) ಪುಸ್ತಕದಲ್ಲಿ, ಕಮ್ಯುನಿಸಂನ ವ್ಯಾಖ್ಯಾನದ ಚರ್ಚ್ ಆವೃತ್ತಿಯನ್ನು ಒಳಗೊಂಡಿದೆ. ಇದನ್ನು ಕೇರಳದಲ್ಲಿ 'ಸೇಕ್ರೆಡ್ ಹಾರ್ಟ್ ಲೀಗ್' ಪ್ರಕಟಿಸಿದೆ. ಪುಸ್ತಕದಲ್ಲಿ ಕೆಲವು ಅಭಿವ್ಯಕ್ತಿಗಳು/ಪದಪ್ರಯೋಗಗಳು ಹೀಗಿವೆ:

> "ದೇವರ, ಧರ್ಮದ ಮತ್ತು ರಾಷ್ಟ್ರದ ಹಿತಾಸಕ್ತಿಗಳಂತೆ, ದುಡಿಯುವ ಜನರ ಹಿತಾಸಕ್ತಿಗಳಲ್ಲಿ ಕ್ಯಾಥೋಲಿಕ್ ಚರ್ಚ್ ಕಮ್ಯುನಿಸಂ ಅನ್ನು ವಿರೋಧಿಸುತ್ತದೆ..."(134:).

'ಸೋವಿಯತ್ ರಷ್ಯಾದ ಕಾರ್ಮಿಕ' (The worker of Russia) ಎನ್ನುವ ಕಮ್ಯುನಿಸ್ಟ್ ವಿರೋಧಿ ಪುಸ್ತಕವನ್ನು ಮೊದಲು ಅಮೇರಿಕಾದಲ್ಲಿ ಪ್ರಕಟಿಸಿ, ನಂತರ 1940ರಲ್ಲಿ ಎಸ್.ಎಚ್.ಲೀಗ್‌ಗಾಗಿ ಸಹೋದರ ಜೇಮ್ಸ್ ಮಲಯಾಳಂ ಭಾಷೆಗೆ ಅನುವಾದಿಸಿ ಪ್ರಕಟಿಸಲಾಯಿತು. ಈ ಪುಸ್ತಕದಲ್ಲಿ ಸೋವಿಯತ್ ರಷ್ಯಾದ ಬಗ್ಗೆ ವಿಕೃತ ಮತ್ತು ಕಳಂಕಿತವಾದ ರೂಪದಲ್ಲಿ ಪ್ರಸ್ತುತಪಡಿಸಲಾಗಿರುತ್ತದೆ(135:). ಮಾತ್ರವಲ್ಲದೆ ಅಧ್ಯಯನಗಳು, ಲೇಖನಗಳು, ಸಣ್ಣ ಕಥೆಗಳು, ನಾಟಕಗಳು, ಕವನಗಳು, ಸಾಹಿತ್ಯ, ಕಾದಂಬರಿಗಳು ಮತ್ತು ಕರಪತ್ರಗಳ ರೂಪದಲ್ಲಿ ನೂರಾರು ಪುಸ್ತಕಗಳನ್ನು, ಲೇಖನಗಳನ್ನು ಕಮ್ಯುನಿಸಂ ಅನ್ನು ಅವಮಾನಿಸುವ ಗುರಿಯನ್ನಿಟ್ಟುಕೊಂಡು ವ್ಯಾಪಕವಾಗಿ ಪ್ರಕಟಿಸಲಾಗಿವೆ. ಕೇರಳದಾದ್ಯಂತ ಪ್ರಕಟವಾದ ಇಂತಹ ಕೃತಿಗಳ ಮೂಲಕ ಕಮ್ಯುನಿಸ್ಟ್ ಸಿದ್ಧಾಂತ ಮತ್ತು ಚಳವಳಿಯ ವಿರುದ್ಧ ಮತ್ತು ಪರವಾಗಿ ಸಮಾಜದಲ್ಲಿ ಚರ್ಚೆಗಳನ್ನು ಹುಟ್ಟುಹಾಕಿ ವಿಷಯವನ್ನು ಜೀವಂತವಾಗಿಟ್ಟುಕೊಳ್ಳುವಂತೆ ಮಾಡಲಾಯಿತು.

ಕ್ಯಾಥೋಲಿಕ್ ಪಾದ್ರಿಗಳ ಕಮ್ಯುನಿಸ್ಟ್ ವಿರೋಧಿ ಧೋರಣೆ ಎನ್ನುವುದು ಆಧ್ಯಾತ್ಮಿಕ ಪ್ರವಚನದ ಪ್ರಮುಖ ವಿಷಯವೂ ಆಗಿ ಬದಲಾವಣೆಗೊಂಡಿತು. ಅನೇಕ ಸಂದರ್ಭಗಳಲ್ಲಿ ಕ್ಯಾಥೋಲಿಕ್ ಪಾದ್ರಿಗಳ ರಾಜಕೀಯವನ್ನು ಆವರಿಸಿಕೊಂಡ ಆಧ್ಯಾತ್ಮಿಕ ಜ್ಞಾಪನಗಳು, ಸಾಮಾನ್ಯ ಜನರನ್ನು ಕಮ್ಯುನಿಸ್ಟ್ ಪ್ರಭಾವದಿಂದ ತಪ್ಪಿಸುವ

ಉದ್ದೇಶಗಳಿಂದ ಕೂಡಿರುತ್ತಿದ್ದವು.*

1940ರ ದಶಕಗಳಲ್ಲಿ ಕೇರಳದ ರಾಜಕೀಯ ಬೆಳವಣಿಗೆಗಳು – ವಿಶೇಷವಾಗಿ ಪುನ್ನಪ್ರಾ–ವಯಲಾರ್ ಹೋರಾಟ/ದಂಗೆ, ಕಮ್ಯುನಿಸ್ಟ್ ಪಕ್ಷದ 'ಕಲ್ಕತ್ತಾ ಪ್ರಬಂಧದ/ಥೀಸಿಸ್ ನಂತರದ ಘಟನೆಗಳು – ಕೇರಳದ ಕೆಳಸ್ತರದ ಜನರ ಮೇಲೆ ಕಮ್ಯುನಿಸಂ ಉಂಟುಮಾಡಿದ ಪ್ರಭಾವ ಇವುಗಳೆಲ್ಲವೂ ಸೇರಿ, ಕೇರಳದ ಸಮಾಜದಲ್ಲಿ, ಊಳಿಗಮಾನ್ಯ ಪದ್ಧತಿಯ ಯಜಮಾನರ ಮತ್ತು ಶ್ರೀಮಂತವರ್ಗದ ಜನರ ಭಯವನ್ನು ಹೆಚ್ಚಿಸಿತು. ಭೂಮಾಲೀಕರ, ಬಂಡವಾಳಶಾಹಿಗಳ, ಜಾತಿ ಶ್ರೇಣಿಯಲ್ಲಿ ಮೇಲ್ವರ್ಗದವರ, ಪುರೋಹಿತಶಾಹಿಗಳ ಅಧಿಕೃತ ಸ್ಥಾನಮಾನವನ್ನು ಹಾಳುಮಾಡುತ್ತದೆ ಎನ್ನುವ ಭಯ ಅವರಲ್ಲಿ ಹೆಚ್ಚಿಸಿತು. ಆದ್ದರಿಂದ ಕೇರಳ ಕಮ್ಯುನಿಸ್ಟ್ ಪಕ್ಷವನ್ನು ದುರ್ಬಲಗೊಳಿಸುವ ಬದಲು ಚಳುವಳಿಯ ಸಾಧ್ಯತೆಗಳ ಬಗ್ಗೆ ಹುಡುಕಾಟ ನಡೆಸಿದರು.

## ಫಾದರ್ ವಡಕ್ಕನ್ ಮತ್ತು ಕಮ್ಯುನಿಸ್ಟ್ ವಿರೋಧಿರಂಗ

ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಚಟುವಟಿಕೆಗಳ ಸಂಘಟನೆಯಾದ 'ಕಮ್ಯುನಿಸ್ಟ್ ವಿರೋಧಿರಂಗ' ಅಕ್ಟೋಬರ್ 1951ರಲ್ಲಿ ತ್ರಿಶೂರಿನಲ್ಲಿ ಜನ್ಮತಾಳಿತು(137:p143). ಫಾದರ್ (ಆಗ ಬ್ರದರ್ ಆಗಿದ್ದಂಥ) ಜೋಸೆಫ್ ವಡಕ್ಕನ್ (ನಂತರ ಫಾದರ್ ವಡಕ್ಕನ್ ಎಂದು ವ್ಯಾಪಕವಾಗಿ ಪರಿಚಿತರಾದರು) ಈ ಚಳುವಳಿಯ ಸ್ಥಾಪಕ ನಾಯಕರಾಗಿದ್ದರು. ಕೇರಳದಲ್ಲಿ ಕಮ್ಯುನಿಸಂ ಹರಡುವುದನ್ನು ತಡೆಯುವಿಕೆ ಎನ್ನುವುದು ಈ ಸಂಘಟನೆಯ ಸ್ಥಾಪಕ ಗುರಿಯಾಗಿತ್ತು. ತಿರುವಾಂಕೂರು–ಕೊಚ್ಚಿ ಪ್ರದೇಶದ ಬಡ ಕಾರ್ಮಿಕರಲ್ಲಿ ಬೆಳೆಯುತ್ತಿರುವ ಕಮ್ಯುನಿಸ್ಟ್ ಪ್ರಭಾವವನ್ನು ಕೊನೆಗೊಳಿಸುವುದೇ ಈ ರಂಗವನ್ನು ಸ್ಥಾಪಿಸಲು ಹಠಾತ್ ಪ್ರಚೋದನೆ ಸಿಕ್ಕಿದ್ದು, ಎಂಬುದು ಈ ರಂಗದ ಸಂಸ್ಥಾಪಕರ ವ್ಯಾಖ್ಯಾನವಾಗಿತ್ತು(46:p70).

ಅಕ್ಟೋಬರ್ 1, 1919ರಂದು ತ್ರಿಶೂರ್ ಬಳಿಯ ತೋಯಕ್ಕಾವು ಪ್ರದೇಶದ ಕೆಳ ಮಧ್ಯಮ ವರ್ಗದ ಕುಟುಂಬದಲ್ಲಿ ಫಾದರ್ ವಡಕ್ಕನ್ ಜನಿಸಿದರು. ಅವರ ಮಾಧ್ಯಮಿಕ ಶಾಲಾ ಶಿಕ್ಷಣದ ನಂತರ ಅವರು ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಕೆಲಸ ಮಾಡಲು ಪ್ರಾರಂಭಿಸಿದರು. 1946ರಲ್ಲಿ ತ್ರಿಶೂರ್ ಬಳಿಯಿರುವ ತೋಟದ/ಎಸ್ಟೇಟ್‌ನ ಕ್ಯಾಥೋಲಿಕ್ ಸೆಮಿನರಿಗೆ ಸೇರಿಕೊಂಡ ಅವರು, ಕಮ್ಯುನಿಸ್ಟ್ ವಿರೋಧಿರಂಗವನ್ನು ರಚಿಸಿದರು.

ಕಮ್ಯುನಿಸ್ಟ್ ವಿರೋಧಿರಂಗದ ರಚನೆಗೆ ಕಾರಣವಾದ ಪರಿಸ್ಥಿತಿಯ ಬಗ್ಗೆ ಫಾದರ್ ವಡಕ್ಕನ್ ತಮ್ಮ ಆತ್ಮಚರಿತ್ರೆಯಲ್ಲಿ ವಿಸ್ತಾರವಾಗಿ ಹೇಳಿಕೊಂಡಿದ್ದಾರೆ.

"ನನ್ನ ಸಾಮಾಜಿಕರಂಗದ ತರಬೇತಿಯ ಸಮಯದಲ್ಲಿಯೇ ನಾನು

* ತ್ರಿಶೂರ್‌ನ ಅವರ ನಿವಾಸದಲ್ಲಿ ಟಿಜಿ ದೇವಸಿ ಮಾಸ್ಟರ್ ಅವರೊಂದಿಗೆ ಸಂದರ್ಶನವನ್ನು ಜನವರಿ 31, 2010ರಂದು ನಡೆಸಲಾಯಿತು.

ಕಮ್ಯುನಿಸ್ಟ್ ವಿರೋಧಿರಂಗವನ್ನು ಕಟ್ಟಿದ್ದು. ಕಮ್ಯುನಿಸ್ಟ್‌ನ ಸಹಾನುಭೂತಿ ಮತ್ತು ಎಡಪಂಥೀಯ ಚಿಂತಕನಾಗಿದ್ದವನೊಬ್ಬ ಯಾತಕ್ಕಾಗಿ ಕಮ್ಯುನಿಸ್ಟ್ ವಿರೋಧಿರಂಗವನ್ನು ಕಟ್ಟಬೇಕಾಯಿತು, ಎಂಬ ಗಂಭೀರ ಪ್ರಶ್ನೆಗೆ ಮೊದಲು ಸಮಾಧಾನ ಹೇಳ ಬಯಸುತ್ತೇನೆ.

ಕಲ್ಲೆಟ್ಟುಂಕರದ ಬಿಷಪ್‌ನ ವಿಲ್ಲಾದಲ್ಲಿ ವಾಸವಾಗಿದ್ದುಕೊಂಡು, ಸಾಮಾಜಿಕ ಕಾರ್ಯಕರ್ತರಿಗೆ ಕೊಡಮಾಡುವ ತರಭೇತಿ ಪಡೆಯಲು ನನಗೆ ಅಧಿಕೃತವಾಗಿ ಸಲಹೆ ನೀಡಲಾಯಿತು. ನಾವು ಅಲ್ಲಿಗೆ ಹೋದಾಗ, ಆ ಪ್ರದೇಶವು ದೊಡ್ಡ ಉದ್ಯೋಗದ ಅವ್ಯವಸ್ಥೆಯನ್ನು ಎದುರಿಸುತ್ತಾ, ಬೆಂಕಿಯ ಜ್ವಾಲೆಯಲ್ಲಿ ಬೇಯುತ್ತಿತ್ತು. ಆಲೂರು ಮತ್ತು ಪುಲ್ಲೂರಿನಲ್ಲಿದ್ದ ಎರಡು ಗೋಡಂಬಿ ಕಾರ್ಖಾನೆಗಳಿಗೆ ಬೀಗ ಹಾಕಿದ್ದರಿಂದ ಆ ಅವ್ಯವಸ್ಥೆ ಅಲ್ಲಿ ಉಲ್ಬಣಗೊಂಡಿತ್ತು. ಕಾರ್ಖಾನೆಯ ಮಾಲೀಕರು ಕ್ಯಾಥೋಲಿಕ್ ಸಮುದಾಯಕ್ಕೆ ಸೇರಿದವರಾಗಿದ್ದರು. ಕಾರ್ಖಾನೆಯಲ್ಲಿ ಬಹುಪಾಲು ಕ್ಯಾಥೋಲಿಕ್ ಸಮುದಾಯಕ್ಕೆ ಸೇರಿದ ಹೆಣ್ಣುಮಕ್ಕಳಿದ್ದರು. ಕಾರ್ಮಿಕರ ಕಡೆಯಿಂದ ನೋಡುವಾಗ ಅವರು ನೂರಕ್ಕೆ ನೂರರಷ್ಟು ನ್ಯಾಯಯುತವಾಗಿಯೇ ನಡೆದುಕೊಳ್ಳುತ್ತಿದ್ದರು. ಅವರ ಬೇಡಿಕೆಗಳು ಸಹ ಸಂಪೂರ್ಣವಾಗಿ ನ್ಯಾಯಯುತವಾಗಿಯೇ ಇದ್ದವು. ಆದರೆ ಲಾಭ ಕಡಿಮೆಯಾಗುವುದು ಬಂಡವಾಳಶಾಹಿಗಳಿಗೆ ಇಷ್ಟವಾಗುವುದಿಲ್ಲವಲ್ಲ. ಆದ್ದರಿಂದ, ಕಾರ್ಮಿಕರು ತಮ್ಮ ಹಕ್ಕುಗಳನ್ನು ಮುಂದಿಟ್ಟ ತಕ್ಷಣ ಮಾಲೀಕರು ಕಾರ್ಖಾನೆಗಳನ್ನು ಮುಚ್ಚುವ ಕೆಲಸಕ್ಕೆ ಕೈ ಹಾಕಿಯೇ ಬಿಟ್ಟರು. ಈ ಮಾಲೀಕರ ಈ ಸೇಡಿನ ಕೃತ್ಯದಿಂದಾಗಿ, ಕೊಡಕರ, ಆಲೂರು, ಕಲ್ಲೆಟ್ಟುಂಕರ, ಮುರಿಯಾಡ್, ತಾಳ್‌ಕ್ಕಾಡ್, ಪುಲ್ಲೂರು, ಅವಿಟ್ಟತ್ತೂರು ಮುಂತಾದ ಪ್ರದೇಶಗಳಲ್ಲಿ ಎಂಭತ್ತಕ್ಕೂ ಹೆಚ್ಚು ಹೆಣ್ಣುಮಕ್ಕಳ ಕುಟುಂಬಗಳು ಹಸಿವಿನಿಂದ ಬಳಲುವುದಕ್ಕೆ ಕಾರಣವಾಯಿತು. ಕಾರ್ಖಾನೆ ತೆರೆಯದಿದ್ದರೆ ಉಪವಾಸ ಸತ್ಯಾಗ್ರಹ ನಡೆಸಲು ನಾವು ನಿರ್ಧರಿಸಿದೆವು. ಸೆಮಿನಾರ್‌ನ ವಿದ್ಯಾರ್ಥಿಯಾಗಿದ್ದರಿಂದ ನನಗೆ ಉಪವಾಸ ಸತ್ಯಾಗ್ರಹ ಮಾಡುವುದು ಕಷ್ಟದ ಕೆಲಸವಾಗಿತ್ತು. ಆದ್ದರಿಂದ ಅವರು ಮಿಷನರಿ ಯೂನಿಯನ್ನಿನ ಸುಪೀರಿಯರ್ ಆಗಿದ್ದ ವಾಟಿಪ್ಪಿಳ್ಳಿ ಝುಕರಿಯಾಸಾಚನ್ ಮತ್ತು ಎ.ಸಿ. ರಪ್ಪಾಯಿ ಮಾಸ್ತರು ಉಪವಾಸ ಸತ್ಯಾಗ್ರಹ ಮಾಡುವಂತೆ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು.

ಆ ಕಾರ್ಖಾನೆಯಲ್ಲಿ ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿದ ಕಾರ್ಮಿಕ ಸಂಘ ಅಲ್ಲಿ ಅಸ್ತಿತ್ವದಲ್ಲಿತ್ತು. ಅವರು ನಾವು ಕಾರ್ಮಿಕ ಚಳುವಳಿಯ ಅಖಾಡದಲ್ಲಿ ಇಳಿಯುತ್ತಿರುವುದನ್ನು ಕಂಡಾಗ, ಕಮ್ಯುನಿಸ್ಟ್ ಕಾರ್ಯಕರ್ತರು ನಮ್ಮನ್ನು ಬಂಡವಾಳಶಾಹಿಗಳ ಪರವಾಗಿ ಬಂದಿರುವ ಕಾರ್ಮಿಕ ವಿರೋಧಿಗಳು ಎಂದು ಭಾವಿಸಿದರು. ಆದ್ದರಿಂದ ನಮ್ಮ ಕ್ರಮಗಳ ವಿರುದ್ಧ ಕಮ್ಯುನಿಸ್ಟರು ತೀವ್ರವಾಗಿ ಪ್ರತಿರೋಧಿಸಲು ಸಜ್ಜುಗೊಳ್ಳಲಾರಂಭಿಸಿದರು. ಒಂದು ಕಡೆಯಿಂದ ಬಂಡವಾಳಶಾಹಿಗಳು ವಿರೋಧಿಸುತ್ತಿರುವಾಗ, ಮತ್ತೊಂದು ಕಡೆಯಿಂದ

ಕಮ್ಯುನಿಸ್ಟರು ನಮ್ಮನ್ನು ವಿರೋಧಿಸಲಾರಂಬಿಸಿದರು. ನಾವು ಮಧ್ಯದಲ್ಲಿ ಇಕ್ಕಟ್ಟಿನಲ್ಲಿ ಸಿಕ್ಕು ನರಳತೊಡಗಿದೆವು. ದೆವ್ವ ಮತ್ತು ಸಮುದ್ರದ ನಡುವೆ ಸಿಕ್ಕಿಬಿದ್ದಂತೆ. ಸ್ವಾರ್ಥಗಳನ್ನೇ ಆವರಿಸಿಕೊಂಡಿದ್ದ ಬಂಡವಾಳಶಾಹಿಯನ್ನೂ ನಾಸ್ತಿಕತನವನ್ನೇ ಮೈಗೂಡಿಸಿಕೊಂಡ ಕಮ್ಯೂನಿಸಮನ್ನೂ ಒಟ್ಟಾಗಿ ಎದುರಿಸಲು ಒಂದು ಚಳುವಳಿಯನ್ನು ಹುಟ್ಟುಹಾಕಬೇಕೆನ್ನುವ ಆಶಯ ಆ ಘಟ್ಟದಲ್ಲೇ ನನ್ನ ಮನದಾಳದಲ್ಲಿ ಹುಟ್ಟಿಕೊಂಡಿದ್ದು. ಆಂಟಿ ಕ್ಯಾಪಿಟಲಿಸ್ಟ್ ರಂಗ ಮತ್ತು ಆಂಟಿ ಕಮ್ಯುನಿಸ್ಟ್ ರಂಗ, ಇವೆರಡನ್ನೂ ಒಂದು ರಂಗವಾಗಿ ಯಾವುದೇ ರಾಜಿಮಾಡಿಕೊಳ್ಳದಂತೆ ಹೋರಾಟ ನಡೆಸಬೇಕೆನ್ನುವುದಾಗಿತ್ತು ನನ್ನ ಅಭಿಪ್ರಾಯ. ಸಹೋದ್ಯೋಗಿಗಳು ಸಹ ಆ ವಿಚಾರದ ಬಗ್ಗೆ ಒಪ್ಪಿಕೊಂಡರು. ಹೀಗೆ 1951ರಲ್ಲಿ ಎ.ಸಿ.ಎಫ್. ಎನ್ನುವ ಸಂಘಟನೆ ರಚನೆಗೊಂಡಿತು. ಎಸಿಎಫ್. ಅಂದರೆ ಅದು ಕೇವಲ ಕಮ್ಯುನಿಸ್ಟ್ ವಿರೋಧಿರಂಗ ಮಾತ್ರವಾಗಿರಲಿಲ್ಲ. ಅದು ಬಂಡವಾಳಶಾಹಿ ವಿರೋಧಿರಂಗವೂ ಆಗಿತ್ತು. ಈ ವಾಸ್ತವವು ಸಂಘಟನೆ ಮತ್ತು ಚಳುವಳಿಯ ಆರಂಭದಲ್ಲಿರುವಂತೆಯೇ ಅದರ ಅಧಿಸೂಚನೆಗಳಲ್ಲಿ ವ್ಯಾಖ್ಯಾನಿಸಲಾಗಿದೆ."

1951–52ರ ತಿರು–ಕೊಚ್ಚಿಯ ಚುನಾವಣೆಯು ಹತ್ತಿರವಾಗುತ್ತಿದ್ದಂತೆ ನನಗೆ ಭಾರಿ ಬೇಡಿಕೆಯುಂಟಾಯಿತು, ಹಲವಾರು ಕಡೆಗಳಲ್ಲಿ ನಾನು ಭಾಷಣ ಮಾಡಲು ಹೋಗಿ ಬಂದೆ. ಎಸಿಎಫ್‌ನ ಬಂಡವಾಳಶಾಹಿ ವಿರೋಧಿರಂಗವು ಆ ಹಂತದಲ್ಲಿ ಸ್ವಾಭಾವಿಕವಾಗಿ ಮಂದವಾಯಿತು. ಕಮ್ಯುನಿಸ್ಟ್ ವಿರೋಧಿ ರಂಗ ಗಟ್ಟಿಯಾಗಿ ನಿಂತಿತು. ವಿರೋಧಿರಂಗವೆಂದರೆ, ಕಮ್ಯುನಿಸ್ಟ್ ವಿರೋಧಿರಂಗ ಎನ್ನುವ ಸಾಮಾನ್ಯ ತಿಳುವಳಿಕೆ ಎಲ್ಲರ ಮನಸ್ಸಿನಲ್ಲೂ ಮೂಡಿತು. ಗಾಳಿ ಆ ದಿಕ್ಕಿನಲ್ಲೇ ಬೀಸುತ್ತಾ ಇದ್ದಿದ್ದು. ಕೇರಳದ ಮಾಲೀಕರ ಮತ್ತು ಶ್ರೀಮಂತವರ್ಗ ನನ್ನಲ್ಲಿ ಅವರ ಹೊಸ ಒಬ್ಬ ಸಂರಕ್ಷಕನನ್ನು ಕಂಡುಕೊಂಡರು(46:p69-72).

ಆಗಸ್ಟ್ 4, 1954ರಂದು ಲಂಡನ್‌ನಿಂದ ಪ್ರಕಟಗೊಂಡ 'ಕ್ಯಾಥೋಲಿಕ್ ಹೆರಾಲ್ಡ್' (Catholic Herald)ನ ಲೇಖನವೊಂದರಲ್ಲಿ ಡೌಗ್ಲಾಸ್ ಹೈಡ್ ಹೀಗೆ ಹೇಳಿದ್ದರು.

"ಕೈಯಿಂದ ನೇಯ್ದು ಒರಟಾದ ವಸ್ತ್ರ ಧರಿಸಿರುವ, ಎತ್ತರವಿದ್ದು ತೆಳ್ಳಗಿರುವ ಒಬ್ಬ ಸೆಮಿನರಿಯನ್ ದಕ್ಷಿಣ ಭಾರತದ ಮಲಬಾರ್ (ಕೇರಳ)ನಲ್ಲಿ ಕಮ್ಯುನಿಸಂ ವಿರುದ್ಧದ ಹೋರಾಟಕ್ಕೆ ನೇತೃತ್ವವನ್ನು ನೀಡಿದ್ದಾನೆ. ಕಮ್ಯುನಿಸ್ಟರು ಈ ಪ್ರದೇಶವನ್ನು ತಮ್ಮದನ್ನಾಗಿಸಿಕೊಳ್ಳಲು ಬಯಸುತ್ತಿದ್ದಾರೆ. ಹಿಂದೆ ಸಕ್ರಿಯ ಕಮ್ಯುನಿಸ್ಟ್ ಸಹಾನುಭೂತಿಯಾಗಿದ್ದ ಅವರ ಹೆಸರು, ಸಹೋದರ ಜೋಸೆಫ್ ವಡಕ್ಕನ್. ಅವರು ಕಮ್ಯುನಿಸಂ ಬಗ್ಗೆ ಇದ್ದಂಥ ನಂಬಿಕೆಯನ್ನು ತ್ಯಜಿಸಿ, ಪುರೋಹಿತ ತರಬೇತಿಗಾಗಿ ಸೆಮಿನರಿಗೆ ಸೇರಿದ್ದಾರೆ... ಸಾಕಷ್ಟು ಖಚಿತವಾದ ತಿಳುವಳಿಕೆ ಮತ್ತು ಮಾರ್ಕ್ಸ್‌ವಾದಿ ಉಲ್ಲೇಖಗಳನ್ನು ಸ್ವಾಧೀನಮಾಡಿಕೊಂಡಿರುವ ಅವರು ಸ್ಪಷ್ಟ ಭಾಷೆಯಲ್ಲಿ ಕಮ್ಯುನಿಸಂನ ಪ್ರಮಾದಗಳನ್ನು ಖಂಡಿಸುತ್ತಿದ್ದಾರೆ. ಉಜ್ವಲವಾದ ಭಾಷಣಶೈಲಿ ಮತ್ತು ದೃಢವಿಶ್ವಾಸದಿಂದಾಗಿ ಹೆಚ್ಚು ತಡವಾಗದೆ, ಕಮ್ಯುನಿಸ್ಟ್‌ನ ಅಬ್ಬರದಲೆಯನ್ನು ತಡೆದು ನಿಲ್ಲಿಸಲು ಅವರನ್ನು ಸಮರ್ಥನನ್ನಾಗಿಸುತ್ತದೆ(82:p8).

ಸಾವಿರಾರು ಜನರನ್ನುದ್ದೇಶಿಸಿ ಮಾತನಾಡಲು ಮತ್ತು ಸಾಕಷ್ಟು ಅಧ್ಯಯನ ತರಗತಿಗಳನ್ನು ನಡೆಸುತ್ತಾ ಫಾದರ್ ವಡಕ್ಕನ್ ರಾಜ್ಯದ ಎಲ್ಲಾ ಭಾಗಗಳ ಜನರನ್ನು ಕಮ್ಯುನಿಸಂನ ನಿಜ ಸ್ವರೂಪದ ಅರಿವು ಮೂಡಿಸಿದರು(82:p61). ಕಮ್ಯುನಿಸಂನ ಅಪಾಯಗಳ ಕುರಿತು ಫಾದರ್ ವಡಕ್ಕನ್, ಮತ್ತು ಕಮ್ಯುನಿಸ್ಟ್ ವಿರೋಧಿರಂಗವು ಜನರಿಗೆ ಮನವರಿಕೆ ಮಾಡಿಕೊಟ್ಟಿತು(137:p143). ಫಾದರ್ ವಡಕ್ಕನ್ ಮತ್ತು ಅವರ ಸಹವರ್ತಿಗಳು, ಕಮ್ಯುನಿಸ್ಟ್ ಸಿದ್ಧಾಂತವನ್ನು ಕಳಂಕಿತ ಮತ್ತು ವಿಕೃತ ರೀತಿಯಲ್ಲಿ ವಿವರಿಸಿ, ಕಮ್ಯುನಿಸ್ಟ್ ಪ್ರಭಾವದಿಂದ ಜನರನ್ನು ದೂರ ಸರಿಸುವ ಕಾರ್ಯವನ್ನು ಕೈಗೊಂಡರು(97:V15p65-67). ಸಾವಿರಾರು ಕಮ್ಯುನಿಸ್ಟ್ ವಿರೋಧಿ ಅಧ್ಯಯನ ತರಗತಿಗಳನ್ನು ನಡೆಸುವ ಮೂಲಕ ಕಮ್ಯುನಿಸಂ ಪರ ಮತ್ತು ವಿರುದ್ಧದ ವಾದಗಳನ್ನು ಒಳಗೊಂಡಂಥ ನೋಟಿಸ್ ಮತ್ತು ಕರಪತ್ರಗಳನ್ನು ಕೇರಳದಾದ್ಯಂತ ಹಂಚಲಾಯಿತು(46:p85; 58:p9;87:p8-5;70:p16). ಈ ಪ್ರವಚನಗಳ ಪರಿಣಾಮಗಳಿಂದಾಗಿ ಕಮ್ಯುನಿಸ್ಟ್ ಸಿದ್ಧಾಂತ, ಸೋವಿಯತ್ ಒಕ್ಕೂಟದಲ್ಲಿ ಮತ್ತು ಇತರೆ ಸಮಾಜವಾದಿ ದೇಶಗಳಲ್ಲಿ ಉಂಟಾದ ಬೆಳವಣಿಗೆಗಳನ್ನು ಕೇರಳೀಯ ಸಮಾಜದಲ್ಲಿ ಪ್ರಮುಖ ಚರ್ಚೆಯ ವಿಷಯವನ್ನಾಗಿ ಮಾಡಲಾಯಿತು. ಸೆಪ್ಟೆಂಬರ್ 29, 1954ರಂದು ಮಲಯಾಳಂನ ಪ್ರಮುಖ ದಿನಪತ್ರಿಕೆಯಾದ ಮಲಯಾಳ ಮನೋರಮಾ ಹೀಗೆ ಬರೆಯಿತು:

> "ಕಮ್ಯುನಿಸಂನ ಮೂಲದ ಜೊತೆಯಲ್ಲೇ, ಕಮ್ಯುನಿಸ್ಟ್ ವಿರೋಧಿ ಭಾವನೆಗಳು ಸಹ ಮೊದಲೇ ಕೇರಳದಲ್ಲಿತ್ತು. ಆದರೆ ಈಗಿನ ಕಮ್ಯುನಿಸ್ಟ್ ವಿರೋಧಿರಂಗ ಈ ಭಾವನೆಗಳಿಗೆ ಸ್ಪಷ್ಟವಾದ ರೂಪ ಮತ್ತು ಅಭಿವ್ಯಕ್ತಿಯನ್ನು ನೀಡಿದ್ದು, ಈ ನಿಟ್ಟಿನಲ್ಲಿ ಕೇರಳವು ಸಹೋದರ ವಡಕ್ಕನ್‌ಗೆ ಋಣಿಯಾಗಿದೆ (67:29.09.54;32:p81:).

ಕಮ್ಯುನಿಸ್ಟ್ ವಿರೋಧಿರಂಗದ ಕಾರ್ಯಕ್ರಮಗಳು ಮತ್ತು ಪ್ರಚಾರತಂತ್ರಗಳಾದರೂ ಯಾವುವು? ಬಡತನ, ಜಾತಿ ತಾರತಮ್ಯ, ಹಸಿವು, ನಿರುದ್ಯೋಗ, ಕಡಿಮೆ ವೇತನ, ಅಭದ್ರತೆ, ಊಳಿಗಮಾನ್ಯ ಶೋಷಣೆ ಮತ್ತು ಕಿರುಕುಳ ಇವುಗಳೇ ಆ ಸಮಯದಲ್ಲಿ ಕೇರಳದ ಸಮಾಜವನ್ನು ಕಾಡುತ್ತಿದ್ದ ಪ್ರಮುಖ ಸಮಸ್ಯೆಗಳು. ಈ ಪರಿಸ್ಥಿತಿಗಳು ಕಮ್ಯುನಿಸಂನ ಹರಡುವಿಕೆಗೆ ಫಲವತ್ತಾದ ನೆಲವನ್ನಾಗಿ ಸಿದ್ಧಪಡಿಸಿದವು. ಈ ಪರಿಸ್ಥಿತಿಯು ಕಮ್ಯುನಿಸ್ಟರಂತೆಯೇ ಕಮ್ಯುನಿಸ್ಟ್ ವಿರೋಧಿರಂಗಕ್ಕೂ ಇದು ಲಾಭದಾಯಕವಾಗಿತ್ತು. ಕಮ್ಯುನಿಸ್ಟರ ಕಾರ್ಯಚಟುವಟಿಕೆಗಳ ರೀತಿಯಲ್ಲಿಯೇ ಕಮ್ಯುನಿಸ್ಟ್ ವಿರೋಧಿ ಕಾರ್ಯಚಟುವಟಿಕೆಗಳೂ ನಡೆದಿದ್ದವು. 1944ರಲ್ಲಿ, ಇಎಂಎಸ್ ನಂಬೂದಿರಿಪಾಡ್ ಹೀಗೆ ಬರೆದಿದ್ದರು:

> "ಇತ್ತೀಚಿನ ಕಮ್ಯುನಿಸ್ಟ್ ವಿರೋಧಿ ಪ್ರತಿನಿಧಿಗಳ ಸಮ್ಮೇಳನಗಳು ತಿರುವಾಂಕೂರು–ಕೊಚ್ಚಿ ಪ್ರದೇಶದ ವಿವಿಧ ಭಾಗಗಳಲ್ಲಿ ನಡೆದಿವೆ. ಸಾವಿರಾರು ಪುರುಷರು ಮತ್ತು ಮಹಿಳೆಯರು ಅವುಗಳಲ್ಲಿ ಭಾಗವಹಿಸಿದ್ದಾರೆ. ಇಂತಹ ಸಮ್ಮೇಳನಗಳಲ್ಲಿ ಸಾಮ್ರಾಜ್ಯಶಾಹಿ, ಊಳಿಗಮಾನ್ಯ ಪದ್ಧತಿ ಮತ್ತು ಬಂಡವಾಳಶಾಹಿಗಳ

ಬಗ್ಗೆ ಕಮ್ಯುನಿಸ್ಟರು ತೋರಿಸುವಂಥ ಅದೇ ದ್ವೇಷ ಹಗೆತನಗಳನ್ನೇ ಇಂಥ ಸಮ್ಮೇಳನಗಳಲ್ಲಿ ಕಮ್ಯುನಿಸಂನೊಂದಿಗೂ ವ್ಯಕ್ತಗೊಂಡಿವೆ"(97:V15p64).

1956ರಿಂದ ಕಮ್ಯುನಿಸ್ಟ್ ವಿರೋಧಿ ರಂಗದ ಅಧ್ಯಕ್ಷರಾಗಿದ್ದ ಬಿ. ವೆಲ್ಲಿಂಗ್ಟನ್(46:p91) ಈ ಪ್ರಕಾರ ಹೇಳಿಕೊಂಡಿದ್ದಾರೆ:

"ಕಮ್ಯುನಿಸ್ಟರ ಪ್ರಚಾರವನ್ನು ಎದುರಿಸಲು, ಕಮ್ಯುನಿಸಂನ ನೈಜ ಸ್ವರೂಪವನ್ನು ವಿವರಿಸುವ ಸಾವಿರಾರು ಕರಪತ್ರಗಳನ್ನು ಕಮ್ಯುನಿಸಂ ವಿರೋಧಿರಂಗ ಪ್ರಕಟಿಸಿದೆ. ಅದೇ ತರಹ, ನಿಯಮಿತವಾದ ಅಧ್ಯಯನ ತರಗತಿಗಳನ್ನೂ ನಡೆಸುತ್ತಾ, ಅಸಂಖ್ಯಾಂತ ಸಾರ್ವಜನಿಕ ಸಭೆಗಳನ್ನು ನಡೆಸಲು ಕರೆಕೊಟ್ಟು ಜನರನ್ನು ಸೇರಿಸಿದ ಕಮ್ಯುನಿಸ್ಟ್ ವಿರೋಧಿರಂಗವು, ಕಮ್ಯುನಿಸಂ ವಿರುದ್ಧ ಸೈದ್ಧಾಂತಿಕ ಹೋರಾಟ ನಡೆಸಿತು"(137:p143).

ಕಮ್ಯುನಿಸಂನ ಪ್ರಭಾವದಲ್ಲಿರುವ ಯುವ ಬರಹಗಾರರು ಅದರಿಂದ ದೂರವಿರುವಂತೆ ಮಾಡಲು, ಕಮ್ಯುನಿಸ್ಟ್ ವಿರೋಧಿರಂಗವು ಕಠಿಣಶ್ರಮ ನಡೆಸಿತು. ಈ ಉದ್ದೇಶವನ್ನು ಮುಂದಿಟ್ಟುಕೊಂಡು, ಸಾಹಿತ್ಯಧರ್ಮವನ್ನು ಆಸ್ಪದಮಾಡಿಕೊಂಡು ಯುವ ಬರಹಗಾರರಿಗೆ ಅನೇಕ ವಿಚಾರ ಸಂಕಿರಣಗಳನ್ನು ಆಯೋಜಿಸಿತು. ಕಮ್ಯುನಿಸ್ಟ್ ವಿರೋಧಿರಂಗವು ಸಾಹಿತ್ಯದ ಮೇಲುಂಟಾಗುವ ಕಮ್ಯುನಿಸಂನ ಪ್ರಭಾವವನ್ನು ಅಳಿಸಿಹಾಕಲು, ಸಾಹಿತ್ಯರಂಗವೊಂದನ್ನು ರೂಪಿಸಲು ಉಪಕ್ರಮವನ್ನು ತೆಗೆದುಕೊಂಡಿತು(137:p143).

ರಾಜ್ಯದಲ್ಲಿ ಕಮ್ಯುನಿಸ್ಟ್ ಪಕ್ಷದ ವಿರುದ್ಧ, ಕಮ್ಯುನಿಸ್ಟ್ ವಿರೋಧಿ ರಾಜಕೀಯ ಪಕ್ಷಗಳ ಏಕತೆಗಾಗಿ ಕಮ್ಯುನಿಸ್ಟ್ ವಿರೋಧಿರಂಗ ನಿರಂತರವಾಗಿ ವಾದಗಳನ್ನು ಮಾಡುತ್ತಲೇ ಬರುತ್ತಿತ್ತು. 1951–52ರಲ್ಲಿ ತಿರು–ಕೊಚ್ಚಿ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಕಮ್ಯುನಿಸ್ಟ್ ವಿರೋಧಿರಂಗವು ಕಮ್ಯುನಿಸ್ಟರ ವಿರುದ್ಧ ತೀವ್ರ ಪ್ರಚಾರ ನಡೆಸುತ್ತಾ, ಮೊದಲನೆಯ ಸಂಘಟಿತ, ಸೈದ್ಧಾಂತಿಕ ಮತ್ತು ರಾಜಕೀಯ ದಾಳಿಯನ್ನು ನಡೆಸಿತು(70:p11).

ಕಮ್ಯುನಿಸ್ಟ್ ವಿರೋಧಿರಂಗದ ತಪ್ಪು ಹೇಳಿಕೆಗಳ ಮತ್ತು ಅಪಪ್ರಚಾರಗಳ ವಿರುದ್ಧ ಕಮ್ಯುನಿಸ್ಟರು ಪ್ರಬಲ ನಡೆಗಳನ್ನು ತೆಗೆದುಕೊಳ್ಳುತ್ತಾ ಬಂದರು. ಅಧ್ಯಯನ ತರಗತಿಗಳು ಮತ್ತು ಸಾರ್ವಜನಿಕ ಪ್ರಚಾರಸಭೆಗಳಲ್ಲಿ ಇಎಂಎಸ್ ನಂಬೂದಿರಿಪಾಡ್, ಎ.ಕೆ. ಗೋಪಾಲನ್, ಕೆ. ದಾಮೋದರನ್ ಮೊದಲಾದ ಕಮ್ಯುನಿಸ್ಟ್ ಪಕ್ಷದ ಮುಖಂಡರು ಸಭಿಕರ ಸಂದೇಹಗಳನ್ನು ನಿವಾರಿಸಿಕೊಂಡು, ಸಭಿಕರ ಪ್ರಶ್ನೆಗಳಿಗೆ ಸಮರ್ಪಕವಾಗಿ ಉತ್ತರಿಸುತ್ತಾ ಬಂದರು. ಚರ್ಚ್ ಮತ್ತು ಮಾಲೀಕವರ್ಗ ಪರಸ್ಪರ ಸಹಕಾರದೊಂದಿಗೆ ಕಮ್ಯುನಿಸ್ಟ್ ವಿರೋಧಿರಂಗದ ಪ್ರಚಾರಗಳ ವ್ಯವಸ್ಥೆಯನ್ನು ರೂಪಿಸಿದರು. ಕಮ್ಯುನಿಸ್ಟ್ ವಿರೋಧಿ ರಂಗವು ಸಹ ಕಮ್ಯುನಿಸ್ಟರ ಮೇಲೆ ದಾಳಿ ಮಾಡಲು ತಮ್ಮದೇ ಆದಂಥ

ತಂತ್ರಗಳನ್ನು ಅಳವಡಿಸಿಕೊಂಡಿತು(97:V15p64). ಅದರ ನಾಯಕರು ಕಮ್ಯುನಿಸ್ಟರ ವಿರುದ್ಧ ತಮ್ಮ ಸುದೀರ್ಘ ಭಾಷಣಗಳ, ಬರಹಗಳ, ಅಪವಾದಗಳ ಮತ್ತು ನಿಂದನೆಗಳ ಮೂಲಕ ಬಿರುಗಾಳಿಯನ್ನೆಬ್ಬಿಸಿದರು(78:p31).

ಪುನ್ನಪ್ರ-ವಯಲಾರ್ ದಂಗೆಯ ಹುತಾತ್ಮರ ಸ್ಮರಣೆಗಾಗಿ ಕಮ್ಯುನಿಸ್ಟ್ ಪಕ್ಷವು 1952ರಲ್ಲಿ ಎ.ಕೆ. ಗೋಪಾಲನ್ ನೇತೃತ್ವ ವಹಿಸಿದ್ದ ಸಾರ್ವಜನಿಕ ಸಭೆ ಮತ್ತು ಜಾಥಾವನ್ನು ಆಲಪ್ಪುಳದಲ್ಲಿ ಆಯೋಜಿಸಲಾಗಿತ್ತು. ಆದರೆ ಅದೇ ದಿನ, ಅದೇ ಸಮಯದಲ್ಲಿ ತುಂಬಾ ಜನ ಭಾಗವಹಿಸಿದ್ದ ರ್‍ಯಾಲಿಯೊಂದನ್ನು ಸತ್ಯನಾರಾಯಣ ಸಿನ್ಹಾ ನೇತೃತ್ವದಲ್ಲಿ ಕಮ್ಯುನಿಸ್ಟ್ ವಿರೋಧಿರಂಗವು ಸಹ ಆಯೋಜಿಸಿತ್ತು(82:p10). ಈ ರ್‍ಯಾಲಿಯ ಘೋಷಣೆಗಳು ಬಹಳ ಪ್ರಚೋದನಕಾರಿಯಾಗಿದ್ದವು. ಕಾರ್ಯಕ್ರಮದ ಬಗ್ಗೆ, ಕಮ್ಯುನಿಸ್ಟ್ ವಿರೋಧಿರಂಗದ ನಾಯಕರಲ್ಲೊಬ್ಬರಾದ ಬಿ. ವೆಲ್ಲಿಂಗ್ಟನ್ ಈ ರೀತಿಯಲ್ಲಿ ಅವಲೋಕನಗೈದಿದ್ದರು:

> "ವರ್ಷಗಳ ನಂತರ, ಈ ರ್‍ಯಾಲಿಯು 1957–59ರಲ್ಲಿ ಕೇರಳವನ್ನು ಆವರಿಸಿಕೊಂಡ ಕಮ್ಯುನಿಸ್ಟ್ ವಿರೋಧಿ ಚಂಡಮಾರುತಕ್ಕೆ ಮುನ್ನುಡಿ ಬರೆಯಿತು"(137:p144).

ನಕಾರಾತ್ಮಕ ದೃಷ್ಟಿಕೋನದಲ್ಲಿ ಬೇರೂರಿದ್ದರೂ, ಕಮ್ಯುನಿಸ್ಟ್ ವಿರೋಧಿರಂಗವು ಕಮ್ಯುನಿಸ್ಟರ ಕಾರ್ಯಕ್ರಮಗಳು ಮತ್ತು ಚಟುವಟಿಕೆಗಳನ್ನು ತಟಸ್ಥಗೊಳಿಸುವ ದೃಷ್ಟಿಯಿಂದ ಕೆಲವು ಪ್ರಗತಿಪರ ಕ್ರಮಗಳನ್ನು ಕೈಗೆತ್ತಿಕೊಂಡಿತು. ಸೆಪ್ಟೆಂಬರ್ 4, 1953ರಂದು ಪುಣೆಯ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಆರ್ಡರ್‌ನ ಪತ್ರಿಕೆಯಾದ 'ಸೋಶಿಯಲ್ ಆಕ್ಷನ್' (ಸಾಮಾಜಿಕ ಕ್ರಿಯೆ) ನಲ್ಲಿ ಉತ್ತೇಜಿತ ವರದಿಯನ್ನು ಪ್ರಕಟಿಸಿತು. ಅದು ಈ ಪ್ರಕಾರದಲ್ಲಿತ್ತು:

> "ನೇರ ರಾಜಕೀಯ ಅಜೆಂಡಾಗಳ್ಯಾವುವೂ ಇಲ್ಲದ, ಅಖಿಲ ಕೇರಳ ವಿರೋಧಿ ಕಮ್ಯುನಿಸ್ಟ್‌ರಂಗವು ಒಂದು ಸಾಮಾಜಿಕ–ನೈತಿಕ ಸಂಘಟನೆಯಾಗಿದೆ. ಇದು ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ಮೂಲಕ ಕಮ್ಯುನಿಸ್ಟ್ ಪ್ರಭಾವವನ್ನು ಇಲ್ಲದಂತೆ ಮಾಡಲು ಎಲ್ಲ ತರಹದ ಪ್ರಯತ್ನ ನಡೆಸುತ್ತಿದೆ. ವಿವಿಧ ಸಂಸ್ಥೆಗಳು, ಸೇವೆಗಳು, ಕಾರ್ಮಿಕ ಸಂಘಗಳು, ರೈತ ಚಳುವಳಿಗಳು, ಸಹಕಾರ ಸಂಘಗಳು, ಕಾರ್ಮಿಕ ಸಂಘಗಳು, ಆರೋಗ್ಯ ಕೇಂದ್ರಗಳು, ರಾತ್ರಿ ಶಾಲೆಗಳು, ಗುಡಿ ಕೈಗಾರಿಕೆಗಳು, ರಸ್ತೆ ನಿರ್ಮಾಣ ಸಂಘಗಳು, ಮತ್ತು ಉಳಿತಾಯ ಬ್ಯಾಂಕುಗಳು ಇವೇ ಮುಂತಾದವುಗಳನ್ನು ಅದು ಸಂಘಟಿಸಿದೆ. ಅದರ ಮೊದಲನೇ ವರ್ಷದ ವರದಿಯ ಪ್ರಕಾರ, ಸುಮಾರು ಒಂದು ಲಕ್ಷ ಕಾರ್ಮಿಕರು ಅದರ ಟ್ರೇಡ್ ಯೂನಿಯನ್ ಸದಸ್ಯರಾಗಿದ್ದಾರೆ ಮತ್ತು ಎಳು ನೂರಕ್ಕೂ ಹೆಚ್ಚು ಹೊಸ ಘಟಕಗಳನ್ನು ವಿವಿಧ ಗ್ರಾಮಗಳಲ್ಲಿ ರಚಿಸಲಾಗಿವೆ(70:p8).

ಈ ಅವಧಿಯಲ್ಲಿ, ಕಮ್ಯುನಿಸ್ಟ್ ವಿರೋಧಿ ರಂಗವು ಬಡವರಿಗಾಗಿ ಮತ್ತು ನೈತಿಕ

ಘಟಕಗಳು ಕಾರ್ಯನಿರ್ವಹಿಸುತ್ತಿದ್ದವು. ಅವುಗಳಲ್ಲಿ ಹೆಚ್ಚಿನವು, ಒಂದು ಸಾರ್ವಜನಿಕ ಸಭೆ ಮತ್ತು ಒಂದೋ ಅಥವಾ ಎರಡೋ ಅಧ್ಯಯನ ತರಗತಿಗಳ ನಂತರ, ಅವುಗಳೆಲ್ಲವೂ ಕಾಂಗ್ರೆಸ್ ಸಮಿತಿಗಳ ನೇಮಕಾತಿಯ ಕಛೇರಿಗಳಾಗಿ ಪರಿವರ್ತನೆಗೊಂಡವು(47:p52). ಕಾಂಗ್ರೆಸ್, ಸೇವಾದಳ, ಐಎನ್‌ಟಿಯುಸಿ ಮತ್ತು ಯುವ ಕಾಂಗ್ರೆಸ್‌ನ ಅನೇಕ ಕಾರ್ಯಕರ್ತರು ತಮ್ಮ ರಾಜಕೀಯ ತರಬೇತಿಯನ್ನು ಪಡೆದುಕೊಂಡಿದ್ದು, ಕಮ್ಯುನಿಸ್ಟ್ ವಿರೋಧಿರಂಗದ ಅಧ್ಯಯನ ತರಗತಿಗಳ ಮತ್ತು ವಿವಿಧ ಪ್ರಕಟಣೆಗಳ ಮೂಲಕವೇ ಆಗಿದ್ದವು. ಕಮ್ಯುನಿಸ್ಟ್ ವಿರೋಧಿರಂಗದ ನೇತೃತ್ವದಲ್ಲಿ ಫಾದರ್ ವಡಕ್ಕನ್ ರಚಿಸಿದ 'ಯೇಸುಕ್ರಿಸ್ತ–ಮಾಸ್ಕೋದಲ್ಲೋ?'(Is Jesus Christ in Moscow?) ಎನ್ನುವ ಕೃತಿ ಹಲವಾರು ಮರುಮುದ್ರಣಗೊಂಡವು. 'ಸಂಗಾತಿಗಳು ಉತ್ತರಿಸುವಿರಾ', 'ಕಮ್ಯುನಿಸಂ ಮತ್ತು ದೇವರ ನಂಬಿಕೆ', 'ಕಮ್ಯುನಿಸಂ ಮತ್ತು ಡೆಮಾಕ್ರಸಿ', 'ಕಮ್ಯುನಿಸಂ ಮತ್ತು ರಾಷ್ಟ್ರೀಯ ಸುರಕ್ಷತೆ', 'ಮುಂಡಸ್ಸೆರಿಯೊಂದಿಗೆ ಎರಡು ಮಾತು' ಮುಂತಾದ ಪುಸ್ತಕಗಳ ಸಾವಿರಾರು ಪ್ರತಿಗಳು ಮಾರಾಟವಾಗಿವೆ(47:p52).

ಫಾದರ್ ವಡಕ್ಕನ್ ಅವರ ಮತ್ತು ಅವರ ಚಳುವಳಿಯ ಹೆಸರು ಶೀಘ್ರದಲ್ಲೇ ರಾಜ್ಯದ ಹೊರಗೂ ಹರಡತೊಡಗಿತು. ಭಾರತದ ವಿವಿಧ ಭಾಗಗಳಲ್ಲಿ ಕಮ್ಯುನಿಸ್ಟ್ ವಿರೋಧಿಗಳು ಈ ಚಳುವಳಿಯ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸಲು ಪ್ರಾರಂಭಿಸಿದರು. ಸಭೆಗಳನ್ನು ಉದ್ದೇಶಿಸಿ ಭಾಷಣ ಮಾಡಬೇಕೆಂದು ಮತ್ತು ಕಮ್ಯುನಿಸ್ಟ್ ವಿರೋಧಿರಂಗದಂತೆಯೇ ಸಂಘಟನೆಗಳನ್ನು ರಚಿಸಬೇಕೆನ್ನುವ ಅಪೇಕ್ಷೆಯನ್ನು ವ್ಯಕ್ತಪಡಿಸಿಕೊಂಡು, ದೂರದ ಮೈಸೂರು ಬಾಂಬೆ, ದೆಹಲಿ ಹಿಮಾಚಲ ಪ್ರದೇಶ ಮುಂತಾದ ಸ್ಥಳಗಳಿಂದ ಆಹ್ವಾನಗಳು ಫಾದರ್ ವಡಕ್ಕನ್‌ರವರನ್ನು ಹುಡುಕಿಕೊಂಡು ಬಂದವು(70:p15).

ಈ ದಿನಗಳಲ್ಲೇ 'ಸಾಂಸ್ಕೃತಿಕ ಸ್ವಾತಂತ್ರ್ಯ'ಕ್ಕಾಗಿ (Committee For Cultural Freedom) ಬಾಂಬೆಯಲ್ಲಿ ಸಮಿತಿ ರಚಿಸಲ್ಪಟ್ಟಿದ್ದು. ಮೀನು ಮಸಾನಿ ಸಮಿತಿಯ ಮುಖ್ಯ ಶಿಲ್ಪಿಯಾಗಿದ್ದರು. ಅಶೋಕ್ ಮೆಹ್ತಾ ಮತ್ತು ಸಂಪೂರ್ಣಾನಂದರಂತಹ ಬುದ್ಧಿವಂತರು, ಈ ಸಮಿತಿಯೊಂದಿಗೆ ನಿಕಟ ಸಂಬಂಧ ಇಟ್ಟುಕೊಂಡಿದ್ದರು(47:p52). ಈ ಸಮಿತಿಯ ವಾರ್ಷಿಕ ಸಮ್ಮೇಳನ ಮದ್ರಾಸಿನಲ್ಲಿ ನಡೆಯಿತು. ಫಾದರ್ ವಡಕ್ಕನ್ ಇದರಲ್ಲಿ ಭಾಗಿಯಾಗಿದ್ದರು(70:p15). ಭಕ್ತವತ್ಸಲಂ, ರಾಜಾಜಿ, ಸುಬ್ರಮಣ್ಯಂ, ಮಸಾನಿ ಮತ್ತು ದೇಶಪಾಂಡೆ ಮುಂತಾದ ಪ್ರಮುಖ ವ್ಯಕ್ತಿಗಳು ಸಭೆಯಲ್ಲಿ ಭಾಗವಹಿಸಿದ್ದರು. ಕಮ್ಯುನಿಸ್ಟ್ ವಿರೋಧಿ ರಂಗದ ಅಖಿಲ ಭಾರತ ಕಮ್ಯುನಿಸ್ಟ್ ವಿರೋಧಿರಂಗವು ತಾತ್ಕಾಲಿಕ ಸಮಿತಿಯನ್ನು ಮದ್ರಾಸಿನಲ್ಲಿ ರಚಿಸಲಾಯಿತು. 'ಕಮ್ಯುನಿಸ್ಟ್ ವಿರೋಧಿ' (Anti Communist) ಎನ್ನುವ ಶೀರ್ಷಿಕೆಯಡಿಯಲ್ಲಿ ಒಂದು ನಿಯತಕಾಲಿಕದ ಪ್ರಕಾಶನ ಹೈದರಾಬಾದ್‌ನಿಂದ ಪ್ರಾರಂಭವಾಯಿತು(47:p52). ಬಾಂಬೆಯಲ್ಲಿ ಕಮ್ಯುನಿಸ್ಟ್ ವಿರೋಧಿರಂಗದ ಆಶ್ರಯದಲ್ಲಿ ಬೃಹತ್ ಸಭೆಗಳು ಮತ್ತು ಅಧ್ಯಯನ ತರಗತಿಗಳು ನಡೆದವು. ಕೆ.ಕೆ. ಶಾ, ಎಸ್.ಕೆ. ಪಾಟೀಲ್‌ರಂತಹ ಕಾಂಗ್ರೆಸ್ ನಾಯಕರು ಇಂತಹ

ಸಭೆಗಳನ್ನು ಏರ್ಪಡಿಸಿದ್ದರು. ಬಾಂಬೆಯಲ್ಲಿ ಕಮ್ಯುನಿಸ್ಟ್ ವಿರೋಧಿ ರಂಗದ ನಗರ ಘಟಕವನ್ನು ಆರಂಭಿಸಲಾಯಿತು(47:p52). ಸೆಪ್ಟೆಂಬರ್ 20, 1953ರಂದು ಮದ್ರಾಸಿನಿಂದ ಪ್ರಕಟಗೊಂಡ ವಾರಪತ್ರಿಕೆ 'ದಿ ನ್ಯೂ ಲೀಡರ್' ಈ ಪ್ರಕಾರ ಬರೆಯಿತು:

> "ಕೇರಳದ ಕಮ್ಯುನಿಸ್ಟ್ ವಿರೋಧಿರಂಗದ ಸಂಘಟಕ ರೆವರೆಂಡ್ ಜೋಸೆಫ್ ವಡಕ್ಕನ್, ಸಾಂಸ್ಕೃತಿಕ ಸ್ವಾತಂತ್ರ್ಯಕ್ಕಾಗಿ ಭಾರತೀಯ ಸಮಿತಿಯ ವಾರ್ಷಿಕ ಸಮ್ಮೇಳನವು ನೀಡಿದ ಅವಕಾಶವನ್ನು ಸದುಪಯೋಗಪಡಿಸಿಕೊಂಡು, ಸಮ್ಮೇಳನದ ಪ್ರತಿನಿಧಿ ಎನ್ನುವ ನೆಲೆಯಲ್ಲಿ, ಸಾಮಾಜಿಕ ಕಾರ್ಯಗಳ ಕ್ಷೇತ್ರಗಳ ಇತರೆ ಪ್ರತಿನಿಧಿಗಳನ್ನು ಮತ್ತು ನಾಯಕರನ್ನು ಸಂಪರ್ಕಿಸಿ, ಕಮ್ಯುನಿಸ್ಟ್ ವಿರೋಧಿ ರಂಗದ ಚಟುವಟಿಕೆಗಳನ್ನು ಅಖಿಲ ಭಾರತ ಮಟ್ಟಕ್ಕೆ ವಿಸ್ತರಿಸುವ ಸಾಧ್ಯತೆಗಳ ಬಗ್ಗೆ ವಿವರಿಸಿದರು. ಹೀಗೆ ಒಂದು ಸಂಘಟನಾ ಸಮಿತಿಯನ್ನು ರಚಿಸಲಾಯಿತು(87:20.09.53).

17 ಅಕ್ಟೋಬರ್ 1953ರ ವರದಿಯಲ್ಲಿ, ಬಾಂಬೆ ಮೂಲದ ಪ್ರಮುಖ ಸುದ್ದಿ ನಿಯತಕಾಲಿಕವಾದ ಬ್ಲಿಟ್ಜ್ (Blitz) ಹೀಗೆ ಹೇಳಿದೆ:

> "ಕ್ಯಾಥೋಲಿಕ್ ಪಾದ್ರಿಗಳಾಗುವ ಉನ್ನತ ಏಜೆನ್ಸಿಗಳ ಮೂಲಕ ಯುನೈಟೆಡ್ ಸ್ಟೇಟ್ಸ್‌ನಿಂದ, ಡಾಲರ್‌ಗಳು ನಿರಂತರವಾಗಿ ಕೇರಳಕ್ಕೆ ಹರಿಯುತ್ತಲಿತ್ತು. ಅಥವಾ ಬ್ರದರ್ ವಡಕ್ಕನ್ ಮುನ್ನಡೆಸುವ ಕಮ್ಯುನಿಸ್ಟ್ ವಿರೋಧಿರಂಗದ ಬೊಕ್ಕಸಕ್ಕೆ ಹರಿಯುತ್ತಲಿತ್ತು. ಮದ್ರಾಸಿನಲ್ಲಿ ಇತ್ತೀಚೆಗೆ ನಡೆದ 'ಸಾಂಸ್ಕೃತಿಕ ಸ್ವಾತಂತ್ರ್ಯ'ದ ಭಾರತೀಯ ಸಮಿತಿಯ ಎರಡನೇ ಅಖಿಲ ಭಾರತ ಸಮ್ಮೇಳನದಲ್ಲಿ ಸಹೋದರ ವಡಕ್ಕನ್ ಭಾಗವಹಿದ್ದರು. (ಕಮ್ಯುನಿಸ್ಟರ ಕಾರ್ಮಿಕ ಪ್ರಾಯೋಜಕತ್ವದಲ್ಲಿ) ರಾಜ್ಯದಲ್ಲಿ ರಚನೆಯಾದ ಎಡಪಕ್ಷಗಳು ಐಕ್ಯರಂಗದ ವಿರುದ್ಧ ಚುನಾವಣೆಯ ಸಾಧ್ಯತೆಯ ಬಗ್ಗೆ ಹುಡುಕಾಟ ನಡೆಸಲು, ಕೇರಳದಲ್ಲಿ ಕಾಂಗ್ರೆಸ್ ಮತ್ತು ಪ್ರಜಾ ಸಮಾಜವಾದಿಗಳೊಂದಿಗೆ ಸದ್ಯದಲ್ಲಿಯೇ ಅವರ ಕಮ್ಯುನಿಸ್ಟ್ ವಿರೋಧಿರಂಗ ಮಾತುಕತೆ ನಡೆಸುತ್ತದೆ. ಇದುವರೆಗೆ ರಾಜ್ಯಕ್ಕೆ ಸೀಮಿತವಾಗಿದ್ದ ಕಮ್ಯುನಿಸ್ಟ್ ವಿರೋಧಿರಂಗ, ಅದನ್ನು ಅಖಿಲ ಭಾರತ ಮಟ್ಟಕ್ಕೆ ವಿಸ್ತರಿಸಲು ಕರಡು ಯೋಜನೆಗಳನ್ನು ಸಿದ್ಧಪಡಿಸುವಲ್ಲಿ ನಿರತರಾಗಿದ್ದಾರೆ. 1954ರಲ್ಲಿ ಎರಡು ರಾಷ್ಟ್ರೀಯ ಸಮಾವೇಶಗಳು – ಒಂದು ಕಲ್ಕತ್ತಾದಲ್ಲಿ, ಮತ್ತೊಂದು ಬಾಂಬೆಯಲ್ಲಿ ಕರೆಯಲಾಗುವುದು"(90:17.10.53).

ಕಮ್ಯುನಿಸ್ಟ್ ವಿರೋಧಿರಂಗದ ಆರ್ಥಿಕ ಮೂಲಕ್ಕೆ ಸಂಬಂಧಿಸಿದಂತೆ, ಫಾದರ್ ಹೀಗೆ ಬರೆಯುತ್ತಾರೆ:

> "ಶ್ರೀಮಂತರಿಂದ ದೇಣಿಗೆಯನ್ನು ಪಾದ್ರಿಗಳ ಮೂಲಕ ಸಂಗ್ರಹಿಸಲಾಗಿದೆ. ಆ ಕಾಲದಲ್ಲಿ ಯುನೈಟೆಡ್ ಸ್ಟೇಟ್ಸ್‌ನಿಂದ ಮಿಲಿಯನ್‌ಗಟ್ಟಲೆ ಡಾಲರ್‌ಗಳನ್ನು ಪಡೆದ ಜನರನ್ನು ನಾನು ಬಲ್ಲೆ. ನಾನು 1965ರಲ್ಲಿ ಯುನೈಟೆಡ್ ಸ್ಟೇಟ್ಸ್‌ಗೆ ಭೇಟಿ ನೀಡಿದಾಗ, ತಾನು ಪಾದ್ರಿಂ ಫಾದರ್ ವಡಕ್ಕನ್ ಎಂದು ನನ್ನ ಹೆಸರ

ಹೇಳಿಕೊಂಡು ಅಪಾರ ಆಸ್ತಿ ಗಳಿಸಿರುವ ವಿಚಾರ ಬೆಳಕಿಗೆ ಬಂದಿತ್ತು. ಆಗ ಭಾರಿ ಮೊತ್ತವನ್ನು ಸಂಗ್ರಹಿಸುವ ಅವಕಾಶಗಳಿದ್ದವು ಅನ್ನುವುದೇನೋ ಸತ್ಯ. ಏಕೆಂದರೆ, 'ನ್ಯೂಯಾರ್ಕ್ ಟೈಮ್ಸ್', 'ವಾಷಿಂಗ್ಟನ್ ಪೋಸ್ಟ್' ನಂತಹ ಪತ್ರಿಕೆಗಳು ಕಮ್ಯುನಿಸ್ಟ್ ವಿರುದ್ಧರಂಗಗಳ ಚಟುವಟಿಕೆಗಳ ಬಗ್ಗೆಯ ಸುದ್ದಿಗಳು ನನ್ನ ಫೊಟೊಗಳೊಂದಿಗೆ ಪ್ರಕಟಿಸಿದ್ದವು. ಪ್ರಸ್ತುತ ಪತ್ರಿಕೆಗಳ ದೆಹಲಿಯ ಲೇಖಕರು ನನ್ನನ್ನು ಬಹಳಷ್ಟು ಸಂದರ್ಭಗಳಲ್ಲಿ ಸಂದರ್ಶನಗಳನ್ನು ನಡೆಸಿದ್ದರು"(85).

ಅಭಿಯಾನದ ಎಲ್ಲಾ ತಂತ್ರಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾದವು. ರೈತರ ಮತ್ತು ಗೇಣಿದಾರರ ಬೆಂಬಲವನ್ನು ಪಡೆಯಲು 1955ರಲ್ಲಿ, ಕಮ್ಯುನಿಸ್ಟ್ ವಿರೋಧಿರಂಗದ ಮೇಲ್ವಿಚಾರಣೆಯಲ್ಲಿ, 'ಕೃಷಿ ಸುಧಾರಣಾ ಸಪ್ತಾಹ'ವೆನ್ನುವ ಅಭಿಯಾನ ರಾಜ್ಯಾದ್ಯಂತ ಹಮ್ಮಿಕೊಳ್ಳಲಾಗಿತ್ತು. ಸ್ವಾಧೀನದಲ್ಲಿರುವ ಭೂಮಿಯ ಪ್ರಮಾಣವನ್ನು ಮಿತಿಗೊಳಿಸುವುದು ಮತ್ತು ಹೆಚ್ಚುವರಿ ಭೂಮಿಯನ್ನು ಭೂರಹಿತರಿಗೆ ನ್ಯಾಯಯುತವಾಗಿ ವಿತರಿಸುವುದು, ಇವೇ ಆ ಸಪ್ತಾಹದ ಮುಖ್ಯ ಅವಶ್ಯಕತೆಗಳು(46:p88). ಏತನ್ಮಧ್ಯೆ, ಕಮ್ಯುನಿಸ್ಟ್ ವಿರೋಧಿರಂಗದಲ್ಲಿ ಎರಡು ಗುಂಪುಗಳಾದವು. ಅಧಿಕೃತ ಘಟಕವೆನ್ನುವುದು ಬ್ರದರ್ ವಡಕ್ಕನ್ ನೇತೃತ್ವದ ಗುಂಪಾಗಿತ್ತು. ಅಖಿಲ ಕೇರಳ ಕಮ್ಯುನಿಸ್ಟ್ ವಿರೋಧಿರಂಗ ಎನ್ನುವ ಹೆಸರಿನ ಮತ್ತೊಂದು ಗುಂಪು ಅಥವಾ ಘಟಕಕ್ಕೆ ಜೋಸೆಫ್ ವೆಟ್ಟಿಕಾಡನ್ ನೇತೃತ್ವ ವಹಿಸಿದ್ದರು. ಎರಡು ಗುಂಪುಗಳು ಪರಸ್ಪರ ದೂಷಿಸಿಕೊಳ್ಳುತ್ತಾ ಕರಪತ್ರಗಳು ಮತ್ತು ನೋಟೀಸ್‌ಗಳನ್ನು ವಿತರಣೆ ಮಾಡುತ್ತಿದ್ದರು. ಪಟ್ಟಂ ತಾನುಪಿಳ್ಳರವರ ನೇತೃತ್ವದ ಪಿಎಸ್‌ಪಿ ಮಂತ್ರಿಮಂಡಲ ತಂದಂಥ ಕೃಷಿ ಸುಧಾರಣಾ ಮಸೂದೆಯ ಬಗ್ಗೆಯ ಕಾರ್ಯವಿಧಾನಕ್ಕೆ ಸಂಬಂಧಿಸಿದ ಈ ವಿವಾದವು, ಕಮ್ಯುನಿಸ್ಟ್ ವಿರೋಧಿರಂಗದಲ್ಲಿ ಬಿರುಕು ಉಂಟುಮಾಡಿದೆ ಎಂದು ಫಾದರ್ ವಡಕ್ಕನ್ ಅಭಿಪ್ರಾಯಪಡುತ್ತಾರೆ(46). ವಾಸ್ತವವಾಗಿ ಸಂಕಟಕ್ಕೊಳಗಾದವರ ಮತ್ತು ಬಡವರ ಬಗ್ಗೆ ಪಾದರ್ ವಡಕ್ಕನ್ ಸಹಾನುಭೂತಿ ಹೊಂದಿದ್ದರು(91:p4-5). ಆದರೆ ಅವರ ಕಮ್ಯುನಿಸ್ಟ್ ವಿರೋಧಿ ಧೋರಣೆಯ ತೀವ್ರತೆಯಲ್ಲಿ, ಅವರ ಬಗೆಗಿನ ಭಾವನೆಗಳು ಕ್ರಮೇಣ ಮರೆಯಾಗಿಬಿಟ್ಟವು.

ಭಾಷಾಧಾರಿತ ರಾಜ್ಯ ಕಲಿಕಾ/ಅಧ್ಯಯನ ಸಂಸ್ಥೆಯ ಭಾಗವಾಗಿ ನವೆಂಬರ್ 1, 1956ರಂದು ಕೇರಳ ರಾಜ್ಯವನ್ನು ರಚಿಸಲಾಯಿತು. ನಂತರ ಫೆಬ್ರವರಿ ಮತ್ತು ಮಾರ್ಚ್ 1957ರಲ್ಲಿ ರಾಜ್ಯ ವಿಧಾನಸಭೆಗೆ ಮೊದಲ ಚುನಾವಣೆ ನಡೆಯಿತು. ಆ ಚುನಾವಣೆಯಲ್ಲಿ ಕಮ್ಯುನಿಸ್ಟರು ಸೋಲಲು ಕಮ್ಯುನಿಸ್ಟ್ ವಿರೋಧಿ ರಂಗ ರೂಪಿಸಿದ ಯೋಜನೆ, ಇದನ್ನು 'ಮಟ್ಟಂಚೇರಿ ಥೀಸಿಸ್/ಪ್ರಬಂಧ' ಎಂದು ಕರೆಯಲಾಗುತ್ತಿತ್ತು(58:p55). ಕಾಂಗ್ರೆಸ್, ಪಿಎಸ್‌ಪಿ, ಮುಸ್ಲಿಂಲೀಗ್‌ನೊಂದಿಗೆ ಕಮ್ಯುನಿಸ್ಟ್ ಪಕ್ಷದ ವಿರುದ್ಧ ಪ್ರಜಾಸತ್ತಾತ್ಮಕ ಮೈತ್ರಿಯೊಂದನ್ನು ಕಮ್ಯುನಿಸ್ಟ್ ವಿರೋಧಿರಂಗದ ಭಾಗವಾಗಿ ರಚಿಸುವ ಪ್ರಸ್ತಾವನೆಯನ್ನು ಚುನಾವಣೆಗೆ ಮುಂಚೆಯೇ ಮಟ್ಟಂಚೇರಿ ಪ್ರಬಂಧದಲ್ಲಿ ಪ್ರಸ್ತುತಪಡಿಸಲಾಗಿತ್ತು. ಈ

ನಿರ್ದೇಶನದ ಪ್ರಕಾರ, ಪ್ರತಿ ಕ್ಷೇತ್ರದಲ್ಲಿ ಕಮ್ಯುನಿಸ್ಟೇತರ ಪಕ್ಷಗಳನ್ನು ಪ್ರತಿನಿಧಿಸುವ ಒಬ್ಬ ಅಭ್ಯರ್ಥಿಯನ್ನು ಮಾತ್ರ ಕಣಕ್ಕಿಳಿಸಬೇಕು ಮತ್ತು ಕಮ್ಯುನಿಸ್ಟರ ವಿರುದ್ಧ ನೇರವಾಗಿ ಹೋರಾಡಬೇಕು,(137:p144; 46:)* ಎನ್ನುವುದಾಗಿತ್ತು. ಆದರೆ ಈ ಸಲಹೆ ಅದು ಆ ಸಮಯದಲ್ಲಿ ಕಮ್ಯುನಿಸ್ಟೇತರ ಪಕ್ಷಗಳಿಗೆ ಸ್ವೀಕಾರಾರ್ಹವಾಗಿರಲಿಲ್ಲ, ಎಂದು ಫಾದರ್ ವಡಕ್ಕನ್ ಸೂಚಿಸುತ್ತಾರೆ.

ಫಾದರ್ ವಡಕ್ಕನ್ ನೇತೃತ್ವದಲ್ಲಿ ನಡೆಸಿದ ಕಮ್ಯುನಿಸ್ಟ್ ವಿರೋಧಿ ಚಟುವಟಿಕೆಗಳಿಗಾಗಿ ನಿಧಿಯನ್ನು ಸಂಗ್ರಹಿಸಲು ಪಶ್ಚಿಮ ಜರ್ಮನ್ ವೃತ್ತಪತ್ರಿಕೆಯಾದ ಐಕೊ ಡೆರ್ಸೆಲ್ಫ್'ನಲ್ಲಿ ಪ್ರಕಟಿಸಲಾದ ಮನವಿ. ಕೇರಳದ ಪ್ರವಾಹ ಪರಿಹಾರ ಕಾರ್ಯಾಚರಣೆಗಾಗಿ ಎನ್ನುವ ಸುಳ್ಳಿನ ನೆಪದಲ್ಲಿ ಜರ್ಮನಿಯಲ್ಲಿ ನಿಧಿ ಸಂಗ್ರಹ ನಡೆಸಲಾಗಿತ್ತು.

## ಸಾಮಾಜಿಕ ಸ್ಕೌಟ್ ಚಳುವಳಿ

ರಾಜ್ಯ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷ ಬಹುಮತ ಪಡೆದು ಸರ್ಕಾರವನ್ನು ರಚಿಸಲಾಯಿತು. ಕೋಪಗೊಂಡ ಕಮ್ಯುನಿಸ್ಟ್ ವಿರೋಧಿರಂಗದ ಸಾರಥಿಗಳು ಹೆಚ್ಚಿನ ಹುರುಪಿನಿಂದ ಕಮ್ಯುನಿಸ್ಟ್ ವಿರೋಧಿ ಚಟುವಟಿಕೆಗಳನ್ನು ಮುಂದಕ್ಕೆ ಕೊಂಡುಹೋದರು.

"ಕಮ್ಯುನಿಸ್ಟರು ನಮ್ಮ ಪ್ರಜಾಪ್ರಭುತ್ವ ಸಂವಿಧಾನವನ್ನು ನಾಶಪಡಿಸುತ್ತಾರೆ" ಎನ್ನುವ ಭಯಾನಕ ರೀತಿಯ ವಿಚಾರಗಳನ್ನಿಟ್ಟುಕೊಂಡು, ಕಮ್ಯುನಿಸ್ಟ್ ವಿರೋಧಿರಂಗವು ಪ್ರಚಾರ ನಡೆಸಿತು.

> "ನಮ್ಮ ಸಂವಿಧಾನದ ಮರೆಯಲ್ಲಿ ಕಮ್ಯುನಿಸ್ಟರು ರಾಜ್ಯ, ರಾಜ್ಯದ ಆಡಳಿತ ವ್ಯವಸ್ಥೆ ಮತ್ತು ಇಲ್ಲಿಯ ಸಂಪನ್ಮೂಲಗಳನ್ನೆಲ್ಲವನ್ನು ಉಪಯೋಗಿಸಿಕೊಂಡು, ಇಡೀ ದೇಶದಲ್ಲಿ ಗಲಭೆ ಸೃಷ್ಟಿಸಲು ಬಳಸಿಕೊಳ್ಳುತ್ತಾರೆ. ಅವರ ತಾರತಮ್ಯ ನೀತಿಗಳಿಂದಾಗಿ, ರಾಜ್ಯದಲ್ಲಿ ವ್ಯಾಪಕವಾದ ಕಾನೂನು ಮತ್ತು ಸುವ್ಯವಸ್ಥೆಯ ಸಮಸ್ಯೆ ಮತ್ತು ಅಶಾಂತಿಗೆ ಖಂಡಿತವಾಗಿ ಕಾರಣವಾಗಿ ಪರಿಣಮಿಸುತ್ತದೆ"(137:p145).

ಆದ್ದರಿಂದ ಕಮ್ಯುನಿಸ್ಟ್ ಸರ್ಕಾರವನ್ನು ವಿರೋಧಿಸುವುದಕ್ಕಾಗಿ, ಕಮ್ಯುನಿಸ್ಟ್ ವಿರೋಧಿರಂಗವು 'ಸಾಮಾಜಿಕ ಸ್ಕೌಟ್ ಚಳುವಳಿ' ಎನ್ನುವ ಹೆಸರಿನಲ್ಲಿ ಅರೆಸೈನಿಕ ಸ್ವಯಂಸೇವಕ ಪಡೆಯನ್ನು ರಚಿಸಿತು.

'ಸಾಮಾಜಿಕ ಭದ್ರತೆ ಮತ್ತು ಪ್ರಜಾಪ್ರಭುತ್ವ ರಕ್ಷಣೆ' ಎನ್ನುವುದು ಈ ಸಾಮಾಜಿಕ ಸ್ಕೌಟ್ ಚಳವಳಿಯ ಮೂಲ ಗುರಿ ಮತ್ತು ಧ್ಯೇಯವಾಗಿಯೆಂದು, ಕಮ್ಯುನಿಸ್ಟ್

---

* ಫಾದರ್ ವಡಕ್ಕನ್ ಬರೆಯುತ್ತಾರೆ. 'ಮಟ್ಟಂಚೇರಿ ಪ್ರಬಂಧವು 1957ರ ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಸೋಲಿಸಲು ಎಸಿಎಫ್ ರೂಪಿಸಿದ ಯೋಜನೆಯಾಗಿದ್ದು, ಸಾಕಷ್ಟು ವಿವಾದಗಳಿಗೂ ಕಾರಣವಾಯಿತು. ನಂತರ ಅವರು ಅದರ ಕಹಿಯನ್ನು ಕುಡಿಯಬೇಕಾಯಿತು...

ವಿರೋಧಿರಂಗವು ಹೇಳಿಕೊಂಡಿತು(82:p61). ಎಲ್ಲಾ ಸಮುದಾಯಗಳ ಯುವಕರು ಅದರ ಸದಸ್ಯರಾಗಿದ್ದಾರೆ ಎಂದು ಅದರ ಸಂಘಟಕರು ಹೇಳಿಕೊಂಡಿದ್ದಾರೆ. ಹೀಗೆ ಸಾಮಾಜಿಕ ಸ್ಕೌಟ್ ಚಳುವಳಿಯನ್ನು 1957ರಲ್ಲಿ ಫಾದರ್ ವಡಕ್ಕನ್ ನೇತೃತ್ವದಲ್ಲಿ, ತ್ರಿಶೂರ್‌ನ್ನು ಕಾರ್ಯಾಚರಣೆಯ ಕೇಂದ್ರವಾಗಿ ಇಟ್ಟುಕೊಂಡು ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿತು. ನಿವೃತ್ತ ಸೇನಾ ಅಧಿಕಾರಿಯಾದ ಸರ್ದಾರ್ ಚಂದ್ರೋತ್ ಕುಂಞರಾಮನ್ ನಾಯರ್‌ರವರು ಸಾಮಾಜಿಕ ಸ್ಕೌಟ್ ಚಳುವಳಿಯ ಕ್ರೀಡಾ ತರಬೇತುದಾರರಾಗಿದ್ದರು. ಚರ್ಚ್ ಅಂಗಳಗಳಲ್ಲಿ ಮುಖ್ಯ ಕ್ರೀಡಾ ತರಬೇತಿ ಕೇಂದ್ರಗಳಿದ್ದವು(92:p48). ತರಬೇತಿ ಪಡೆದ ನೂರಾರು ಸಾಮಾಜಿಕ ಸ್ಕೌಟ್ಸ್‌ಗಳು ಸಮವಸ್ತ್ರದಲ್ಲಿ ಕೊಟ್ಟಾಯಂ ಮತ್ತು ಚಂಗನಾಶ್ಶೇರಿಯ ಬೀದಿಗಳಲ್ಲಿ ಮಾರ್ಚ್‌ಫಾಸ್ಟ್ ನಡೆಸಿದರು.

ಕಮ್ಯುನಿಸ್ಟ್ ವಿರೋಧಿರಂಗ ಮತ್ತು ಸಾಮಾಜಿಕ ಸ್ಕೌಟ್ ಸೇರಿದಂತೆ ಅದರ ಘಟಕ ಸಂಘಟನೆಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ವಿವಿಧ ಸಮುದಾಯಗಳ ಗುಂಪುಗಳನ್ನು ಸಂಯೋಜಿಸುವ ಮೂಲಕ ಪ್ರಚಾರ ಚಟುವಟಿಕೆಗಳನ್ನು ಸಂಘಟಿಸಲಾದವು. ನವೆಂಬರ್ 1957ರಲ್ಲಿ ಚಂಗನಾಶ್ಶೇರಿಯಲ್ಲಿ ಸಾಮಾಜಿಕ ಸ್ಕೌಟ್ ಸಮ್ಮೇಳನವನ್ನು ಉದ್ಘಾಟಿಸುತ್ತಾ, ಫಾದರ್ ವಡಕ್ಕನ್‌ರವರು ಒತ್ತು ನೀಡಿ ಪ್ರಸ್ತಾಪಿಸಿದ್ದೇನೆಂದರೆ,

> "ಕಮ್ಯುನಿಸ್ಟರ ಹಿಡಿತದಿಂದ ಕೇರಳವನ್ನು ರಕ್ಷಿಸಬೇಕಾದರೆ, ಚಂಗನಾಶ್ಶೇರಿಯ ಬಿಷಪ್ ಗ್ರೇಸ್ ಕಾವಕ್ಕಾಡ್, ಎನ್‌ಎಸ್‌ಎಸ್ ಮುಖ್ಯಸ್ಥ ಮನ್ನತ್ ಪದ್ಮನಾಭನ್‌ರವರು ಒಂದು ಮೇಜಿನ ಸುತ್ತ ಒಟ್ಟಾಗಿ ಕುಳಿತು ಕೆಲಸ ಮಾಡುವ ಮಾರ್ಗಗಳನ್ನು ಕಂಡುಕೊಳ್ಳಬೇಕು. ಈ ಏಕತೆಗಾಗಿಯೇ ಸಾಮಾಜಿಕ ಸ್ಕೌಟ್‌ಗಳು ಸ್ಥಿರವಾಗಿ ಹೆಜ್ಜೆಗಳನ್ನಿಡುತ್ತಾ ಮುಂದಕ್ಕೆ ಸಾಗುತ್ತಿದೆ"(137:p146).

ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸುವ ಜನರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳ ಬಗ್ಗೆ ಕಲಿಯಲು ಕಮ್ಯುನಿಸ್ಟ್ ವಿರೋಧಿರಂಗವು ಸಾಮಾಜಿಕ ಸಮೀಕ್ಷೆಯೊಂದನ್ನು ನಡೆಸಿತು. ಫಾದರ್ ವಡಕ್ಕನ್ ಪ್ರಕಟಿಸಿದ ಅಧಿಸೂಚನಾ ಪತ್ರಗಳನ್ನು, ಕಮ್ಯುನಿಸ್ಟ್



ಕಮ್ಯುನಿಸ್ಟ್ ವಿರುದ್ಧ ರಂಗದ ಅರೆಸೈನಿಕ ಸ್ವಯಂಸೇವಕ ಸಂಘಟನೆಯಾದ ಸೋಷ್ಯಲ್ ಸ್ಕೌಟ್ ವಾಲಂಟಿಯರುಗಳ ರೂಟ್ ಮಾರ್ಚ್...

ವಿರೋಧಿರಂಗದ ಪ್ರಚಾರ ಚಟುವಟಿಕೆಗಳಿಗಾಗಿ ನಿಯಮಿತವಾಗಿ ಕಾರ್ಯಕರ್ತರಿಗೆ ಕಳುಹಿಸಿಕೊಡಲಾಗುತ್ತಿತ್ತು. ಸಾರ್ವಜನಿಕರಲ್ಲಿ ಕಮ್ಯುನಿಸ್ಟ್ ವಿರೋಧಿ ಭಾವನೆ ಮೂಡಿಸುವುದಕ್ಕಾಗಿಯೇ ಈ ರೀತಿಯ ಕ್ರಮ ಕೈಗೊಳ್ಳಲಾಗಿದೆ(137:p146). ಕಮ್ಯುನಿಸ್ಟ್ ವಿರೋಧಿರಂಗದ ಪ್ರತಿಗಾಮಿ ಕ್ರಮಗಳಿಗೆ ಕಮ್ಯುನಿಸ್ಟ್ ಸರ್ಕಾರದ ಪ್ರತಿಕ್ರಿಯೆಗಳನ್ನು ಕೆಳಗಿನ ಸರ್ಕಾರಿ ಪತ್ರಿಕಾ ಪ್ರಕಟಣೆಯ ಮೂಲಕ ಸ್ಪಷ್ಟಪಡಿಸಲಾಗಿದೆ:

**ಕ್ರುಸೇಡರ್‌ಗಳ/ಧರ್ಮಯುದ್ಧ ನಡೆಸುವವರ ವಿರುದ್ಧ**

**ಸಾರ್ವಜನಿಕ ಎಚ್ಚರಿಕೆ**

"ಶಾಸಕಾಂಗವು ಪರಿಗಣಿಸುತ್ತಿರುವ ಶಿಕ್ಷಣ ಮಸೂದೆಯ ಪರ ಮತ್ತು ವಿರುದ್ಧ ಸಾರ್ವಜನಿಕ ಅಭಿಪ್ರಾಯದ ಬಗ್ಗೆ ಸರಕಾರವು ಜಾಗರೂಕವಾಗಿ ಗಮನಿಸುತ್ತಿತ್ತು. ಈ ಶಿಕ್ಷಣಕ್ಷೇತ್ರದ ಸುಧಾರಣೆಗಾಗಿ ತೆಗೆದುಕೊಂಡ ಕ್ರಮದ ಬಗ್ಗೆ ಭಾರಿ ಬೆಂಬಲ ಸಿಗುತ್ತಿರುವುದರ ಬಗ್ಗೆ ಸರ್ಕಾರಕ್ಕೆ ಸಮಾಧಾನ ತಂದಿದೆ. ಮಸೂದೆಯ ಕೆಲವು ನಿಬಂಧನೆಗಳ ಬಗ್ಗೆ, ಕೆಲವು ವರ್ಗಗಳ ಜನರ ಪ್ರತಿಭಟನೆಯನ್ನು ಸರ್ಕಾರದ ಗಮನ ಸೆಳೆದಿದ್ದು, ಅದನ್ನು ಪರಿಗಣಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗುತ್ತಿದೆ. ಈ ಕ್ರಿಯೆಯನ್ನು ಅಂತಿಮಗೊಳಿಸುವ ಜವಾಬ್ದಾರಿಯು ಸಾರ್ವಭೌಮ ಸಂಸ್ಥೆಯಾದ ಶಾಸಕಾಂಗಕ್ಕೆ ಇರುವುದರಿಂದ ಖಂಡಿತವಾಗಿಯೂ ಮಸೂದೆಯ ಎಲ್ಲಾ ಅಂಶಗಳನ್ನು ಪರಿಗಣಿಸಿಯೇ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ" (107:18.12.57).

"ಅದೇ ಸಮಯದಲ್ಲಿ, ಮಸೂದೆಯನ್ನು ತೀವ್ರವಾಗಿ ವಿರೋಧಿಸುವಂಥ ಅನಾರೋಗ್ಯಕರ ಪ್ರವೃತ್ತಿಯನ್ನು ಸರ್ಕಾರ ನೋಡಿಲ್ಲ ಎಂದು ಹೇಳಿಕೊಂಡು ತಪ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಅಂತಹ ಪ್ರವೃತ್ತಿಗಳು ಸಕ್ರಿಯವಾಗಿವೆ ಎಂಬುದರಲ್ಲಿ ಸಂದೇಹವಿಲ್ಲದಂತೆ ಸಾಬೀತು ಪಡಿಸುವ ದಾಖಲೆಗಳು ಸರ್ಕಾರದ ವಶಕ್ಕೆ ಬಂದು ತಲುಪಿದೆ. ಕೇರಳದ ಒಂದು ಪ್ರಬಲಧಾರ್ಮಿಕ ಸಮುದಾಯದ ಪದಾಧಿಕಾರಿಗಳನ್ನು, ಉನ್ನತ ಧರ್ಮಗುರುಗಳನ್ನು ಉದ್ದೇಶಿಸಿ ತ್ರಿಶೂರಿನ ಒಂದು ಸಂಘಟನೆ ಪ್ರಕಟಿಸಿದ ಅಧಿಸೂಚನಾ ಪತ್ರವೇ ಅವುಗಳಲ್ಲಿ ಅತ್ಯಂತ ಗಮನಾರ್ಹವಾದುದು. ಸಂಘಟನೆಯು ಅಳವಡಿಸಿಕೊಂಡ ಯೋಜನೆಯ ಮುಖ್ಯ ಉದ್ದೇಶ, 'ನಮ್ಮ ದೇಶ ಮತ್ತು ಅದರ ಸಂಸ್ಕೃತಿಯನ್ನು ಕಮ್ಯುನಿಸ್ಟ್ ಆಡಳಿತದ ಪ್ರಭಾವದಿಂದಾಗಿ ರಕ್ಷಿಸಬೇಕು', ಎಂದೇ ಆ ಅಧಿಸೂಚನಾ ಪತ್ರ ಹೇಳುತ್ತಿರುವ್ ಸಂಗತಿ."

ಈ ಅಧಿಸೂಚನೆಯು ಹೆಚ್ಚುವರಿಯಾಗಿ ಹೀಗೆ ಹೇಳುತ್ತದೆ:

"ಶಿಕ್ಷಣ ಮಸೂದೆಯಂತಹ ವಿಷಯಗಳನ್ನು ಗಂಭೀರವಾಗಿ ಪರಿಗಣಿಸಲಾಗುವುದು. ಜನಸಮೂಹದ ಭಾವನೆಗಳನ್ನೆಚ್ಚರಿಸಲು ಜನರಿಗೆ ಸಮಯೋಚಿತವಾಗಿ ವಿಷಯಗಳನ್ನು ತಿಳಿಸಲಾಗುವುದು. ಅಂತಿಮವಾಗಿ, ನಮ್ಮ

ಪ್ಯಾರಿಷ್ ಪಾದ್ರಿಗಳು ಈ ಚಳವಳಿಗೆ ಸಹಕರಿಸಬೇಕೆನ್ನುವ ಇಚ್ಛೆ ಇರುವುದಾದರೆ, ನಾವು ಈ ಕೇರಳದಲ್ಲಿ ಕಮ್ಯುನಿಸ್ಟರ ವಿರುದ್ಧಸಕ್ರಿಯವಾಗಿ ಕಾರ್ಯನಿರ್ವಹಿಸುವ ಜ್ಞಾನಸಂಪತ್ತುಳ್ಳ 2000 ಯುವಕರ ಸಣ್ಣ ಘಟಕಗಳನ್ನು ರಚಿಸೋಣ. ಕ್ರೈಸ್ತರಲ್ಲದವರಿಂದಲೂ ನಾನು ಉತ್ತಮ ಬೆಂಬಲವನ್ನು ನಿರೀಕ್ಷಿಸುತ್ತೇನೆ."

ಜ್ಞಾಪನಾಪತ್ರ ಮುಂದುವರಿಯುತ್ತಾ,

"ಪ್ರಸ್ತಾವಿತ ಧರ್ಮಯುದ್ಧದ ವೆಚ್ಚಕ್ಕೆ, ಎರಡು ರೂಪಾಯಿಗಳಂತೆ ಮಾಸಿಕ ದೇಣಿಗೆಗಾಗಿ ನಾವು ನಿಮ್ಮನ್ನು ಸಂಪರ್ಕಿಸುತ್ತೇವೆ"(107:18.12.57).

ಸರ್ಕಾರ ತೆಗೆದುಕೊಳ್ಳುತ್ತಿರುವ ಯಾವುದಾದರೂ ಕ್ರಮವನ್ನು ಮುಂದಿಟ್ಟುಕೊಂಡು, ನ್ಯಾಯಯುತವಾದ ಅಭಿಪ್ರಾಯಗಳನ್ನು ಪ್ರಕಟಪಡಿಸುವುದಕ್ಕಾಗಲೀ ಶಾಂತಿಯುತವಾದ ಪ್ರದರ್ಶನಗಳನ್ನು ನಡೆಸುವುದಕ್ಕಾಗಲೀ ಯಾವುದೇ ವಿರೋಧ ಸರ್ಕಾರಕ್ಕಿಲ್ಲ ಎಂದು ಸೂಚಿಸಬಯಸುತ್ತದೆ. ಆದಾಗ್ಯೂ (ಅಧಿಸೂಚನಾ ಪತ್ರಿಕೆಯಲ್ಲಿ ಉಲ್ಲೇಖಿಸಿದಂತೆ) ಯುವಜನರ ಭಾವನೆಗಳನ್ನು ಕೆರಳಿಸಲು ಧರ್ಮಯುದ್ಧವನ್ನು ಆಯೋಜಿಸುವಂಥ ಪ್ರಯತ್ನಗಳು ಅತ್ಯಂತ ಅಪಾಯಕಾರಿಯಾದ ವಿಚಾರವಾಗಿರುತ್ತದೆ. ಅದು ರಾಜ್ಯದ ಕಾನೂನು ಸುವ್ಯವಸ್ಥೆ ಮತ್ತು ಜನರ ಶಾಂತಿಯುತ ಜೀವನಕ್ಕೆ ಹಾನಿಕಾರಕವಾದದ್ದು. ಬಹುಶಃ ಅದನ್ನು ಬೆಂಬಲಿಸುವವರ ಕೈಗಳಿಂದ ಅದರ ಕೆಟ್ಟ ಪರಿಣಾಮಗಳನ್ನು ನಿಯಂತ್ರಿಸಲು ಸಾಧ್ಯವಾಗದೇ ಹೋಗಬಹುದು. ತಮ್ಮ ಧಾರ್ಮಿಕ ಅಥವಾ ಸಾಂಸ್ಕೃತಿಕವಾದ ಭಾವನೆಗಳನ್ನು ಬಳಸಿಕೊಂಡು, ಜನರನ್ನು ಶೋಷಣೆ ಮಾಡುವ ಪ್ರಯತ್ನಗಳಿಂದಾಗಿ ದಾರಿ ತಪ್ಪಿ ಹೋಗದಿರಲು ಸರ್ಕಾರ ಜನರನ್ನು ಎಚ್ಚರಿಸಬಯಸುತ್ತದೆ. ರಾಜ್ಯದ ಶಿಕ್ಷಣವನ್ನು ಉನ್ನತ ರೀತಿಯಲ್ಲಿ ಸುಧಾರಿಸುವ ಮತ್ತು ಶಿಕ್ಷಕರ ರಕ್ಷಣೆಯನ್ನು ಖಚಿತಪಡಿಸಿಕೊಳ್ಳುವ ಉದ್ದೇಶಗಳಿರುವ ಕ್ರಮಗಳ ವಿರುದ್ಧ ಪ್ರತಿಭಟನೆಗಳನ್ನು ಹೆಚ್ಚಿಸುವ ಪಂಥೀಯ ವಿಚಾರವಾದಿಗಳ ದುಷ್ಟ ಪ್ರಭಾವಗಳ ಮೋಸವನ್ನು ತಿಳಿಯದೆ ಬಲಿಯಾಗದಂತೆ ಎಚ್ಚರಿಸುತ್ತದೆ.

ಕಮ್ಯುನಿಸ್ಟ್ ಸರ್ಕಾರವು ಶಿಕ್ಷಣವನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತಿದೆ, ಎಂದು ಕಮ್ಯುನಿಸ್ಟ್ ವಿರೋಧಿರಂಗವು ಆರೋಪಿಸಿತು.

"25 ಲಕ್ಷ ವಿದ್ಯಾರ್ಥಿಗಳು ಮತ್ತು ಒಂದು ಲಕ್ಷ ಶಿಕ್ಷಕರಲ್ಲಿ ವಿಶೇಷ ಸೈದ್ಧಾಂತಿಕ ಚಿಂತನೆಗಳ ಸೇರ್ಪಡೆಯಿಂದಾಗಿ ಹೆಚ್ಚಿನ ಪ್ರತಿಫಲ ದೊರೆಯುತ್ತದೆ. ಕಮ್ಯುನಿಸ್ಟರನ್ನು ಹೊರತುಪಡಿಸಿ ಉಳಿದ ಎಲ್ಲಾ ಶಕ್ತಿಗಳನ್ನು ನಿಗ್ರಹಿಸಿ, ಈ ಕ್ಷೇತ್ರದಿಂದ ಅವುಗಳನ್ನು ಹೊರಹಾಕುವ ಉದ್ದೇಶವನ್ನು ಈ ಶಿಕ್ಷಣ ಮಸೂದೆಯು ತನ್ನ ಗುರಿಯನ್ನಾಗಿಟ್ಟುಕೊಂಡಿದೆ" (137:p146).

ಕೇರಳದಲ್ಲಿ ಕ್ರೈಸ್ತಶ್ರೇಣಿಯ ಬೆಂಬಲದೊಂದಿಗೆ ಕ್ರೈಸ್ತಧರ್ಮಕ್ಕೆ ಸೇರಿದ ಶಾಲಾ ವ್ಯವಸ್ಥಾಪಕರು/ಮೇನೆಜ್‌ಮೆಂಟಿನವರು ಆರಂಭದಲ್ಲಿ ಶಿಕ್ಷಣ ಮಸೂದೆಯ ಬಗ್ಗೆ

ವಿರೋಧ ವ್ಯಕ್ತಪಡಿಸಿದರು(93:p46). ಇದು ಕಮ್ಯುನಿಸಂ ವಿರೋಧಿ ಅಭಿಯಾನದ ಭಾಗವಾಗಿತ್ತು. ಮೊದಲಿನಿಂದಲೂ ಶಿಕ್ಷಣ ಮಸೂದೆ ವಿರುದ್ಧದ ಆಂದೋಲನದೊಂದಿಗೆ ಕೋಮುವಾದವನ್ನು ಬೆರೆಸಲಾಗುತ್ತಿತ್ತು. ಕಮ್ಯುನಿಸ್ಟ್ ವಿರೋಧಿರಂಗವು ಇದನ್ನು ಜನರ ಸಮಸ್ಯೆಯ ವಿಷಯವನ್ನಾಗಿ ಪರಿವರ್ತಿಸಿತು.

ಕೇರಳ ಶಿಕ್ಷಣ ಮಸೂದೆಯ ವಿರುದ್ಧ ಪ್ರಬಲ ಆಂದೋಲನವನ್ನು ಸಂಘಟಿಸಲು, ಸಂಪೂರ್ಣ ಅಧಿಕಾರದೊಂದಿಗೆ ಕಮ್ಯುನಿಸ್ಟ್ ವಿರೋಧಿರಂಗವು ಫಾದರ್ ವಡಕ್ಕನ್ ಅವರನ್ನು ಸಂಚಾಲಕರನ್ನಾಗಿ ನೇಮಿಸಿತು. ಎರ್ನಾಕುಲಂನ ಕೆಪಿಸಿಸಿ ಕಛೇರಿಯಲ್ಲಿ ಕರೆದ ಸಭೆಯ ಅಧ್ಯಕ್ಷತೆಯನ್ನು ಪಣಂಪಳ್ಳಿ ಗೋವಿಂದಮೆನನ್ ವಹಿಸಿದ್ದರು. ಇದು ರಾಜ್ಯದಲ್ಲಿ ಕಮ್ಯುನಿಸ್ಟ್ ಕಮ್ಯುನಿಸ್ಟ್ ವಿರೋಧಿ ಆಂದೋಲನದಲ್ಲಿ ಕಮ್ಯುನಿಸ್ಟೇತರ ಶಕ್ತಿಗಳನ್ನು ಒಂದುಗೂಡಿಸುವ ಮೊದಲ ಉಪಕ್ರಮವಾಗಿತ್ತು(46:p89). ಕೆಪಿಸಿಸಿ ಮಾಜಿ ಅಧ್ಯಕ್ಷ ಕೆ.ಎ.ದಾಮೋದರ್ ಮೆನನ್, ಮುಸ್ಲಿಂ ಲೀಗ್ ನಾಯಕ ಪೋಕರ್ ಸಾಹಿಬ್, ಸಿ.ಎಂ. ಸ್ಟೀಫನ್, ಸರ್ದಾರ್ ಚಂದ್ರೋತ್, ಎನ್.ವಿ.ಜೋಸೆಫ್, ಎನ್.ಎಕ್ಸ್. ಚೆರಿಯನ್ ಮುಂತಾದ ಉಳಿದ ನಾಯಕರೂ ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

ಶಿಕ್ಷಣ ಮಸೂದೆ ವಿರುದ್ಧದ ಹೋರಾಟದ ಭಾಗವಾಗಿ 1957 ಆಗಸ್ಟ್ 26ರಂದು ತಿರುವನಂತಪುರದಲ್ಲಿ ಕಮ್ಯುನಿಸ್ಟ್ ವಿರೋಧಿರಂಗವು ಬೃಹತ್ ಪ್ರದರ್ಶನವನ್ನು ಆಯೋಜಿಸಲಾಗಿತ್ತು. ಪ್ರಸ್ತುತ ಪ್ರದರ್ಶನದ ಸಿದ್ಧತೆಗಳಿಗೆ ಸಂಬಂಧಿಸಿದಂತೆ, ಕಮ್ಯುನಿಸ್ಟ್ ವಿರೋಧಿ ರಂಗದ ಹೆಚ್ಚಿನ ನಾಯಕರು ವಾರಗಟ್ಟಲೆ ರಾಜಧಾನಿಯಲ್ಲಿ ಬೀಡುಬಿಟ್ಟಿದ್ದರು. ನಗರದಲ್ಲಿ ನಡೆದ ಆ ಪ್ರತಿಭಟನೆಯ ನಂತರ ಕಮ್ಯುನಿಸ್ಟ್ ವಿರೋಧಿರಂಗ ಮತ್ತು ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರ ನಡುವೆ ಘರ್ಷಣೆ ನಡೆಯಿತು. ಕಮ್ಯುನಿಸ್ಟ್ ವಿರೋಧಿರಂಗದ ಅಧ್ಯಕ್ಷನಾಗಿದ್ದ ಬಿ.ವಿಲಿಂಗ್ಟನ್ ಸೇರಿದಂತೆ ಹಲವರು ಈ ಘಟನೆಯಲ್ಲಿ ಗಾಯಗೊಂಡರು(137:p146).

### ಶಾಂತಿಸೇನೆ

ಈ ಕಾಲಘಟ್ಟದಲ್ಲಿ, ವಿಶೇಷವಾಗಿ ರಾಜ್ಯ ಶಾಸನಸಭೆಯಲ್ಲಿ ಕೇರಳ ಶಿಕ್ಷಣ ಮಸೂದೆಯನ್ನು ಸದನದಲ್ಲಿ ಮಂಡಿಸಿದ ಬಳಿಕ, ಕ್ಯಾಥೋಲಿಕರ ಭದ್ರಕೋಟೆಗಳಲ್ಲಿ ಸಂಘರ್ಷ ಹೆಚ್ಚಾಯಿತು. ಕಮ್ಯುನಿಸ್ಟ್ ವಿರೋಧಿರಂಗದ ಪ್ರಚೋದನಕಾರಿ ಕ್ರಮಗಳಿಂದಾಗಿ, ಕಮ್ಯುನಿಸ್ಟರು ಮತ್ತು ಕಮ್ಯುನಿಸ್ಟ್ ವಿರೋಧಿಗಳ ನಡುವೆ ಹಿಂಸಾತ್ಮಕ ಘರ್ಷಣೆಗೆ ಕಾರಣವಾಯಿತು.ಈ ಘಟನೆಗಳ ನಂತರ, ದಾಳಿಕೋರರು ತ್ರಿಶೂರ್ ಮತ್ತು ಇತರ ಪ್ರದೇಶಗಳಲ್ಲಿ ಮಾರಕ ಆಯುಧಗಳನ್ನು ಬಳಸಿದರು.*

* 9, ಜನವರಿ 2010ರಂದು ತ್ರಿಶೂರ್‌ನ ವಲಪಾಡುವಿನ ಅವರ ನಿವಾಸದಲ್ಲಿ ಅವರೊಂದಿಗೆ ಸಂದರ್ಶನ ನಡೆಸಲಾಗಿದೆ

ತ್ರಿಶೂರ್‌ನಲ್ಲಿ ಸೀತಾರಾಮ್ ಮಿಲ್‌ನಲ್ಲಿ ಕಾರ್ಮಿಕರ ಮುಷ್ಕರವೂ ಹಿಂಸಾಚಾರಕ್ಕೆ ತಿರುಗಿತು. 1958 ಜುಲೈ 26ರಂದು ತ್ರಿಶೂರ್‌ನ ವರಂತರಪಿಲ್ಲಿಯಲ್ಲಿ ಹಿಂಸಾಚಾರ ಭುಗಿಲೆದ್ದಿತ್ತು. ಅದರಲ್ಲಿ ಐವರು ಕೊಲ್ಲಲ್ಪಟ್ಟರು ಮತ್ತು ಇನ್ನೂ ಅನೇಕರು ಮಾರಣಾಂತಿಕವಾಗಿ ಗಾಯಗೊಂಡರು(94:p22). ಈ ಘಟನೆಯಲ್ಲಿ ದುಷ್ಕರ್ಮಿಗಳು 'ತೊ಼ಳಿಲಾಳಿ'('ಕಾರ್ಮಿಕರು') ಪತ್ರಿಕೆಯ ಲೇಖಕನಾದ ವರ್ಗೀಸ್ ಮೇಚೇರಿಯನ್ನು ಬಸ್ಸಿನಿಂದ ಇಳಿಸಿ, ಅಮಾನುಷವಾಗಿ ಥಳಿಸಿದ್ದರು.*

ಈ ಬೆಳವಣಿಗೆಗಳ ಮಧ್ಯೆ ಫಾದರ್ ವಡಕ್ಕನ್ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು. ನಾಗರಿಕರ ಸುರಕ್ಷತೆಯನ್ನು ಖಚಿತಪಡಿಸಿಕೊಳ್ಳುವುದಕಾಗಿ, ಶಾಂತಿಸೇನೆಯನ್ನು(46:p124) ರಚಿಸಲು ಜನರನ್ನು ಸಜ್ಜುಗೊಳಿಸುವುದು ಈ ಹೋರಾಟದ ಗುರಿಯಾಗಿತ್ತು. ಕಮ್ಯುನಿಸ್ಟರನ್ನು ವಿರೋಧಿಸಲು ಎಲ್ಲಾ ಸಮುದಾಯಗಳ ಮತ್ತು ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳ ಐದು ಲಕ್ಷ ಸದಸ್ಯರ ಸ್ವಯಂಸೇವಕ ಪಡೆಯನ್ನು ಸ್ಥಾಪಿಸುವಲು ಫಾದರ್ ವಡಕ್ಕನ್ ಪ್ರಯತ್ನಿಸಿದರು(82:p140). ಈ ಖಾಸಗಿ ನಾಗರಿಕ ಸೇನೆಯನ್ನು ಸಂಘಟಿಸುವಲ್ಲಿ, ಕ್ರಿಶ್ಚಿಯನ್–ನಾಯರ್ ಸಮುದಾಯಗಳು ಕೈಜೋಡಿಸಿದವು(101:p148). ತ್ರಿಶೂರ್ ನಗರ ಮತ್ತು ಅದರ ಪ್ರಾಂತೀಯ ಪ್ರದೇಶಗಳಲ್ಲಿಯೇ 4,000 ಯುವಕರ 'ಶಾಂತಿಸೇನೆ'ಯನ್ನು ರಚಿಸುವುದಾಗಿ, ಕಮ್ಯುನಿಸ್ಟ್ ವಿರೋಧಿ ರಂಗದ ಕಾರ್ಯಕರ್ತರು ಹೇಳಿಕೊಂಡಿದ್ದಾರೆ.** ಇಂತಹ ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಾ ಗುಂಪುಗಳ ರಚನೆಗೊಂಡಿದ್ದರ ಬಗ್ಗೆ ಇತರ ಭಾಗಗಳಿಂದಲೂ ವರದಿಗಳು ಬಂದವು. ಡಿ.ಸಿ.ಸಿ. ಅಧ್ಯಕ್ಷ ಕುರೂರು ನಂಬೂದಿರಿಪಾಡ್, ಪುರಸಭೆ ಅಧ್ಯಕ್ಷ ಧರ್ಮಜ ಅಯ್ಯರ್ ಅವರು ನೀಡಿರುವ ಜಂಟಿ ಹೇಳಿಕೆ ಹೀಗಿದೆ:(137:p148)'ತೊ಼ಳಿಲಾಳಿ' ಪತ್ರಿಕೆಯ ಪ್ರಧಾನ ಸಂಪಾದಕರೂ ಪ್ರಮುಖ ಆಧ್ಯಾತ್ಮಿಕವಾದಿ ನಾಯಕರೂ ಆದ ಫಾದರ್ ವಡಕ್ಕನ್, ಕಳೆದ ನಾಲ್ಕು ದಿನಗಳಿಂದ ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದಾರೆ. ಈ ಘಟನೆಯು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಕಮ್ಯುನಿಸ್ಟರ ತಮ್ಮ ಭಯೋತ್ಪಾದಕ ಆಡಳಿತವನ್ನು ಅನಾವರಣಗೊಳಿಸಿದ ಪ್ರದೇಶದಲ್ಲಿ 'ಶಾಂತಿಸೇನೆ'ಯನ್ನು ರಚಿಸುವ ಪ್ರಯತ್ನದಲ್ಲಿ ಅವರು ಈ ಕಷ್ಟಗಳನ್ನು ಸಹಿಸಿಕೊಳ್ಳುತ್ತಿದ್ದಾರೆ. ಇತಿಹಾಸದ ಶಿಲ್ಪಿಗಳ ಸಮಯೋಚಿತ ಚಿಂತನೆಗಳಿಗೆ ಮತ್ತು ಸಲಹೆಗಳಿಗೆ, ಸಹಾನುಭೂತಿ ಮತ್ತು ಬೆಂಬಲ ತೋರುವುದು ನಾವು ಅಗತ್ಯವಾಗಿ ನಿರ್ವಹಿಸಬೇಕಾದ ನಮ್ಮ ಕರ್ತವ್ಯಗಳಾಗಿವೆ. ಈ ಅಲ್ಪಾವಧಿಯಲ್ಲಿ ನೂರಾರು ಯುವಕರು ಸಮರ್ಪಣಾ ಭಾವನೆಯಿಂದ ಶಾಂತಿಸೆನೆಗೆ ಸೇರಿಕೊಂಡಿದ್ದು, ಫಾದರ್ ವಡಕ್ಕನ್‌ರ ನಿಲುವನ್ನು ಬಲಪಡಿಸಿರುತ್ತಾರೆ"(137:p148).

---

* 9–10 ಜನವರಿ 2010 ರಂದು ಪಾಲ್ ವಲಪಿಲ ಮತ್ತು ವರ್ಗೀಸ್ ಮೇಚೇರಿ ಅವರೊಂದಿಗೆ ಸಂದರ್ಶನ ನಡೆಸಲಾಗಿದೆ.

** 9–10 ಜನವರಿ 2010 ರಂದು ಪಾಲ್ ವಲಪಿಲ ಮತ್ತು ವರ್ಗೀಸ್ ಮೇಚೇರಿ ಅವರೊಂದಿಗೆ ಸಂದರ್ಶನ ನಡೆಸಲಾಗಿದೆ.

ತ್ರಿಶೂರ್ ಡಿಸಿಸಿಯು, 5000 ಜನರನ್ನು ಸಂಘಟಿಸುವ ಕುರೂರ್ ನಂಬೂದಿರಿಪಾಡ್ ಅವರ ಭರವಸೆಯ ಮೇಲೆ ಫಾದರ್ ವಡಕ್ಕನ್ ಉಪವಾಸವನ್ನು ಅಂತ್ಯಗೊಳಿಸಿದರು( 108:09.08.58).

ತನ್ನ ಶಾಂತಿಸೇನೆಯ ಸದಸ್ಯರಾಗಿ ಅರ್ಧ ದಶಲಕ್ಷದಷ್ಟು ಜನರಿರಬೇಕೆಂದು1958 ಆಗಸ್ಟ್ 22ರಂದು ಫಾದರ್ ಪ್ರಸ್ತಾಪಿಸಿದರು.

> "ನನ್ನ ಶಾಂತಿಸೇನೆಯಲ್ಲಿ 6000 ಯುವಕ-ಯುವತಿಯರನ್ನು ನಾನು ಈಗಾಗಲೇ ಸೇರಿಸಿದ್ದೇನೆ. ಕಮ್ಯುನಿಸ್ಟರು ನಮ್ಮ ಸಾಂವಿಧಾನಿಕ ಹಕ್ಕುಗಳನ್ನು ನಾಶಪಡಿಸುತ್ತಿರುವಾಗ, ಎಲ್ಲಾ ನಾಗರಿಕರು ಶಸ್ತ್ರಸಜ್ಜಿತರಾಗಬೇಕು. ಪ್ರಜಾಪ್ರಭುತ್ವವನ್ನು ರಕ್ಷಿಸಲು ನಮ್ಮ ರಾಷ್ಟ್ರೀಯ ನಾಯಕರ ಕೈಗಳನ್ನು ಬಲಪಡಿಸಬೇಕು. ಕಮ್ಯುನಿಸ್ಟರು ಸಂವಿಧಾನವನ್ನು ಬುಡಮೇಲು ಮಾಡಲು ಪ್ರಯತ್ನಿಸುತ್ತಾರೆ ಎನ್ನುವುದು ನನ್ನ ನಂಬಿಕೆ. ನಾವು ಅದನ್ನು ರಕ್ಷಿಸಿಕೊಳ್ಳಲು ಸಿದ್ಧರಾಗಿರಬೇಕು, ಶಸ್ತ್ರಸಜ್ಜಿತರಾಗಿಯು ಸಹ..."(109:23.08.58).

ಫಾದರ್ ವಡಕ್ಕನ್ ಅವರ ಕರೆಗೆ ಕೇರಳದಾದ್ಯಂತ ಉತ್ತಮ ಪ್ರತಿಕ್ರಿಯೆಗಳು ವ್ಯಕ್ತವಾದವು. ತಕ್ಷಣವೇ 'ಶಾಂತಿಸೇನೆ' ಎಂದು ಕರೆಯಲ್ಪಡುವ ನಾಗರಿಕಪಡೆ ಪ್ರತಿ ಪಟ್ಟಣ ಮತ್ತು ಹಳ್ಳಿಗಳಲ್ಲಿ ಕಾಣಿಸಿಕೊಂಡವು. ಮೇ 1959ರಲ್ಲಿ ಪೊಲೀಸರು ಸಿದ್ಧಪಡಿಸಿದ ಜ್ಞಾಪಕಪತ್ರದಲ್ಲಿ ಶಾಂತಿಸೇನೆಯ ಒಟ್ಟು ಸದಸ್ಯತ್ವವು ಸುಮಾರು ಒಂದು ಲಕ್ಷದಷ್ಟಿದೆ ಎಂದು ದಾಖಲಿಸಲಾಗಿದೆ. ವಿವಿಧ ಜಿಲ್ಲೆಗಳಲ್ಲಿ ಕ್ಯಾಥೋಲಿಕ್ ಮತ್ತು ಎನ್‌ಎಸ್‌ಎಸ್ (ನಾಯರ್ ಸರ್ವೀಸ್ ಸೊಸೈಟಿ) ನಿಯಂತ್ರಣದಲ್ಲಿದ್ದ ಶಾಂತಿಸೇನೆಯ ಸದಸ್ಯತ್ವವನ್ನು ಕೆಳಗೆ ನೀಡಲಾಗಿದೆ( 103:p106-114).

| | ಸಮುದಾಯ | | ಒಟ್ಟು |
|---|---|---|---|
| ಜಿಲ್ಲೆ | ಕ್ಯಾಥೋಲಿಕಾ | ಎನ್‌ಎಸ್‌ಎಸ್ | |
| ತಿರುವನಂತಪುರ | 9000 | | 9000 |
| ಕೊಲ್ಲಂ | 15000 | 10000 | 25000 |
| ಆಳಪ್ಪುಟಿ | 11000 | 1360 | 12360 |
| ಎರ್ನಾಕುಲಂ | 28000 | 540 | 28540 |
| ತ್ರಿಶೂರ್ | 15000 | --- | 15000 |
| ಕಣ್ಣೂರ್ | 4136 | --- | 4136 |
| ಕೋಳಿಕೋಡ್ | 1700 | --- | 1700 |
| ಪಾಲಕ್ಕಾಡ್ | 25 | --- | 25 |
| **ಒಟ್ಟು** | **83861** | **11900** | **95761** |

'ಶಾಂತಿಸೇನೆ' ಎಂಬ ಖಾಸಗಿ ನಾಗರಿಕಪಡೆಯನ್ನು ಸಂಘಟಿಸುವುದಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಈ ಕೆಳಕಂಡಂತೆ ಹೇಳಿಕೆ ನೀಡಿತು.

> "ಮೇ 1957ರಲ್ಲಿ ಶಿಕ್ಷಣ ಮಸೂದೆಯ ವಿರುದ್ಧದ ಅಭಿಯಾನದ ಆರಂಭದಿಂದಲೂ, ವಿರೋಧಪಕ್ಷಗಳು, ವಿಶೇಷವಾಗಿ ಕಾಂಗ್ರೆಸ್, 'ಶಾಂತಿಸೇನೆ', 'ಕ್ರಿಸ್ಟೋಫರ್ ಸಂಘಟನೆ' ಮುಂತಾದ ವಿವಿಧ ಹೆಸರುಗಳಲ್ಲಿ ಅರೆಸೈನಿಕ ಸಂಘಟನೆಗಳನ್ನು ರಚಿಸಲು ಪ್ರೋತ್ಸಾಹ ನೀಡುತ್ತಾ ಬರುತ್ತಿದೆ. ಅವರು ಅದನ್ನು ಎಂದಿಗೂ ರಹಸ್ಯವಾಗಿಟ್ಟರಲಿಲ್ಲ. ಕಮ್ಯುನಿಸ್ಟರ ವಿರುದ್ಧ ಹೋರಾಡಲು ಸುಮಾರು ಐದು ಲಕ್ಷ ಸ್ವಯಂಸೇವಕರ ಶಾಂತಿಸೇನೆಯನ್ನು ರಚಿಸುವ ಪ್ರಯತ್ನದ ಭಾಗವಾಗಿ ಕಮ್ಯುನಿಸ್ಟ್ ವಿರೋಧಿರಂಗದ ಪ್ರಸಿದ್ಧ ನಾಯಕ, ಫಾದರ್ ವಡಕ್ಕನ್ ಇತ್ತೀಚೆಗೆ ತ್ರಿಶೂರಿನಲ್ಲಿ ಉಪವಾಸ ಸತ್ಯಾಗ್ರಹ ನಡೆಸಿದ್ದರು. ಜಿಲ್ಲಾ ಕಾಂಗ್ರೆಸ್ ಸಮಿತಿ ಮತ್ತು ಇತರರು ಅಂತಹ ಸೈನ್ಯವನ್ನು ರಚಿಸಲು ಸಿದ್ಧ ಎಂದು ಭರವಸೆ ನೀಡಿದ ನಂತರ ಫಾದರ್ ವಡಕ್ಕನ್‌ರವರು ಉಪವಾಸ ಸತ್ಯಾಗ್ರಹವನ್ನು ನಿಲ್ಲಿಸಿದರು"(110:p3).

ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳು 'ಮಟ್ಟಂಚೇರಿ ಪ್ರಬಂಧ/ ಥೀಸಿಸ್'ನ್ನು(46:p95) ತಿರಸ್ಕರಿಸಿದರೂ ಕೇರಳದಲ್ಲಿ ವಿರೋಧ ಪಕ್ಷಗಳ ಒಗ್ಗಟ್ಟಿಗಾಗಿ ಕಮ್ಯುನಿಸ್ಟ್ ವಿರೋಧಿರಂಗವು ಕೆಲಸ ಮಾಡುವುದನ್ನು ಮುಂದುವರಿಸಿತು. ಅದರ ಪರಿಣಾಮವಾಗಿ ತ್ರಿಶೂರ್ ಜಿಲ್ಲೆಯಲ್ಲಿ 'ಪ್ರಜಾಸತ್ತಾತ್ಮಕರಂಗ'(Democratic Front)





KERALA TEMPEST

SYRO - MALABAR RITE SHOULD BE RETAINED

New Agenda Revealed For Council's Session

ವಿಮೋಚನಾ ಹೋರಟದ ಕಾಲದಲ್ಲಿ ಫಾದರ್ ವಡಕ್ಕನ್ ನೇತೃತ್ವದಲ್ಲಿ ತೃಶೂರಿನಿಂದ ಪ್ರಕಟಗೊಳ್ಳುತ್ತಿದ್ದ ತೊಳಿಲಾಳಿ ಎನ್ನುವ ಮಲಯಾಳಂ ದಿನಪತ್ರಿಕೆಯ ಮತ್ತು ಕೇರಳ ಟೆಂಪೆಸ್ಟ್ ಎನ್ನುವ ಇಂಗ್ಲಿಷ್ ಸಾಪ್ತಾಹಿಕದ ಮುಖಪುಟಗಳಲ್ಲಿ ಕಾಣಿಸಿಕೊಂಡಿದ್ದು ಹೀಗೆ...

ಎನ್ನುವ ಮೈತ್ರಿಕೂಟವನ್ನು ರಚಿಸಿತು. ಕಾಂಗ್ರೆಸ್ ಮುಖಂಡ ಕೆ. ಕರುಣಾಕರನ್, ಪಿಎಸ್‌ಪಿ ಮುಖಂಡರಾದ ಬಿ.ಸಿ. ವರ್ಗೀಸ್ ಈ ಮೈತ್ರಿಕೂಟದ ಸಂಚಾಲಕರಾಗಿದ್ದರು (115:01.02.59). ಜನವರಿ 1958ರ 'ಎಕನಾಮಿಕ್ ವೀಕ್ಲಿ' ತನ್ನ ವಾರ್ಷಿಕ ವರದಿಯಲ್ಲಿ ಹೀಗೆ ವರದಿಮಾಡಿತ್ತು:

> "ಕಮ್ಯುನಿಸಂನ ಸವಾಲನ್ನು ವಿರೋಧಿಸಲು, ಒಂದು ಪಕ್ಷವಾಗಿ ಕಾಂಗ್ರೆಸ್‌ಗೆ ಸಾಕಷ್ಟು ಸಾಮರ್ಥ್ಯವಿಲ್ಲ. ಇದು ಪ್ರಜಾ ಸೋಷಿಯಲಿಸ್ಟ್ ಪಕ್ಷಕ್ಕೂ ಅನ್ವಯಿಸುತ್ತದೆ. ಹಾಗಾಗಿ ಇವರಿಬ್ಬರೂ ಕಮ್ಯುನಿಸ್ಟ್ ವಿರೋಧಿರಂಗ ಕಟ್ಟುತ್ತಿದ್ದಾರೆ. ಪ್ರತಿಗಾಮಿ ಶಕ್ತಿಗಳೆಂದು ಗುರುತಿಸಿಕೊಳ್ಳುವ ಕ್ಯಾಥೋಲಿಕ್ ಚರ್ಚ್, ಭೂಮಾಲೀಕರು, ತೋಟಗಳ/ಎಸ್ಟೇಟ್ ಮಾಲೀಕರು ಮುಂತಾದ ಎಲ್ಲಾ ಕಮ್ಯುನಿಸ್ಟ್ ವಿರೋಧಿ ಘಟಕಗಳನ್ನು ಈ ರಂಗವು ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ. ಇಂದು ರೂಪುಗೊಳ್ಳುತ್ತಿರುವ ಈ ರಂಗವು, ಕ್ರಮೇಣವಾಗಿ ಎಲ್ಲಾ ಪ್ರತಿಗಾಮಿ ಶಕ್ತಿಗಳ ಸಾಮರ್ಥ್ಯಗಳನ್ನು ನಿಯಂತ್ರಣಕ್ಕೆ ಪಡೆದುಕೊಳ್ಳಬಹುದಾಗಿದೆ"(114:01.58p115).

ಜೂನ್ 1959ರಲ್ಲಿ ರಚನೆಯಾದ ವಿಮೋಚನಾ ಹೋರಾಟ ಸಮಿತಿಯ ಮತ್ತು ರಾಷ್ಟ್ರೀಯ ಕಾಂಗ್ರೆಸ್, ಪ್ರಜಾ ಸಮಾಜವಾದಿ ಪಕ್ಷ, ಮುಸ್ಲಿಂ ಲೀಗ್ ಮುಂತಾದ ಪಕ್ಷಗಳು ಸೇರಿಕೊಂಡು, ನಂತರದಲ್ಲಿ ರಚಿಸಲ್ಪಟ್ಟ ಪ್ರಜಾಸತ್ತಾತ್ಮಕ ಮೈತ್ರಿಯ, ಮುಂಚೂಣಿಯಲ್ಲಿ ವಾಸ್ತವದಲ್ಲಿ ಕಮ್ಯುನಿಸ್ಟ್ ವಿರೋಧಿರಂಗದ ಅಡಿಯಲ್ಲಿ ರೂಪುಗೊಂಡಿದ್ದ ಈ 'ಪ್ರಜಾಸತ್ತಾತ್ಮಕರಂಗ' (ಡೆಮಾಕ್ರಟಿಕ್ ಫ್ರಂಟ್) ಇತ್ತು(116:p3).

ಡಿಸೆಂಬರ್ 1958ರಲ್ಲಿ ತಲಶ್ಶೇರಿಯಲ್ಲಿ ಕಮ್ಯುನಿಸ್ಟ್ ವಿರೋಧಿರಂಗವು ಸಾಂಸ್ಕೃತಿಕ ಉತ್ಸವವನ್ನು ಏರ್ಪಡಿಸಲಾಗಿತ್ತು. ಇದಕ್ಕಾಗಿ 'ಪಾಸ್ಟರ್ನಾಕ್ ನಗರ' ಎಂಬ ವಿಶೇಷ ವೇದಿಕೆಯನ್ನು ಸಿದ್ಧಪಡಿಸಲಾಯಿತು. ಇದನ್ನು 'ಆಲ್ ಕೇರಳ ಡೆಮಾಕ್ರಟಿಕ್ ಕಲ್ಚರಲ್ ಫೆಸ್ಟ್' (All Kerala Democratic Cultural Fest) ಎಂದು ಕರೆಯಲಾಯಿತು. ಕೇರಳದಲ್ಲಿ ಇದೇ ಮೊದಲ ಬಾರಿಗೆ ಇಂಥ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಯಿತು, ಎಂದು ಸಂಘಟಕರು ಹೇಳಿಕೊಂಡಿದ್ದಾರೆ(137:p150). ಈ ಉತ್ಸವದ ಕಾರ್ಯಕ್ರಮದಲ್ಲಿ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪ್ರಜಾ ಸೋಷಿಯಲಿಸ್ಟ್ ಪಾರ್ಟಿ ಮತ್ತು ಮುಸ್ಲಿಂ ಲೀಗ್‌ಗಳ ಪ್ರಮುಖ ನಾಯಕರೆಲ್ಲರೂ ಒಂದೇ ವೇದಿಕೆಯನ್ನು ಹಂಚಿಕೊಂಡಿದ್ದರು. ಸುಚೇತಾ ಕೃಪಲಾನಿ, ಫಿಲಿಪ್ ಸ್ಪ್ರಾಟ್, ಆರ್. ಶಂಕರ್, ಖ್ಯಾತ ಚಿತ್ರನಟ ಸತ್ಯನ್, ಖ್ಯಾತ ಲೇಖಕ ಪಿ. ಕೇಶವದೇವ್ ಮುಂತಾದವರು ಉತ್ಸವದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು(116:p130).

ವಿಮೋಚನಾ ಹೋರಾಟಕ್ಕೆ ಅಡಿಪಾಯ ಹಾಕಲು ಕಮ್ಯುನಿಸ್ಟ್ ವಿರೋಧಿರಂಗವು ಒಂದು ಕರಪತ್ರ ಸಿದ್ಧಪಡಿಸಿ ಹಂಚಿದರು. 'ಆರೋಪ ಪಟ್ಟಿ ಮತ್ತು ಹೋರಾಟಗಳ ತಯಾರಿ' (Charge Sheet and the preparation for the struggle) ಎನ್ನುವುದು ಕರಪತ್ರದ ಶೀರ್ಷಿಕೆಯಾಗಿತ್ತು. ಕಮ್ಯುನಿಸ್ಟ್ ವಿರೋಧಿ ಹೋರಾಟದಲ್ಲಿ ಬಹಳಷ್ಟು

ಮಹಿಳೆಯರ ಭಾಗವಹಿಸುವಿಕೆಗಾಗಿ ಫಾದರ್ ವಡಕ್ಕನ್‌ರವರ ಜೊತೆಗೆ ಕಮ್ಯುನಿಸ್ಟ್ ವಿರೋಧಿರಂಗವುಸಹ ನಿರ್ಣಾಯಕ ಪಾತ್ರವನ್ನು ವಹಿಸಿತ್ತು(116:p125).

ಕೇರಳದಲ್ಲಿ ಕಮ್ಯುನಿಸ್ಟರ ಪ್ರಭಾವವನ್ನು ನಿಶ್ಚಲಗೊಳಿಸಲು ಫಾದರ್ ವಡಕ್ಕನ್ ಮತ್ತು ಕಮ್ಯುನಿಸ್ಟ್ ವಿರೋಧಿ ರಂಗವು ಜನರಿಗೆ ಕರೆ ನೀಡಿತು. 1961ರಲ್ಲಿ, ಇಡುಕ್ಕಿ ಮತ್ತು ಕಣ್ಣೂರಿನ ಗುಡ್ಡಗಾಡು ಪ್ರದೇಶಗಳಲ್ಲಿ, ಬಡ ವಲಸಿಗ ರೈತರ ಉಳಿವಿನ ಹೋರಾಟದಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸಿದವರಲ್ಲಿ, ಕಮ್ಯುನಿಸ್ಟ್ ವಿರೋಧಿರಂಗದ, ಪ್ರಮುಖ ನಾಯಕರಾದ ಫಾದರ್ ವಡಕ್ಕನ್ ಮತ್ತು ಬಿ. ವಿಲಿಂಗ್ಟನ್ ಕೂಡ ಇದ್ದರೆನ್ನುವುದು, ವಿರೋಧಾಭಾಸವಾಗಿ ಕಾಣಿಸಬಹುದು. ಆದರೆ ಕಮ್ಯುನಿಸ್ಟ್ ಪ್ರಭಾವದಲ್ಲಿದ್ದ ವಲಸಿಗ ರೈತರನ್ನು ದೂರವಿಡಲು ಫಾದರ್ ವಡಕ್ಕನ್ ನಡೆಸಿದ್ದು ಸಮರ್ಥವಾದ ಬುದ್ಧಿವಂತಿಕೆಯ ನಡೆಯಾಗಿತ್ತು, ಎಂದು ನಂತರದ ಪುರಾವೆಗಳು ಮತ್ತು ಬೆಳವಣಿಗೆಗಳು ಬಹಿರಂಗಪಡಿಸುತ್ತವೆ(82:p6-7).

## ಕ್ರಿಸ್ಟೋಫರ್ ಸೇನೆ (The Christophers)

ಕೇರಳದ ಕ್ಯಾಥೋಲಿಕ್ ಚರ್ಚ್ ಆಯೋಜಿಸಿದ ಕಮ್ಯುನಿಸ್ಟ್ ವಿರೋಧಿ ಕ್ರಿಸ್ಟೋಫರ್ಸ್ ಎನ್ನುವುದು ಒಂದು ಖಾಸಗಿ ನಾಗರಿಕಸೇನೆಯಾಗಿತ್ತು. ಮೊದಲ ಕಮ್ಯುನಿಸ್ಟ್ ಸರ್ಕಾರದ ಕಾಲದಲ್ಲಿ ಇದು ತುಂಬಾ ಸಕ್ರಿಯವಾಗಿತ್ತು. ಈ ನಾಗರಿಕ ಸೇನೆಯ ಕಾರ್ಯ ಚಟುವಟಿಕೆಗಳು, ಇಎಂಎಸ್ ಸರ್ಕಾರದ ಕ್ರಿಯಾ ಯೋಜನೆ ಮತ್ತು ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರ ವಿರುದ್ಧವಾಗಿದ್ದವು(48:p84).

'ಕ್ರಿಸ್ಟೋಫರ್' ಎಂಬ ಪದದ ಅರ್ಥ 'ಕ್ರಿಸ್ತನನ್ನು ಹೊರುವವನು'* ಎನ್ನುವುದಾಗಿತ್ತು. ಹಿಂದೆ ಸ್ಪೇನ್‌ನಲ್ಲಿ ಕ್ಯಾಥೋಲಿಕ್ ಚರ್ಚ್ ವತಿಯಿಂದ ರಚಿಸಲಾದ ಅರೆಸೈನಿಕ ಸಂಘಟನೆಯನ್ನು 'ಕ್ರಿಸ್ಟೋಫರ್ಸ್' ಎಂದು ನಾಮಕರಣ ಮಾಡಿದ್ದರು. ಚುನಾಯಿತ ರಿಪಬ್ಲಿಕನ್ ಸರ್ಕಾರವನ್ನು ಉರುಳಿಸಲು ಮತ್ತು ಜನರಲ್ ಫ್ರಾಂಕೋವ್‌ಗೆ ಸಹಾಯ ಮಾಡಲು ಅಂದು ಇದನ್ನು ಸಿದ್ಧಗೊಳಿಸಲಾಗಿತ್ತು.

ಕೇರಳದ ಕಮ್ಯುನಿಸ್ಟ್ ಚಳುವಳಿಯ ವಿರುದ್ಧ ಕ್ಯಾಥೋಲಿಕರ ಅಧಿಕಾರಶ್ರೇಣಿಯು ಮುಂದುವರೆಸಿದ ಹೋರಾಟ ನೀತಿಯನ್ನು, 1957ರಲ್ಲಿ ಕಮ್ಯುನಿಸ್ಟ್ ಸರಕಾರ ಅಧಿಕಾರಕ್ಕೆ ಬರುತ್ತಿದ್ದಂತೆ, ನಿರ್ದಾಕ್ಷಿಣ್ಯವಾದ ರೀತಿಯಲ್ಲಿ ಬಲಗೊಳಿಸಲಾಯಿತು. ಇದಕ್ಕಾಗಿ ಕ್ರಿಸ್ಟೋಫರ್ಸ್ ಎಂಬ ನಾಗರಿಕ ಸೇನೆಯನ್ನು ರಚಿಸಲಾಯಿತು. ತೋಟಗಳ/ ಎಸ್ಟೇಟ್ ಮಾಲೀಕರು ಮತ್ತು ಶ್ರೀಮಂತರು ಅಗತ್ಯ ಆರ್ಥಿಕ ನೆರವು ನೀಡಿದರು. ಕ್ರಿಸ್ಟೋಫರ್ಸ್‌ನ್ನು ಸಂಘಟಿಸುವುದಕ್ಕಾಗಿ, ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಕ್ರುಸೇಡ್/

* 'ಕ್ರಿಸ್ಟೋಫರ್' ಎಂಬ ಹೆಸರು ಕ್ರಿಶ್ಚಿಯನ್ ಪೌರಾಣಿಕ ವ್ಯಕ್ತಿ ಸೇಂಟ್ ಕ್ರಿಸ್ಟೋಫರ್‌ಗೆ ಸಂಬಂಧಿಸಿದೆ. ಅಲ್ಲಿ ಸಂತ ಕ್ರಿಸ್ಟೋಫರ್ ಎಂಬ ಸಂತ ವಾಸಿಸುತ್ತಿದ್ದ ಎನ್ನುವುದು ಐತಿಹಾಸಿಕ ದಾಖಲೆಗಳಿಂದ ಸಾಬೀತಾಗಿಲ್ಲ.

ಧರ್ಮಯುದ್ಧವನ್ನು ಪ್ರಾರಂಭಿಸಲು ಕೇರಳದ ಚರ್ಚ್‌ಗೆ ಅನೇಕ ಕಡೆಗಳಿಂದ ಬೆಂಬಲ ದೊರೆಯಿತು. ಆಗಸ್ಟ್ 11, 1957ರಂದು, ಕ್ಯಾಥೋಲಿಕ್ ಚರ್ಚ್ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರದ ವಿರುದ್ಧ ಹೋರಾಟದಲ್ಲಿ ತೊಡಗಿಕೊಂಡಿದ್ದಾಗ, ಡಾರ್ಜಿಲಿಂಗ್‌ನ ಸಿಂಗಮಾರಿ ಎನ್ನುವ ಸ್ಥಳದಲ್ಲಿದ್ದ ಚರ್ಚ್‌ನ ಒಬ್ಬ ಭಿನ್ನ ವ್ಯಕ್ತಿತ್ವದ ಫಾದರ್ ಫಾರೋಲ್ ಚರ್ಚ್‌ನಲ್ಲಿ ಭಾವನಾತ್ಮಕವಾದ ದಿಟ್ಟ ಭಾಷಣವನ್ನು ಮಾಡಿದ್ದರು:

"ಕೇರಳದಲ್ಲಿ ಒಂದು ಕಮ್ಯುನಿಸ್ಟ್ ಸರಕಾರ ಅಸ್ತಿತ್ವಕ್ಕೆ ಬಂದಿದೆ. ಅಲ್ಲಿ ಕಮ್ಯುನಿಸ್ಟ್ ಮಂತ್ರಿಮಂಡಲವು ಕ್ರಿಶ್ಚಿಯನ್ನರನ್ನು ಚಿತ್ರಹಿಂಸೆಗೆ ಗುರಿಮಾಡುತ್ತಿದೆ. ಪಂಡಿತ್ ನೆಹರೂ ಕೂಡ ಒಬ್ಬ ಕಮ್ಯುನಿಸ್ಟರೇ ಆಗಿದ್ದಾರೆ. ದ್ವೇಷಿಸುವ ಕಮ್ಯುನಿಸ್ಟ್ ಸರ್ಕಾರಕ್ಕೆ ನೆಹರೂ ಅನಪೇಕ್ಷಿತ ಬೆಂಬಲವನ್ನು ಒದಗಿಸುತ್ತಿದ್ದಾರೆ ... ...ಫಿನ್‌ಲ್ಯಾಂಡ್ ಮತ್ತು ನಾರ್ವೆಗೆ ಭೇಟಿ ನೀಡಿದ ಸಂದರ್ಭದಲ್ಲಿ, ನೆಹರೂ ಅವರು ಕೇರಳದ ಕೆಂಪು ಮಂತ್ರಿಮಂಡಲವು ಅತ್ಯಂತ ನ್ಯಾಯಯುತ ಮತ್ತು ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಿಸುತ್ತಿದೆ ಎಂದು ಹೇಳಿದ್ದರು. ಕೇರಳದ ಕಮ್ಯುನಿಸ್ಟ್ ಮಂತ್ರಿಮಂಡಲವನ್ನು ಹೀಗೆ ಹೊಗಳುವುದಲ್ಲದೆ ಹೆಚ್ಚಿಗೆ ಇನ್ನೇನು ತಾನೆ ಒಬ್ಬ ಕಮ್ಯುನಿಸ್ಟ್‌ಗೆ ಮಾಡಬೇಕಾಗಿರುತ್ತದೆ! ಕಮ್ಯುನಿಸ್ಟರ ವಿರುದ್ಧ ಮಾತ್ರವಲ್ಲ, ಕಮ್ಯುನಿಸ್ಟ್ ಒಲವನ್ನು ಹೊಂದಿರುವ ನೆಹರೂ ಸರ್ಕಾರದ ವಿರುದ್ಧವೂ ಭಾರತದಾದ್ಯಂತ ಕ್ರಿಶ್ಚಿಯನ್ನರು ಧರ್ಮಯುದ್ಧವನ್ನು ಪ್ರಾರಂಭಿಸಲು ಸಂಘಟಿತರಾಗಬೇಕು( 40:V401.09.57;48:). ಅವರ ಕೆಲಸ ಎಷ್ಟು ಶ್ರೇಷ್ಠವಾದರೂ ಕಮ್ಯುನಿಸ್ಟರನ್ನು ಬೆಂಬಲಿಸುವುದಾಗಲೀ ಕಮ್ಯುನಿಸ್ಟ್ ಆಗುವುದಾಗಲೀ ಮಾಡುವಂಥದ್ದು, ದೇವರ ವಿರುದ್ಧ ನಡೆಸುವ ಪಾಪಕೃತ್ಯವಾಗಿರುತ್ತದೆ" (40:V401.09.57; 48:).

"ಭಾರತದಲ್ಲಿ ಕ್ರೈಸ್ತರಾದ ನಾವು ಮೊದಲಿನಂತೆ, ಇನ್ನು ಮುಂದೆ ಪವಿತ್ರ ಧರ್ಮಯುದ್ಧದ ಪರಂಪರೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಕಮ್ಯುನಿಸ್ಟರ ಮತ್ತು ಅವರ ಬೆಂಬಲಿಗರ ವಿರುದ್ಧ ರಕ್ಷಣಾತ್ಮಕವಾದ ವ್ಯವಸ್ಥೆಗಳನ್ನು ಸಿದ್ಧಪಡಿಸಿಟ್ಟುಕೊಳ್ಳಬೇಕು. ನಾವು ಹಾಗೆ ಮಾಡಿದಾಗ, ದೇವರು ಸಂಪ್ರೀತರಾಗುವವರಲ್ಲದೆ, ನಮಗೆ ಸ್ವರ್ಗಕ್ಕೆ ಹೋಗಲು ಸಾಧ್ಯವಾಗಿಸುತ್ತಾರೆ. ಇತ್ತೀಚೆಗೆ ಕೇರಳದಲ್ಲಿ ತಂದಂಥ ಶಿಕ್ಷಣ ಮಸೂದೆಯು ಚರ್ಚ್‌ನ ಧಾರ್ಮಿಕ ಪ್ರಭಾವವನ್ನು ನಿಯಂತ್ರಿಸುವ ಉದ್ದೇಶವನ್ನು ಹೊಂದಿರುತ್ತದೆ. ಆದ್ದರಿಂದ. ಪ್ರಪಂಚದ ಎಲ್ಲಾ ನೈಜ ಕ್ರಿಶ್ಚಿಯನ್ನರು, ಕೇರಳ ಸರ್ಕಾರದ ವಿರುದ್ಧ ನಾವು ಈ ಪವಿತ್ರವಾದ ಧರ್ಮಯುದ್ಧಕ್ಕೆ ಅಣಿಗೊಳ್ಳಬೇಕಾಗಿದೆ. ಯುನೈಟೆಡ್ ಸ್ಟೇಟ್ಸ್, ಯುನೈಟೆಡ್ ಕಿಂಗ್‌ಡಮ್, ಫ್ರಾನ್ಸ್, ನಾರ್ವೆ, ಡೆನ್ಮಾರ್ಕ್, ಸ್ವೀಡನ್ ಮತ್ತು ಜರ್ಮನಿಯಲ್ಲಿರುವ ನಮ್ಮ ಸ್ವಧರ್ಮಿಯರು, ಕಮ್ಯುನಿಸ್ಟರ ಮತ್ತು ಅವರ ಮಿತ್ರರಾಷ್ಟ್ರಗಳ ವಿರುದ್ಧ ಹೋರಾಡಲು ಭಾರತದಲ್ಲಿ ನಿಮಗೆ ದೃಢವಾದ ಬೆಂಬಲವನ್ನು ನೀಡುತ್ತಾರೆ, ಎನ್ನುವ ವಿಚಾರ ನಿಮಗೆ ತಿಳಿದಿರಬೇಕು. ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಸೋಲಿಸಲು ಇರುವ ಏಕೈಕ ಮಾರ್ಗವೆಂದರೆ, ಇದರ

ವಿರುದ್ಧದ ನಿರಂತರ ಹೋರಾಟವಾಗಿದೆ"(40:V401.09.57;48; 139:p22,23).

ಅಧಿಕಾರದಲ್ಲಿರುವ ಸಂವಿಧಾನಾತ್ಮಕವಾಗಿ ಚುನಾಯಿತ ಸರ್ಕಾರದ ವಿರುದ್ಧ ಖಾಸಗಿ ನಾಗರಿಕ ಸೇನೆಯನ್ನು ಸ್ಥಾಪಿಸುವುದಕ್ಕಾಗಿ ಕೇರಳದ ಕ್ರಿಶ್ಚಿಯನ್ ಅಧಿಕಾರಶ್ರೇಣಿಗೆ ಸಮರ್ಥಿಸಿಕೊಳ್ಳುವ ದಾರಿ ಕಂಡುಕೊಳ್ಳಬೇಕಾಯಿತು(110:p3). ಕಮ್ಯುನಿಸ್ಟ್ ಆಳ್ವಿಕೆಯ ಅಡಿಯಲ್ಲಿ ಅಭದ್ರತೆಯು ಕಾಡಿದ್ದರಿಂದ, ತಾವಾಗಿಯೇ ರಕ್ಷಣೆ ಮಾಡಿಕೊಳ್ಳುವ ಸಲುವಾಗಿ, ಹಾಗೆ ಮಾಡಿದ್ದಾಗಿ ಅವರು ವಾದಿಸಿದರು(102:28.03.58;111:p120-121).

ಏಪ್ರಿಲ್ 1957ರಲ್ಲಿ ಕಮ್ಯುನಿಸ್ಟ್ ಮಂತ್ರಿಮಂಡಲ ರಚನೆಯಾಗುವ ಮೊದಲು, ಕ್ರಿಸ್ಟೋಫರ್ ಎನ್ನುವ ಉತ್ಸಾಹಿಗಳ ಗುಂಪು, ಕೇರಳದಲ್ಲಿ ಎಲ್ಲಿಯೂ ಇರಲಿಲ್ಲ. ಆದರೆ, ಆಗಸ್ಟ್ 26, 1957ರಂದು ತಿರುವನಂತಪುರದಲ್ಲಿ ನಡೆದ ಶಿಕ್ಷಣ ಮಸೂದೆಯ ವಿರುದ್ಧದ ಪ್ರತಿಭಟನೆಯಲ್ಲಿ ಈ ಕ್ರಿಸ್ಟೋಫರ್ಸ್ ಎನ್ನುವ ಪ್ರಮುಖ ಸಂಘಟ ಮುಂಚೂಣಿಯಲ್ಲಿಯೇ ಇತ್ತು. ಈ ಸಂಘಟನೆಯನ್ನು ಕಮ್ಯುನಿಸ್ಟ್ ವಿರೋಧಿ ಸಶಸ್ತ್ರಪಡೆಯನ್ನಾಗಿ ಪರಿವರ್ತಿಸಲು, ಕ್ಯಾಥೋಲಿಕರ ಅಧಿಕಾರಶ್ರೇಣಿಯು ನಿರ್ಧಾರ ತೆಗೆದುಕೊಂಡಿದ್ದು, ಶಿಕ್ಷಣ ಮಸೂದೆಯ ವಿರುದ್ಧದ ಅಭಿಯಾನದ ನಂತರವಾಗಿತ್ತು. ಡಿಸೆಂಬರ್ 22, 1957ರ ಹೊತ್ತಿಗೆ, ಕೇರಳದ ಕ್ರಿಸ್ಟೋಫರ್ ಸೇನೆಗೆ ಸಾರ್ವಜನಿಕವಾಗಿ ಘೋಷಿತವಾದ ಒಂದು ಸಂವಿಧಾನ ಲಭಿಸಿತು(112:p84).

ಕೇರಳ ವಿಧಾನಸಭೆಯಲ್ಲಿ ಶಾಸಕ ಸಿ.ಜಿ.ಸದಾಶಿವನ್, ಕ್ರಿಸ್ಟೋಫರ್ ಸೇನೆಗೆ ಸಂಬಂಧಿಸಿದ ವಿಷಯಗಳ ಕುರಿತು ಎತ್ತಿದ ಪ್ರಶ್ನೆಗಳಿಗೆ, ಅಂದಿನ ಗೃಹ ಸಚಿವ ವಿ.ಆರ್ ಕೃಷ್ಣ ಅಯ್ಯರ್, ಡಿಸೆಂಬರ್ 1957 21ರಂದು ಹೀಗೆ ಉತ್ತರಿಸಿದರು.

"ಧ್ವಜಗಳೊಂದಿಗೆ ಮೆರವಣಿಗೆ ನಡೆಸಲು ಅವರಿಗೆ ತರಬೇತಿ ನೀಡಲಾಗುತ್ತಿದೆ. ಧ್ವಜಗಳು ಮೂರು ಅಡಿ ಉದ್ದ ಮತ್ತು ಒಂದೂವರೆ ಇಂಚು ವ್ಯಾಸದ ಕೋಲುಗಳನ್ನು ಧ್ವಜ ಕಟ್ಟಲು ಉಪಯೋಗಿಸಲಾಗುತ್ತಿದೆ. ಮೆರವಣಿಗೆಗಳ ಮತ್ತು ಪ್ರದರ್ಶನಗಳ ಸಂದರ್ಭಗಳಲ್ಲಿ ಧ್ವಜಗಳನ್ನು ಒಯ್ಯುವುದು ಸ್ಪಷ್ಟ ಉದ್ದೇಶವಾಗಿದ್ದರೂ, ಆದರ ಕೋಲುಗಳನ್ನು ಆಯುಧಗಳನ್ನಾಗಿಯೂ ಬಳಸಬಹುದಾಗಿರುತ್ತದೆ. ಕೋಲುಗಳನ್ನು ಆಯುಧಗಳನ್ನಾಗಿ ಬಳಸಲು ಅವರಿಗೆ ತರಬೇತಿ ನೀಡಲಾಗುತ್ತಿದೆ. ಕಾನೂನು ಮತ್ತು ಸುವ್ಯವಸ್ಥೆಗಳಿಗೆ ಇದು ಬೆದರಿಕೆಯನ್ನು ಉಂಟುಮಾಡುವುದರಿಂದ ಇದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಇದು ಒಂದು ಕಾನೂನನ್ನು ವಿರೋಧಿಸುವ ಅಸಾಮಾನ್ಯವಾದ ರೀತಿಯಾಗಿರುತ್ತದೆ."

ಸಿ.ಜಿ. ಸದಾಶಿವನ್: "ತರಬೇತಿಯನ್ನು ಸಾರ್ವಜನಿಕವಾಗಿ ಅಥವಾ ರಹಸ್ಯವಾಗಿ ನಡೆಸಲಾಗುತ್ತಿದೆಯೇ...?"

ವಿ ಆರ್ ಕೃಷ್ಣ ಅಯ್ಯರ್: "ಇದು ಚರ್ಚ್‌ಗಳ ಆಸುಪಾಸಿನಲ್ಲಿ ನಡೆಯುತ್ತದೆ. ಅಲ್ಲಿಗೆ ಹೋಗಲು ಬಯಸುವವರೆಲ್ಲರಿಗೂ ತರಭೇತಿಯನ್ನು ನೀಡಲಾಗುತ್ತದೆ.

ಬಿಷಪ್‌ಗಳ ಆರ್ಥಿಕ ಸಹಾಯದಿಂದ ಆ ತರಭೇತಿ ಕಾರ್ಯಕ್ರಮ ನಡೆಯುತ್ತಿದೆ"(102:21.12.57).

ಒಂದು ಕಾನೂನಿನ ಆಯಾಮ ಇದಕ್ಕೆ ಇರುವುದಾದರೂ, ಕ್ರಿಸ್ಟೋಫರ್ಸ್ ವಾಸ್ತವವಾಗಿ ಅದೊಂದು ರಹಸ್ಯ/ಗುಪ್ತ ಸಂಸ್ಥೆಯಾಗಿತ್ತು. ಮುಂಡಕ್ಕಯಂ, ಕಂಜಿರಪಲ್ಲಿ, ಪಂಪಾಡಿ, ಚಂಗನಾಶ್ಸೆರಿ, ಕರುಕಾಚಲ್, ಮೀನಚಿಲ್, ಎರಟ್ಟುಪೆಟ್ಟಾ, ಎಟ್ಟುಮನೂರು ಮುಂತಾದ ಕೊಟ್ಟಾಯಂ ಜಿಲ್ಲೆಯ ಕ್ಯಾಥೋಲಿಕ್ ಕೇಂದ್ರಗಳಲ್ಲಿ 50, 100, 200, 300ರಷ್ಟು ಜನರನ್ನು ಒಳಗೊಂಡಿರುವ ಗುಂಪುಗಳು ಇದ್ದವು. ಈ ಸಂಸ್ಥೆಗೆ ಕ್ಯಾಥೋಲಿಕಾದ ಪುರುಷರಿಗೆ ಮಾತ್ರ ಪ್ರವೇಶ ಎನ್ನುವ ನಿರ್ಬಂಧವಿತ್ತು(33:21.04.58). ಸೈನಿಕರಿಗೆ ನೀಡುವ ಮಾದರಿಯಲ್ಲಿ ತರಬೇತಿಯನ್ನು ನೀಡಲಾಗುತ್ತಿತ್ತು. ಅವರಿಗೆ ಕೋಲುಗಳನ್ನು ಬೀಸುವುದರಲ್ಲಿ ಮತ್ತು ಕಠಾರಿಗಳ, ಲಾಠಿಗಳ ಬಳಕೆಯಲ್ಲಿ ತರಭೇತಿ ಲಭಿಸುತ್ತಿತ್ತು. ಅನುಭವಿಗಳು ಮತ್ತು ಪರಿಣಿತ ತರಬೇತುದಾರರು ಇದರ ಮೇಲ್ವಿಚಾರಣೆಯನ್ನು ವಹಿಸಿಕೊಂಡಿದ್ದರು(113:p35). ಅವರು ಚರ್ಚ್ ಸುತ್ತಮುತ್ತಲಿನ ಪ್ರದೇಶದಲ್ಲಿ ರಾತ್ರಿಯ ಸಮಯಗಳಲ್ಲಿ ವ್ಯಾಯಾಮಕ್ಕೆ ಸಂಬಂಧಪಟ್ಟ ಅಭ್ಯಾಸಗಳನ್ನು ಮಾಡುತ್ತಿದ್ದರು(102:21.12.57). ಈ ಪ್ರಕ್ರಿಯೆಯು ಬಹಳ ಸಮಯದಿಂದ ನಡೆಯುತ್ತಲಿದೆ ಎಂದು ವಿ.ಆರ್. ಕೃಷ್ಣಯ್ಯರ್ ತಿಳಿಸಿದ್ದಾರೆ(113:p35). 1957ರ ಕಟ್ಟಂಪಲ್ಲಿ ಭೂಮಿ ವಶಪಡಿಸಿಕೊಳ್ಳುವುದನ್ನು ಮತ್ತು 1958ರ ವಿದ್ಯಾರ್ಥಿ ಹೋರಾಟಗಳು ಸೇರಿದಂತೆ ಹಲವಾರು ತೀವ್ರ ತರಹದ ಪ್ರತಿಭಟನೆ ಮತ್ತು ಹೋರಾಟಗಳಲ್ಲಿ ಕ್ರಿಸ್ಟೋಫರ್ಸ್ ಸಕ್ರಿಯವಾಗಿ ಪಾಲ್ಗೊಂಡಿತ್ತು (102:21.12.57). ಅನೇಕ ಸಂದರ್ಭಗಳಲ್ಲಿ ಹೋರಾಟಗಳಾಗಲೀ ಕಾರ್ಮಿಕರ ಪ್ರತಿಭಟನೆಗಳಾಗಲೀ ನಡೆದಾಗಲೆಲ್ಲ, ಕಾರ್ಖಾನೆಗಳ ಮಾಲೀಕರು ಕ್ರಿಸ್ಟಫರ್‌ರನ್ನು ಕೂಲಿಕೊಟ್ಟು ಕರೆಸಿಕೊಳ್ಳತೊಡಗಿದರು. ಈ ರೀತಿ ಅವರ ಗುಂಪು


ಕಮ್ಯುನಿಸ್ಟ್ ವಿರುದ್ಧದ ಒಂದು ಕರಪತ್ರ..

ಮಾರಕಾಯುಧಗಳಿಲ್ಲದ ಖಾಸಗಿಸೇನೆಯಾಗಿ ಪರಿವರ್ತನೆಗೊಂಡಿತು(113:p35).

ಹದಿನಾರು ವಯಸ್ಸನ್ನು ಪೂರ್ತಿಗೊಳಿಸಿದ ಯುವ ಕ್ಯಾಥೋಲಿಕರು, ಕ್ರಿಸ್ಟೋಫರ್ ಸಂಘಟನೆಯ ಸದಸ್ಯರಾದರು. ಈ ಸಂಸ್ಥೆಯ ಚಟುವಟಿಕೆಗಳು ಪ್ರತಿ 'ದಶಾಪನ್'ನ ಅಡಿಯಲ್ಲಿ ಪ್ರತಿ 'ದಶವ್ಯೂಹ'ದ ಮೇಲೆ ಕೇಂದ್ರೀಕರಿಸಲಾಯಿತು. ಒಂದು ಪ್ಯಾರಿಷ್‌ನ ಹತ್ತು ಸದಸ್ಯರನ್ನು ಒಳಗೊಂಡಿದ್ದಾಗ ಅದು ಒಂದು ದಶವ್ಯೂಹವಾಗುತ್ತದೆ. ಆ ಸಮಯದಲ್ಲಿ ಪ್ರತಿ ಪ್ಯಾರಿಷ್‌ನಲ್ಲೂ ಒಂದು ಅಥವಾ ಹೆಚ್ಚು ದಶವ್ಯೂಹಗಳು ಕಾರ್ಯನಿರ್ವಹಿಸುತ್ತಿದ್ದವು. ಒಂದು ಪ್ಯಾರಿಷ್‌ನಲ್ಲಿ ಎರಡು ದಶವ್ಯೂಹಗಳಿದ್ದಾಗ, ದಶಾಪನರು ಅವರಲ್ಲಿ ಒಬ್ಬರನ್ನು ಮುಖ್ಯಸ್ಥರನ್ನಾಗಿ ಆಯ್ಕೆಮಾಡಿಕೊಳ್ಳುತ್ತಿದ್ದರು. ವಿವಿಧ ಪ್ಯಾರಿಷ್‌ಗಳಿಂದ ದಶಾಪನರು ಚುನಾವಣೆಯಲ್ಲಿ ಭಾಗವಹಿಸಿದರೆ, ಅವರ ಹಿರಿತನಕ್ಕನುಗುಣವಾಗಿ, ಒಬ್ಬರು ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಾರೆ. ಅವರು ಮಾತ್ರ ನಿರ್ಣಾಯಕಮತದಾನದ ಹಕ್ಕನ್ನು ಹೊಂದಿರುತ್ತಾರೆ. ಒಂದು ದಶವ್ಯೂಹದಲ್ಲಿರುವ ಪ್ರತಿನಿಧಿಗಳ ಸಂಖ್ಯೆಯು ಇನ್ನೊಂದನ್ನು ರಚಿಸಲು ಸಾಕಾಗುವಷ್ಟು ಇಲ್ಲದಿದ್ದರೆ, ಅವರು ದಶಾಪನರ ಅಡಿಯಲ್ಲಿ ತಾತ್ಕಾಲಿಕ ಸದಸ್ಯರಾಗಿ ಇರಬೇಕಾಗುತ್ತದೆ. ಕ್ರಿಸ್ಟೋಫರ್ಸ್‌ನ ತರಬೇತಿ, ಶಿಸ್ತು ಮತ್ತು ಇತರ ಚಟುವಟಿಕೆಗಳ ಕುರಿತ ವಿಚಾರಗಳಲ್ಲಿ ದಶಾಪನನ ತೀರ್ಪು ಅಂತಿಮವಾಗಿರುತ್ತದೆ(102:27.12.58;124:V6No4p354-355).

ಕ್ರಿಸ್ಟೋಫರ್ ಎನ್ನುವ ಸಂಘಟನೆಯ ಚಟುವಟಿಕೆಗಳನ್ನು ಲಿಖಿತ ಸಂವಿಧಾನದಿಂದ ನಿಯಂತ್ರಿಸಲಾಗುತ್ತಿದ್ದವು. ಅದರ ಪ್ರಕಾರ ಆಡಳಿತಾತ್ಮಕ ನಿಯಂತ್ರಣಗಳನ್ನು ಒಂದು ಸಮಿತಿಗೆ ನೀಡಲಾಗಿತ್ತು. ಈ ಸಮಿತಿಯು, ದಶಾಪನರು ಚುನಾಯಿಸುವ ಸ್ಥಳೀಯ ಮುಖಂಡರು, ಬಿಷಪ್ ನಾಮನಿರ್ದೇಶನ ಮಾಡುವ ಅನಧಿಕೃತ ಸದಸ್ಯರನ್ನು ಒಳಗೊಂಡಿರುತ್ತದೆ. ಈ ಸದಸ್ಯರಿಂದ ಆಯ್ಕೆಯಾದ ವ್ಯೂಹಾಧಿಪರು, ಈ ಸಮಿತಿಯ ಅಧ್ಯಕ್ಷರಾಗಿಯೂ ಖಜಾಂಚಿಯಾಗಿಯೂ ಕಾರ್ಯನಿರ್ವಹಿಸುತ್ತಾರೆ. ವ್ಯೂಹಾಧಿಪನರನ್ನು ಹೊರತುಪಡಿಸಿ, ಸಮಿತಿಯಲ್ಲಿರುವ ಬೇರೆ ಯಾರು ಸಹ ಒಂದೇ ಸಮಯದಲ್ಲಿ ಎರಡು ಹುದ್ದೆಗಳನ್ನು ಹೊಂದಲು ಸಾಧ್ಯವಿರಲಿಲ್ಲ. ಈ ಕಾರಣಕ್ಕಾಗಿ ಅವರು ಎಲ್ಲರ ಗೌರವಕ್ಕೆ ಪಾತ್ರರಾಗಿದ್ದರು. ಕಾರ್ಯಸೂಚಿ/ಅಜೆಂಡಾ ತಯಾರಿಸುವಂಥ, ಸಮಿತಿಯ ಸಭೆಗಳನ್ನು ಕರೆಯುವಂಥ ಕಾರ್ಯಗಳು ಅವರಿಗೆ ಸಮರ್ಪಿತವಾದ ಉಳಿದ ಕರ್ತವ್ಯಗಳಲ್ಲೊಂದಾಗಿತ್ತು. ಸಮಿತಿಯ ಕಾರ್ಯಗಳ ಬಗ್ಗೆ ಮಿನಿಟ್ಸ್ ಸೂಚಿಸುವ ಜವಾಬ್ದಾರಿ ಸಹ ಅವರ ಮೇಲಿತ್ತು. ತಮ್ಮ ಎಲ್ಲಾ ಕೆಲಸಕಾರ್ಯಗಳಿಗೆ ದಶಾಪನ್, ಮುಖ್ಯಸ್ಥರರೊಂದಿಗೆ, ಮೇಧಾವಿಗಳೊಂದಿಗೆ, ಪ್ರಾದೇಶಿಕ ಮೇಧಾವಿ ವ್ಯೂಹಾಧಿಪರೊಂದಿಗೆ, ಜವಾಬ್ದಾರಿಯುತವಾದ ರೀತಿಯಲ್ಲಿ ಆಡಳಿತದ ಅನುಕೂಲಕ್ಕಾಗಿ ಅಧಿಕಾರದ ವಿಕೇಂದ್ರಿಕರಣವನ್ನು ವ್ಯವಸ್ಥೆಗೊಳಿಸಲಾಗಿರುತ್ತದೆ. ಅಧಿಕೃತ ಸದಸ್ಯರನ್ನು ಒಂದು ವರ್ಷದ ಅವಧಿಗೆ ಆಯ್ಕೆ ಮಾಡಲಾಗಿದ್ದರೂ ಅಶಿಸ್ತು ಮತ್ತು ದುರ್ನಡತೆಯ ಆಧಾರದ ಮೇಲೆ ಯಾರನ್ನಾದರೂ ಯಾವಾಗ ಬೇಕಾದರೂ ಹೊರಹಾಕಲು

ಸಾಧ್ಯವಿರುತ್ತಿತ್ತು. ಸಮಿತಿಯು ನಿಗದಿಪಡಿಸಿದ ನಿಯಮಗಳಿಗೆ ಅನುಸಾರವಾಗಿ ಕ್ರಿಸ್ಟಫರ್ ಎನ್ನುವ ಸಂಘಟನೆ ಕಾರ್ಯನಿರ್ವಹಿಸುತ್ತಿತ್ತು. ಅಧಿಕೃತ ಸದಸ್ಯರ ಬಹುಮತದ ಮತವಿದ್ದಾಗ ಮಾತ್ರ ಈ ಕಾನೂನುಗಳಲ್ಲಿ ತಿದ್ದುಪಡಿಯನ್ನು ತರಲು ಸಾಧ್ಯವಾಗುತ್ತಿತ್ತು (124:V6No4p354-355).

ಈ ಸಂಸ್ಥೆಯ ಮಾಸಿಕ ವೆಚ್ಚವನ್ನು, ಸದಸ್ಯರಿಂದ ಹತ್ತು ಪೈಸೆಯ ದರದಲ್ಲಿ ಕಡ್ಡಾಯವಾಗಿ ಸಂಗ್ರಹಿಸಿದ ದೇಣಿಗೆಗಳ ಮೂಲಕ ನಿರ್ವಹಿಸಲಾಗುತ್ತಿತ್ತು. ಚರ್ಚ್‌ನ ಆದಾಯದ ಬಳಕೆಯ ಜೊತೆಗೆ, ಖರ್ಚು–ವೆಚ್ಚದಲ್ಲಿ ಅನಿರೀಕ್ಷಿತ ಹೆಚ್ಚಳವಾದಾಗ, ಜನರಿಂದ ಹಣ ಸಂಗ್ರಹಿಸಲಾಗುತ್ತಿತ್ತು. ಬಜೆಟ್‌ಗಳ ಎಲ್ಲಾ ದಾಖಲೆಗಳನ್ನು ಮುಖ್ಯಸ್ಥರ ಮೇಲ್ವಿಚಾರಣೆಯಲ್ಲಿ ಇರಿಸಲಾಗಿತ್ತು. ಅಗತ್ಯವಿದ್ದಾಗ ಅವರು ಅವುಗಳನ್ನು ಸಮಿತಿಯ ಮುಂದೆ ಹಾಜರುಪಡಿಸುತ್ತಿದ್ದರು(124:V6No4p354-355).

ಕಮ್ಯುನಿಸ್ಟ್ ಮಂತ್ರಿಮಂಡಲದ ಕಾಲದಲ್ಲಿ, ಪ್ರತಿ ಪ್ಯಾರಿಷ್ನಲ್ಲಿ ಚರ್ಚ್ ಕ್ರಿಸ್ಟೋಫರ್ಸ್‌ರನ್ನು ಸಿದ್ಧಗೊಳಿಸಿಡುತ್ತಿತ್ತು(112:p85). ತರಬೇತಿ ಕೇಂದ್ರಗಳಾದ ಚರ್ಚ್ ಅಂಗಳದಲ್ಲಿ ಶಸ್ತ್ರಾಸ್ತ್ರಗಳ ಬಳಕೆಯಲ್ಲಿ ಅವರಿಗೆ ತರಬೇತಿ ನೀಡಲಾಗುತ್ತಿತ್ತು. (108:04.01.58; 107:13.04.58) ಈ ಸಂಘಟನೆಯ ಯುವಕರಿಗೆ ಕ್ರಿಶ್ಚಿಯನ್ ಚರ್ಚ್‌ನ ಪ್ರಖ್ಯಾತ ಪಾದ್ರಿಗಳು ಸಾಕಷ್ಟು ಸ್ಫೂರ್ತಿ ನೀಡಿದ್ದಾರೆ. ಅವರು ತರಬೇತಿ ಕೇಂದ್ರಗಳಿಗೆ ಭೇಟಿ ನೀಡುವ ಸಂದರ್ಭಗಳಲ್ಲಿ, ಮಿಲಿಟರಿ ಮಾದರಿಯಲ್ಲಿ ಕ್ರಿಸ್ಟೋಫರ್ಸ್‌ಗಳು ಅವರಿಗೆ ಆದರಪೂರ್ವಕವಾಗಿ ಗೌರವ ಸಲ್ಲಿಸುತ್ತಾರೆ(41:p67). ಜನವರಿ 1958ರ 'ಎಕನಾಮಿಕ್ ವೀಕ್ಲಿ' ವಾರಪತ್ರಿಕೆಯ ವಾರ್ಷಿಕ ಆವೃತ್ತಿಯು ಈ ಕೆಳಗಿನಂತೆ ವರದಿ ಮಾಡಿತ್ತು:

> "ಕ್ಯಾಥೋಲಿಕರು ಕ್ರಿಸ್ಟೋಫರ್ಸ್ ಎಂಬ ಒಂದು ಸ್ವಯಂಸೇವಕ ಸಂಘಟನೆಯನ್ನು ಸ್ಥಾಪಿಸಿದ್ದಾರೆ. ಇದರ ಕೆಲಸಕಾರ್ಯಗಳೆಲ್ಲವೂ ಆತಂಕವನ್ನು ಉಂಟುಮಾಡುವಂಥಾಗಿದೆ. 1952ರಲ್ಲಿ ಸ್ಥಾಪಿಸಲಾದ ಈ ಸಂಸ್ಥೆಯು, ಶಿಕ್ಷಣ ಮಸೂದೆಯ ವಿರುದ್ಧ ಕಾಂಗ್ರೆಸ್ ಮತ್ತು ಚರ್ಚ್‌ಗಳು ನಡೆಸಿದ ಆಂದೋಲನದ ದಿನಗಳಲ್ಲಿ ಹೆಚ್ಚು ಕ್ರಿಯಾಶೀಲಗೊಂಡಿತು. ಕ್ಯಾಥೋಲಿಕ್ ಪಾದ್ರಿಗಳು ಕ್ರಿಸ್ಟೋಫರ್ಸ್ ಆಧ್ಯಾತ್ಮಿಕ ಮಾರ್ಗಸೂಚಿಗಳಿಗೆ ಅನುಸಾರವಾಗಿ ತನ್ನ ಕೆಲಸಕಾರ್ಯಗಳನ್ನು ನಿರ್ವಹಿಸುತ್ತದೆ. ಅವರ ಘೋಷಿತ ಗುರಿ ಸಮಾಜಸೇವೆಯಾದರೂ, ಅವರು ಆರ್‌ಎಸ್‌ಎಸ್ ಮಾದರಿಯಲ್ಲಿ ತರಬೇತಿಯನ್ನು ಸಿದ್ದಿಸಿಕೊಂಡವರಾಗಿದ್ದಾರೆ, ಎಂದು ಸುದ್ದಿ ದಾಖಲೆಗಳು ಸೂಚಿಸುತ್ತಿದೆ(114:01.58p115).

ಆಧ್ಯಾತ್ಮಿಕವಾಗಿ ಮತ್ತು ರಾಜಕೀಯವಾಗಿ ಕ್ಯಾಥೋಲಿಕ್‌ನ ಪಾದ್ರಿಗಳ ನೇತೃತ್ವದಲ್ಲಿ, ಕ್ರಿಸ್ಟೋಫರ್ಸ್‌ರು ಖಾಸಗಿಸೈನ್ಯ ಎನ್ನುವ ನೆಲೆಯಲ್ಲಿ ತಮ್ಮ ಮೇಲಧಿಕಾರಿಗಳ ಅಪೇಕ್ಷೆಯಂತೆ ಸೇವೆ ಸಲ್ಲಿಸಿದರು. ಅವರನ್ನು ಅಗತ್ಯವಿರುವ ಸ್ಥಳಗಳಿಗೆ ಕೊಂಡೊಯ್ಯಲು ಮೋಟಾರು ವಾಹನಗಳನ್ನು ಹೊಂದಿಸಲಾಯಿತು(112:p84). ಅವರಿಗೆ ನಿಯಮಿತವಾಗಿ ಮಾಸಿಕ ವೇತನವಿರಲಿಲ್ಲ. ಆದರೆ ಸಕ್ರಿಯ ಸೇವೆಯಲ್ಲಿ ತೊಡಗಿಸಿಕೊಂಡಾಗ,

ಪ್ರತಿಯೊಬ್ಬರಿಗೂ ತಮ್ಮ ಸ್ವಂತ ಜಿಲ್ಲೆಯಲ್ಲಿ ದಿನಕ್ಕೆ 3 ರೂಪಾಯಿಗಳಂತೆಯೂ ಜಿಲ್ಲೆಯ ಹೊರಗೆ 6 ರೂಪಾಯಿಗಳಂತೆಯೂ ಪ್ರತಿದಿನ ಪ್ರತಿಫಲ ಸಿಗುತ್ತಿತ್ತು(93:p44).

'ಯೂತ್ ಫೆಡರೇಶನ್', 'ನಾಗರಿಕ ಸ್ವಾತಂತ್ರ್ಯ ಸಂರಕ್ಷಣಾ ಸಮಿತಿ', 'ಸಾಮಾಜಿಕ ಸ್ಕೌಟ್ಸ್' ಮತ್ತು 'ಡೆಮಾಕ್ರಟಿಕ್ ಫ್ರಂಟ್' ಎಂಬ ಗುಪ್ತನಾಮದಲ್ಲಿ, ಕ್ರಿಸ್ಟೋಫರ್ ಸಂಘಟನೆಯು ತ್ರಿಶೂರ್, ಕೊಟ್ಟಾಯಂ ಜಿಲ್ಲೆಗಳ ವಿವಿಧ ಸ್ಥಳಗಳಲ್ಲಿ ಹಲವಾರು ಬಾರಿ ಕಾರ್ಯನಿರ್ವಹಿಸಿದೆ. ಉಳಿದ ಹೆಚ್ಚಿನ ಸ್ಥಳಗಳಲ್ಲಿ ಅವರಿಗೆ ಪ್ರಮುಖ ಕಾಂಗ್ರೆಸ್ಸಿಗರ ಬೆಂಬಲವಿತ್ತು(112:p84). ಈ ಸಂಘಟನೆ ಒಂದು ರಾಷ್ಟ್ರೀಯ ಬೆದರಿಕೆಯಾಗಿ ಬೆಳೆಯುತ್ತಿದೆ, ಎಂದು ಅಧಿಕಾರಿಗಳು ಕಳವಳ ವ್ಯಕ್ತಪಡಿಸಿದ್ದರು. ಆದ್ದರಿಂದ, ರಾಜ್ಯ ಸರ್ಕಾರವು ಅದರ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿತ್ತು(50:22.12.57).

ಮೊದಲ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ, ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಸಂಘಟನೆಯ ಬೆನ್ನೆಲುಬಾಗಿ ಕ್ರಿಸ್ಟೋಫರ್ ಕಾರ್ಯನಿರ್ವಹಿಸಿತು. ಚರ್ಚ್ ಮುಖಂಡರು 'ಧರ್ಮವು ಅಪಾಯದಲ್ಲಿದೆ'(140:V6No202091977p16) ಎಂಬ ಹೆಸರಿನಲ್ಲಿ ಕರೆಕೊಡುತ್ತಾ, ಸೇನೆಯ ಭಾವನೆಗಳನ್ನು ಕೆರಳಿಸಿ ಹೊತ್ತಿ ಉರಿಯುವಂತೆ ಮಾಡಿದರು. ತಮ್ಮ ಅಮೂಲ್ಯವಾದ ಧರ್ಮವನ್ನು ರಕ್ಷಿಸಲು ಸರ್ಕಾರದ ವಿರುದ್ಧದ ಹೋರಾಟದಲ್ಲಿ ಎಲ್ಲವನ್ನೂ ತ್ಯಜಿಸುವಂತೆ ಬಿಷಪ್‌ಗಳು ಉಪದೇಶಿದರು(37:V5p180). 'ದೀಪಿಕಾ' ಎನ್ನುವ ದಿನಪತ್ರಿಕೆಯ ಕರೆ ಹೀಗಿದೆ:

> "ನಾವು ಬಂಧನ, ದಬ್ಬಾಳಿಕೆ ಮತ್ತು ಕ್ರಿಮಿನಲ್ ಪ್ರಕರಣಗಳನ್ನು ಎದುರಿಸಬೇಕಾಗಬಹುದು. ಡಜನ್‌ಗಟ್ಟಲೆ ಬಿಷಪ್‌ಗಳು, ಸಾವಿರಾರು ಪಾದ್ರಿಗಳು ಮತ್ತು ಲಕ್ಷಾಂತರ ಅನುಯಾಯಿಗಳು ಜೈಲು ಸೇರಬಹುದು. ಘನತೆ ಮತ್ತು ಸ್ವಾಭಿಮಾನದಿಂದ ಅದನ್ನು ನಿಭಾಯಿಸಲು ಸಾಧ್ಯವಾಗದವರು, ತಮ್ಮನ್ನು ತಾವು ಕ್ರೈಸ್ತರು ಎಂದು ಕರೆದುಕೊಳ್ಳಲಾಗದು.. ಭಾರತದ ಮರೆತುಹೋದ ಒಂದು ಮೂಲೆಯಲ್ಲಿ ಅವನತಿ ಹೊಂದಿದವರೆಂದು ದುರುಪಯೋಗಪಡಿಸಿಕೊಂಡ ದುಃಸ್ಥಿತಿಯನ್ನು ನಾವು ಸೃಷ್ಟಿಸಬಾರದು. ನಮ್ಮ ಹೇಡಿತನದಿಂದ ನಾವು ಹೋರಾಡದಿದ್ದಾಗ ಮತ್ತು ಶರೀರದ ಭಾರದಿಂದಾಗಿ ಚಲಿಸದಿದ್ದಾಗಲೇ ಇಂಥವುಗಳು ಸಂಭವಿಸುತ್ತಿರುತ್ತವೆ. ಎಲ್ಲವನ್ನೂ ತ್ಯಜಿಸಲು ಸಿದ್ಧರಾಗಿರಿ. ಕಳೆದುಕೊಳ್ಳಲು ಏನೂ ಇಲ್ಲದವರಂತೆ ಯುದ್ಧ ಮಾಡೋಣ(108:29.04.59).

ಮೇ 7, 1959ರಂದು ಕೇರಳದ 16 ಕ್ಯಾಥೋಲಿಕ್ ಬಿಷಪ್‌ಗಳು ಜಂಟಿಯಾಗಿ ಹೊರಡಿಸಿದ ಪತ್ರದಲ್ಲಿ, ಕ್ರಿಶ್ಚಿಯನ್ ನಾಯಕರು ಹೀಗೆ ಘೋಷಿಸಿದರು:"ಅಲ್ಪಸಂಖ್ಯಾತರ ಮತ್ತು ದೇವರನ್ನು ನಂಬುವವರ ವಿರುದ್ಧ ಕೇರಳ ಸರಕಾರ ಕೈಗೊಂಡಿರುವ ಕ್ರಮ ಅತ್ಯಂತ ಕಳವಳಕಾರಿಯಾಗಿದೆ. ಈ ನಿರ್ಣಾಯಕ ಕ್ಷಣದಲ್ಲಿ ಕರುಣಾಮಯಿಯಾದ ದೇವರಲ್ಲಿ ಆಶ್ರಯ ಪಡೆಯುತ್ತಾ, ನಾವು ನಮ್ಮ ಅಮೂಲ್ಯ ಧರ್ಮವನ್ನು ರಕ್ಷಿಸಿಕೊಳ್ಳಬೇಕಾಗಿದೆ. ನಾವು ತೊಂದರೆಗಳು, ಕಿರುಕುಳಗಳು ಮತ್ತು ಅನಾನುಕೂಲತೆಗಳನ್ನು

ಎದುರಿಸಬೇಕಾಗಬಹುದು.

> "ದೈವಿಕವಾದ ನೀತಿನ್ಯಾಯಕ್ಕಾಗಿ ಕಿರುಕುಳಕ್ಕೊಳಗಾದವರು ಧನ್ಯರಾಗುತ್ತಾರೆ, ಏಕೆಂದರೆ, ದೇವರ ರಾಜ್ಯ ಅವರದ್ದಾಗುತ್ತದೆ"

ಎನ್ನುವ ದೇವರವಾಕ್ಯದ ಸ್ಫೂರ್ತಿಯನ್ನು ನಾವು ನಮ್ಮೊಳಗೆ ಒಳಗೊಳಿಸಿಕೊಳ್ಳೋಣ. ಅಂತಿಮವಾಗಿ ಕತ್ತಲೆ ನಮ್ಮನ್ನು ಆವರಿಸುತ್ತದೆ. ಆದರೆ ನಾವು ಭಯಭೀತರಾಗಬಾರದು. ಇದು ಬೆಳಗಿನ ಪೂರ್ವದಲ್ಲಿರುವ ಕತ್ತಲೆ ಮಾತ್ರ. ನಮ್ಮ ಸಮುದಾಯದ ಪ್ರತಿಯೊಬ್ಬ ಸದಸ್ಯರು, ನಮ್ಮ ಹಕ್ಕುಗಳನ್ನು ಮತ್ತು ಸಂಪ್ರದಾಯಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

> "ಸರ್ವಶಕ್ತನಾದ ದೇವರೇ, ಈ ಬಿಕ್ಕಟ್ಟನ್ನು ಸ್ವಯಂ ತ್ಯಾಗದಿಂದ ಜಯಿಸಲು, ಎಲ್ಲರನ್ನು ಆಶೀರ್ವದಿಸಿ ತಂದೆಯೇ..."(141:p10).

ಪ್ರಾಣ ತ್ಯಾಗ ಮಾಡಿದವರಿಗೆ ಸ್ವರ್ಗದ ಭರವಸೆಯನ್ನು ದಯಪಾಲಿಸಿದ ಚರ್ಚ್‌ನ ಧರ್ಮಗುರುಗಳ ಈ ಕರೆಯಿಂದ ಪ್ರೇರಿತರಾಗಿ ಚಂಗನಾಶ್ಶೇರಿ ಧರ್ಮಪ್ರಾಂತ್ಯದ ಕಾರ್ಯಕಾರಿ ಸಮಿತಿಯು ಒಂದು ಹೇಳಿಕೆಯನ್ನು ಹೊರಡಿಸಿತು:

> "ಹೋರಾಡುವುದಕ್ಕೂ ಯುದ್ಧನ್ಮೊರಾದ ಸ್ವಯಂಸೇವಕಸೇನೆಗೆ ನಾಯಕತ್ವ ನೀಡುವುದಕ್ಕೂ ಪ್ರತಿ ಪ್ಯಾರಿಷ್‌ನಲ್ಲಿ ಸಮಿತಿಗಳಿರಬೇಕು. ಎಲ್ಲಾ ಮನೆಗಳಿಂದ ಕನಿಷ್ಠ ಒಬ್ಬ ಯುವಕನಾದರೂ ಸ್ವಯಂಸೇವಕ ಸೇನೆಯಲ್ಲಿ ಸೇರಲು ಮುಂದೆ ಬರುವುದನ್ನು ಪ್ರೋತ್ಸಾಹಿಸಬೇಕು"(108:02.04.59).

'ನವಜೀವನ' ಪತ್ರಿಕೆಯ ಪ್ರಕಾರ, ತ್ರಿಶೂರ್ ಧರ್ಮಪ್ರಾಂತ್ಯದಲ್ಲಿರುವ ಕ್ಯಾಥೋಲಿಕ್ ಪಾದ್ರಿಗಳು ಕ್ಯಾಥೋಲಿಕರು ವಾಸಿಸುವ ಪ್ರತಿ ಮನೆಗೆ ಭೇಟಿ ನೀಡಿ, ಎಲ್ಲಾ ಹಿರಿಯರನ್ನು ಭೇಟಿ, ಜನರ ಎಣಿಕೆ ತೆಗೆದು, ಧರ್ಮಯುದ್ಧಕ್ಕೆ ಸಿದ್ಧರಾಗಲು ಅವರಿಗೆ ಕರೆ ನೀಡಿದರು. ವರದಿಗಳ ಪ್ರಕಾರ, ಚರ್ಚ್ ಧರ್ಮೋಪದೇಶದ ಸಮಯದಲ್ಲಿ ಪುರೋಹಿತರು ಕಮ್ಯುನಿಸ್ಟ್ ಆಡಳಿತವನ್ನು ಕೊನೆಗೊಳಿಸಲು, ಅದಕ್ಕಾಗಿ ರಕ್ತ ಹರಿಸಲು ಹಿಂಜರಿಯಬಾರದು ಎಂದು ಅವರು ಸಭಿಕರಿಗೆ ನೆನಪಿಸಿದರು. ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಶಾಲೆಗೆ ಹೋಗುವುದನ್ನು ತಡೆಯಲು 'ದಂಢಾಧಿಕಾರಿಗಳಾದ ಸೈನಿಕ ಗಣಗಳನ್ನು' ಸಿದ್ದಗೊಳಿಸಿದರು. ಅಗತ್ಯವಿದ್ದರೆ,

> "ಅವರ ತಲೆಯೂ ಹೋಗಬಹುದು"(141:p10).

ಆರ್ಚ್ಡಯಾಸಿಸ್/ಆರ್ಚ್‌ಬಿಷಪ್‌ರ ಜಿಲ್ಲೆಯ ಅಡಿಯಲ್ಲಿರುವ ಪ್ರತಿ ಕೌನ್ಸಿಲ್‌ನಲ್ಲಿ ಸಮಿತಿಗಳು ಮತ್ತು ಸ್ವಯಂಸೇವಾ ಗುಂಪುಗಳನ್ನು ರಚಿಸಬೇಕೆಂದು ಚಂಗನಾಶ್ಶೇರಿಯ ಆರ್ಚ್ಡಯಾಸಿಸ್ ಒತ್ತಾಯಿಸಿತು. ಯುದ್ಧದಲ್ಲಿ ಜೀವತ್ಯಾಗಕ್ಕಾಗಿ ಪ್ರತಿ ಕುಟುಂಬಗಳಿಂದ ಒಬ್ಬ ಯುವಕ ಎನ್ನುವಂತೆ, ಸಿದ್ದಗೊಳಿಸಿಟ್ಟುಕೊಳ್ಳಬೇಕೆಂದು ಮೊದಲೇ ಹೊರಡಿಸಿದ

ಅಧಿಸೂಚನಾ ಪತ್ರದಲ್ಲಿ ಬಿಷಪ್ ಕುಟುಂಬಕ್ಕೆ ಸೂಚಿಸಿದ್ದರು(141p10).

ಧರ್ಮಗುರುಗಳ ಕರೆ ಮೇರೆಗೆ ರಾಜ್ಯದಾದ್ಯಂತ ಅಗಾಧವಾದ ಪ್ರತಿಕ್ರಿಯೆ ಕಂಡುಬಂದಿತು. ಕ್ರಿಶ್ಚಿಯನ್ನರಲ್ಲಿ ಧರ್ಮದ ಹೆಸರಿನಲ್ಲಿ ಎಲ್ಲವನ್ನೂ ತ್ಯಾಗ ಮಾಡುವಂತೆ ಪ್ರೇರೇಪಿಸಿದ್ದು ಫಲಕೊಡುವಂತೆ ಮಾಡಿತು. ಈ ಯೋಜನೆಯಲ್ಲಿ ಅವರಿಗೆ ನಾಯರ್ ಸರ್ವೀಸ್ ಸೊಸೈಟಿಯ ಬೆಂಬಲವೂ ದೊರೆಯಿತು. ಸರ್ಕಾರದೊಂದಿಗೆ ಕೆಲವು ಭಿನ್ನಾಭಿಪ್ರಾಯಗಳ ಹೆಸರಿನಲ್ಲಿ ಎನ್‌ಎಸ್‌ಎಸ್ ಬಹಿರಂಗ ಯುದ್ಧ ಘೋಷಿಸಿತು(142:p291). ಎನ್‌ಎಸ್‌ಎಸ್‌ನ ಮುಖ್ಯಸ್ಥರಾದ ಮನ್ನತ್ ಪದ್ಮನಾಭನ್ ಈ ಹಿಂದೆ ಕ್ರಿಸ್ಟೋಫರ್ ಚಳವಳಿಯನ್ನು ಖಂಡಿಸಿದ್ದರು. ಕ್ರಿಸ್ಟೋಫರ್ಸ್‌ನ್ನು ರಕ್ಷಿಸಲು ಅವರು (ಎನ್‌ಎಸ್‌ಎಸ್) ಕೃಷ್ಣಾಫರ್ ಆರ್ಮಿಯನ್ನೋ (ಶ್ರೀಕೃಷ್ಣನ ಹೆಸರಿನ ಸೈನ್ಯ) ನಾಯರ್ಫರ್ ಆರ್ಮಿಯನ್ನೋ(ನಾಯರ್ ಸಿವಿಲ್ ಆರ್ಮಿ) ರಚಿಸಬೇಕು, ಎಂದು ಅವರು ಹಾಸ್ಯರೂಪದಲ್ಲಿ ಪ್ರಸ್ತಾಪಿಸಿದ್ದರು(143:28.08.57). ಆದರೆ ಕೇರಳದ ಆಡಳಿತ ಮತ್ತು ರಾಜಕೀಯ ಕ್ಷೇತ್ರಗಳ ಕೆಲವು ಬೆಳವಣಿಗೆಗಳಿಂದಾಗಿ, ಎನ್‌ಎಸ್‌ಎಸ್‌ಗೆ, ಇಎಂಎಸ್ ಸರ್ಕಾರದ ವಿರುದ್ಧ ದ್ವೇಷ ಮತ್ತು ಶತ್ರುತ್ವದ ಬೆಳವಣಿಗೆಗೆ ಕಾರಣವಾಯಿತು.* ಕ್ರಿಶ್ಚಿಯನ್ ನಾಯಕರು ಈ ಪರಿಸ್ಥಿತಿಯನ್ನು ಜಾಣತನದಿಂದ ಬಳಸಿಕೊಂಡರು. ಎನ್‌ಎಸ್‌ಎಸ್ ಮತ್ತು ಕೇರಳ ಸರ್ಕಾರದ ನಡುವಿನ ಹಿತಾಸಕ್ತಿಗಳ ಸಂಘರ್ಷದಲ್ಲಿ ಅವರು ಪ್ರಯೋಜನವನ್ನೂ ಪಡೆದರು. ವಿರೋಧಪಕ್ಷಗಳು ಈ ಮತೀಯ ಶಕ್ತಿಗಳೊಂದಿಗೆ ಕೈ ಜೋಡಿಸಿದವು. ಹೀಗೆ ಕೇರಳವು ಪ್ರತಿಗಾಮಿ ಶಕ್ತಿಗಳನ್ನು ಮತ್ತು ಪಟ್ಟಭದ್ರ ಹಿತಾಸಕ್ತಿಗಳನ್ನು ಒಳಗೊಂಡ ರಾಜಕೀಯ ನಾಟಕಕ್ಕೆ ವೇದಿಕೆಯಾಯಿತು. ಈ ಅಸಂಬದ್ಧ ನಾಟಕದಲ್ಲಿ, ಜಾತಿ ಮತ್ತು ಸಮುದಾಯದ ಶಕ್ತಿಗಳು, ಒತ್ತಡ ಗುಂಪುಗಳು, ವಿರೋಧಿ ರಾಜಕೀಯ ಪಕ್ಷಗಳು ತಮ್ಮ ಪಾತ್ರಗಳನ್ನು ಸಮರ್ಥವಾಗಿ ಅಭಿನಯಿಸಿ ಪ್ರದರ್ಶಿಸಿದರು. ಇದು ಕಮ್ಯುನಿಸ್ಟ್ ನೇತೃತ್ವದ ಸರ್ಕಾರದ ವಿರುದ್ಧ ಮಾರಣಾಂತಿಕವಾದ ಹೋರಾಟರಂಗವಾಗಿ ರೂಪಾಂತರಗೊಂಡಿತು(103:pxv)**.

ಚರ್ಚ್ ನಾಯಕರ ಕರೆಯ ಮೇರೆಗೆ ಸಾವಿರಾರು ಪುರುಷರು ಕ್ರಿಸ್ಟೋಫರ್ ಚಳವಳಿಗೆ ಸೇರಿದ್ದಲ್ಲದೆ, ತಿರುವನಂತಪುರಂನಲ್ಲಿ ತರಬೇತಿಯನ್ನೂ ಪಡೆದರು. ನಾಯರ್ ಸರ್ವಿಸ್ ಸೊಸೈಟಿ ಸ್ಥಾಪಿಸಿದ್ದ ಸ್ವಯಂಸೇವಕರು ಸಹ ಕ್ರಿಸ್ಟೋಫರ್ ಸೇನೆಯೊಂದಿಗೆ ಸೇರಿಕೊಂಡರು. ಸರ್ಕಾರವನ್ನು ಉರುಳಿಸುವ ಆಂದೋಲನಕ್ಕೆ ಎಲ್ಲಾ ಸ್ವಯಂಸೇವಕರು ನಾಯಕರಿಂದ ಸೂಚನೆಗಳನ್ನು ಪಡೆದರು. ಕ್ರಿಸ್ಟೋಫರ್

---

* ಮನ್ನತ್‌ರವರ ಒಂದು ಹೇಳಿಕೆ–ಅಂದರೆ, ಕ್ರಿಶ್ಚಿಯನ್ನರಿಗೆ ಕ್ರಿಸ್ತಾಫರ್ ಸೇನೆಯಾಗಿದ್ದರೆ, ಅದೇ ರೀತಿ ಕೃಷ್ಣಾಫರ್ ಕೃಷ್ಣಭಕ್ತರ ಸೇನೆಯಾಗಿದೆ.

** ಒಟ್ಟಪಾಲಂನಲ್ಲಿ ಖಾಸಗಿ ಇಂಜಿನಿಯರಿಂಗ್ ಕಾಲೇಜಿಗೆ ಅನುಮತಿ ನೀಡಬೇಕೆನ್ನುವ ಎನ್‌ಎಸ್‌ಎಸ್‌ನ ಬೇಡಿಕೆಯ ಬಗ್ಗೆ ಸರ್ಕಾರದ ನಿಲುವು ಮತ್ತು ಪ್ರಸ್ತಾವಿತ ಭೂಸುಧಾರಣಾ ಶಾಸಕಾಂಗ ಕ್ರಮಗಳನ್ನು ಜಾರಿಗೆ ತರಲು ಕಮ್ಯುನಿಸ್ಟ್ ಸರ್ಕಾರದ ನಿಲುವುಗಳೇ ಎನ್‌ಎಸ್‌ಎಸ್‌ನ ಅಸಮಾಧಾನಕ್ಕೆ ಮುಖ್ಯ ಕಾರಣಗಳಾಗಿವೆ.

ತಿರುವನಂತಪುರದ ಕರಾವಳಿ ಪ್ರದೇಶಗಳಿಂದ ಹೆಚ್ಚಿನ ಸಂಖ್ಯೆಯ ಸ್ವಯಂಸೇವಕರನ್ನು ಕ್ರಿಸ್ಟೋಫರ್‌ಚಳವಳಿಗೆ ನೇಮಿಸಿಕೊಂಡರು. ಅವರಲ್ಲಿ ಗಣನೀಯ ಸಂಖ್ಯೆಯ ಲ್ಯಾಟಿನ್ ಕ್ಯಾಥೋಲಿಕ್ ಬಣಕ್ಕೆಸೇರಿದ ಬಡ ಮೀನುಗಾರಿಕಾ ಕಾರ್ಮಿಕರಿದ್ದರು.*

ಪುಲ್ಲುವಿಲಾ, ವಿಳಿಂಜಂ, ಕೋವಲಂ, ನೆಯ್ಯಟ್ಟಿಂಕರ, ವಲಿಯತೋಪ್ಪು, ಕೊಚ್ಚುತೊಪ್ಪು, ಕನ್ನಂತುರ, ಕೊಚ್ಚುವೇಳಿ, ವೆಟ್ಟುಕಾಡು, ವಲಿಯತ್ತುರ, ಪೂಂತುರ, ಚೆರಿಯತುರಾ ಮುಂತಾದ ಸ್ಥಳಗಳಿಂದ ಬಹಳಷ್ಟು ಯುವಕರು ಕ್ರಿಸ್ಟೋಫರ್ ಚಳವಳಿಗೆ ಸೇರಿಕೊಂಡರು. ಕಮ್ಯುನಿಸ್ಟ್ ವಿರೋಧಿ ಚಳವಳಿಯಲ್ಲಿ ಪಾಲ್ಗೊಳ್ಳಲು ಚರ್ಚ್ ವೆಚ್ಚದಲ್ಲಿ ಅವರನ್ನು ಶಿಸ್ತುಬದ್ಧವಾದ ತರಭೇತಿ ನೀಡಲಾಯಿತು. ದಕ್ಷಿಣ ಭಾಗದ ತಮಿಳುನಾಡಿನಿಂದ ಕಳರಿ ವಿದ್ಯೆಯ ತರಬೇತಿ ಪಡೆದ ನಿಪುಣರನ್ನು, ಅದರ ಆಶಾನರನ್ನು/ಅಭ್ಯಾಸಕಾರರನ್ನು, ಕ್ರಿಸ್ಟೋಫರ್ ಸದಸ್ಯರಿಗೆ ತರಬೇತಿ ನೀಡಲು ಚರ್ಚ್ ಅಧಿಕಾರಿಗಳನ್ನು ನಿಯೋಜಿಸಲಾಯಿತು. ತಿರುವನಂತಪುರಂನ ಬಿಷಪ್ ಈ ಯುವ ಸೈನಿಕರನ್ನು ಆಶೀರ್ವದಿಸಿದ್ದಲ್ಲದೆ, ಉಳಿದವರನ್ನು ಈ ಸೇನೆಗೆ ಸೇರಲು ಮನವೊಲಿಸುವ ಪ್ರಯತ್ನವನ್ನೂ ನಡೆಸಿದರು. ವ್ಯಾಯಾಮ ಮತ್ತು ಆಯುಧ ತರಬೇತಿಯ ಜೊತೆಗೆ, ಯುವ ಸೈನಿಕರಲ್ಲಿ ಆಸಕ್ತಿ ಮತ್ತು ಉತ್ಸಾಹವನ್ನು ಕೆರಳಿಸಲು ಸಂಘಟಕರು ಚರ್ಚಾ ತರಗತಿಗಳನ್ನು ಮತ್ತು ಕಲೆಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಆಯೋಜಿಸಿದರು.

ತಿರುವನಂತಪುರಂ ಜಿಲ್ಲೆಯ ವೆಲ್ಲಯಂಬಲಂನ ಬಿಷಪ್‌ರವರ ಮನೆ, ಈ ಸ್ವಯಂಸೇವಕರ ಮುಖ್ಯ ಕೇಂದ್ರವಾಗಿತ್ತು. ಉತ್ತರ ಭಾಗದ ಪ್ಯಾರಿಷ್‌ಗಳ ಸ್ವಯಂಸೇವಕರು ಆಗಿಂದಾಗ್ಗೆ ವಿಲಯಂಬಲಂನಲ್ಲಿ ಭೇಟಿಯಾಗುತ್ತಿದ್ದರು. ಇದು ವೆಲ್ಲಯಂಬಲಂನ ಬಿಷಪ್‌ರವರ ಅರಮನೆಯಲ್ಲಿ ನಡೆಯುತ್ತಿದ್ದ ಬೈಬಲ್ ತರಗತಿಗಳಿಗೆ ಹಾಜರಾಗುವ ನೆಪದಲ್ಲಿ ಅಲ್ಲಿಗೆ ಆಗಮಿಸುತ್ತಿದ್ದ ಅವರು, ಅಲ್ಲಿಯ ಶಾಶ್ವತ ಸಂದರ್ಶಕರಾದ ದಕ್ಷಿಣದ ಪ್ಯಾರಿಷ್‌ಗಳ ಸಾಮಾನ್ಯ ಸ್ವಯಂಸೇವಕರೊಂದಿಗೆ ಉತ್ತಮವಾಗಿ ಸಂವಹನ ನಡೆಸುತ್ತಿದ್ದರು. ಚರ್ಚ್ ನಾಯಕರ ಸೂಚನೆಯಂತೆ ಪ್ರಚೋದನಕಾರಿಯಾಗಿ ಕಮ್ಯುನಿಸ್ಟ್ ವಿರೋಧಿ ಘೋಷಣೆಗಳನ್ನು ಕೂಗುತ್ತಾ ತಿರುವನಂತಪುರಂನ ಬೀದಿಗಳಲ್ಲಿ ಪ್ರದರ್ಶನ ನಡೆಸಿದರು**.

ಕೊಲ್ಲಂ ಜಿಲ್ಲೆಯಲ್ಲಿ ಕ್ರಿಸ್ಟೋಫರ್ ಚಳುವಳಿ ಬಹಳ ಸಕ್ರಿಯವಾಗಿತ್ತು. ಕ್ಯಾಥೋಲಿಕ್ ನಾಯಕರು ಸಾವಿರಾರು ಯುವಕರನ್ನು ನೇಮಿಸಿಕೊಂಡಿದ್ದಲ್ಲದೆ,

---

* ಒಟ್ಟಪಾಲಂನಲ್ಲಿ ಖಾಸಗಿ ಇಂಜನಿಯರಿಂಗ್ ಕಾಲೇಜಿಗೆ ಅನುಮತಿ ನೀಡಬೇಕೆನ್ನುವ ಎನ್‌ಎಸ್‌ಎಸ್‌ನ ಬೇಡಿಕೆಯ ಬಗ್ಗೆ ಸರ್ಕಾರದ ನಿಲುವು ಮತ್ತು ಪ್ರಸ್ತಾವಿತ ಭೂಸುಧಾರಣಾ ಶಾಸಕಾಂಗ ಕ್ರಮಗಳನ್ನು ಜಾರಿಗೆ ತರಲು ಕಮ್ಯುನಿಸ್ಟ್ ಸರ್ಕಾರದ ನಿಲುವುಗಳೇ ಎನ್‌ಎಸ್‌ಎಸ್‌ನ ಅಸಮಾಧಾನಕ್ಕೆ ಮುಖ್ಯ ಕಾರಣಗಳಾಗಿವೆ.

** ಶ್ರೀ. ಜೋಸೆಫ್ ಪೆರೆರಾ ಅವರೊಂದಿಗೆ ಅವರ ನಿವಾಸದಲ್ಲಿ ಸಂದರ್ಶನವನ್ನು ಜನವರಿ 1, 2010ರಂದು ನಡೆಸಲಾಯಿತು.

ಅವರಿಗೆ ತರಬೇತಿಯನ್ನೂ ನೀಡಿದರು. ರಾನ್ನಿ, ಅರನ್ಮುಲ, ಕೊಲ್ಲಂ ಮತ್ತು ಪತ್ತನಂತಿಟ್ಟ ಮುಂತಾದವು ಈ ಸ್ವಯಂಸೇವಕ ಸೇನೆಯ ಕೊಲ್ಲಂ ಜಿಲ್ಲೆಯ ಮುಖ್ಯ ಕೇಂದ್ರಗಳಾಗಿದ್ದವು. ಕೊಲ್ಲಂ ಜಿಲ್ಲೆಯಲ್ಲಿ ಕ್ರಿಸ್ಟೋಫರ್ಸ್ ಗುಂಪು, ನಾಯರ್ ಸ್ವಯಂಸೇವಕರನ್ನು ಸೇರಿಕೊಂಡು ಸರ್ಕಾರದ ವಿರುದ್ಧ ಬೆದರಿಕೆಯನ್ನೊಡ್ಡುವಂಥ ಘೋಷಣೆಗಳನ್ನು ಕೂಗುತ್ತಾ ಪ್ರದರ್ಶನ ನಡೆಸಿದರು. ಕೊಲ್ಲಂನಲ್ಲಿ 1500 ಸ್ವಯಂಸೇವಕರನ್ನು ಸಂಘಟಿಸಿದ ಚರ್ಚ್ ಅಧಿಕಾರಿಗಳು ಅವರಿಗೆ ಧ್ವಜಗಳನ್ನು ಕಟ್ಟಲುಕೋಲುಗಳನ್ನು ನೀಡಿದರು. ಅಗತ್ಯ ಬಿದ್ದಾಗ ಆ ಕೋಲುಗಳನ್ನು ಆಯುಧಗಳಾಗಿ ಬಳಸಬಹುದಾಗಿತ್ತು(103:pxvii-xviii).

ಆಲಪ್ಪುಳ ಜಿಲ್ಲೆಯಲ್ಲಿ ಕ್ರಿಸ್ಟೋಫರ್ ಸೈನ್ಯವು ತೀವ್ರತರಹದ ಆವೇಶಕ್ಕೊಳಗಾದವರಂತೆ ಉನ್ಮಾದಗೊಂಡು ನಡೆಸಿದ ಕಾರ್ಯಚಟುವಟಿಕೆಯನ್ನು ವೀಕ್ಷಿಸಬಹುದಾಗಿತ್ತು. ಕ್ಯಾಥೋಲಿಕ್ ಪಾದ್ರಿಗಳು ಕ್ರಿಶ್ಚಿಯನ್ ಯುವಕರನ್ನು ನೇಮಿಸಿಕೊಳ್ಳಲು ಅವಿರತವಾಗಿ ಶ್ರಮಿಸಿದರು. ನಿರಣಂ, ಪುಳಿಂಕುನ್ನು, ಚೇರ್ತಾಲ ಮುಂತಾದ ಸ್ಥಳಗಳು ಈ ಗುಂಪಿನ ಮುಖ್ಯ ಕೇಂದ್ರಗಳಾಗಿದ್ದವು. ಮಾನ್ಸಿಗ್ನರ್ ರೆನಾಲ್ಡ್ ಅವರ ಅಧ್ಯಕ್ಷತೆಯಲ್ಲಿ ಮೇ 24ಕ್ಕೆ ಪುಳಿಂಕುನ್ನುನಲ್ಲಿ ಸಾರ್ವಜನಿಕ ಸಭೆಯೊಂದು ನಡೆಯಿತು.

> "ಫಾದರ್ ಮಿಲಾನಿಯೋಸ್ ಮತ್ತು ಎನ್.ಕೆ. ಥಾಮಸ್ ಅವರು ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಚರ್ಚ್‌ನ ಅಧಿಕಾರ ವ್ಯಾಪ್ತಿಯ ವಿವಿಧ ಪ್ರದೇಶಗಳಿಂದ ಕ್ರೈಸ್ತರು ಬೃಹತ್ ಮೆರವಣಿಗೆಯೊಂದಿಗೆ ಅಲ್ಲಿಗೆ ಬಂದು ಸೇರಿದರು.. ಯಾವುದೇ ತುರ್ತು ಪರಿಸ್ಥಿತಿಯನ್ನು ಎದುರಿಸಲು ಬಲಿಷ್ಠವಾದ ಸ್ವಯಂಸೇವಕ ಪಡೆಯನ್ನು ಈಗಾಗಲೇ ರಚಿಸಿಕೊಂಡಾಗಿತ್ತು(32:30.05.59).

ಮೇ 27, 1959ರಂದು, 'ಜನಯುಗಂ' ದಿನಪತ್ರಿಕೆ ಹೀಗೆ ವರದಿ ಮಾಡಿತು:

> "ವಟ್ಟಯಾರ್ ಚರ್ಚ್‌ನ ಧರ್ಮಗುರು ಆಂಡ್ರ್ಯೂ ಪಿ. ತೆಕ್ಕೆವೀಡ್‌ರವರ ನೇತೃತ್ವದಲ್ಲಿ ನಿನ್ನೆ ಅಲಪ್ಪುಳದಲ್ಲಿ ನಡೆದ ಪ್ರತಿಭಟನೆಯಲ್ಲಿ ಸುಮಾರು 300 ಪುರುಷ ಶಸ್ತ್ರಧಾರಿಗಳು ಭಾಗವಹಿಸಿದ್ದರು. ಚರ್ಚ್ ಆವರಣದಿಂದ ಪ್ರದರ್ಶನ ಪ್ರಾರಂಭವಾಯಿತು. 'ನಾವು ರಕ್ತಪಾತ ನಡೆಸಿಹೋರಾಡುತ್ತೇವೆ', '*ಇದು ಹಂಗೇರಿಯಲ್ಲ, ಕೇರಳ, ತಿಳಿದುಕೋ ನಂಬೂದಿರೀ...*',(33:27.05.59) ಮುಂತಾದ ಘೋಷಣೆಗಳನ್ನು ಕೂಗುತ್ತಿದ್ದರು.

ಆಲಪ್ಪುಳದ ಅನೇಕ ಚರ್ಚ್‌ಗಳಲ್ಲಿ ರಾತ್ರಿಯ ಮರೆಯಲ್ಲಿ ಶಸ್ತ್ರಾಸ್ತ್ರ ತರಬೇತಿ ನೀಡಲಾಗುತ್ತಿತ್ತು. ಕಮ್ಯುನಿಸ್ಟ್ ವಿರೋಧಿ ಆಂದೋಲನವನ್ನು ನಡೆಸಲು ಮತ್ತು ಕಾರ್ಮಿಕರ ಶಕ್ತಿಯನ್ನು ದುರ್ಬಲಗೊಳಿಸಲು ಜಿಲ್ಲೆಯಲ್ಲಿ ಕ್ರಿಸ್ಟೋಫರ್ ಹೆಚ್ಚಿನ ಸಂಖ್ಯೆಯಲ್ಲಿ ಸ್ವಯಂಸೇವಕರನ್ನು ಉಪಯೋಗಿಸಿಕೊಂಡಿತು (145:p38). ಆಂದೋಲನವನ್ನು ಎದುರಿಸಲು ಸ್ವಯಂ ಸಿದ್ಧರಾದ ಸರ್ಕಾರದ ಕಡೆಗಿನ ಬೆಂಬಲಿಗರು ಸೃಷ್ಟಿಸುವ ಅಡೆತಡೆಗಳನ್ನು ನಿವಾರಿಸಲು ಕ್ರಿಸ್ಟೋಫರ್ ಕಾರ್ಯಕರ್ತರನ್ನು ಸೂಕ್ತ ಸ್ಥಾನಗಳಲ್ಲಿ ಸಿದ್ಧಪಡಿಸಿಟ್ಟುಕೊಳ್ಳಲಾಯಿತು. ಕೋಲು, ಚೂರಿ, ಚಾಕುಗಳನ್ನು ಹಿಡಿದು

ಪ್ರತಿಭಟನಾಕಾರರು ಸರ್ಕಾರಿ ಕಚೇರಿಗಳು, ಶಾಲೆಗಳು ಕಾರ್ಯನಿರ್ವಹಿಸದಂತೆ ಅಡ್ಡಿಪಡಿಸಿದರು(103:pxv-xviii). ಕ್ರಿಸ್ಟೋಫರ್ಸ್‌ನಿಂದ ನಡೆಯುತ್ತಿದ್ದ ಹಿಂಸಾತ್ಮಕ ಕಾರ್ಯಗಳಿಂದಾಗಿ ಪೊಲೀಸರು ಹಸ್ತಕ್ಷೇಪ ನಡೆಸುವ ಅನಿವಾರ್ಯತೆ ಉಂಟಾಯಿತು.

ಈ ಅವಧಿಯಲ್ಲಿ ಎರ್ನಾಕುಲಂ ಜಿಲ್ಲೆಯ ವಿವಿಧ ಚರ್ಚ್‌ಗಳಲ್ಲಿ ಸುಮಾರು 5850 ಸ್ವಯಂಸೇವಕರ ಕ್ರಿಸ್ಟೋಫರ್ ತಂಡ ಸೇರಿಸಿಕೊಂಡವರಿಗೆ ಆಯುಧ ತರಬೇತಿ ನೀಡಲಾಯಿತು. ಮಟ್ಟಂಚೇರಿ ಚರ್ಚ್, ಚುಲ್ಲಿಕಲ್ ಚರ್ಚ್, ಸೇಂಟ್ ಸೆಬಾಸ್ಟಿಯನ್ ಚರ್ಚ್, ಸಿರಿಯನ್ ಚರ್ಚ್, ನಜರೆತ್ ಚರ್ಚ್ ಮುಂತಾದ ಚರ್ಚುಗಳು ಸರ್ಕಾರದ ವಿರೋಧಿ ಹೋರಾಟಗಳಿಗಾಗಿ ಅರೆಸೇನಾಪಡೆಗಳನ್ನು ರಚಿಸಿಕೊಂಡಿತ್ತು(103:pXX).

ಕ್ರಿಸ್ಟೋಫರ್ ಗುಂಪಿನ ಅತ್ಯಂತ ಸಕ್ರಿಯ ಮತ್ತು ಯುದ್ಧೋತ್ಸಾಹಿ ವಿಭಾಗವು ಕೊಟ್ಟಾಯಂ ಜಿಲ್ಲೆಯಲ್ಲಿತ್ತು. ಈ ಜಿಲ್ಲೆಯ ಕ್ಯಾಥೋಲಿಕ್ ಪಾದ್ರಿಗಳು, ಕ್ರಿಸ್ಟೋಫರ್ ಚಳವಳಿಯಲ್ಲಿ ಸಾಧ್ಯವಾದಷ್ಟು ಯುವಕರನ್ನು ಸೇರಿಸಿಕೊಳ್ಳಲು ಅವಿರತವಾಗಿ ಶ್ರಮಿಸಿದರು(108:24.05.59). ಚಂಗನಾಶ್ಶೆರಿಯ ಚರ್ಚ್‌ಗಳ ಸುತ್ತಮುತ್ತಲಿನ ಪ್ರದೇಶದಲ್ಲಿ ಮತ್ತು ಬಿಷಪ್ ಅರಮನೆಯಲ್ಲಿ ಸ್ವಯಂಸೇವಕರಿಗೆ ನಿಯಮಿತವಾಗಿ ರಾತ್ರಿಗಳಲ್ಲಿ ಆಯುಧಗಳ ತರಬೇತಿ ನೀಡಲಾಗುತ್ತಿತ್ತು ಎಂದು ಪತ್ರಿಕಾ ವರದಿಗಳು ಮತ್ತು ಇತರ ಮೂಲಗಳಿಂದ ದೊರೆತ ಪುರಾವೆಗಳು ಸೂಚಿಸುತ್ತವೆ. ಕ್ರೈಸ್ತ ಆರಾಧನಾಲಯಗಳನ್ನು ಶಸ್ತ್ರಾಗಾರಗಳನ್ನಾಗಿ ಪರಿವರ್ತಿಸುವುದು ಅವರ ಉದ್ದೇಶವಾಗಿತ್ತು(141:p11). ಚೆರಿಯನ್ ಕಾಪ್ಪನ್, ಕುರಿಯನ್ ಪೊಟ್ಟಂಕಲಂ, ಎಂ.ಸಿ. ಚೆರಿಯನ್ ಮುಂತಾದವರು *ಕೊಟ್ಟಾಯಂ ಜಿಲ್ಲೆಯಲ್ಲಿ ಈ ಚಳವಳಿಯ ಪ್ರಮುಖ ನಾಯಕರಾಗಿದ್ದವರು. ಮುಂಡಕ್ಕಯದ ಕ್ಯಾಥೋಲಿಕ್ ನಾಯಕರು ಮೇ 25, 1959ರಲ್ಲಿ ಕೂಟಿಕಲ್‌ನಲ್ಲಿರುವ ಚರ್ಚ್‌ನಲ್ಲಿ ಸಮ್ಮೇಳನ ನಡೆಸಿದರು. 'ವಿದ್ಯಾಲಯ ಸಂರಕ್ಷಣಾ ಸಮಿತಿ' ಎನ್ನುವ ಹೆಸರಿನಲ್ಲಿ, 500 ಸ್ವಯಂಸೇವಕರಿರುವ ಸಂಘಟನೆ ಆಯೋಜಿಸಲು ಕುರಿಯನ್ ಪೊಟ್ಟಂಕುಳಂರವರಿಗೆ ಸಮ್ಮೇಳನದಲ್ಲಿ ಜವಾಬ್ದಾರಿಯನ್ನು ನೀಡಿತು(103:pxiv). ಚರ್ಚ್‌ಗಳಲ್ಲಿ ಅವರಿಗೆ ಶಸ್ತ್ರಾಸ್ತ್ರಗಳ ಬಳಕೆಯ ತರಬೇತಿ ನೀಡಲಾಯಿತು. ಮುಂಡಕ್ಕಯಂನಲ್ಲಿನ ಬಹುತೇಕ ಎಲ್ಲಾ ಚರ್ಚ್‌ಗಳಿಗೆ ಕಮ್ಯುನಿಸ್ಟ್ ವಿರೋಧಿ ಆಂದೋಲನಕ್ಕಾಗಿ ಜನರನ್ನು ಮತ್ತು ಅರ್ಥಿಕ ನೆರವನ್ನು ನೀಡಲಾಯಿತು. ಈ ಚರ್ಚುಗಳು ನೇಮಿಸಿಕೊಂಡ ಸ್ವಯಂಸೇವಕರು, ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸದಂತೆ ಮಾಡಿದ್ದಲ್ಲದೆ, ಸರ್ಕಾರಿ ಕಚೇರಿಗಳ ಮತ್ತು ಪೊಲೀಸ್ ಠಾಣೆಗಳ ಕೆಲಸಕಾರ್ಯಗಳಿಗೆ ಅಡ್ಡಿಪಡಿಸಿ, ಸಾರಿಗೆ ಬಸ್ಸುಗಳನ್ನು ಧ್ವಂಸಗೆ ಳಿಸಿದರು(33:.28.05.59).

ಕೊಟ್ಟಯಂನ 'ಮಾರ್ಥೋಮಾ ಶೈಕ್ಷಣಿಕ ಕ್ರಿಯಾ ಸಮಿತಿ' ಪ್ರಕಟಿಸಿದ ಕರಪತ್ರದಲ್ಲಿ, ಏಳು ನಿರ್ದೇಶನಗಳನ್ನು ಒಳಗೊಂಡಿದೆ.

* ಶ್ರೀ. ಕೆ.ಎಂ. ಚುಮ್ಮರ್‌ನೊಂದಿಗೆ ಪಾಲಾ–ಪ್ರವಿತಾನಂ–ವೆಟಿಜಾನಂ ಎನ್ನುವ ಸ್ಥಳದಲ್ಲಿ 26 ಜನವರಿ 2010ರಂದು ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು.

> "ಧೈರ್ಯಶಾಲಿಯಾದ ಯುವ ಸ್ವಯಂಸೇವಕರನ್ನು ಮಾತ್ರ ಆಯ್ಕೆ ಮಾಡಬೇಕು. ಎಲ್ಲಾ ಸ್ವಯಂಸೇವಕರಿಗೆ ಗುರುತಿಸುವಿಕೆ ಕಾರ್ಡ್‌ಗಳನ್ನು ನೀಡಿ, ಅವರ ಸಂಪೂರ್ಣ ಪಟ್ಟಿಯನ್ನು ತಯಾರು ಮಾಡಿಟ್ಟುಕೊಳ್ಳಬೇಕು. ಖಾಸಗಿ ವೈದ್ಯರ ಪರಿಹಾರ ಸಮಿತಿಗಳ ನೆರವಿನೊಂದಿಗೆ ಪ್ರಥಮ ಚಿಕಿತ್ಸೆಗೆ ಅಗತ್ಯ ವ್ಯವಸ್ಥೆ ಮಾಡಬೇಕು"(113:p12;141:p11) ಮುಂತಾದವು ಪ್ರಮುಖ ನಿರ್ದೇಶನಗಳಾಗಿದ್ದವು

ಮಲಯಾಳಂ ದೈನಿಕ ಜನಯುಗಂ 23 ಮೇ 1959ರಂದು ಈ ಕೆಳಗಿನಂತೆ ವರದಿ ಮಾಡಿದೆ:

> "ಕೇರಳದ ಪ್ರಮುಖ ಕ್ಯಾಥೋಲಿಕ್ ಕೇಂದ್ರವಾದ ಮೀನಚಿಲ್ ತಾಲ್ಲೂಕಿನಲ್ಲಿರುವ ಕ್ಯಾಥೋಲಿಕ್ ಚರ್ಚ್‌ಗಳೆಲ್ಲವೂ ಇದೀಗ ಶಸ್ತ್ರಾಗಾರಗಳಾಗಿ ರೂಪಾಂತರಗೊಂಡಿವೆ. ಕುರುವಿಲಂಗಾಡ್, ಅರುವಿತ್ತೂರ, ರಾಮಪುರಂ, ಭರಣಾಂಗಣಂ, ಪಾಲಾ ಮುಂತಾದ ಸ್ಥಳಗಳ ಚರ್ಚ್‌ಗಳ ಪಾದ್ರಿಗಳು ಬಂದೂಕು ಮತ್ತು ಇತರ ಮಾರಕ ಆಯುಧಗಳನ್ನು ಸಂಗ್ರಹಿಸಿ ವಿತರಿಸುವ ಕೆಲಸಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. 'ಚರ್ಚ್ ಅಪಾಯದಲ್ಲಿದೆ'(Church is in Danger) ಎಂಬ ಘೋಷಣೆಯನ್ನು ಮೊಳಗಿಸುತ್ತಾ, ಅವರು ಕ್ಯಾಥೋಲಿಕ್ ಯುವಕರಿಗೆ ತೀವ್ರ ತರಹದ ತರಬೇತಿಗಳನ್ನು ನೀಡುತ್ತಿದ್ದಾರೆ"(33:23.05.59).

ಕಮ್ಯುನಿಸಂನಿಂದ ಗಂಭೀರ ಬೆದರಿಕೆಯನ್ನು ಎದುರಿಸುತ್ತಿರುವುದಾಗಿ ಕ್ಯಾಥೋಲಿಕ್ ಪಾದ್ರಿಗಳು ಪ್ರಚಾರದಲ್ಲಿ ತೊಡಗಿಕೊಂಡಿದ್ದರು. ಕಾನೂನು ಉಲ್ಲಂಘಿಸುವಿಕೆ, ಮಕ್ಕಳು ಶಾಲೆಗೆ ಹೋಗದಿರುವಿಕೆ ಮುಂತಾದ ಸಂದೇಶಗಳನ್ನು ಮನೆ–ಮನೆಗೆ ಹೋಗಿ ಪ್ರಚಾರ ಮಾಡಲು ಕ್ರೈಸ್ತರಿಗೆ ಸೂಚಿಸಲಾಯಿತು(141:p11). ಸರ್ಕಾರದ ವಿರುದ್ಧ ಸಶಸ್ತ್ರ ಘರ್ಷಣೆಗಳನ್ನು ಸಂಘಟಿಸಲು ಚರ್ಚ್‌ನ ಆಸುಪಾಸುಗಳಲ್ಲಿ ಸಾಕಷ್ಟು ವ್ಯವಸ್ಥೆಗಳನ್ನು ಮಾಡಲಾಯಿತು. ಹಲವಾರು ಸ್ಥಳಗಳಲ್ಲಿ, ಪಾದ್ರಿಗಳು ಸರ್ಕಾರದ ವಿರುದ್ಧ ಬಳಸಲು ಪರವಾನಗಿ ಪಡೆದ ಬಂದೂಕು ಮತ್ತು ಮದ್ದುಗುಂಡುಗಳನ್ನು ಸಂಗ್ರಹಿಸಿಟ್ಟುಕೊಂಡರು.

> "ದೊಡ್ಡ ಸಂಖ್ಯೆಯಲ್ಲಿ ಚಾಕುಚೂರಿಗಳು ಮತ್ತು ಕೋಲುಗಳನ್ನು ಹೊಂದಿರುವ ಕ್ರಿಸ್ಟೋಫರ್ಸ್‌ಗಳನ್ನು ಅಧಿಕ ಸಂಖ್ಯೆಗಳಲ್ಲಿ ಸಂಘಟಿಸಿದರು. ವಿನಾಶಕಾರಿ ಚಟುವಟಿಕೆಗಳಿಗೆ ಸ್ವಯಂಸೇವಕರನ್ನು ಸಿದ್ದಗೊಳಿಸಲು ಪಾದ್ರಿಗಳು ಮನೆಗಳಿಗೆ ಭೇಟಿ ನೀಡುತ್ತಿದ್ದರು. ಸರ್ಕಾರದ ವಿರುದ್ಧ ಶಸ್ತ್ರಾಸ್ತ್ರಗಳನ್ನು ಹಿಡಿದುಕೊಳ್ಳಲು ತಮ್ಮ ಅನುಯಾಯಿಗಳಿಗೆ ಕರೆ ನೀಡುತ್ತಿದ್ದರು. ಪವಿತ್ರ ತಂದೆಯ ಪಾದಗಳಲ್ಲಿ ಬಲಿಯರ್ಪಿಸುವುದಕ್ಕೆ ಸಮನಾಗಿದೆ, ಈ ಯುದ್ಧದಲ್ಲಿ ವೀರ ಮರಣ ಹೊಂದುವುದು, ಎನ್ನುವ ಪ್ರಚಾರಗಳನ್ನೂ ಮಾಡುತ್ತಿದ್ದರು. ಪ್ರತಿ ಪ್ಯಾರಿಷ್‌ನಲ್ಲಿ ಪ್ರತಿ ಹತ್ತು ವ್ಯಕ್ತಿಗಳಿಗೆ ಒಬ್ಬರಂತೆ ಎಲ್ಲಾ ಪ್ಯಾರಿಷ್‌ಗಳಿಗೆ 'ಆತ್ಮಹತ್ಯಾ ದಳ' ರಚಿಸಲು ಸೂಚನೆ ನೀಡಲಾಯಿತು"(33:19.05.59).

ಕ್ಯಾಥೋಲಿಕ್ ಪಾದ್ರಿಗಳು ದೈವವಿಶ್ವಾಸಿಗಳ ದೊಡ್ಡ ರ್‍ಯಾಲಿಗಳನ್ನು ಆಯೋಜಿಸುತ್ತಾ, ಅವರು ಪ್ರಚೋದನಕಾರಿ ಮಾತುಗಳನ್ನು ಬಳಸಿ ಜನರನ್ನುದ್ದೇಶಿಸಿ ಭಾಷಣಗಳನ್ನು ಮಾಡಿದರು. ಕಮ್ಯುನಿಸಂನಲ್ಲಿ ಅಂತರ್ಗತವಾಗಿರುವ 'ಕಾಲ್ಪನಿಕ ಅಪಾಯ'ಗಳನ್ನು ತೆರೆದು ತೋರಿಸುತ್ತಾ, ತಮ್ಮ ಸುತ್ತಲು ಅಣಿಗೊಂಡು ನಿಲ್ಲುವಂತೆ ಭಾವನಾತ್ಮಕವಾಗಿ ಪ್ರಚೋದಿಸಿದರು. ಚರ್ಚುಗಳಲ್ಲಿನ ಧರ್ಮೋಪದೇಶಗಳೆಲ್ಲವೂ ರಾಜಕೀಯ ಧರ್ಮೋಪದೇಶಗಳಾಗಿ ಬದಲಾದವು. ಹಾಜರಿರುವ ಜನರ ಅನುಕೂಲಕ್ಕಾಗಿ, ಬಿಷಪ್‌ಗಳು ಮತ್ತು ಇತರ ಧಾರ್ಮಿಕ ಮುಖಂಡರು ಪ್ರಕಟಿಸಿದ ಸೂಚನೆಗಳನ್ನು ಮತ್ತು ಪತ್ರಗಳನ್ನು ಓದಲಾಯಿತು(141:p11). ದೈವವಿಶ್ವಾಸಿಗಳ ಆಕಾಂಕ್ಷೆಗಳಿಗೆ ವಿರುದ್ಧವಾಗಿ ಕಮ್ಯುನಿಸ್ಟ್ ಸರ್ಕಾರ ಕೆಲಸ ಮಾಡುತ್ತಿದೆ, ಎಂಬ ಗ್ರಹಿಕೆಯನ್ನು ಜನರ ನಡುವೆ ಹುಟ್ಟುಹಾಕಿದರು. ಆದ್ದರಿಂದ, ಸರ್ಕಾರವನ್ನು ಅಧಿಕಾರದಿಂದ ಹೊರಹಾಕಲು ಪ್ರಚಾರಗಳನ್ನು ಆಯೋಜಿಸಲು ಜನರನ್ನು ಪ್ರೋತ್ಸಾಹಿಸಲಾಯಿತು. ಅಂತಿಮ ಪ್ರಯೋಗ ಎನ್ನುವ ನೆಲೆಯಲ್ಲಿ ಧರ್ಮಗುರುಗಳು 'ಚರ್ಚ್ ಅಪಾಯದಲ್ಲಿದೆ' ಎನ್ನುವ ಘೋಷಣೆಗಳನ್ನು ಮೊಳಗಿಸಿದರು. ಕಾನೂನನ್ನು ಉಲ್ಲಂಘಿಸಲು ಮತ್ತು ಎಲ್ಲಾ ಶಾಲೆಗಳನ್ನು ಮುಚ್ಚುವುದಕ್ಕಾಗಿ ಒಟ್ಟಾಗಿ ಕೆಲಸ ಮಾಡಲು ಕೇರಳದ ಕ್ರೈಸ್ತರಿಗೆ ಕರೆ ನೀಡಲಾಯಿತು(141:p11). ಈ ಗುರಿಯನ್ನು ಸಾಧಿಸಲು ಕ್ರಿಸ್ಟೋಫರ್ ಗ್ಯಾಂಗ್‌ಗಳನ್ನು ಶಸ್ತ್ರಸಜ್ಜಿತರನ್ನಾಗಿಸಿ, ರಾಜ್ಯದ ವಿವಿಧ ಭಾಗಗಳಲ್ಲಿ ತಯಾರಿಸಿಟ್ಟುಕೊಳ್ಳಲಾಯಿತು. ಯಾವುದೇ ಪರಿಸ್ಥಿತಿಯನ್ನು ಎದುರಿಸಲು ಅವರು ಪ್ರತಿಜ್ಞಾಬದ್ಧರಾಗಿದ್ದರು. ಕ್ರಿಸ್ಟೋಫರ್ ಗುಂಪಿನ ವಿರುದ್ಧ ಸರ್ಕಾರದ ಯಾವುದೇ ಕ್ರಮಗಳು ನಡೆಯದಂತೆ ಎಚ್ಚರಿಕೆ ವಹಿಸಲಾಯಿತು. ಕ್ರಿಸ್ಟೋಫರ್ ತಂಡಗಳಿಗೆ ಅಗತ್ಯ ವೈದ್ಯಕೀಯ ಆರೈಕೆ ಮತ್ತು ಸಾರಿಗೆ ವ್ಯವಸ್ಥೆ ಲಭಿಸುತ್ತಿದ್ದವು(67:30.05.59).

ಸರ್ಕಾರದ ವಿರುದ್ಧದ ಆರೋಪಗಳು ಮತ್ತು ಕಮ್ಯುನಿಸಂ ವಿರುದ್ಧದ ಧರ್ಮಯುದ್ಧದ ಕರೆಗಳ ಸುದ್ದಿಗಳಿಂದ, ದೀಪಿಕಾ ದಿನಪತ್ರಿಕೆಯ ಪುಟಗಳು ತುಂಬಿಹೋಗುತ್ತಿದ್ದವು. ಉದಾಹರಣೆಗೆ, ಏಪ್ರಿಲ್ 29ರ ಪತ್ರಿಕೆಯು ಈ ರೀತಿಯಲ್ಲಿ ಎಚ್ಚರಿಸಿತು:

> "ಬಂಧನಗಳನ್ನೂ ದಮನಕಾರಿ ಪ್ರವೃತ್ತಿಗಳನ್ನೂ ನಾವು ಎದುರಿಸಬೇಕಾಗುತ್ತದೆ. ಡಜನ್‌ಗಟ್ಟಲೆ ಬಿಷಪ್‌ಗಳು, ಸಾವಿರಾರು ಪಾದ್ರಿಗಳು ಮತ್ತು ಲಕ್ಷಾಂತರ ಚರ್ಚ್‌ಗೆ ಹೋಗುವ ಸಾಮಾನ್ಯರನ್ನು ಜೈಲಿನಲ್ಲಿ ಬಂಧಿಸಿಡಬಹುದು. ಘನತೆ ಮತ್ತು ಸ್ವಾಭಿಮಾನದಿಂದ ಅದನ್ನು ವಿರೋಧಿಸದೇ ಇರುವವರು, ಕ್ರೈಸ್ತರೆಂದು ಕರೆಸಿಕೊಳ್ಳಲು ಅರ್ಹರಾಗುವುದಿಲ್ಲ. ಎಲ್ಲವನ್ನೂ ತ್ಯಜಿಸಲು ಸಿದ್ಧರಾಗಿರಿ. ಹೋರಾಟ ಮಾಡೋಣ. ಏಕೆಂದರೆ, ನಾವು ಕಳೆದುಕೊಳ್ಳುವಂಥದ್ದೇನೂ ಇಲ್ಲ"(108:29.04.59).

ತೋಟಗಳ/ಎಸ್ಟೇಟ್ ಮಾಲೀಕರಿಂದ ಮತ್ತು ವಿದೇಶಿ ಕ್ರೈಸ್ತ ಸಮುದಾಯಗಳಿಂದ ಉಚಿತವಾಗಿ ಹರಿದು ಬಂದ ಹಣ, ಕ್ರೈಸ್ತ ಸಮುದಾಯದ ಬಡವರಿಂದ, ಆಯ್ಕೆಯಾದ ಸ್ವಯಂಸೇವಕರಿಗೆ ಊಟ, ವಸತಿ, ಸಂಬಳ ಮುಂತಾದವುಗಳನ್ನು ನೀಡಲು ಬಳಸಲಾಗುತ್ತಿತ್ತು, ಎಂದು ಫಾದರ್ ವಡಕ್ಕನ್ ಹೇಳುತ್ತಾರೆ(140:V6No202091977p16). ಈ ಸ್ವಯಂಸೇವಕ ಸೇನೆಯನ್ನು ನಿರ್ವಹಣೆಮಾಡಿಟ್ಟುಕೊಳ್ಳಲು, ಅಮೇರಿಕಾದಿಂದ ಲಕ್ಷಾಂತರ ಡಾಲರ್‌ಗಳು ಇಲ್ಲಿಗೆ ಹರಿದುಬಂದವು(46:p128; 107:2-5.08.59). ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ವಿಧ್ವಂಸಕ ಚಟುವಟಿಕೆಗಳನ್ನು ನಡೆಸುವುದಕ್ಕಾಗಿ, ಅಮೇರಿಕಾದಿಂದ ಕೇರಳಕ್ಕೆ ಹಣ ಹರಿದು ಬಂದಿದ್ದರ ಬಗ್ಗೆಯ ಪುರಾವೆಗಳು, 1959ರ ಆಗಸ್ಟ್ ತಿಂಗಳ ಮೊದಲ ವಾರದಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದವು(147:p38).

## ಮರಿಯಾ ಸೈನ್ಯ (Legion of Mary)

ಕ್ಯಾಥೋಲಿಕ್ ಸಮುದಾಯದಲ್ಲಿ ವ್ಯವಸ್ಥಿತವಾಗಿ ರೂಪುಗೊಂಡಂಥ 'ಮರಿಯಾ ಸೈನ್ಯ'ಎನ್ನುವ ಸ್ವಯಂಸೇವಕ ಸಂಘಟನೆಯು ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ ತುಂಬಾ ಸಕ್ರಿಯವಾಗಿತ್ತು. ಸೆಪ್ಟೆಂಬರ್ 1921, 7ರಂದು ಐರ್ಲೆಂಡ್‌ನ ರಾಜಧಾನಿ ಡಬ್ಲಿನ್‌ನಲ್ಲಿ 'ಮರಿಯಾ ಸೈನ್ಯ'ದ ಉದಯವಾಗಿತ್ತು. ಕೇರಳದಲ್ಲಿ ಈ ಪಡೆಯ ಮೊದಲ ಘಟಕವನ್ನು 15 ಆಗಸ್ಟ್ 1940ರಂದು ಪಾಲಾದಲ್ಲಿ ಸ್ಥಾಪಿಸಲಾಯಿತು(148:p54). ಕ್ಯಾಥೋಲಿಕ್ ಸಮುದಾಯದ ಪುರುಷರು ಮತ್ತು ಮಹಿಳೆಯರಿಗೆ ಪ್ರತ್ಯೇಕವಾದ ಘಟಕಗಳಿದ್ದವು. 1940ರಲ್ಲಿ, ಚಂಗನಾಶ್ಶೇರಿಯ ಬಿಷಪ್ ಡಾ. ಕಾಳಾಶೇರಿ, ತಿರುವಾಂಕೂರು ಪ್ರದೇಶದಲ್ಲಿ ಈ ಸೇನೆಯ ಬೆಳವಣಿಗೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಮರಿಯಾ ಸೈನ್ಯವು ತನ್ನ ಉದ್ದೇಶಗಳಲ್ಲಿ ಧರ್ಮ ಪ್ರಚಾರದ ಬಗ್ಗೆಯೂ ಪ್ರಕಟಿಸಲಾಗಿತ್ತು.

ಸಾಂಸ್ಥಿಕ ವ್ಯವಸ್ಥೆಯಲ್ಲಿ ಮರಿಯಾ ಸೈನ್ಯ (Legion of Mary) ರೋಮನ್ ಮಿಲಿಟರಿ ಮಾದರಿಯನ್ನು ಅನುಸರಿಸಲಾಗುತ್ತಿತ್ತು. ವಾಸ್ತವವಾಗಿ ರೋಮನ್ ಸಾಮ್ರಾಜ್ಯದಲ್ಲಿ ದೊಡ್ಡ ಸೈನ್ಯವನ್ನು ಸೂಚಿಸಲು 'ಲೀಜನ್' ಎಂಬ ಪದವನ್ನು ಬಳಸಲಾಗುತ್ತಿತ್ತು. 'ಪ್ರೆಸಿಡಿಯಮ್' (Precedium), 'ಕ್ಯೂರಿಯಾ'(Curia), 'ಕಾಮಿಶ್ಯಂ' (Comitiam), 'ಸೆನಾಟಸ್' (Senatus) 'ಕಾನ್ಸಿಲಿಯಮ್' (Concilium)ಮುಂತಾದ ರೋಮನ್ ಪದಗಳನ್ನು ಮರಿಯಾ ಸೇನೆಯ ವಿವಿಧ ಆಡಳಿತ ಮಂಡಳಿಗಳ ಮತ್ತು ಅಧಿಕಾರಿಗಳ ಹೆಸರನ್ನಾಗಿ ನೀಡಲಾಗಿವೆ.

'ಪ್ರೆಸಿಡಿಯಮ್' ಮರಿಯಾ ಸೈನ್ಯದ ಅತ್ಯಂತ ಚಿಕ್ಕ ಘಟಕವಾಗಿತ್ತು. ಬಿಷಪ್ ಅವರ ಒಪ್ಪಿಗೆಯೊಂದಿಗೆ ಇದನ್ನು ಸ್ಥಾಪಿಸಲಾಯಿತು. ಪ್ಯಾರಿಷ್‌ನ ಪಾದ್ರಿ ಅಥವಾ ಬಿಷಪ್ ನೇಮಿಸಿದ ಇನ್ನೊಬ್ಬ ವ್ಯಕ್ತಿ 'ಪ್ರೆಸಿಡಿಯಂ'ಗೆ ಆಧ್ಯಾತ್ಮಿಕ ಸಲಹೆಗಾರರಾಗಿ ಸೇವೆ

ಸಲ್ಲಿಸಿದರು. ಹೆಚ್ಚುವರಿಯಾಗಿ, ಪ್ರೆಸಿಡಿಯಂಗೆ ಒಬ್ಬರು ಅಧ್ಯಕ್ಷರು, ಒಬ್ಬರು ಉಪಾಧ್ಯಕ್ಷರು, ಒಬ್ಬರು ಕಾರ್ಯದರ್ಶಿ ಮತ್ತು ಖಜಾಂಚಿಗಳಿದ್ದರು. ಇದರ ಸಭೆಯನ್ನು ಪ್ರತಿ ವಾರ ನಿಗದಿತ ಸಮಯದಲ್ಲಿ ಕರೆಯಬೇಕಿತ್ತು. ಪ್ರೆಸಿಡಿಯಂ ಮೇಲ್ಪಟ್ಟದ ಸಮಿತಿಗಳ ವೆಚ್ಚದ ಹಣವನ್ನು ರಹಸ್ಯವಾಗಿ 'ಸಂಗ್ರಹಿಸಲಾಗುತ್ತಿತ್ತು(147:p7-12). 'ಕ್ಯೂರಿಯಾ' ಎರಡು ಅಥವಾ ಅದಕ್ಕೂ ಹೆಚ್ಚಿನ ಪ್ರೆಸಿಡಿಯಮ್‌ಗಳನ್ನು ನಿಯಂತ್ರಿಸುವ ಸಮಿತಿಯಾಗಿದೆ. ಇದು ಜಿಲ್ಲೆ ಮತ್ತು ನಗರಗಳಲ್ಲಿ ಮಾತ್ರ ಇರುತ್ತಿದ್ದವು. ಕ್ಯೂರಿಯಾ ತಿಂಗಳಿಗೊಮ್ಮೆ ಸಭೆ ಸೇರುತ್ತಿತ್ತು. ಪ್ರಸ್ತುತ ಸಭೆಯಲ್ಲಿ ಪ್ರೆಸಿಡಿಯಂನ ಎಲ್ಲಾ ಪದಾಧಿಕಾರಿಗಳು, ಆಧ್ಯಾತ್ಮಿಕ ಸಲಹೆಗಾರರು ಸಹ ಹಾಜರಿರಬೇಕಾಗಿತ್ತು. ಕ್ಯೂರಿಯಾದ ಆಧ್ಯಾತ್ಮಿಕತೆ ಮುಖ್ಯಸ್ಥರನ್ನು ಬಿಷಪ್ ನೇಮಿಸುತ್ತಾರೆ. ಒಂದು ಡಯಾಸಿಸ್ ಅಥವಾ ಧರ್ಮಪ್ರಾಂತ್ಯದ ಅಡಿಯಲ್ಲಿ ವೈವಿಧ್ಯ ಕ್ಯೂರಿಯಾಗಳನ್ನು ನಿಯಂತ್ರಿಸುವ ಸಮಿತಿಯೇ 'ಕಾಮಿಶ್ಯಂ'. ದೇಶದ ಎಲ್ಲಾ ಸ್ವಯಂಸೇವಕಸೇನಾ ಘಟಕಗಳ ಆಡಳಿತ ಮಂಡಳಿಯನ್ನು 'ಸೆನಾಟಸ್' ಎಂದು ಕರೆಯುತ್ತಾರೆ. ಐರ್ಲೆಂಡ್‌ನ ಡಬ್ಲಿನ್‌ನಲ್ಲಿರುವ 'ಮರಿಯಾ ಸೈನ್ಯ'ದ ಅತ್ಯುನ್ನತ ಆಡಳಿತ ಮಂಡಳಿ ಎನ್ನುವುದು 'ಕಾನ್ಸಿಲಿಯಮ್' ಆಗಿತ್ತು( 147:p7-12).

ಮರಿಯಸೈನ್ಯವು ಎರಡು ರೀತಿಯ ಸದಸ್ಯರನ್ನು ಹೊಂದಿತ್ತು. ಒಬ್ಬರು 'ಕಾರ್ಯ ನಿರ್ವಹಿಸುವ' ಸದಸ್ಯರು ಮತ್ತು ಮತ್ತೊಬ್ಬರು 'ಸಹಾಯ' ಮಾಡುವ ಸದಸ್ಯರು. ಹದಿನೆಂಟು ವರ್ಷದೊಳಗಿನ ಸದಸ್ಯರಿಗೆ ಅವಕಾಶ ಕಲ್ಪಿಸಲು ಜೂನಿಯರ್ ಪ್ರೆಸಿಡಿಯಮ್‌ಗಳನ್ನೂ (ಮಕ್ಕಳಸೈನ್ಯ ಶಾಖೆಗಳು) ರಚಿಸಲಾಗಿದೆ(148:p54). ಶೈಲಿ ಮತ್ತು ರಚನೆಯಲ್ಲಿ ಮರಿಯಾ ಸೈನ್ಯದಂತೆಯೇ ಇತ್ತು(78:p105). ಆದರೆ ಇದು ಮುಖ್ಯವಾಗಿ ಆಧ್ಯಾತ್ಮಿಕ ವಿಷಯಗಳ ಮೇಲೆ ಕೇಂದ್ರೀಕರಿಸಿದೆ. ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ಸಮಯದಲ್ಲಿ, ಮರಿಯಾ ಸೈನ್ಯವು ದೈವವಿಶ್ವಾಸಿಗಳಲ್ಲಿ ಕಮ್ಯುನಿಸ್ಟ್ ವಿರೋಧಿ ಭಾವನೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ಕಮ್ಯುನಿಸ್ಟ್ ವಿರೋಧಿ ಆಂದೋಲನಗಳಲ್ಲಿ ಬಹಳಷ್ಟು ಮಹಿಳೆಯರ ಭಾಗವಹಿಸುವಿಕೆಯ ವಿಚಾರದಲ್ಲಿ ಸೈನ್ಯವು ಯಶಸ್ವಿಯಾಯಿತು*.

## ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ದಳ (Anti Communist Volunteer Corps- ACVC)

ಸಾಮಾಜಿಕ ಸ್ಕೌಟ್ಸ್, ಶಾಂತಿಸೇನೆ/ಪೀಸ್ ಕಾರ್ಪ್ಸ್, ಕ್ರಿಸ್ಟೋಫರ್ ಮೂವ್ಮೆಂಟ್, ಮರಿಯಾ ಸೈನ್ಯ ಮುಂತಾದವುಗಳಲ್ಲದೆ, ಕೇರಳದ ಕೆಲವು ಭಾಗಗಳಲ್ಲಿ ಇನ್ನೂ ಕೆಲವು ಸ್ವಯಂಸೇವಾ ಸಂಘಟನೆಗಳು ಹುಟ್ಟಿಕೊಂಡಿವೆ. ತಿರುವನಂತಪುರಂನ ಹತ್ತಿರದ ಕರಾವಳಿಯ ಗ್ರಾಮಗಳಲ್ಲಿ ಕೆಲವು ಪ್ಯಾರಿಷ್‌ಗಳಲ್ಲಿ, ಕಮ್ಯುನಿಸ್ಟ್ ವಿರೋಧಿ

* ಪ್ರಸಿದ್ಧ ಬರಹಗಾರರಾದ ಶ್ರೀಮತಿ ಸಾರಾ ಜೋಸೆಫ್ ಅವರೊಂದಿಗೆ ತ್ರಿಶೂರ್ ಮುಳಂಕುನ್ನತ್ ಕಾವ್‌ನಲ್ಲಿರುವ ಅವರ ನಿವಾಸದಲ್ಲಿ,18 ಅಕ್ಟೋಬರ್ 2009ರಂದು ಸಂದರ್ಶನ ನಡೆಸಲಾಯಿತು.

ಸ್ವಯಂಸೇವಕ ಸಂಘ (ACVC) ಎನ್ನುವ ಹೆಸರಿನ ಸಂಘಟನೆಯು ಹುಟ್ಟಿಕೊಂಡಿತು. ಕ್ರಿಶ್ಚಿಯನ್ ಸಮುದಾಯದಲ್ಲಿರುವ ಮಧ್ಯಮ ವರ್ಗದ ಜನರು ಇದರ ಸದಸ್ಯರಾಗಿ ಸೇರಿಕೊಂಡರು. ಏಕೆಂದರೆ ಕ್ರಿಸ್ಟೋಫರ್ ಚಳವಳಿಯ ಬಹುತೇಕ ಸದಸ್ಯರು ಕ್ರಿಶ್ಚಿಯನ್ ಸಮುದಾಯದ ಬಡ ಮತ್ತು ಹಿಂದುಳಿದ ವರ್ಗಗಳಿಂದ ಬಂದವರು. ಮಾತ್ರವಲ್ಲ, ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ಗುಂಪುಗಳಿಗೆ ಜಾತ್ಯತೀತ ಸ್ವಭಾವವಿತ್ತು. ಅದರ ಸಂಘಟಕರು, ಇತರ ಸಮುದಾಯಗಳಿಂದ ಬರುವ ಜನರ ಅನುಮಾನಗಳನ್ನು ನಿವಾರಿಸಲು ಬಯಸಿದ್ದರು. ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ಸಂಘದ(ACVC) ಸದಸ್ಯರಿಗೆ ಕ್ರೀಡೆ ಮತ್ತು ಶಸ್ತ್ರಾಸ್ತ್ರ ತರಬೇತಿ ನೀಡಲು, ಚರ್ಚ್‌ಗಳು ತಮ್ಮ ಸ್ವಂತ ಖರ್ಚಿನಲ್ಲಿ ತಮಿಳುನಾಡಿನ ಕಳರಿ ವಿದ್ಯೆಯ ಆಶಾನರನ್ನು (ನಿಪುಣರನ್ನು) ಇಲ್ಲಿಗೆ ಕರೆತರಲಾಯಿತು.*(78:p102)

## ಕುರುವಡಿ ಸೇನೆ (ಲಾಠಿ ಸೇನೆ)

ಆಗಿನ ಕಾಲದಲ್ಲಿ, ತ್ರಿಶೂರ್ ಮತ್ತು ಆಲಪ್ಪುಳ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಅಸ್ತಿತ್ವದಲ್ಲಿರುವ ಖಾಸಗಿ ನಾಗರಿಕ ಸೇನೆಯನ್ನು 'ಕುರುವಡಿಸೇನೆ ಅಥವಾ ಲಾಠಿ ಸೈನ್ಯ' ಎಂದು ಕರೆಯಲಾಗುತ್ತಿತ್ತು. 'ಕುರುವಡಿ' ಪ್ರಯೋಗದಲ್ಲಿ ಈ ಸೈನ್ಯಕ್ಕೆ ವಿಶೇಷ ತರಬೇತಿ ದೊರೆತಿರುತ್ತದೆ. ಹುಣಸೆ ಮರದ ಕೊಂಬೆಗಳನ್ನು ಪ್ರಮುಖವಾಗಿ ಈ ಕುರುವಡಿ ಅಥವಾ ಸಣ್ಣಕೋಲುಗಳಾಗಿ ಬಳಸಲಾಗುತ್ತಿತ್ತು. ಈ ಖಾಸಗಿ ಕೂಲಿಸೈನಿಕರಿಗೆ ಜಮೀನುದಾರರು ಆಹಾರ ಮತ್ತು ವೇತನವನ್ನು ಒದಗಿಸುತ್ತಿದ್ದರು. ಕಮ್ಯುನಿಸ್ಟ್ ಸರ್ಕಾರವು ಶೀಮಕೊನ್ನವನ್ನು (Gliricidia) ಬೆಳೆಸಲು ನಡೆಸಿದ ಪ್ರಯತ್ನಗಳು ಈ ಸೈನ್ಯಕ್ಕೆ ಬಹಳ ಪ್ರಯೋಜನಕಾರಿಯಾದವು. ಏಕೆಂದರೆ ಹಿಂಸಾತ್ಮಕ ಪ್ರದರ್ಶನಗಳು ಮತ್ತು ಇತರ ವಿಧ್ವಂಸಕ ಚಟುವಟಿಕೆಗಳಿಗೆ ಅಗತ್ಯವಿರುವ ಕೋಲುಗಳನ್ನು ಅವರಿಗೆ ಸುಲಭವಾಗಿ ಸಂಗ್ರಹಿಸಲು ಸಾಧ್ಯವಾಯಿತು.** ಅವರು ಜಾಥಾ ಮತ್ತು ಪ್ರದರ್ಶನಗಳನ್ನು ನಡಸುವಾಗ ಕುರುವಡಿಯ/ಕೋಲಿನ ತುದಿಗೆ ಚಿಕ್ಕ ಧ್ವಜವನ್ನು ಕಟ್ಟಿ, ದ್ವೇಷವನ್ನು ಹರಡುವಂಥ ಪ್ರಚೋದನಕಾರಿ ಘೋಷಣೆಗಳನ್ನು ಕೂಗುತ್ತಿದ್ದರು.

## ನಿರಣಂ ಸೈನ್ಯ

ಇಳಂಞಿಕಲ್ ಜಾನ್ ಜೇಕಬ್‌ನ (ನಿರಣಂ ಬೇಬಿ) ಅಧೀನದಲ್ಲಿದ್ದ ನಿರಣಂ ಸೈನ್ಯವು ಗೂಂಡಾಗಳ ಒಂದು ಗುಂಪಾಗಿತ್ತು. ಬಹಳಷ್ಟು ಭೂಮಿಗಳ ಮಾಲೀಕನಾಗಿದ್ದ

---

* ಶ್ರೀ. ಸ್ಟೀಫನ್ ಪೆರೇರಾ ಅವರೊಂದಿಗೆ ಚೆರಿತುರ ಅವರ ನಿವಾಸದಲ್ಲಿ ಸಂದರ್ಶನವನ್ನು ಜನವರಿ 1, 2010ರಂದು ನಡೆಸಲಾಯಿತು

** ಶ್ರೀ. ವರ್ಗೀಸ್ ಕಲ್ಲರಯ್ಕಲ್‌ರೊಂದಿಗೆ ತ್ರಿಶೂರ್‌ನ ಅವರ ನಿವಾಸದಲ್ಲಿ ಸಂದರ್ಶನವನ್ನು 19 ಅಕ್ಟೋಬರ್ 2009ರಲ್ಲಿ ನಡೆಸಲಾಯಿತು

ಆತ, ವಜಾಗೊಂಡ ಒಬ್ಬ ಮಿಲಿಟರಿ ಅಧಿಕಾರಿ ಕೂಡ ಆಗಿದ್ದ. ಅವನ ಗೂಂಡಾಗಳು ಬಡ ಕೃಷಿಕಾರ್ಮಿಕರನ್ನು ಹಿಂಸಿಸುವುದರಲ್ಲಿ ಸಂತೋಷವನ್ನು ಕಾಣುತ್ತಿದ್ದ(145:p38). ಕುಟ್ಟನಾಡ್, ತಿರುವಲ್ಲಾ ಮತ್ತು ಇತರೆಡೆಗಳಲ್ಲಿ ಬಡ ಕೃಷಿಕಾರ್ಮಿಕರು ಆಗಾಗ್ಗೆ ಈ ಗೂಂಡಾಗಳ ಕಿರುಕುಳವನ್ನು ಸಹಿಸಬೇಕಾಗಿತ್ತು.ಈ ಸೂಚಿಸಿದ ಪ್ರದೇಶಗಳ ಶ್ರೀಮಂತ ಭೂಮಾಲೀಕರು ಈ ಗೂಂಡಾ ಸೈನ್ಯವನ್ನು ಪೋಷಿಸುತ್ತಿದ್ದರು(107:23.03.58).

## ಕುರೂರು ಸೇನೆ

ಕುರೂರ್ ನೀಲಾಕಂಠನ್ ನಂಬೂದಿರಿ ಅವರು ತ್ರಿಶೂರ್ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದಾಗ, ಅವರ ನೇತೃತ್ವದಲ್ಲಿ ರೂಪುಗೊಂಡಂಥ ಸೈನ್ಯವನ್ನು 'ಕುರೂರ್ ಸೇನೆ' ಎಂದು ಕರೆಯಲಾಗುತ್ತಿತ್ತು. ಕಮ್ಯುನಿಸ್ಟ್ ವಿರೋಧಿರಂಗ ಮತ್ತು ಪೊಲೀಸರ ನಡುವಿನ ಘರ್ಷಣೆಗೆ ಸಂಬಂಧಿಸಿದಂತೆ, ಆಗಸ್ಟ್ 8, 1958ರಂದು ಫಾದರ್ ವಡಕ್ಕನ್ ನಡೆಸಿದ ಉಪವಾಸ ಸತ್ಯಾಗ್ರಹದ ಸ್ವಲ್ಪ ಸಮಯದ ನಂತರದಲ್ಲೇ ಈ ಕುರೂರ್ ಸೈನ್ಯ ಹೊರಹೊಮ್ಮಿದ್ದು(46:p124).

'ಟೊಪ್ಪಿಪಾಲ ಸಂಘಗಳು' ಮುಖ್ಯವಾಗಿ (ಅಡಕೆ ಹಾಳೆಗಳ ಟೋಪಿಗಳನ್ನು ಧರಿಸಿದ ರೈತರು) ಕ್ರೈಸ್ತ ಸಮುದಾಯದಕ್ಕೆ ಸೇರಿದ ರೈತರಾಗಿದ್ದರು. ಇವರು ಕೆಲವೊಮ್ಮೆ ಮಧ್ಯ ತಿರುವಾಂಕೂರಿನ ಕೆಲವು ಸ್ಥಳಗಳಲ್ಲಿ ಸಂಘಟನೆಗೊಳ್ಳುತ್ತಾ, ಮೊದಲ ಕಮ್ಯುನಿಸ್ಟ್ ಸರ್ಕಾರದ ನೀತಿಗಳ ಮತ್ತು ಸರ್ಕಾರ ಕೈಗೊಂಡಂಥ ಆಡಳಿತಾತ್ಮಕ ಕ್ರಮಗಳ ವಿರುದ್ಧ ಪ್ರತಿಭಟನಾ ಪ್ರದರ್ಶನಗಳನ್ನು ನಡೆಸಿದರು(35:p324-325).

## ಕ್ಯಾಥೋಲಿಕ್ ಚರ್ಚ್‌ಗಳು ಮತ್ತು ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್

ಕೇರಳದಲ್ಲಿ ಕ್ಯಾಥೋಲಿಕ್ ಕ್ರಿಶ್ಚಿಯನ್ನರ ಧಾರ್ಮಿಕ ಸಮುದಾಯದ ಸಂಘಟನೆ ಎನ್ನುವುದು, ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್ ಆಗಿತ್ತು. ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಕಮ್ಯುನಿಸ್ಟ್ ವಿರೋಧಿ ಭಾವನೆ ಮತ್ತು ಕ್ರಿಶ್ಚಿಯನ್‌ರಲ್ಲಿ ಜನಾಂಗೀಯ ದ್ವೇಷವನ್ನು ಬೆಳಗಿಸುವುದರ ವಿಚಾರದಲ್ಲಿ ಈ ಸಂಘಟನೆಯು ನಿರ್ಣಾಯಕ ಪಾತ್ರವನ್ನು ವಹಿಸಿತ್ತು. ಕ್ರಿಶ್ಚಿಯನ್ ಚರ್ಚ್ ಮತ್ತು ಇದರ ಶಾಖೆಯಾದ ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್ ಸೇರಿ, ಕಮ್ಯುನಿಸ್ಟ್ ಸರ್ಕಾರದ ಎಲ್ಲಾ ಪ್ರಗತಿಪರ ಆಡಳಿತಾತ್ಮಕ ಕ್ರಮಗಳನ್ನು ತೀವ್ರವಾಗಿ ವಿರೋಧಿಸಿತು. ಕೇರಳದಲ್ಲಿ ಹಿಂದಿನ ಶೈಕ್ಷಣಿಕ ಸುಧಾರಣೆಗಳನ್ನು ನಿರ್ದಯವಾಗಿ ವಿರೋಧಿಸಿದ್ದ ಪರಂಪರೆಯನ್ನು ಅದು ಹೊಂದಿತ್ತು.*(153:)

---

* ತಿರುವಾಂಕೂರಿನ ದಿವಾನರಾಗಿದ್ದ ಸರ್ ಸಿ.ಪಿ.ರಾಮಸ್ವಾಮಿ ಅಯ್ಯರ್‌ರವರು 1945ರಲ್ಲಿ ಖಾಸಗಿ ಶಾಲೆಗಳನ್ನು ರಾಷ್ಟ್ರೀಕರಣಗೊಳಿಸುವುದನ್ನು ಮತ್ತು ಶೈಕ್ಷಣಿಕ ಸುಧಾರಣೆಗಳನ್ನು ಕೈಗೊಳ್ಳುವುದಕ್ಕೆ ಪ್ರಯತ್ನಿಸಿದಾಗ, ಕ್ಯಾಥೋಲಿಕ್ ಚರ್ಚ್.ಧಾರ್ಮಿಕ ಸಂಘಟನೆಯಾದ

1957ರಲ್ಲಿ ಪ್ರೊಫೆಸರ್ ಜೋಸೆಫ್ ಮುಂಡಸ್ಸೆರಿ ಅವರು ಮಂಡಿಸಿದ್ದ ಕೇರಳ ಶಿಕ್ಷಣ ಮಸೂದೆಯನ್ನು ಕೇರಳ ವಿಧಾನಸಭೆ ಅಂಗೀಕರಿಸಿದ್ದು, ಅದನ್ನು ಕ್ರಿಶ್ಚಿಯನ್ ಚರ್ಚ್ ಮತ್ತು ಅದರ ಅಂಗಸಂಸ್ಥೆಗಳು, ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್, ಕೇರಳ ಸ್ಕೂಲ್ ಮ್ಯಾನೇಜರ್ಸ್ ಅಸೋಸಿಯೇಷನ್ ಮುಂತಾದವು ನಖಶಿಖಾಂತವಾಗಿ ವಿರೋಧಿಸಿದ್ದವು. ಅವರ ಅಡಿಯಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದವು. ಕೇರಳದಲ್ಲಿ ಕ್ಯಾಥೋಲಿಕರು ಅತ್ಯಂತ ಭೀಕರ ಬಿಕ್ಕಟ್ಟನ್ನು(108:07.01.58) ಎದುರಿಸುತ್ತಿದ್ದಾರೆಂದು, ಕ್ಯಾಥೋಲಿಕ್ ಸಮ್ಮೇಳನದಲ್ಲಿ, 1957ರ ಶಿಕ್ಷಣ ಮಸೂದೆಯನ್ನು ಉಲ್ಲೇಖಿಸಿ, ವಾರಪ್ಪುಳದ ಆರ್ಚ್ ಬಿಷಪ್ ಡಾ. ಜೋಸೆಫ್ ಅತ್ತಿಪೆಟ್ಟಿ ಪ್ರಸ್ತಾಪಿಸಿದ್ದರು. *'ಕಮ್ಯುನಿಸ್ಟ್ ಸರಕಾರದ ಮೊದಲ ದುಷ್ಟ ಸಂತಾನವಾಗಿದೆ ಈ ಕೇರಳ ಶಿಕ್ಷಣ ಮಸೂದೆ'* ಎಂದು ಅವರು ತಮ್ಮ ಮಾತುಗಳನ್ನು ಮುಂದುವರಿಸುತ್ತಾ ಹೇಳಿದ್ದರು(108:07.01.58). ಇಂಡಿಯನ್ ಕ್ಯಾಥೋಲಿಕ್ ಯೂನಿಯನ್ ಮತ್ತು ಕೇರಳ ಕ್ಯಾಥೋಲಿಕ್ ಕಾಂಗ್ರೆಸ್‌ನ ಜಂಟಿ ಸಭೆಯು ಜನವರಿ 5, 6 ಮತ್ತು 7, 1958ರಂದು ನಡೆಯಿತು. ಶಿಕ್ಷಣ ಮಸೂದೆಯ ವಿರುದ್ಧ ಭಾರತದಾದ್ಯಂತ ಕ್ಯಾಥೋಲಿಕರು 'ಕೇರಳ ದಿನ'ವನ್ನು ಆಚರಿಸುತ್ತಿರುವುದನ್ನು ಮೇಲಿನ ಸಮ್ಮೇಳನವು ಮುಕ್ತವಾಗಿ ಶ್ಲಾಘಿಸಿತು(108:08.01.58). ಶಿಕ್ಷಣ ಮಸೂದೆಯ ಉದ್ದೇಶ ಮತ್ತು ಅದರ ಒಳಗಿರುವ ವಿಚಾರಗಳ ಬಗ್ಗೆ ಸಾಮಾನ್ಯ ಕ್ರಿಶ್ಚಿಯನ್ನರ ದಾರಿತಪ್ಪಿಸಲು ಎಲ್ಲಾ ಹಂತಗಳಲ್ಲಿ ವ್ಯಾಪಕ ಪ್ರಚಾರ ನಡೆಯಿತು. ಕೊಟ್ಟಾಯಂನ ಆರ್ಚ್ ಡಯಾಸ್ನಲ್ಲಿ ಬಿಷಪ್ ತರಾಯಿಲ್‌ರ ಮಾತುಗಳನ್ನು ಉಲ್ಲೇಖಿಸುವುದಾದರೆ:

> "ಕ್ಯಾಥೋಲಿಕ್ ಚರ್ಚ್ ಮತ್ತು ಕಮ್ಯುನಿಸಂ ಎನ್ನುವ ಎರಡು ಸಂಘಟನೆಗಳು ಕ್ರಮವಾಗಿ ದೇವರ ಪರ ಮತ್ತು ವಿರೋಧಿಯಾಗಿ ನಿಲ್ಲುವಂಥವು. ಇವೆರಡರ ನಡುವೆ ಸಂಘರ್ಷ ಅನಿವಾರ್ಯ. ಕಮ್ಯುನಿಸ್ಟ್ ಸರಕಾರ ತಂದ ಶಿಕ್ಷಣ ಮಸೂದೆಯಲ್ಲಿ ಅಡಗಿಸಿಟ್ಟ ವಿಷಗುಳಿಗೆಯಾದ ನಾಸ್ತಿಕತೆಯನ್ನು ಕಲಿಸುವುದಕ್ಕೆ ನಮ್ಮ ವಿರೋಧವಿದೆ. ಅದಕ್ಕಾಗಿಯೇ ನಾವು ಶಿಕ್ಷಣ ಮಸೂದೆಯನ್ನು ಮುಖ್ಯವಾಗಿ ವಿರೋಧಿಸುತ್ತಿರುವುದು(108:07.01.58).

ಶಿಕ್ಷಣ ಮಸೂದೆ 1958ರಲ್ಲಿ ಎಂತಹ ನಾಸ್ತಿಕತೆ ಅಡಗಿಕೊಂಡಿದೆ ಎನ್ನುವ ವಿಚಾರವು ಬಿಷಪ್ ತರಾಯಿಲ್ ಮತ್ತು ಅವರ ಅನುಯಾಯಿಗಳಿಗೆ ಮಾತ್ರ ತಿಳಿದಿತ್ತು. ಬಡ ಕ್ರಿಶ್ಚಿಯನ್ನರಲ್ಲಿ ವರ್ಣಭೇದ ನೀತಿಯನ್ನು ಉತ್ತೇಜಿಸುವುದಕ್ಕೂ ಅವರ ಬೆಂಬಲವನ್ನು ಪಟ್ಟಭದ್ರ ಹಿತಾಸಕ್ತಿಗಳಿಗೆ ಅನುಕೂಲಕರವನ್ನಾಗಿಸಿ ಬದಲಿಸಿಕೊಳ್ಳುವುರ ಸಲುವಾಗಿಯೂ ಕೇರಳ ಶಿಕ್ಷಣ ಮಸೂದೆ, 1957ರ ಉದ್ದೇಶಗಳನ್ನು ಮೇಲಿನ ಪ್ರಚಾರಕರು ತಪ್ಪಾಗಿ ಅರ್ಥೈಸುತ್ತಿದ್ದಾರೆ. ಪ್ರೊ.ಥಾಮಸ್ ಶ್ರೀನಿವಾಸನ್ ಹೀಗೆ ಬರೆಯುತ್ತಾರೆ:

---

ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್ ಕೂಡ ಅದನ್ನು ವಿರೋಧಿಸಿ ಬಿರುಸಿನ ಪ್ರಚಾರವನ್ನು ನಡೆಸಿತು.

ಶ್ರೀ ಪನಂಪಲ್ಲಿ ಗೋವಿಂದ ಮೆನನ್ 1955ರಲ್ಲಿ, ತಿರು-ಕೊಚ್ಚಿಯಲ್ಲಿ ಜಾರಿಗೆ ತರಲು ಪ್ರಯತ್ನಿಸಿದ ಶೈಕ್ಷಣಿಕ ಸುಧಾರಣೆಗಳನ್ನು ಚರ್ಚ್ ಬಲವಾಗಿ ವಿರೋಧಿಸಿತು.

"ಕೇರಳದಲ್ಲಿ ಕ್ರಿಶ್ಚಿಯನ್ ಶಾಲೆಗಳನ್ನು ನಿರ್ಮೂಲನೆ ಮಾಡಲು ಬಂದ ಮಾರುವೇಷದ ವಂಚನಾ ಮಸೂದೆಯಿದು(108:22.06.58).

ಭೂಸುಧಾರಣೆಯ ವಿಷಯದಲ್ಲಿ ಅತ್ಯಂತ ಪ್ರತಿಗಾಮಿ ನಿಲುವನ್ನು ತೆಗೆದುಕೊಂಡಿದ್ದು ಸಹ, ಈ ಚರ್ಚ್‌ಗಳು ಮತ್ತು ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್‌ನಂತವುಗಳೇ ಆಗಿದ್ದವು. ಅವರು ಕೇರಳ ಕೃಷಿ ಸಂಬಂಧಗಳ ಮಸೂದೆ, 1958 ಅನ್ನು ಶಕ್ತವಾಗಿ ಎದುರಿಸಿದ್ದರು(32:20.02.58). ಮಸೂದೆಯ ಬಗ್ಗೆ ದೀಪಿಕಾ ದಿನಪತ್ರಿಕೆಯು ಹೀಗೆ ಬರೆಯಿತು:

"1958ರಲ್ಲಿ ಕೇರಳ ಎದುರಿಸುತ್ತಿರುವ ದೊಡ್ಡ ಸಮಸ್ಯೆಯೆನ್ನುವುದು ಕಮ್ಯುನಿಸ್ಟ್ ಪಕ್ಷದ ಭೂಸುಧಾರಣಾ ಮಸೂದೆಯೇ ಆಗಿದೆ(108:01.01.58).

ಯೋಜಿತ ಆರ್ಥಿಕತೆಯ ನೆಪದಲ್ಲಿ ಕೇರಳದಲ್ಲಿ ಪ್ರಜಾಪ್ರಭುತ್ವವನ್ನು ಬಲಿಕೊಡಲು ಹೊರಟಿದೆ ಎಂಬ ಅನುಮಾನದ ಸಂದೇಶದೊಂದಿಗೆ ಸಂಪಾದಕೀಯ ಕೊನೆಗೊಂಡಿತ್ತು.

ಕೃಷಿ ಸಂಬಂಧ ಮಸೂದೆಯ ವಿರುದ್ದದ ಚರ್ಚುಗಳ ದಾಳಿಯೆನ್ನುವುದು, ಕಮ್ಯುನಿಸ್ಟ್ ಪಕ್ಷ ಮತ್ತು ಅದರ ಸರ್ಕಾರದ ವಿರುದ್ಧದ ರಾಜಕೀಯ ಆಕ್ರಮಣದ ಭಾಗವಾಗಿತ್ತು. ಕ್ರಿಶ್ಚಿಯನ್ ಏಜೆನ್ಸಿಗಳು ಮಾಡಿದ ವಿವಿಧ ಪ್ರಸ್ತಾಪಗಳಿದ ಈ ಸತ್ಯವು ಸ್ಪಷ್ಟಗೊಳ್ಳುತ್ತದೆ. ಕಮ್ಯುನಿಸ್ಟ್ ನೀತಿಪ್ರಜ್ಞೆಯನ್ನೂ ನೈತಿಕಪ್ರಜ್ಞೆಯನ್ನೂ ಟೀಕಿಸಿದ ಅವರು, ಸಂಘಟಿತರಾಗಿ ಕಮ್ಯುನಿಸ್ಟ್ ಪಕ್ಷದ ವಿರುದ್ಧ ಹೋರಾಡಲು ಪ್ರೇರೇಪಿಸಿದರು(108:02.02.58).

ಚರ್ಚ್‌ಗಳು ಉದ್ದೇಶಪೂರ್ವಕವಾಗಿ, ಕೃಷಿ ಸಂಬಂಧಗಳ ಮಸೂದೆ, ಸರ್ಕಾರ ಮತ್ತು ಕಮ್ಯುನಿಸ್ಟ್ ಪಕ್ಷದ ವಿರುದ್ಧ ಸಾಧ್ಯವಿರುವ ಎಲ್ಲ ವಿಧಾನಗಳನ್ನು ಬಳಸುತ್ತಾ ಅಪಪ್ರಚಾರಗಳ ಸರಮಾಲೆಗಳನ್ನು ತೊಡಿಸುತ್ತಾ ಮುಂದುವರಿಯುತ್ತಿತ್ತು. ಈ ಅಪಪ್ರಚಾರದ ಅಭಿಯಾನ, ಕೋಮುವಾದಿ ಶಕ್ತಿಗಳ ಕ್ರೋಢೀಕರಣದಲ್ಲೂ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಹಿಂಸಾತ್ಮಕ ಹೋರಾಟದಲ್ಲೂ ಕೊನೆಗೊಳ್ಳುವುದಕ್ಕೆ ತೆರೆದುಕೊಂಡಿತು.

ಪಟ್ಟಭದ್ರ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಚರ್ಚುಗಳ ದಾಳಿ, ಶಿಕ್ಷಣ ಮಸೂದೆ ಮತ್ತು ಕೃಷಿ ಸಂಬಂಧಗಳ ಮಸೂದೆಗಳ ಮೇಲೆ ಮಾತ್ರವಾಗಿ ಸೀಮಿತವಾಗಿರಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಕೇರಳದ ಚೀಟಿ ಮಸೂದೆ, ಕೃಷಿಸಾಲ ತಡೆ ಕಾನೂನು, ಪಂಚಾಯತ್ ಮಸೂದೆ ಮತ್ತು ಗ್ರಂಥಾಲಯ ನಿಯಮಗಳೇ ಮುಂತಾದವುಗಳೆಲ್ಲವನ್ನು ಸಹ ಕಟುವಾಗಿ ವಿರೋಧಿಸಿದರು(154:V2No2307.06.59). ಲೈಬ್ರರಿ ನಿಯಮಗಳನ್ನು ವಿರೋಧಿಸುವುದಕ್ಕಾಗಿ ಪ್ರೊಫೆಸರ್ ಜೋಸೆಫ್ ಮುಂಡಸ್ಸೆರಿ ವಿರುದ್ಧ ವೈಯಕ್ತಿಕ ದಾಳಿ ನಡೆಸಲು ತಮ್ಮದೇ ಏಜೆಂಟರನ್ನು ಕಂಡುಕೊಂಡರು. ಪ್ರೊ. ಮುಂಡಸ್ಸೆರಿಯವರ ಮಾನಹಾನಿಯಾಗುವಂತೆ ದೀಪಿಕಾ ಪತ್ರಿಕೆ, ವೆಟ್ಟೂರ್ ರಾಮನ್ ನಾಯರ್ ಅವರ

ಲೇಖನವೊಂದನ್ನು ಪ್ರಕಟಿಸಿತು(35:p370). ಈ ನಿಯಮಗಳಿಂದ ಗ್ರಂಥಾಲಯ ಸಂಘದ ಅಸ್ತಿತ್ವಕ್ಕೆ ಧಕ್ಕೆ ಉಂಟಾಗುವಂತಿದೆ ಎಂದು, 'ಮುಂಡಶ್ಯೇರಿಯವರ ಪ್ರಜಾಪ್ರಭುತ್ವ'ಎನ್ನುವ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಲೇಖನ ಪ್ರಸ್ತಾಪಿಸಿತು. ಮಾತ್ರವಲ್ಲ, ವೆಟ್ಟೂರ್ ರಾಮನ್ ನಾಯರ್ ಅವರು ಮುಂದುವರಿಸುತ್ತಾ,'ಈ ಕಾನೂನುಗಳನ್ನು ರಚಿಸುವಲ್ಲಿ ವೈಯಕ್ತಿಕ ದ್ವೇಷ ಮತ್ತು ವ್ಯಾಪಾರಿ ಹಿತಾಸಕ್ತಿಗಳಿಂದ ಮುಂಡಸ್ಸೆರಿ ಪ್ರಭಾವಿತರಾಗಿದ್ದರು', ಎಂದು ಬರೆದಿದ್ದರು(108:02.02.58;07.03.58).

1958ರಲ್ಲಿ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರವು 'ವರದಕ್ಷಿಣೆ ನಿಷೇಧ ಕಾಯಿದೆ'ಯೊಂದನ್ನು ವಿಧಾನಸಭೆಯಲ್ಲಿ ಮಂಡಿಸಿತು. ಕಾಂಗ್ರೆಸ್ ಪಕ್ಷ, ಪಿಎಸ್‌ಪಿ ಮತ್ತು ಕ್ಯಾಥೋಲಿಕ್ ಚರ್ಚ್‌ಗಳಂಥ ಪಟ್ಟಭದ್ರ ಹಿತಾಸಕ್ತಿಗಳಿಂದ ಕೂಡಿದ್ದ ಶಕ್ತಿಗಳು, ಈ ಮಸೂದೆಯ ವಿರುದ್ಧ ಸಾಲುಗಟ್ಟಿ ನಿಂತರು. ದೀಪಿಕಾ ತನ್ನ ಸಂಪಾದಕೀಯದ ಮೂಲಕ ಕ್ರಿಶ್ಚಿಯನ್ನರ ಅಭಿಪ್ರಾಯ ತಮ್ಮ ಪರವಾಗಿರುವಂತೆ ಅದನ್ನು ಕ್ರೋಢೀಕರಿಸಲು ಪ್ರಯತ್ನಿಸಿತು. ಕ್ರಿಶ್ಚಿಯನ್ ಪೋಷಕರ ಪರವಾಗಿ ದೀಪಿಕಾ ಹೇಳಿದ್ದು ಹೀಗೆ:

> "ತಮ್ಮ ಮಕ್ಕಳನ್ನು ಪೋಷಿಸುವುದು, ಅವರಿಗೆ ಶಿಕ್ಷಣ ನೀಡುವುದು ಮತ್ತು ಅವರಿಗೆ ಸೂಕ್ತವಾದ ಉದ್ಯೋಗವನ್ನು ಹುಡುಕುವುದು, ಇವುಗಳೆಲ್ಲವೂ ಪೋಷಕರ ಕರ್ತವ್ಯವಾಗಿರುತ್ತದೆ. ಖಂಡಿತವಾಗಿ ಇವುಗಳೆಲ್ಲವೂ ಗಂಭೀರವಾದ ಜವಾಬ್ದಾರಿಗಳಾಗಿವೆ. ಆದ್ದರಿಂದ ವರದಕ್ಷಿಣೆ ನಿಷೇಧ ವಿಧೇಯಕವು ಪೋಷಕರನ್ನು ಸಮಾಧಾನಪಡಿಸುವ ಉದ್ದೇಶದಿಂದ ಕೂಡಿದೆ ಎಂದು ಹೇಳುವುದರಲ್ಲಿ ಯಾವುದೇ ಅರ್ಥವಿಲ್ಲ(108:07.03.58).

ಕ್ರಿಶ್ಚಿಯನ್ ಮಹಿಳೆಯರನ್ನು ಪ್ರಚೋದಿಸಲು, ಅವರು ಬರೆಯುತ್ತಾರೆ:

> "ಕಮ್ಯುನಿಸ್ಟ್ ಶಾಸನ ನಿರ್ಮಾಕರು ಇದೀಗ ಮಹಿಳೆಯರ ನೇರಕ್ಕೆ ಪ್ರಯೋಗಿಸಲು ತಂತ್ರಗಳನ್ನು ರೂಪಿಸಿದ್ದಾರೆ"(108:07.03.58).

ಕ್ರಿಶ್ಚಿಯನ್ನರನ್ನು ನಾಮಾವಶೇಷ ಮಾಡಲು ಈ ಮಸೂದೆ ಗುರಿಯಾಗಿಸಿಕೊಂಡಿದೆ, ಎಂದು ಪರೋಕ್ಷವಾಗಿ ಸೂಚಿಸಿತು. ಮತ್ತೆ ಅದನ್ನು ಉಲ್ಲೇಖಿಸುವುದಾದರೆ,

> "ಇಡೀ ದೇಶದಲ್ಲಿ ವಿನಾಶವನ್ನು ಉಂಟುಮಾಡುವುದರ ಬದಲು, ಕ್ರಿಶ್ಚಿಯನ್ನರನ್ನು ನಾಶಮಾಡುವುದೇ ಅವರ ಗುರಿಯಾಗಿದ್ದರೆ, ಬೇರೆ ಮಾರ್ಗಗಳನ್ನು ನೋಡಿಕೊಳ್ಳಲಿ(108:07.03.58).

ಕುಟುಂಬ ಯೋಜನೆ ಮತ್ತು ಜನನ ನಿಯಂತ್ರಣಗಳ ಕ್ಷೇತ್ರದಲ್ಲಿಯ ಕಾರ್ಯಸಾಧ್ಯತೆಗಾಗಿ ಕಮ್ಯುನಿಸ್ಟ್ ಪಕ್ಷವನ್ನು ಬೆದರಿಸುವ ಅವಕಾಶವನ್ನು ದೀಪಿಕಾ ಪತ್ರಿಕೆ ಬಳಸಿಕೊಂಡಿತು. ಪತ್ರಿಕೆಯು ಹೀಗೆ ಬರೆದಿದೆ:

> "ಜನನ ನಿಯಂತ್ರಣದ ಪ್ರತಿಪಾದಕರು ಕ್ಯಾಥೋಲಿಕ್‌ರನ್ನು ಮತ್ತು ಕಮ್ಯುನಿಸ್ಟರನ್ನು ಒಂದೇ ತರಹ ವಿರೋಧಿಸುತ್ತಾರೆ. ಆದರೆ ಇಲ್ಲಿ ಕಮ್ಯುನಿಸ್ಟರು ಗರ್ಭ ನಿರೋಧಕರ

ಪಾಳೆಯದಲ್ಲಿ ಸೇರಿಕೊಂಡಿದ್ದಾರೆ"(108:01.04.58).

ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು, ಕೇರಳದ ಕ್ರಿಶ್ಚಿಯನ್ ಚರ್ಚ್ ಕಮ್ಯುನಿಸ್ಟ್ ವಿರೋಧಿ ರಾಜಕೀಯ ಅಭಿಯಾನದಲ್ಲಿ ಸಕ್ರಿಯವಾಗಿ ಭಾಗವಹಿಸಿತು. ವಿದೇಶದ ಸಂಘಟಿತ ಚರ್ಚುಗಳಂತೆ ಭಾರತೀಯ ಚರ್ಚುಗಳು ಸಹ ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆಯನ್ನು ಸಹಿಸಲಿಲ್ಲ(93:p46). ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷವು ರಾಜಕೀಯ ನಿಯಂತ್ರಣವನ್ನು ಪಡೆದುಕೊಳ್ಳುತ್ತಿದ್ದಂತೆ, ಚರ್ಚ್‌ಗಳ ಮಾನಸಿಕ ಪ್ರಕ್ಷುಬ್ಧತೆಗೆ ತೆರೆದ ರಾಜಕೀಯ ಪ್ರಚಾರದ ಸ್ವಭಾವ ಮೈಗೂಡಿಸಿಕೊಂಡಿತು(93:p46). ಕಮ್ಯುನಿಸ್ಟ್ ಪಕ್ಷದ ಅಧಿಕಾರದ ಆರೋಹಣವು, ಅವರಿಗೆ ಬಹಳ ಸಂಕಟವನ್ನು ಉಂಟುಮಾಡಿತು. ಕೇರಳದ ಕ್ಯಾಥೋಲಿಕ್ ಸಮ್ಮೇಳನದಲ್ಲಿ ವಾರಪುಳದ ಆರ್ಚ್ ಬಿಷಪ್ ನೀಡಿರುವ ಹೇಳಿಕೆಯಿಂದ ಇದು ಸ್ಪಷ್ಟವಾಗಿದೆ. ಕಮ್ಯುನಿಸ್ಟ ಆಡಳಿತದಿಂದಾಗಿ, ಇಂದು ಕೇರಳದ ಕ್ಯಾಥೋಲಿಕ್ ಸಮುದಾಯ ದೊಡ್ಡ ಅಪಾಯದಲ್ಲಿ ಸಿಲಿಕಿದೆ, ಎಂದು ಅವರು ವಿವರಿಸಿದರು. ಕಳೆದ ಎರಡು ಚುನಾವಣಾ ಫಲಿತಾಂಶಗಳಿಂದ ಭಾರತದಲ್ಲಿ ಕಮ್ಯುನಿಸಂ ಗಮನಾರ್ಹವಾಗಿ ಬೆಳೆಯುತ್ತಿರುವುದರ ಸಂದರ್ಭದಲ್ಲಿ ಮಾತನಾಡಿದ ಚೆವಲಿಯರ್ ಸ್ವರಾಜ್, ವಿಷಾಧದಿಂದ ಜನರ ಗಮನ ಸೆಳೆದರು. ಈ ಪ್ರವೃತ್ತಿಯನ್ನು ತೊಡೆದುಹಾಕಲು ತಮ್ಮ ಕೈಲಾದಷ್ಟು ಪ್ರಯತ್ನ ಮಾಡುವಂತೆ ಅವರುತಮ್ಮ ಅನುಯಾಯಿಗಳಿಗೆ ಪ್ರೇರೇಪಿಸಿದರು. ಅವರನ್ನು ಉಲ್ಲೇಖಿಸುವುದಾದರೆ:

> "ಕಮ್ಯುನಿಸಂ ಒಂದು ನಾಸ್ತಿಕವಾದದ ಒಂದು ಧರ್ಮ. ಇದರ ಬೈಬಲ್ 'ದಾಸ್ ಕ್ಯಾಪಿಟಲ್'. ಕಾರ್ಲ್ ಮಾರ್ಕ್ಸ್ ಇದರ ಪ್ರತಿಪಾದಕ. ವಿರೋಧಾಭಾಸವೆಂದರೆ, ಇದು ದೇವರ ಸಾಮ್ರಾಜ್ಯದ ಬದಲಿಗೆ, ಮಾನವ ಸಾಮ್ರಾಜ್ಯದ ಪರವಾಗಿ ಮಾತನಾಡುತ್ತದೆ. ಕಮ್ಯುನಿಸಂ ತನ್ನ ಸುತ್ತಲಿನ ವಲಯದಲ್ಲಿ, ಅದರ ಉನ್ನತ ಆದರ್ಶಗಳಿಂದಾಗಿ, ಕೇವಲ ಕೆಲವು ಬುದ್ಧಿವಂತ ಜನರನ್ನು ಮಾತ್ರ ಆಕರ್ಷಿಸುತ್ತದೆ(108:07.07.58).

ಕೇರಳದಲ್ಲಿ ಸಂಘಟಿತ ಚರ್ಚುಗಳು, ಕಾಂಗ್ರೆಸ್ ಪಕ್ಷ ಮತ್ತು ಇತರ ಪಟ್ಟಭದ್ರ ಹಿತಾಸಕ್ತಿಗಳ ಪರವಾಗಿ ಸೇರಿಕೊಂಡಿತು. ಕಮ್ಯುನಿಸ್ಟ್ ಸರ್ಕಾರದ ಪ್ರಗತಿಪರವಾದ ಕಾರ್ಯಕ್ರಮಗಳನ್ನು ಟೀಕಿಸುತ್ತಲೇ ಇದ್ದವು. 1957-59ರ ವಿಧಾನಸಭೆಯ ವಿರೋಧ ಪಕ್ಷದ ನಾಯಕ ಪಿ.ಟಿ.ಚಾಕೋ ಕ್ಯಾಥೋಲಿಕ್ ಸಮ್ಮೇಳನದಲ್ಲಿ ಭಾಗವಹಿಸಿದ್ದ ಸಂದರ್ಭದಲ್ಲಿ, ಕೇರಳದಲ್ಲಿ 'ಕೆಂಪು ಆಡಳಿತ'ವನ್ನು ತೊಡೆದುಹಾಕಲು ಸಾಮಾನ್ಯವಾಗಿ ಪ್ರಜಾಪ್ರಭುತ್ವವಾದಿಗಳಿಗೆಮತ್ತು ನಿರ್ದಿಷ್ಟವಾಗಿ ಕ್ಯಾಥೋಲಿಕ್ಕರಿಗೆ ಮೈತ್ರಿಕೂಟಕ್ಕೆ ಸೇರಲು ಕರೆ ನೀಡಿದರು(93:p46). ಜನವರಿ 1958ರಲ್ಲಿಯೇ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಸಶಸ್ತ್ರ ಹೋರಾಟಕ್ಕಾಗಿ ಚರ್ಚ್ ಯೋಜನೆ ಹಾಕಿಕೊಂಡಿತ್ತು. ಕೇರಳ ಕ್ಯಾಥೋಲಿಕ್ ಕಾಂಗ್ರೆಸ್‌ನ ಮತ್ತು ಇಂಡಿಯನ್ ಕ್ಯಾಥೋಲಿಕ್ ಯೂನಿಯನ್‌ನ ಸಮ್ಮೇಳನದ ಕುರಿತು ದೀಪಿಕಾ ಪತ್ರಿಕೆಯಲ್ಲಿ ಪ್ರಕಟವಾಗಿರುವ ಸುದ್ದಿಗಳೇ ಇದಕ್ಕೆ ಸಾಕ್ಷಿ. ವಾರಪ್ಪುಳದಲ್ಲಿ

ಆರ್ಚ್ ಬಿಷಪ್, ಚೆವಲಿಯರ್ ಸ್ವರಾಜ್, ಪಿ.ಟಿ. ಚಾಕೊ ಮುಂತಾದವರಲ್ಲದೆ, ಕೇರಳ ಮತ್ತು ಭಾರತದ ಕ್ರಿಶ್ಚಿಯನ್ ಸಮುದಾಯಕ್ಕೆ ಸೇರಿದ ಪ್ರಮುಖರೂ ಸಮಾವೇಶದಲ್ಲಿ ಉಪಸ್ಥಿತರಿದ್ದರು. ಪತ್ರಿಕೆಯ ಸುದ್ದಿ ಹೀಗಿತ್ತು:

> "ಒಂದು ವಿಷಯ ಸಾಮಾನ್ಯವಾಗಿ ಹೇಳಬಹುದು. ಅದೇನೆಂದರೆ, ಸಂಘಟನಾ ಶಕ್ತಿಗಳನ್ನು ಒಟ್ಟುಗೂಡಿಸಿಕೊಂಡು, ಪ್ರಜಾಪ್ರಭುತ್ವ ಮತ್ತು ವ್ಯಕ್ತಿಸ್ವಾತಂತ್ರ್ಯದ ಶತ್ರುಗಳನ್ನು ಹೇಗೆ ಎದುರಿಸಬೇಕು ಎಂಬುದರ ಮೇಲೆ ಎಲ್ಲವೂ ಅವಲಂಬಿತವಾಗಿಸಿಕೊಂಡೇ ಎಲ್ಲಾ ಚರ್ಚೆಗಳು ನಡೆದಿದ್ದು"(108:05.05.58).

ಸ್ವಯಂಸೇವಕ ಸೇನೆಯನ್ನು ಸ್ಥಾಪಿಸಲು ಮತ್ತು ಧರ್ಮಪ್ರಾಂತ್ಯದ ಆಧಾರದ ಮೇಲೆ ಸಮಿತಿಗಳನ್ನು ರಚಿಸಲು, ಈ ಸಮ್ಮೇಳನದಲ್ಲಿ ನಿರ್ಧರಿಸಲಾಯಿತು. ಈ ಗುರಿಯನ್ನು ಸಾಧಿಸಲು ಶ್ರೀಮಂತರಾದ ತೋಟದ/ಎಸ್ಟೇಟ್ ಮಾಲೀಕರಿಂದ ಮತ್ತು ಶ್ರೀಮಂತ ಭೂಮಾಲೀಕರಿಂದ ಹಣವನ್ನು ಸಂಗ್ರಹಿಸಲಾಯಿತು. ಜೊತೆಗೆ ಸೈದ್ಧಾಂತಿಕವಾದ ಮತ್ತು ಆರ್ಥಿಕವಾದ ವಿದೇಶಿ ನೆರವೂ ಅವರಿಗೆ ದೊರೆತವು. ಈ ಸಂಗತಿಗಳು ಫಾದರ್ ವಡಕ್ಕನ್ ತಮ್ಮ ಆತ್ಮಚರಿತ್ರೆಯಲ್ಲಿ ವಿವರವಾಗಿ ಪ್ರತಿಪಾದಿಸಿದ್ದಾರೆ(46:p128).

ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರದ ಆಮೂಲಾಗ್ರವಾದ ಆಡಳಿತ ಸುಧಾರಣೆಗಳೊಂದಿಗೆ, ಚರ್ಚುಗಳು ಅನುದಸರಿಸಿದ ವಿಧಾನಗಳ ಬಗ್ಗೆ, ವಿಚಾರಣೆಗಳು ಅಥವಾ ಅನ್ವೇಷಣೆಗಳು ಕ್ಯಾಥೋಲಿಕ್‌ಗಳಿಗೆ ಮಾತ್ರವಾಗಿ ಸೀಮಿತವಾಗಿರಲಿಲ್ಲ. ಕ್ರಿಶ್ಚಿಯನ್ ಚರ್ಚ್‌ನ ಎಲ್ಲ ವಿಭಾಗಗಳೂ ಇದರಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದವು. ಭಕ್ತರ ಅಥವಾ ದೈವವಿಶ್ವಾಸಿಗಳ ನಡುವೆ ಚರ್ಚುಗಳು ಮೂಢನಂಬಿಕೆ ಮತ್ತು ತಪ್ಪು ತಿಳುವಳಿಕೆಗಳನ್ನು ಹರಡಲುಸದಾ ಪ್ರಯತ್ನಿಸುತ್ತಲೇ ಇದ್ದವು. ಕಮ್ಯುನಿಸ್ಟರ ವಿರುದ್ಧ ಹೋರಾಡಲು, ಭಕ್ತರನ್ನು ಭಾವನಾತ್ಮಕವಾಗಿ ಪ್ರಚೋಧಿಸುತ್ತಲೇ ಇತ್ತು(93:p47). ಈ ನಿಟ್ಟಿನಲ್ಲಿ ಎಲ್ಲಾ ಪ್ರತಿಗಾಮಿ ರಾಜಕೀಯ ಶಕ್ತಿಗಳು ಮತ್ತು ಊಳಿಗಮಾನ್ಯ ಧಣಿಗಳು ಪರಸ್ಪರ ಸಹಕಾರ ನೀಡಿದವು. ಜುಲೈ 7, 1958ರಂದು, ಎಲ್ಲಾ ಕ್ರಿಶ್ಚಿಯನ್ ಪಂಗಡಗಳು ಸೇಂಟ್ ಥಾಮಸ್ ನೆನಪಿನ ದಿನ (ದುಖ್ರಾನ ತಿರುನಾಳ್ – ಸೈಂಟ್ ಥಾಮಸ್ ಡೇ) ಜಂಟಿಯಾಗಿ ತಿರುವನಂತಪುರದಲ್ಲಿ ಆಯೋಜಿಸಿತು. ಪೋಪ್ ಮಲಂಕರ ಜಾಕೋಬೈಟ್ ಸಭೆಯ ಅಧ್ಯಕ್ಷತೆ ವಹಿಸಿದ್ದರು ಈ ಸಂದರ್ಭದಲ್ಲಿ ತಿರುವನಂತಪುರದ ಲ್ಯಾಟಿನ್ ಚರ್ಚ್ ಪೋಪ್ ಕೂಡ ಉಪಸ್ಥಿತರಿದ್ದರು. ಸಭೆಯಲ್ಲಿ ಉಪಸ್ಥಿತರಿದ್ದ ಶಾಸಕ ಡಾ.ಕೆ.ಎಂ.ಜಾರ್ಜ್ ಹೀಗೆ ಹೇಳಿದರು:

> "ಭಾರತೀಯ ಚರ್ಚಿನ ಕಳೆದ ಎರಡು ಸಾವಿರ ವರ್ಷಗಳ ಇತಿಹಾಸದಲ್ಲಿ, ಕ್ರಿಶ್ಚಿಯನ್ ಧರ್ಮವು ಎಂದಿಗೂ ಇಷ್ಟು ದೊಡ್ಡ ಅಪಾಯವನ್ನು ಎದುರಿಸಿರುವುದಿಲ್ಲ. ನಮ್ಮ ವಿಶಾಲ ದೇಶದಲ್ಲಿ ಯೇಸುದೇವರು ಇನ್ನೂ ಪರಕೀಯರಾಗಿದ್ದಾರೆ. ಕೇರಳದಲ್ಲಿ ಕ್ರಿಶ್ಚಿಯನ್ ಧರ್ಮ ಮತ್ತು ಇತರ ಧರ್ಮಗಳು, ಕಮ್ಯುನಿಸಂನೊಂದಿಗೆ ಸಂಘರ್ಷದಲ್ಲಿ ಸಿಲುಕಿಕೊಂಡಿವೆ. ಇದು ನಮ್ಮ ದೇವರ ಬಗ್ಗೆಯ ನಂಬಿಕೆ,

ನೈತಿಕ ಮೌಲ್ಯ, ಮತ್ತು ಕುಟುಂಬ ಜೀವನ ಮುಂತಾದವುಗಳನ್ನು ನಾಶಮಾಡಲು ತನ್ನೆಲ್ಲ ತಂತ್ರಗಳನ್ನು ಪ್ರಯೋಗಿಸುತ್ತಿದೆ. ಶೈಕ್ಷಣಿಕ ಸುಧಾರಣೆಗಳು, ವರದಕ್ಷಿಣೆ ನಿಷೇಧ ಮಸೂದೆ, ಕ್ರಿಶ್ಚಿಯನ್ ಉತ್ತರಾಧಿಕಾರ ಕಾಯಿದೆಗೆ ತಿದ್ದುಪಡಿ, ಕುಟುಂಬ ಯೋಜನೆ ಮುಂತಾದವುಗಳೆಲ್ಲವೂ ಆ ಗುರಿಯನ್ನು ಸಾಧಿಸುವ ಸಲುವಾಗಿಯೇ ನಡೆಸುವ ತಂತ್ರಗಾರಿಕೆಗಳಾಗಿವೆ. ಕಮ್ಯುನಿಸಂ ವಿರುದ್ಧದ ನಮ್ಮ ಧರ್ಮಯುದ್ಧಗಳೆನ್ನುವುದು ಕೇವಲ ಕೇರಳಕ್ಕೆ ಮಾತ್ರವಾಗಿರದೆ, ಭಾರತ, ಏಷ್ಯಾದ ದೇಶಗಳಿಗೆ ಮತ್ತು ಇಡೀ ಮನುಕುಲಕ್ಕೂ ಅಗತ್ಯವಿರುವಂಥದ್ದು. ಎಲ್ಲಾ ದೈವವಿಶ್ವಾಸಿಗಳು ಒಗ್ಗಟ್ಟಿನಿಂದಿರುವಾಗ ಮಾತ್ರ, ಈ ಹೋರಾಟ ಯಶಸ್ವಿಯಾಗಲು ಸಾಧ್ಯ. ಕಷ್ಟನಷ್ಟಗಳನ್ನು ಪರಿಗಣಿಸದೆ ನಾವು ಹೋರಾಡಬೇಕು. ಇದುವೇ ಈ ಐತಿಹಾಸಿಕ ದಿನದ ಕಹಳೆಯ ಕರೆ"(108:08.08.58).

ಈ ರೀತಿಯಲ್ಲಿ, ಸುಸಂಘಟಿತವಾದ, ಸುಸಜ್ಜಿತವಾದ ಪ್ರಚಾರ ವ್ಯವಸ್ಥೆಯ ಸಹಾಯದಿಂದ ಮತ್ತು ಉತ್ತಮ ಆರ್ಥಿಕ ಶಕ್ತಿಯ ಬೆಂಬಲದೊಂದಿಗೆ, ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ, ಜಾತಿ/ಧರ್ಮ ಆಧಾರಿತವಾದ ಕೋಮುಶಕ್ತಿ, ಪ್ರತಿಗಾಮಿ ಶಕ್ತಿಗಳನ್ನು ಸಜ್ಜುಗೊಳಿಸಲು ಕ್ಯಾಥೋಲಿಕ್ ಚರ್ಚ್ ಯಶಸ್ವಿಯಾಯಿತು.

## ನಾಯರ್ ಸರ್ವೀಸ್ ಸೊಸೈಟಿ (*NSS*)

1957, ಫೆಬ್ರವರಿ–ಮಾರ್ಚ್ ತಿಂಗಳುಗಳಲ್ಲಿ, ಕೇರಳ ವಿಧಾನಸಭೆಗೆ ನಡೆದ ಸಾರ್ವತ್ರಿಕ ಚುನಾವಣೆಯ ಕುರಿತ ಎಲ್ಲಾ ಲೇಖನಗಳು ಪೂರ್ಣವಾಗಿಯೋ ಭಾಗಶಃವಾಗಿಯೋ, ನಾಯರ್ ಸರ್ವೀಸ್ ಸೊಸೈಟಿ ಮತ್ತು ಅದರ ಮುಖ್ಯಸ್ಥರಾದ ಅಥವಾ ಕುಲಪತಿಯಾದ ಮನ್ನತ್ ಪದ್ಮನಾಭನ್ ಕಮ್ಯುನಿಸ್ಟ್ ಅಭ್ಯರ್ಥಿಗಳಿಗೆ ನೀಡಿದ ಬೆಂಬಲಗಳ ಬಗ್ಗೆ ದೃಢೀಕರಿಸಿರುತ್ತವೆ. ಆದರೆ ಲಭ್ಯವಿರುವ ಮಾಹಿತಿಗಳ ಮೂಲಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ, 1957ರಲ್ಲಿ ರಾಜ್ಯ ಚುನಾವಣೆಯ ಬಗ್ಗೆ ನಾಯರ್ ಸರ್ವೀಸ್ ಸೊಸೈಟಿಯು ಸ್ಪಷ್ಟ ನಿಲುವನ್ನು ಹೊಂದಿರಲಿಲ್ಲ ಎನ್ನುವುದು ತಿಳಿದುಬರುತ್ತದೆ(155:p942,943). ಮನ್ನತ್ ಪದ್ಮನಾಭನ್ ಕಮ್ಯುನಿಸ್ಟರ ವಿರುದ್ಧವಾಗಿದ್ದರು(69:p62). ಅದೇ ಸಮಯದಲ್ಲಿ ಅವರು ಕಾಂಗ್ರೆಸ್‌ನೊಂದಿಗೂ ಸೌಹಾರ್ದತೆಯನ್ನು ಇಟ್ಟುಕೊಂಡಿರಲಿಲ್ಲ(33:01.09.57). ಜನವರಿ 7, 1957ರಂದು ಪತ್ರಕರ್ತರೊಂದಿಗೆ ಮಾತನಾಡುವಾಗ, ಕೇರಳ ಪೀಪಲ್ಸ್ ಪಾರ್ಟಿಗೆ ತಮ್ಮ ಬೆಂಬಲ ನೀಡುವ ಉದ್ದೇಶದ ಬಗ್ಗೆ ಮನ್ನತ್ ಪದ್ಮನಾಭನ್ ಪ್ರಸ್ತಾಪಿಸಿದರು(33:01.09.57). ವಾಸ್ತವವಾಗಿ ಪದ್ಮನಾಭಾನ್ ಮತ್ತು ಎನ್‌ಎಸ್‌ಎಸ್, ಕೇರಳದ ಕಾಂಗ್ರೆಸ್‌ನ ಒಳಗಿರುವ ಕ್ರಿಶ್ಚಿಯನ್ನರ ಪ್ರಾಬಲ್ಯದ ವಿರುದ್ಧವಾಗಿದ್ದರು(157:). ಆದ್ದರಿಂದ ಅವರು ಪಕ್ಷಗಳನ್ನು ಕಡೆಗಣಿಸಿ ನಾಯರ್ ಸಮುದಾಯಕ್ಕೆ ಸೇರಿದ ಅಭ್ಯರ್ಥಿಗಳನ್ನು ಬೆಂಬಲಿಸಲು ನಿರ್ಧರಿಸಿದರು. ಈ ನೀತಿಯಿಂದಾಗಿ, ಚುನಾವಣೆಯಲ್ಲಿ ಸಾಂದರ್ಭಿಕವಾಗಿ ಕಮ್ಯುನಿಸ್ಟ್ ಪಕ್ಷಕ್ಕೆ ಲಾಭವೇ ಆಯಿತು(157:).

ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ಹೆಚ್ಚಿನ ಆಡಳಿತಾತ್ಮಕ ಚಟುವಟಿಕೆಗಗಳಿಗೆಲ್ಲ ಮೊದಲ ಕೆಲವು ತಿಂಗಳುಗಳಲ್ಲಿ ನಾಯರ್ ಸರ್ವೀಸ್ ಸೊಸೈಟಿಯ (ಎನ್‌ಎಸ್‌ಎಸ್) ಬೆಂಬಲವಿತ್ತು(158:p373). 1957ರಲ್ಲಿ ಕೇರಳ ಶಿಕ್ಷಣ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿದಾಗ ಎನ್‌ಎಸ್‌ಎಸ್ ಅದನ್ನು ಬಲವಾಗಿ ಬೆಂಬಲಿಸಿತ್ತು(143:28.08.57). ಆದರೆ 1957ರಿಂದ 1959ರವರೆಗೆ ಕೇರಳದಲ್ಲಿ ರಾಜಕೀಯ ಮೈತ್ರಿಗಳು ರೂಪುಗೊಂಡಂಥ ವಿಶೇಷ ಬೆಳವಣಿಗೆಗಳಿಂದಾಗಿ, ನಾಯರ್ ಸರ್ವೀಸ್ ಸೊಸೈಟಿಯು ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸುವ ನೀತಿಯನ್ನು ಕೈಬಿಡಲು, ಮತ್ತು ಪಕ್ಷ ಮತ್ತು ಸರ್ಕಾರವನ್ನು ವಿರೋಧಿಸುವ ನೀತಿಯನ್ನು ಬೆಂಬಲಿಸಲು ಪ್ರೇರೇಪಿಸಿತು.

ಕೇರಳ ಕೃಷಿ ಸಂಬಂಧಗಳ ಮಸೂದೆಯನ್ನು 18 ಡಿಸೆಂಬರ್ 1957ರಂದು ಪ್ರಕಟಗೊಂಡ ನಂತರ, ಅದು ನಾಯರ್ ಸಮುದಾಯದ ಮೇಲ್ವರ್ಗಕ್ಕೆ ಸೇರಿದ ಮೂಲಭೂತ ಆರ್ಥಿಕ ಹಿತಾಸಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎನ್ನುವುದನ್ನು ಕಂಡುಕೊಂಡ ಎನ್‌ಎಸ್‌ಎಸ್, ತನ್ನ ಹಳೆಯ ನಿಲುವನ್ನು ಬದಲಿಸಿಕೊಂಡು ಸರಕಾರದ ಬಗ್ಗೆ ವಿರೋಧಿ ಧೋರಣೆಯನ್ನು ಅನುಸರಿಸಿತು. ಪಾಲಕ್ಕಾಡ್‌ನಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ತೆರೆಯುವುದಕ್ಕಾಗಿ ಎನ್‌ಎಸ್‌ಎಸ್ ಸಲ್ಲಿಸಿದ್ದ ಮನವಿಯನ್ನು ಸರ್ಕಾರ ತಿರಸ್ಕರಿಸಿದ್ದು, ಸೌಹಾರ್ದಯುತ ಬೇರ್ಪಡಿಕೆಯ ಪ್ರಕ್ರಿಯೆಯನ್ನು ಪೂರ್ಣಗೊಳಿಸಿತು(143:05.12.58). ಎನ್‌ಎಸ್‌ಎಸ್‌ನ ಮನ್ನತ್ ಪದ್ಮನಾಭನ್ ಅವರು ತಮ್ಮ ಬೇಡಿಕೆಯನ್ನು ತಿರಸ್ಕರಿಸಿದ್ದರ ವಿರುದ್ಧ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದರು. ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸುವವರೆಗೂ ನಿರ್ಗಮಿಸುವುದಿಲ್ಲ ಎಂದು ಅವರು ಪ್ರತಿಜ್ಞೆ ಮಾಡಿದರು(143:27.11.58).

ಕೇರಳ ಕೃಷಿ ಸಂಬಂಧಗಳ ಮಸೂದೆಯನ್ನು ಪರಿಚಯಿಸುವ ಅಥವಾ ಅರ್ಥೈಸುವ ಸಂದರ್ಭದಲ್ಲಿ, ಅಕ್ಟೋಬರ್ 25, 1957ರಂದು ಭೂ ಸಮಿತಿಯೊಂದನ್ನು ಎನ್‌ಎಸ್‌ಎಸ್ ನೇಮಿಸಿತು ಮತ್ತು ಸಮಿತಿಯು ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಮನವಿಯೊಂದನ್ನು ಸಲ್ಲಿಸಿತು. ನಿರ್ದಿಷ್ಟ ಕಾನೂನು ಯಾವುದೇ ರೀತಿಯಲ್ಲಿ ನಾಯರ್ ಸಮುದಾಯದ ಹಿತಾಸಕ್ತಿಗೆ ಧಕ್ಕೆ ತರಬಾರದು ಎಂದು ಮನವಿಯಲ್ಲಿ ತಿಳಿಸಲಾಗಿತ್ತು(143:26.10.57). ಡಿಸೆಂಬರ್ 1957 18ರಂದು ಮಸೂದೆ ಪ್ರಕಟವಾದಾಗ, ಅದು ತಮ್ಮ ಹಿತಾಸಕ್ತಿಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ ಎಂದು ಕಂಡುಕೊಂಡ ಎನ್‌ಎಸ್‌ಎಸ್, ಸರ್ಕಾರದ ವಿರುದ್ಧ ಶಕ್ತವಾದ ನಿಲುವು ತಳೆಯಿತು. ನಾಯರ್‌ಗಳ ಆಕಾಂಕ್ಷೆಗಳನ್ನು ಪ್ರತಿಬಿಂಬಿಸುವ 'ಮಲಯಾಳ ರಾಜ್ಯಂ' ಪತ್ರಿಕೆಯು ತನ್ನ ಸಂಪಾದಕೀಯದಲ್ಲಿ 'ಮಸೂದೆಯನ್ನು ತಿರಸ್ಕರಿಸಬೇಕು' ಎಂದು ಕೇಳಿಕೊಂಡಿತು. ಏಕೆಂದರೆ, 'ಮಲಯಾಳ ರಾಜ್ಯಂ' ಪತ್ರಿಕೆ ಮತ್ತು ಎನ್‌ಎಸ್‌ಎಸ್‌ನ ಮುಖ್ಯಸ್ಥರು ಅಂದುಕೊಂಡಿದ್ದು, ಕೇರಳದ ಕೃಷಿ ಸಂಬಂಧ ಮಸೂದೆಯು ಹೆಚ್ಚಿನ ಸಂಖ್ಯೆಯಲ್ಲಿರುವ

ನಾಯರ್ ಸಮುದಾಯದ ಭೂಮಾಲೀಕರ ಹಕ್ಕುಗಳನ್ನು ಕಸಿದುಕೊಳ್ಳುವ ಉದ್ದೇಶವನ್ನು ಹೊಂದಿದೆ ಎನ್ನುವುದಾಗಿತ್ತು(143:01.01.58). ವಾಸ್ತವವಾಗಿ, ನಾಯರ್ ಸಮುದಾಯದವರಲ್ಲಿ ಹೆಚ್ಚಿನವರು ಭೂಮಾಲೀಕರಾಗಿರಲಿಲ್ಲ. ಅವರು ಸಾಮಾನ್ಯ ರೈತರೋ ಸಣ್ಣ ಭೂಮಾಲೀಕರೋ ಆಗಿದ್ದರು. ನಾಯರ್ ಸಮುದಾಯದವರ ಪೈಕಿ ಕೆಲವೇ ಸಂಖ್ಯೆಯಲ್ಲಿರುವವರು (ನಾಯರ್ ಅಧಿಕಾರಿವರ್ಗ) ಮಾತ್ರ ನಿಜವಾದ ಭೂಮಾಲಕರಾಗಿದ್ದರು. ಎನ್‌ಎಸ್‌ಎಸ್‌ನ ನಾಯಕತ್ವದ ಮೇಲೆ ಈ ಅಲ್ಪ ಸಂಖ್ಯಾತ ನಾಯರ್ ಭೂಮಾಲಕರು ಭಾರಿ ಪ್ರಭಾವ ಬೀರಿದರು(37:p169;159:). ಎನ್‌ಎಸ್‌ಎಸ್ ಅದರ ನಂತರ ಉದ್ದೇಶಿತ ಮಸೂದೆಯ ವಿರುದ್ಧ ಸಾಕಷ್ಟು ಪ್ರತಿಭಟನೆಗಳನ್ನು ಮತ್ತು ಸಭೆಗಳನ್ನು ನಡೆಸಿತು. ಈ ಸಭೆಗಳು, ಕೇರಳ ಕೃಷಿ ಸಂಬಂಧ ಮಸೂದೆಯನ್ನು ವಿರೋಧಿಸುವವರೆಲ್ಲರೂ ಐಕ್ಯತೆಯನ್ನು ಪ್ರದರ್ಶಿಸಲು ಒಂದಾಗುವಂತೆ ಕರೆ ನೀಡಿತು(160:p132-164).

ಮನ್ನತ್ ಪದ್ಮನಾಭನ್ ಅವರು ಕೋಮು ಭಾವನೆಗಳನ್ನು ಕೆರಳಿಸುವ ಕೆಲವು ತಂತ್ರಗಳನ್ನು ಹೂಡಿದರು. ಪ್ರಸ್ತುತ ಸರ್ಕಾರವು 'ಈಳವರ/ಈಡಿಗರ ಪರವಾಗಿದೆ' ಮತ್ತು 'ನಾಯರ್‌ಗಳ ವಿರುದ್ಧವಾಗಿದೆ' ಎಂದು ಅವರು ಅಪಪ್ರಚಾರ ಮಾಡತೊಡಗಿದರು (160:p132-164). ಈಟವ/ಈಡಿಗರಿಗೆ ಅನುಕೂಲಕರವಾಗಿದೆಯೆಂದು ಖಂಡಿತವಾಗಿ ಹೇಳುವಂಥ ಯಾವುದೇ ವಿಚಾರ ವಿವಾದಾತ್ಮಕ ಕೇರಳ ಶಿಕ್ಷಣ ಕಾಯಿದೆಯಲ್ಲಿ ಇರಲಿಲ್ಲ. ಒಂದು ಸಮುದಾಯ ಎನ್ನುವ ನೆಲೆಯಲ್ಲಿ ಈಳವರಿಗೆ ಯಾವುದೇ ವಿಶೇಷ ಪ್ರಯೋಜನಗಳನ್ನು ಕಾನೂನಿನಡಿಯಲ್ಲಿ ಶಿಫಾರಸು ಮಾಡಿರಲಿಲ್ಲ. ಕಮ್ಯುನಿಸ್ಟ್ ಸರ್ಕಾರವನ್ನು 'ಈಳವಾಧಾರಿತ-ಸರ್ಕಾರ' ಎಂದು ಅಪಹಾಸ್ಯ ಮಾಡಿದಾಗ, ಮನ್ನತ್ ಪದ್ಮನಾಭನ್ ಅವರು ರಾಜ್ಯದ ಜನರನ್ನು ಸಮುದಾಯ ಮತ್ತು ಜಾತಿಗಳ ಆಧಾರದ ಮೇಲೆ ವಿಭಜನೆ ಮಾಡಲು ಉದ್ದೇಶಿಸಿದ್ದರು. ಅದೇ ಸಮಯದಲ್ಲಿ, ಅವರು ಪ್ರಬಲ ವಿಭಾಗದವರ ದ್ವೇಷವನ್ನು ಸರ್ಕಾರದ ವಿರುದ್ಧ ತಿರುಗಿಸಿ ಬಿಡುವ ಗುರಿಯನ್ನು ಹೊಂದಿದ್ದರು(161:p173).

ಸರ್ಕಾರಿ ಉದ್ಯೋಗದ ನೇಮಕಾತಿಗಳಲ್ಲಿ ಮತ್ತು ವೃತ್ತಿಪರ ಕಾಲೇಜುಗಳ ಪ್ರವೇಶಗಳಲ್ಲಿ, ಸಮುದಾಯಕ್ಕೆ ಮೀಸಲಾತಿಯನ್ನು ನೀಡುವುದರ ಮೂಲಕ ನಾಯರ್‌ಗಳ ವೆಚ್ಚದಲ್ಲಿ ಈಳವರನ್ನು ಸಮಾಧಾನಪಡಿಸಲು ಸರ್ಕಾರವು ಉದ್ದೇಶಪೂರ್ವಕವಾಗಿ ಕೈಗೊಂಡ ಕ್ರಮವಾಗಿದೆ ಇದು, ಎಂದು ವ್ಯಾಖ್ಯಾನಿಸಲಾಯಿತು. ಸಂಘರ್ಷವನ್ನು ಸೃಷ್ಟಿಸುವುದಕ್ಕಾಗಿ 'ನಾಯರುಗಳ ಹಿತಾಸಕ್ತಿ ಅಪಾಯದಲ್ಲಿದೆ' ಎಂಬ ಘೋಷಣೆಗಳನ್ನು ಗಟ್ಟಿಯಾಗಿ ಹೇಳತೊಡಗಿದರು(143:06.08.58).

ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಎನ್‌ಎಸ್‌ಎಸ್‌ನ ಬಾವುಟದಡಿಯಲ್ಲಿ, ನಾಯರ್ ಸಮುದಾಯವನ್ನು ಒಗ್ಗೂಡಿಸಲು ಪ್ರಯತ್ನಿಸಿದರು. ಮೀಸಲಾತಿಯ ಫಲಾನುಭವಿಗಳು

ಎನ್ನುವ ಕಾರಣಕ್ಕಾಗಿ ಈಳವರನ್ನು ಅವಮಾನಿಸುವ ಅಭಿಯಾನದಲ್ಲಿ ಎನ್‌ಎಸ್‌ಎಸ್ ತನ್ನನ್ನು ತೊಡಗಿಸಿಕೊಂಡಿತು. ಮೀಸಲಾತಿಗೆ ಅರ್ಹರಾಗಿರುವ ಹಿಂದುಳಿದ ಸಮುದಾಯಗಳ ಪಟ್ಟಿಯಿಂದ ಈಳವರನ್ನು ತೆಗೆದುಹಾಕಲು ಕಮ್ಯುನಿಸ್ಟ್ ಸರ್ಕಾರಕ್ಕೆ ಕರೆ ನೀಡುವ ನಿರ್ಣಯವನ್ನು ಎನ್‌ಎಸ್‌ಎಸ್ ಮಂಡಳಿಯು, ನವೆಂಬರ್ 3, 1958ರಂದು ಅಂಗೀಕರಿಸಿತು(108:04.11.58). ನವೆಂಬರ್ 18, 1958 ಮನ್ನತ್ ಪದ್ಮನಾಭನ್ ನೇತೃತ್ವದಲ್ಲಿ ನಾಯರುಗಳು ನಿವೇದನಾ ತಂಡವೊಂದು ಮುಖ್ಯಮಂತ್ರಿಯವರನ್ನು ಭೇಟಿ ಮಾಡಿ ಅವರ ಪರಿಗಣನೆಗಾಗಿ ಮನವಿ ಪತ್ರ ಸಲ್ಲಿಸಿದರು. ಕೇರಳದ ಆಡಳಿತ ಸುಧಾರಣಾ ಸಮಿತಿಯ ವರದಿಯಲ್ಲಿ ಉಲ್ಲೇಖಿಸಿದಂತೆ, ಹಿಂದುಳಿದ ಸಮುದಾಯಗಳ ಪಟ್ಟಿಯಿಂದ ಈಳವರನ್ನು ಹೊರಗಿಟ್ಟು ಪರಿಷ್ಕರಿಸಬೇಕು ಎನ್ನುವುದು ವಿಜ್ಞಾಪನೆಯ ಪ್ರಮುಖ ಅವಶ್ಯಕತೆಯಾಗಿತ್ತು(143:19.11.58).

ಎನ್‌ಎಸ್‌ಎಸ್‌ರವರ ಮೀಸಲಾತಿ ವಿರುದ್ಧದ ನಿಲುವು ಬಲಗೊಂಡಿತು. ಸಮುದಾಯಗಳಿಗೆ ಮೀಸಲಾತಿಯನ್ನು ಒದಗಿಸುವ 11ನೇ ವಿಧಿಯನ್ನು ಹೊರತುಪಡಿಸದೆ, ಕೇರಳ ಶಿಕ್ಷಣ ಮಸೂದೆಯು ತಮಗೆ ಸ್ವೀಕಾರಾರ್ಹವಲ್ಲ, ಎಂದು ಎನ್‌ಎಸ್‌ಎಸ್ ಸಂಘಟನೆಯು, ಡಿಸೆಂಬರ್ 1958ರಲ್ಲಿ ಕಮ್ಯುನಿಸ್ಟ್ ಸರ್ಕಾರಕ್ಕೆ ತಿಳಿಸಲಾಯಿತು. ಡಿಸೆಂಬರ್ 1, 1958ರಿಂದ ಜನವರಿ 4, 1959ರವರೆಗೆ, ಮನ್ನತ್ ಪದ್ಮನಾಭನ್‌ರವರು ವಿನೂತನ ಒತ್ತಡದ ಅಭಿಯಾನದಲ್ಲಿ ತೊಡಗಿಕೊಂಡರು. ಇದರ ಭಾಗವಾಗಿ 'ಜನ್ಮನಕ್ಷತ್ರ ಸಂಗ್ರಹ' (ಹುಟ್ಟಿದ ನಕ್ಷತ್ರದ ದಿನದಂದು ಹಣ ಸಂಗ್ರಹಣೆ) ನೆಪದಲ್ಲಿ ನಾಯರುಗಳನ್ನು ತನ್ನ ಹಿಂದೆ ಸಾಲುಗಟ್ಟಿ ನಿಲ್ಲಿಸಲು ಯತ್ನಿಸಿತು(143:31.12.58). ಸರ್ಕಾರದ ಕ್ರಮಗಳನ್ನು ಮತ್ತು ಅಸ್ತಿತ್ವದಲ್ಲಿರುವ ಮೀಸಲಾತಿ ವ್ಯವಸ್ಥೆಯನ್ನು ಅವಹೇಳನ ಮಾಡುವ ನಿರ್ಣಯಗಳನ್ನು ಅಂಗೀಕರಿಸಲು ಎನ್‌ಎಸ್‌ಎಸ್‌ನ ಕರಯೋಗಗಳಿಗೆ (ಕರಯೋಗಂ–ಸ್ಥಳೀಯ ಘಟಕಗಳು) ನಿರ್ದೇಶನ ನೀಡಲಾಯಿತು(143:12.01.58; 160:p164).

ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಆಂದೋಲನದಲ್ಲಿ ಇದ್ದಕ್ಕಿದ್ದಂತೆ ಸ್ವತಃ ಎನ್‌ಎಸ್‌ಎಸ್ ಸಂಘಟನೆ, ಚರ್ಚ್ ಜೊತೆ ಕೈ ಜೋಡಿಸಿತು. ಎನ್‌ಎಸ್‌ಎಸ್‌ನ ಪ್ರಧಾನ ಕಛೇರಿಗಳಾದ ಪೆರುನ್ನಾ ಮತ್ತು ಕೊಟ್ಟಾರಕ್ಕರದಲ್ಲಿ ಒಟ್ಟುಗೂಡಿದ್ದ ನಾಯರು ಸಮುದಾಯದವರನ್ನು ಉದ್ದೇಶಿಸಿ ಮನ್ನತ್ ಪದ್ಮನಾಭನ್ ಮಾಡಿದ ಭಾಷಣ. ಮುಖ್ಯವಾಗಿ ಪ್ರತಿಭಟನೆಗಳನ್ನು ಉಲ್ಬಣಗೊಳಿಸುವ ಗುರಿಯನ್ನು ಹೊಂದಿತ್ತು.

> "ನಾಯರ್ ಸಮುದಾಯದ ಹಿತಾಸಕ್ತಿಗಳನ್ನು ಅಪಾಯವನ್ನುಂಟುಮಾಡುವ ರೀತಿಯಲ್ಲಿ ಇದು (ಈಳವಾಸಕ್ತಿ) ಬೆಳೆದು ವಿಕಸನಗೊಳ್ಳುತ್ತಿದೆ. ಆದ್ದರಿಂದ. ಕಾರ್ಯನಿರ್ವಹಿಸಬೇಕೋ ಅಥವಾ ಸಾಯಬೇಕೋ ಎನ್ನುವುದು ನಮ್ಮ ನೀತಿಯಾಗಬೇಕು"(143:31.12.58; 160:p166-172).

ಆಂದೋಲನ ಅವ್ಯಾಹತವಾಗಿಯೂ ತೀವ್ರವಾಗಿಯೂ ಮುಂದುವರಿಯುವುದಕ್ಕಾಗಿ

ಮನ್ನತ್ ಪದ್ಮನಾಭನ್ ಅವರ ಉಸ್ತುವಾರಿಯಲ್ಲಿ ಕ್ರಿಯಾ ಸಮಿತಿಯೊಂದನ್ನು ರಚಿಸಲಾಯಿತು(160:p166-172). ಹೀಗೆ ಸಾಂವಿಧಾನಿಕವಾಗಿ ಸ್ಥಾಪಿತವಾದ ಕಮ್ಯುನಿಸ್ಟ್ ಸರ್ಕಾರವನ್ನು ಬೀಳಿಸಲುಎನ್‌ಎಸ್‌ಎಸ್ ಪ್ರತ್ಯಕ್ಷವಾಗಿ ಪ್ರತಿಜ್ಞಾಬದ್ಧವಾಯಿತು. ಕೇರಳ ಶಾಲಾ ವ್ಯವಸ್ಥಾಪಕರ ಸಂಘ 'ಶಾಲೆ ಮುಚ್ಚುವ ಚಳವಳಿಯನ್ನು ಬೆಂಬಲಿಸಲು' ನಾಯರ್ ಸ್ವಯಂಸೇವಕರ ಸಂಘವನ್ನು ರಚಿಸುವ ನಿರ್ಧಾರವನ್ನು ಮಾರ್ಚ್ 27, 1959ರಂದು ಕೊಟ್ಟಯಂನಲ್ಲಿ ಸೇರಿದ್ದ ಇನ್ನೊಂದು ಸಭೆಯಲ್ಲಿ ತೆಗೆದುಕೊಳ್ಳಲಾಯಿತು (32:31.03.59). ಮುಕ್ತ ಹೋರಾಟ ಪ್ರಾರಂಭಿಸುವ ತಮ್ಮ ಅಚಲ ನಿರ್ಧಾರವನ್ನು ಪ್ರಕಟಿಸಿ ಮಾರ್ಚ್ 28, 1959ರಂದು ಮನ್ನತ್ ಪದ್ಮನಾಭನ್ ತಮ್ಮ ಮನವಿಯನ್ನು ಪುರಸ್ಕರಿಸುವ ಬಗ್ಗೆ ಮುಖ್ಯಮಂತ್ರಿಗಳಿಗೆ ಅಂತಿಮ–ಅವಕಾಶ ನೀಡಿದರು(32:01.04.59). ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಎನ್ನುವ ನೆಲೆಯಲ್ಲಿ, ಮನ್ನತ್ ಪದ್ಮನಾಭನ್ ಅವರು ಹೆಚ್ಚು ತಡಮಾಡದೆ ಮತ್ತೊಂದು ಅಂತಿಮ–ಅವಕಾಶ ನೀಡಿದರು(160:p182-184). ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸುವ ಉದ್ದೇಶವನ್ನು ಅವರು ಹೀಗೆ ಬಹಿರಂಗವಾಗಿ ಘೋಷಿಸಿದರು.

ಕಮ್ಯುನಿಸ್ಟ್ ವಿರೋಧಿ ಶಕ್ತಿಗಳನ್ನು ಒಗ್ಗೂಡಿಸಲು ಕ್ರಿಶ್ಚಿಯನರೊಂದಿಗೂ ಮುಸ್ಲಿಮರೊಂದಿಗೂ ಹೆಗಲಿಗೆ ಹೆಗಲು ಕೊಟ್ಟು ಕೆಲಸ ಮಾಡಬೇಕಾಗುತ್ತದೆ ಎಂದು ಮನ್ನತ್ ಪದ್ಮನಾಭನ್ ನಾಯರ್ ಸಮುದಾಯದವರನ್ನು ಕೇಳಿಕೊಂಡರು.

> "ಎಲ್ಲ ದುಷ್ಟತನಗಳ ಮೂರ್ತರೂಪವಾಗಿರುವ ಈಗಿನ ಸರಕಾರವನ್ನು ಕಿತ್ತೊಗೆಯಲು ನಾವು ಏಕಾಂಗಿಯಾಗಿ ಹೋರಾಡಬೇಕಾದ ಅವಶ್ಯಕತೆ ಇಲ್ಲ. ಈ ಪ್ರಕ್ರಿಯೆಯಲ್ಲಿ, ನಾವು ಖಂಡಿತವಾಗಿ, ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರಂತಹ ಸಮುದಾಯಗಳೊಂದಿಗೆ ಮೈತ್ರಿ ಮಾಡಿಕೊಳ್ಳಬೇಕು. ಏಕೆಂದರೆ, ದುಷ್ಟ ಆಲೋಚನೆಗಳಿಂದ ಸುತ್ತುವರೆದಿರುವ ಈ ಸರ್ಕಾರದ ಅಡಿಯಲ್ಲಿ ಅವರ ಹಿತಾಸಕ್ತಿಗಳೆಲ್ಲವೂ ಅಪಾಯದಲ್ಲಿ ಸಿಲುಕಿಕೊಂಡಿದೆ. ಆದ್ದರಿಂದ ನಾವು ಪ್ರತಿನಿಧಿಸುವ 'ನಾಯರ್ ಸಮುದಾಯದ ಭವಿಷ್ಯದ ಸಮ್ಮೇಳನಗಳು' ಸರ್ಕಾರದ ವಿರುದ್ಧದ ಹೋರಾಟವನ್ನು ತೀವ್ರಗೊಳಿಸುವಂಥ ಸಭೆಗಳನ್ನಾಗಿ ಪರಿವರ್ತಿಸಬೇಕು. ಇನ್ನು ಮುಂದಿನ ಹೋರಾಟವು ನಾಯರ್, ಕ್ರಿಶ್ಚಿಯನ್ ಮತ್ತು ಮುಸ್ಲಿಮರ ಸಂಯುಕ್ತ ಮುಖಾಮುಖಿಯೊಂದಿಗೆ ಮುಂದುವರಿಯುವಂತಿರಬೇಕು (143:23.04.59).

ನಾಯರ್ ಸರ್ವೀಸ್ ಸೊಸೈಟಿ ಮತ್ತು ಕ್ಯಾಥೋಲಿಕ್ ಚರ್ಚ್ ಜಂಟಿಯಾಗಿ ರಾಜ್ಯಾದ್ಯಂತ ಪ್ರತಿಭಟನಾ ಸಭೆ ಮತ್ತು ರ್‍ಯಾಲಿಗಳನ್ನು ಆಯೋಜಿಸಿತು. ಇಂತಹ ಜಂಟಿ ಸಭೆಗಳಲ್ಲಿ ನಾಯರ್ ನಾಯಕರು ಮಾಡಿದ ಭಾಷಣಗಳ ಮೂಲಕ ವ್ಯಕ್ತವಾದ ಅವರ ದೃಢವಾದ ಬೆಂಬಲವು ಕ್ರಿಶ್ಚಿಯನ್ನರಲ್ಲಿ ಅಹಂಕಾರ ಮತ್ತು ವಿರೋಧತೆಯನ್ನು ಬೆಳೆಸಿತು. ಪ್ರಮುಖ ಕ್ಯಾಥೋಲಿಕ್ ನಾಯಕ ಮತ್ತು ಪಿಎಸ್‌ಪಿಯ ಶಾಸಕನೂ

ಆದ ಜೋಸೆಫ್ ಚಾಜಿಕ್ಕಡನವರ ಭಾಷಣ ಪ್ರಸ್ತುತವೆನಿಸುತ್ತದೆ. ಅವರು ಈ ರೀತಿ ಖಾತ್ರಿಗೊಳಿಸಿ ಹೇಳಿದರು:

> "ನಮ್ಮ ಭೌತಿಕ ಮತ್ತು ಆಧ್ಯಾತ್ಮಿಕತೆಯ ಅವನತಿಗೆ ಕಾರಣವಾದ ಸರ್ಕಾರವನ್ನು ಹೊರಹಾಕಲು ನಾಯರ್‌ಗಳೊಂದಿಗಿನ ಸ್ನೇಹಕ್ಕಾಗಿ ಯಾವುದೇ ತ್ಯಾಗವನ್ನು ಮಾಡಲು ಕ್ರೈಸ್ತರು ಸಿದ್ಧರಿದ್ದಾರೆ. ಈ ಉದಾತ್ತ ಕಾರಣಕ್ಕಾಗಿ ಎಷ್ಟು ಜೀವಗಳನ್ನು ಬೇಕಾದರು ಬಲಿಕೊಡಲು ನಾವು ಸಿದ್ಧರಿದ್ದೇವೆ.."(143:30.04.59).

ನಾಯರುಗಳು, ಕ್ರೈಸ್ತರು, ಕೇರಳ ಶಾಲಾ ಮೆನೇಜ್‌ಮೆಂಟ್ ಸಂಘ ಮುಂತಾದವುಗಳೆಲ್ಲವೂ ಮನ್ನತ್ ಪದ್ಮನಾಭನ್ ನೇತೃತ್ವದಲ್ಲಿ ವಿಮೋಚನಾ ಹೋರಾಟ ಸಮಿತಿಯ ರಚನೆಯು (ಮೇ 1, 1959)(143:03.05.59) 'ವಿಮೋಚನಾ ಹೋರಾಟ' ಎಂದು ಕರೆಯಲ್ಪಡುವ ಹೋರಾಟಕ್ಕೆ ಚಾಲನೆ ದೊರಕಿತು.

**ಶ್ರೀನಾರಾಯಣ ಧರ್ಮಪರಿಪಾಲನಾ ಯೋಗಮ್** (ಎಸ್‌ಎನ್‌ಡಿಪಿ)

ಮೊದಲಿನಿಂದಲೂ ಕೇರಳದಲ್ಲಿ ಹೆಚ್ಚಿನ ಈಳವ ಸಮುದಾಯದವರು ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸುತ್ತಾ ಬಂದವರು. ಕೇರಳದಲ್ಲಿ 1957ರಿಂದ ಜಾತಿ ಮತ್ತು ಸಮುದಾಯದ ಆಧಾರದ ಮೇಲೆ ಮತದಾನದ ವಿಧಾನ ವಿಶ್ಲೇಷಿಸಿದಾಗ, ಈಳವರು ಮತ್ತು ಇತರೆ ಹಿಂದುಳಿದವರು ಹೆಚ್ಚಿನ ಸಂಖ್ಯೆಯಲ್ಲಿ ಕಮ್ಯುನಿಸ್ಟ್ ಪಕ್ಷಕ್ಕೆ ಬೆಂಬಲಿಸಿ, ಅದರ ಬೆನ್ನೆಲುಬಾಗಿ ಕೆಲಸ ಮಾಡಿರುವುದು ಗೋಚರಿಸುತ್ತದೆ. ಈಳವರ ಜಾತಿ ಸಂಘಟನೆಯೆನ್ನುವ ನೆಲೆಯಲ್ಲಿ, ಶ್ರೀನಾರಾಯಣ ಧರ್ಮ ಪರಿಪಾಲನಾ ಯೋಗಮ್ (ಇನ್ನು ಮುಂದೆ ಎಸ್‌ಎನ್‌ಡಿಪಿ) ಮೊದಲಿನಿಂದಲೂ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಉನ್ನತಿಗಾಗಿ ಶ್ರಮಿಸುತ್ತಿದೆ. ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ಅವಧಿಯಲ್ಲಿ, ಕಾಂಗ್ರೆಸ್‌ನಲ್ಲಿರುವುದಕ್ಕೆ ಸಮಾನವಾದ ಹಿತಾಸಕ್ತಿಗಳಿಗೆ ಪೂರಕವಾಗಿ ಕೆಲಸ ಮಾಡಿದ ರಾಜಕಾರಣಿಗಳೇ ಎಸ್‌ಎನ್‌ಡಿಪಿಯ ನೇತೃತ್ವವನ್ನೂ ವಹಿಸಿಕೊಂಡಿರುವುದು.*

ಕೃಷಿ ಸಂಬಂಧಗಳ ಮಸೂದೆ, 1957ಕ್ಕೆ ಎಸ್‌ಎನ್‌ಡಿಪಿಯು ಕೆಲವು ತಿದ್ದುಪಡಿಗಳನ್ನು ಸೂಚಿಸಿತು.**(32:02.01.58) ಸೆಪ್ಟೆಂಬರ್ 1958ರಲ್ಲಿ ಆಡಳಿತ ಸುಧಾರಣಾ ಸಮಿತಿಯ

---

* 1959ರಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಹೊರಹಾಕಿದ ನಂತರ ಬಂದ ಕಾಂಗ್ರೆಸ್–ಪಿಎಸ್‌ಪಿ ಸಚಿವ ಸಂಪುಟದಲ್ಲಿ ಉಪಮುಖ್ಯಮಂತ್ರಿಯಾಗಿ, ನಂತರ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ ಶ್ರೀ ಆರ್.ಶಂಕರ್, ವಿಮೋಚನಾ ಹೋರಾಟದ ಸಂದರ್ಭದಲ್ಲಿ ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಆ ಸಮಯದಲ್ಲಿ ಎಸ್‌ಎನ್‌ಡಿಪಿ ಸಭೆಯ ಪ್ರಧಾನ ಕಾರ್ಯದರ್ಶಿಯಾಗಿದ್ದ ಶ್ರೀ.ಕೆ.ಆರ್.ನಾರಾಯಣನ್, ಕಾಂಗ್ರೆಸ್‌ನ ಶಾಸಕರೂ ಆಗಿದ್ದರು.

** ಮಸೂದೆ ಪ್ರಕಟವಾದಾಗ, ಎಸ್.ಎನ್.ಡಿ.ಪಿ ಆಡಳಿತ ಮಂಡಳಿ ಸಭೆ ಮಸೂದೆಯನ್ನು ಸ್ವಾಗತಿಸಿತು. ಮಸೂದೆಯನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಲು ಅಧ್ಯಕ್ಷರ ನೇತೃತ್ವದಲ್ಲಿ ಏಳು ಸದಸ್ಯರ ಸಮಿತಿಯು 31 ಡಿಸೆಂಬರ್ 1957ರಂದು ಸಭೆ ಸೇರಿತು. ಸಮಿತಿಯು ತನ್ನ

ವರದಿಯನ್ನು ಪ್ರಕಟಿಸುವವರೆಗೆ ಸರ್ಕಾರವನ್ನು ಅನುಸರಿಸುವಂಥ ಯಾವುದೇ ಸ್ಪಷ್ಟ ನೀತಿಗಳನ್ನು ಎಸ್.ಎನ್.ಡಿ.ಪಿ ರೂಪಿಸಿಕೊಂಡಿರಲಿಲ್ಲ. ಸರ್ಕಾರಿ ಸೇವೆಗಳ ಪ್ರವೇಶಕ್ಕಾಗಿ ಸಮುದಾಯದ ಮೀಸಲಾತಿಯನ್ನು ರದ್ದುಗೊಳಿಸಬೇಕೆಂದು ಮೇಲಿನ ವರದಿಯಲ್ಲಿ ಹೇಳಲಾಗಿತ್ತು. ಗುರುದೇವ ಸಮಾಧಿ ದಿನ ಮತ್ತು ಕುಳತ್ತೂರು ಶ್ರೀನಾರಾಯಣ ಗ್ರಂಥಾಲಯದ ವಾರ್ಷಿಕೋತ್ಸವವನ್ನು ಜಂಟಿಯಾಗಿ ಆಚರಿಸಲು ಎಸ್‌ಎನ್‌ಡಿಪಿ 1958ರ ಸೆಪ್ಟೆಂಬರ್ 21ರಂದು ಕುಳತ್ತೂರಿನಲ್ಲಿ ಒಂದು ದೊಡ್ಡ ಸಭೆಯನ್ನು ಕರೆಯಲಾಗಿತ್ತು. ಈ ಸಭೆಯಲ್ಲಿ ಕೇರಳ ಕೌಮುದಿ ಪತ್ರಿಕೆಯ ಮುಖ್ಯ ಸಂಪಾದಕ ಕೆ. ಸುಕುಮಾರನ್, ಕಮ್ಯುನಿಸ್ಟ್ ಸರ್ಕಾರದ ಆಡಳಿತ ಸುಧಾರಣಾ ಸಮಿತಿ ವರದಿಯನ್ನು ಕಟುವಾಗಿ ಟೀಕಿಸಿದರು(37:p171-173). ಕೆ. ಸುಕುಮಾರನ್ ಅವರ ಪ್ರಚೋದನಕಾರಿ ಭಾಷಣ ಮತ್ತು ಟೀಕೆಗಳೆಲ್ಲವೂ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್‌ರವರ ಸಮ್ಮುಖದಲ್ಲೇ ನಡೆಯಿತು(37:). ಸೆಪ್ಟೆಂಬರ್ 27, 1958ರಂದು ಎಸ್.ಎನ್.ಡಿ.ಪಿ ಕಾರ್ಯಕಾರಿ ಸಮಿತಿಯು ಆಡಳಿತ ಸುಧಾರಣಾ ಸಮಿತಿಯ ಶಿಫಾರಸುಗಳನ್ನು ವಿರೋಧಿಸುವ ನಿರ್ಣಯವನ್ನು ಅಂಗೀಕರಿಸಿತು. ಮೀಸಲಾತಿಯ ಭಾಗವಾಗಿ ತಾವು ಪಡೆದ ಪ್ರಯೋಜನಗಳನ್ನು ರಕ್ಷಿಸಲು ಇತರೆ ಹಿಂದುಳಿದ ವರ್ಗ ಮತ್ತು ಸಮುದಾಯಗಳ ಸಹಯೋಗದಲ್ಲಿ ಪ್ರತ್ಯಕ್ಷ ಹೋರಾಟ ನಡೆಸಲು ಸಂಘಟನೆ ನಿರ್ಧರಿಸಿತು(129:28.09.58). ಮುಕ್ತ ಹೋರಾಟದ ಕರಡು ರಚನೆಯ ಕಾರ್ಯದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದ ನಿರ್ದೇಶಕ ಮಂಡಳಿಯು ಅಕ್ಟೋಬರ್ 17, 1958ರಂದು ಆಡಳಿತ ಸುಧಾರಣಾ ಸಮಿತಿ ವರದಿಯನ್ನು ವಿರೋಧಿಸಿ ಬಹಿರಂಗ ಹೋರಾಟ ನಡೆಸಲು ನಿರ್ಧರಿಸಿತು(32:18.10.58).

'ಹಿಂದೂ ಐಕ್ಯತೆ ಮತ್ತು ಕೋಮು ಸೌಹಾರ್ದಕ್ಕೆ' ವಿರುದ್ಧವಾದದ್ದು ಎಂಬ ಕಾರಣದ ನೆಪದಲ್ಲಿ, ಎಸ್‌ಎನ್‌ಡಿಪಿಯ ಈ ತೀರ್ಮಾನವನ್ನು ನಾಯರ್ ಸರ್ವೀಸ್ ಸೊಸೈಟಿ ಆಕ್ಷೇಪ ವ್ಯಕ್ತಪಡಿಸಿತು(32:04.11.58). ಮೀಸಲಾತಿಯ ಬಗ್ಗೆ ಎನ್‌ಎಸ್‌ಎಸ್‌ಗೆ ಇದ್ದಂಥ ವಿರೋಧವು ಎಸ್‌ಎನ್‌ಡಿಪಿಯನ್ನು ಅಸಮಾಧಾನಗೊಳಿಸಿತು. ಹಿಂದಿನ ಹೋರಾಟದ ಫಲವಾಗಿ, ಮೀಸಲಾತಿಯಿಂದ ಪಡೆದ ಅಲ್ಪ ಲಾಭದ ನೇರಕ್ಕೆ ಎದ್ದುಬಂದ ಬೆದರಿಕೆಯನ್ನು ಎದುರಿಸಲು ಮತ್ತು ಒಗ್ಗಟ್ಟಿನಿಂದ ಮುನ್ನಡೆಯಲು ಇತರೆ ಹಿಂದುಳಿದ ಸಮುದಾಯಗಳಿಗೆ ಎಸ್‌ಎನ್‌ಡಿಪಿಯು ಪದೇ ಪದೇ ಕರೆ ನೀಡಲಾಯಿತು. ಪ್ರಧಾನ ಕಾರ್ಯದರ್ಶಿಯ ನೇತೃತ್ವದಲ್ಲಿ ಎಸ್‌ಎನ್‌ಡಿಪಿ ಪ್ರತಿನಿಧಿಗಳ ನಿಯೋಗವು, ನವೆಂಬರ್ 4, 1958ರಂದು ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ,

---

ವರದಿಯನ್ನು ಫೆಬ್ರವರಿ 25, 1958ರಂದು ಸಲ್ಲಿಸಿತು.
ಈ ಮಸೂದೆ ಸಮಾಜವಾದದತ್ತ ಮೊದಲ ಹೆಜ್ಜೆಯಾಗಿದೆ., ಎಂದು ಸಮಿತಿ ಅಭಿಪ್ರಾಯಪಟ್ಟಿತ್ತು. ಭೂ ಮಿತಿಗಳ ನಿರ್ಣಯಕ್ಕೆ ಸಂಬಂಧಿಸಿದ ವಿಭಾಗಗಳಲ್ಲಿ ಸಮಿತಿಯು ತಿದ್ದುಪಡಿಗೆ ಪ್ರಸ್ತಾವನೆ ಸಲ್ಲಿಸಿದ್ದು, ಹೆಚ್ಚುವರಿ ಭೂಮಿ ಸ್ವಾಧೀನಪಡಿಸಿಕೊಂಡ ಮೇಲೆ ಪರಿಹಾರ ನೀಡಬೇಕು ಮತ್ತು ಸೌಜನ್ಯ/ಗೌರವ ಗೇಣಿ ನಿಗದಿಪಡಿಸಬೇಕು ಎಂದು ಸೂಚಿಸಿತ್ತು.

ಈಗಿರುವ ಮೀಸಲಾತಿ ವ್ಯವಸ್ಥೆಯಲ್ಲಿ ಯಾವುದೇ ಬದಲಾವಣೆಗಳನ್ನು ತರದಂತೆ ಮನವಿ ಮಾಡಿತು(129:05.11.58). ಕೇಂದ್ರ ಸಚಿವ ಜಗಜೀವನರಾಮ್‌ರವರಿಗು ಸಹ ನಿಯೋಗವು ಮನವಿ ಸಲ್ಲಿಸಿತು. ಉದ್ಯೋಗ ಮೀಸಲಾತಿಯನ್ನು ಕಾಯ್ದುಕೊಳ್ಳುವಂತೆ ಕೇರಳ ಸರ್ಕಾರಕ್ಕೆ ಸೂಚನೆ ನೀಡಬೇಕು ಎಂದು ನಿಯೋಗವು ಆಗ್ರಹಿಸಿತು. ಆಡಳಿತ ಸುಧಾರಣಾ ಸಮಿತಿಯ ವರದಿಯ ಹೆಸರಿನಲ್ಲಿ, ಕೋಮುಭಾವನೆಗಳಿಂದ ಪ್ರೇರಿತರಾದ ನಾಯರ್ ಮತ್ತು ಈಳ಼ವ ಸಮುದಾಯಗಳು ವಾಸ್ತವವಾಗಿ ಸರ್ಕಾರದ ವಿರುದ್ಧ ತಿರುಗಿ ಬಿದ್ದವು.

ಮೇ 1959ರ ಹೊತ್ತಿಗೆ, ಎಸ್‌ಎನ್‌ಡಿಪಿಯು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ತಿರುಗಿ ಬಿದ್ದಿತ್ತು. ರಾಜಕೀಯ ಪ್ರೇರಿತವಾದ ಅದರ ನಾಯಕತ್ವ, ಸರ್ಕಾರದ ವಿರುದ್ಧ ಪ್ರತಿಪಕ್ಷಗಳು ನಡೆಸುತ್ತಿದ್ದ ಆಂದೋಲನದೊಂದಿಗೆ ಸೇರಿಕೊಂಡು, ಸರ್ಕಾರವನ್ನು ಅಧಿಕಾರದಿಂದ ಹೊರಹಾಕಲು ಆಗ್ರಹಿಸಿತು(32:09.05.59). ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಏಕೀಕರ229ಣದಲ್ಲಿ ಎಸ್‌ಎನ್‌ಡಿಪಿ ತನ್ನದೇ ಆದ ಪಾತ್ರವನ್ನು ನಿರ್ವಹಿಸಿತು. ನಾಯಕತ್ವವು ಪರೋಕ್ಷವಾಗಿ ಸಂಘಟನೆಯನ್ನು ಕಮ್ಯುನಿಸ್ಟ್ ವಿರೋಧಿ ಪಾಳೆಯಕ್ಕೆ ಕರೆದೊಯ್ದು, ವಿಮೋಚನಾ ಹೋರಾಟ ಎಂದು ಕರೆಯಲ್ಪಡುವ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿತು.

## ಇಂಡಿಯನ್ ಯೂನಿಯನ್ ಮುಸ್ಲಿಂ ಲೀಗ್ (I.U.M.L)

ಕೇರಳದ ಕೋಮುವಾದಿ ರಾಜಕೀಯ ಸಂಘಟನೆಯಾದ ಇಂಡಿಯನ್ ಯೂನಿಯನ್ ಮುಸ್ಲಿಂ ಲೀಗ್ ರಾಜ್ಯದ ಕಮ್ಯುನಿಸ್ಟ್ ವಿರೋಧಿ ಶಕ್ತಿಗಳನ್ನು ಸಮನ್ವಯಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ಪಾಣಕ್ಕಾಡ್ ಪೂಕೋಯ ತಂಗಳ್, ಕೆ.ಎಂ. ಸೀತಿ ಸಾಹಿಬ್, ಕೇಯೀ ಸಾಹಿಬ್, ಬಿ. ಪೋಕರ್ ಸಾಹೇಬ್, ಸಿ.ಎಚ್. ಮುಹಮ್ಮದ್ ಕೋಯಾ ಮತ್ತು ಹಸನ್ ಗನಿ ಮುಂತಾದವರು ಈ ಕಾಲಘಟ್ಟದ ಕೇರಳದ ಪ್ರಮುಖ ಐ.ಯು.ಎಂ.ಎಲ್ ನಾಯಕರು(57:p236). 1957ರ ಚುನಾವಣೆಯಲ್ಲಿ ಐಯುಎಂಎಲ್ ಯು ಪಿಎಸ್‌ಪಿ ಯೊಂದಿಗೆ ಸೇರಿ ಮೈತ್ರಿ ಮಾಡಿಕೊಂಡಿತು. (162:p102)ಆ ಮೂಲಕ ಕೇರಳದ ಮೊದಲ ಶಾಸಕಾಂಗ ಸಭೆಗೆ ಅವರು 8 ಶಾಸಕರನ್ನು ಗೆಲ್ಲಿಸಲು ಸಾಧ್ಯವಾಯಿತು. ಶಾಸಕಾಂಗ ಸಭೆಯಲ್ಲಿ, ಐಯುಎಂಎಲ್ ನ ಸಿ.ಎಚ್. ಮುಹಮ್ಮದ್ ಕೋಯಾ ನಾಯಕರಾಗಿದ್ದರು. ಶಾಸಕಾಂಗದ ಚರ್ಚೆಗಳಲ್ಲಿ ಮತ್ತು ಸಾರ್ವಜನಿಕ ವೇದಿಕೆಗಳಲ್ಲಿ ಅವರು ಅದ್ಭುತವಾಗಿ ಮಾತನಾಡುತ್ತಿದ್ದರು. ಐಯುಎಂಎಲ್ ಆರಂಭದಿಂದಲೂ ಕಮ್ಯುನಿಸ್ಟ್ ಸರ್ಕಾರವನ್ನು ಟೀಕಿಸಿಕೊಂಡೇ ಬಂದಿತ್ತು.

1957ರಲ್ಲಿ ಕೇರಳ ಶಿಕ್ಷಣ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿದಾಗ ಐ.ಯು.ಎ.ಎಲ್ ಅದನ್ನು ಸ್ವಾಗತಿಸುತ್ತಲೇ, ಮೇನೆಜುಮೆಂಟಿಗೆ/ವ್ಯವಸ್ಥಾಪಕರಿಗೆ ಆಗುವ ಅನುಕೂಲತೆಗಳಿಗೆ ಮತ್ತು ಅಲ್ಪಸಂಖ್ಯಾತರ ಹಕ್ಕುಗಳಿಗೆ ಪ್ರತಿಕೂಲ ಪರಿಣಾಮ

ಬೀರುವ ನಿಬಂಧನೆಗಳನ್ನು ತಿದ್ದುಪಡಿ ಮಾಡುವ ಅಗತ್ಯತೆಗೆ ಪಟ್ಟು ಹಿಡಿದಿತ್ತು. ಶಾಲಾ ಚಟುವಟಿಕೆಗಳಲ್ಲಿ ಸ್ಥಳೀಯ ಮಟ್ಟದ ಶಿಕ್ಷಣ ಸಮಿತಿಗಳು ಭಾಗಿಯಾಗಬಹುದು ಎಂಬ ನಿಬಂಧನೆಯ ಬಗ್ಗೆ ಲೀಗ್‌ಗೆ ವಿರೋಧವಿತ್ತು. ಶಿಕ್ಷಣ ವಿಷಯಗಳ ಮೇಲೆ ನಿಷೇಧಗಳ ಆದೇಶ ಹೊರಡಿಸುವುದಕ್ಕೆ ಸಾಧ್ಯವಾಗುವ ರೀತಿಯಲ್ಲಿರುವ ನ್ಯಾಯಾಂಗ ವ್ಯವಸ್ಥೆಯ ಅಧಿಕಾರವನ್ನು ನಿಯಂತ್ರಣ ಮಾಡಬೇಕು ಎಂದೂ ಅವರು ಒತ್ತಾಯಿಸಿದರು(163:29.08.57). ಹೀಗೆ ಆರಂಭದಲ್ಲಿ ಶಿಕ್ಷಣ ಮಸೂದೆಗೆ ಹೇಗೋ ಒಂದು ರೀತಿಯಲ್ಲಿ ಸಹಕರಿಸಿಕೊಂಡು ಹೋಗುವ ಮನೋಭಾವನೆಯನ್ನು ಐಯುಎಂಎಲ್ ಸ್ವೀಕರಿಸಿತ್ತು.

ಆದರೆ ನಂತರ ಅಸೆಂಬ್ಲಿಯಲ್ಲಿ ಐಯುಎಂಎಲ್ ಸದಸ್ಯರು ತೆಗೆದುಕೊಂಡ ನಿಲುವು ವಿಭಿನ್ನವಾಗಿತ್ತು. ಅವರು ಎರಡು ವಿಷಯಗಳ ಬಗ್ಗೆ ಪ್ರತಿಭಟನೆ ನಡೆಸಿದರು(102:13-20.07.57). ಮೇನೆಜ್‌ಮೆಂಟಿನವರನ್ನು ದುರ್ಬಲಗೊಳಿಸುವ ಮತ್ತು ಅವರನ್ನು ನಿಸ್ಸಾಹಯಕರನ್ನಾಗಿಸುವ ದುರುದ್ದೇಶದಿಂದ ವಿನ್ಯಾಸಗೊಳಿಸಲಾದ ಶಿಕ್ಷಣ ಮಸೂದೆಯನ್ನು 'ನಾಜಿ-ಶೈಲಿಯ' ಕಾನೂನು ಎಂದು ಅವರು ವಿವರಿಸುತ್ತಾ, ಟೀಕೆಗೆ ಒಳಪಡಿಸಿದರು. ಆದ್ದರಿಂದ ಈ ಮಸೂದೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯವನ್ನು ಪಡೆದುಕೊಳ್ಳುವುದಕ್ಕಾಗಿ ಪ್ರಕಟಪಡಿಸಬೇಕು ಅಥವಾ ಪೂರ್ಣವಾಗಿ ಹಿಂಪಡೆಯಬೇಕು ಎಂದು ಒತ್ತಾಯಿಸಿದರು.

ಕೇರಳ ಕೃಷಿ ಸಂಬಂಧಗಳ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿದ ಸಮಯದಲ್ಲಿ, ಐಯುಎಂಎಲ್ ಅದರ ಉದ್ದೇಶಿತ ಗುರಿಗಳ ಬಗ್ಗೆ ಯಾವುದೇ ಅನುಮಾನಗಳು ವ್ಯಕ್ತಪಡಿಸಿರಲಿಲ್ಲ. ಆದರೆ ಮುಸ್ಲಿಂ ಸಮುದಾಯದ ಹಕ್ಕುಗಳಿಗೆ ಧಕ್ಕೆಯಾಗಬಹುದೆಂಬ ಆತಂಕವಿರುವುದರಿಂದ ಮಸೂದೆಯ ಕೆಲವು ನಿಬಂಧನೆಗಳನ್ನು ತಿದ್ದುಪಡಿ ಮಾಡಬೇಕೆಂದು ಲೀಗ್ ಒತ್ತಾಯಿಸಿತ್ತು. ಮಸೂದೆಯ ಉಸ್ತುವಾರಿಯನ್ನು ಹೊತ್ತಿದ್ದ ಮಂತ್ರಿ ಲೀಗ್‌ನ ಹೆಚ್ಚಿನ ಶಿಫಾರಸುಗಳನ್ನು ಅನುಮೋದಿಸಿದರು. ಮಸೂದೆಯ ಮೂರನೇ ಓದುವಿಕೆಯ ಸಂದರ್ಭದಲ್ಲಿ ಮಾತನಾಡಿದ ಐ.ಯು.ಎಂ.ಎಲ್. ಶಾಸಕ ಕೆ. ಹಸನ್ ಘನಿ ವಿಧೇಯಕವನ್ನು ಸ್ವಾಗತಿಸಿದ್ದಲ್ಲದೆ, ಇದು ರಾಜ್ಯದ ಸಮಸ್ತ ಜನತೆಯ ಶ್ರೇಯೋಭಿವೃದ್ಧಿಯೆಡೆಗಿನ ಅಗತ್ಯವಾದ ಹೆಜ್ಜೆಯಾಗಿದೆ ಎಂದು ಅಭಿಪ್ರಾಯಪಟ್ಟರು (102:10.06.57).

ಪಠ್ಯಪುಸ್ತಕ ವಿವಾದದ ಸಂದರ್ಭದಲ್ಲಿ ಐ.ಯು.ಎಂ.ಎಲ್ ಅವರು ಕ್ಯಾಥೋಲಿಕ್ ಚರ್ಚ್‌ನೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಕೆಲಸ ಮಾಡುತ್ತಾ, ಸರ್ಕಾರವನ್ನು ವಿರೋಧಿಸಿದರು. ಪ್ರಸಿದ್ಧ ಬರಹಗಾರ ವೈಕೋಮ್ ಮುಹಮ್ಮದ್ ಬಷೀರ್‌ರವರದ್ದು ಸೇರಿದಂತೆ ಕೆಲವು ಪಠ್ಯಪುಸ್ತಕಗಳನ್ನು ಶಾಲಾ ಪಠ್ಯಕ್ರಮದಿಂದ ತೆಗೆದುಹಾಕಲು, ಲೀಗ್ ಶಾಸಕಾಂಗದಲ್ಲಿ ಕಾಂಗ್ರೆಸ್‌ನೊಂದಿಗೆ ಸಹಕರಿಸಿತು(69:p169). ಮೇ 1958ರಲ್ಲಿ ನಡೆದ

ದೇವಿಕುಳಂ ಉಪಚುನಾವಣೆಯಲ್ಲಿ, ಲೀಗ್ ಕಾಂಗ್ರೆಸ್ ಅಭ್ಯರ್ಥಿಯನ್ನು ಬೆಂಬಲಿಸುತ್ತಾ, ಅವರು ಕಮ್ಯುನಿಸ್ಟ್ ಪಕ್ಷದ ವಿರುದ್ಧ ಪ್ರಚಾರ ಮಾಡಿದರು(57:p250).

ಅಲ್ಪಸಂಖ್ಯಾತರು ಮತ್ತು ಇತರ ಹಿಂದುಳಿದ ಸಮುದಾಯಗಳಿಗೆ ಸರ್ಕಾರಿ ಉದ್ಯೋಗದಲ್ಲಿ ಮೀಸಲಾತಿಗಾಗಿ ಆಡಳಿತ ಸುಧಾರಣಾ ಸಮಿತಿಯ ನಿಬಂಧನೆಗಳ ಶಿಫಾರಸುಗಳನ್ನು ಐಯುಎಂಎಲ್ ಅನುಮೋದಿಸಲಿಲ್ಲ. ಜನಸಂಖ್ಯೆಗೆ ಅನುಗುಣವಾಗಿ ಮಾತ್ರ ಮೀಸಲಾತಿ ಇರಬೇಕೆಂದೂ ಕೇರಳ ಲೋಕಸೇವಾ ಆಯೋಗ ಮತ್ತು ಹೈಕೋರ್ಟ್ ನೇಮಕಾತಿಗಳಲ್ಲಿ ಇದನ್ನು ಅನುಸರಿಸಬೇಕೆಂದೂ ಐಯುಎಂಎಲ್ ವಿಧಾನಸಭೆಯ ಒಳಗೂ ಹೊರಗೂ ಅವರ ಮುಖಂಡರು ಆಗ್ರಹಿಸಿದರು(102:06.12.58).

ಆ ದಿನಗಳಲ್ಲಿ, ಕೇರಳದಲ್ಲಿದ್ದಂಥ ವಿಶೇಷ ರಾಜಕೀಯ ಪರಿಸ್ಥಿತಿಯು ಒದಗಿಸಿದ ಅವಕಾಶಗಳನ್ನು ಬಳಸಿಕೊಂಡು, ಉಳಿದ ಪ್ರಮುಖ ರಾಜಕೀಯ ಪಕ್ಷಗಳ ಜೊತೆಗೆ ನಿಲ್ಲಲು ಸಾಧ್ಯವಾಗುವ ರೀತಿಯಲ್ಲಿರುವ ಸಾಮಾಜಿಕ-ರಾಜಕೀಯ ಮನ್ನಣೆಯನ್ನು ಪಡೆಯುವಲ್ಲಿ ಧಾರ್ಮಿಕ ಹಿನ್ನಲೆಯಿರುವ ರಾಜಕೀಯ ಪಕ್ಷವಾದ ಮುಸ್ಲೀಂ ಲೀಗ್ ಯಶಸ್ವಿಯಾಯಿತು. ಆಂಧ್ರ ಅಕ್ಕಿ ವ್ಯಾಪಾರದ ವ್ಯವಹಾರ ವಿಚಾರಣಾ ಸಮಿತಿ ವರದಿಯನ್ನು ಸರ್ಕಾರ ಅಂಗೀಕರಿಸಲು ನಿರಾಕರಿಸಿದ್ದರ ವಿರುದ್ಧ ಪ್ರತಿಭಟನೆ ನಡೆಸುತ್ತಾ, ಏಪ್ರಿಲ್ 5, 1959ರಂದು ನಡೆದ ಹರತಾಳದ ಸಮಯದಲ್ಲಿ, ಕಾಂಗ್ರೆಸ್ ಮತ್ತು ಪಿಎಸ್‌ಪಿಯೊಂದಿಗೆ ಜಂಟಿ ಸ್ಥಾಯಿ ಸಮಿತಿಯನ್ನು ರಚಿಸಲು ಲೀಗ್ ಸಹಕರಿಸಿತು (163:22.03.59;57:p256). ಸರ್ಕಾರದ ವಿರುದ್ಧ ಬಹಿರಂಗ ಹೋರಾಟದಲ್ಲಿ ಲೀಗ್ ಭಾಗವಹಿಸಿದ್ದರ ಮೊದಲ ಉದಾಹರಣೆಯಾಗಿ ಇದನ್ನು ಪರಿಗಣಿಸಬಹುದಾಗಿದೆ. ಇದಕ್ಕೆ ಪ್ರತಿಫಲವಾಗಿ, ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು, ಮೇ 6, 1959ರಂದು ಲೀಗ್‌ನ ರಾಜಕೀಯ ಮಹತ್ವವನ್ನು ಮೌನವಾಗಿ ಒಪ್ಪಿಕೊಂಡು, ಸರ್ಕಾರವನ್ನು ಉರುಳಿಸುವ ಹೋರಾಟದಲ್ಲಿ ಲೀಗ್‌ನೊಂದಿಗೆ ಔಪಚಾರಿಕ ಮೈತ್ರಿ ಮಾಡಿಕೊಳ್ಳಲು ಕೆಪಿಸಿಸಿಗೆ ಅನುಮತಿ ನೀಡಲಾಯಿತು(143:07.05.59). ಕಮ್ಯುನಿಸ್ಟ್ ವಿರೋಧಿ ಆಂದೋಲನದಲ್ಲಿ ಲೀಗ್‌ನ ಅಂತಹ ಭಾಗವಹಿಸುವಿಕೆಯಿಂದಾಗಿ ಮತ್ತು ಇತರ ವಿರೋಧ ಪಕ್ಷಗಳೊಂದಿಗಿನ ಸಹಕಾರದಿಂದಾಗಿ, ಕೇರಳದಲ್ಲಿ ಲೀಗ್‌ಗೆ ರಾಜಕೀಯ ಮನ್ನಣೆ ದೊರಕಿತು(162:p104). ಇದು ಕೇರಳದಾದ್ಯಂತ ಮುಸ್ಲಿಮರು ಅಧಿಕ ಸಂಖ್ಯೆಗಳಲ್ಲಿರುವ ಪ್ರದೇಶಗಳಲ್ಲಿ ಸ್ಥಳೀಯ ಪಕ್ಷದ ಸಮಿತಿಗಳನ್ನು ಸ್ಥಾಪಿಸಲು ಲೀಗ್‌ಗೆ ಸಹಾಯ ಮಾಡಿತು(162:).

ಐಯುಎಂಎಲ್ ನಾಯಕರು ಕೇರಳದಾದ್ಯಂತ ತಮ್ಮದೇ ಆದ ಸಾರ್ವಜನಿಕ ಸಭೆಗಳನ್ನು ಆಯೋಜಿದರು. ಉಪದೇಶಗಳಂಥ ಭಾಷಣಗಳ ಮೂಲಕ ಲೀಗ್ ನಾಯಕರು ಮುಸ್ಲಿಂ ಸಮುದಾಯದಲ್ಲಿ ಕಮ್ಯುನಿಸ್ಟ್ ವಿರೋಧಿ ಭಾವನೆಯನ್ನು ಹುಟ್ಟುಹಾಕಿದರು(107:07.07.59). ಇತರ ಸಂಘಟನೆಗಳ ಸ್ವಯಂಸೇವಕರೊಂದಿಗೆ

ಲೀಗ್ ಸ್ವಯಂಸೇವಕರು ಕಮ್ಯುನಿಸ್ಟ್ ವಿರೋಧಿ ಆಂದೋಲನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅದರ ನಾಯಕರು ಮುಸ್ಲೀಮ್ ಲೀಗನ್ನು ಶಕ್ತವಾದ ಮತ್ತು ಸಕ್ರಿಯವಾದ ಧಾರ್ಮಿಕ ಹಿನ್ನಲೆಯ ರಾಜಕೀಯ ಪಕ್ಷ ಎಂದು ಬಣ್ಣಿಸಿದರು(163:10.06.59). ಕೇರಳದಲ್ಲಿ ಆಗಿನ ಗೊಂದಲಮಯವಾದ ಸಾಮಾಜಿಕ-ರಾಜಕೀಯ ವಾತಾವರಣದಲ್ಲಿ, ಬೆಳಕಿನ ವೇಗದಲ್ಲಿ ವದಂತಿಗಳು ಹರಡಿಕೊಳ್ಳುತ್ತಿದ್ದವು. ಅರೇಬಿಕ್ ಕಾಲೇಜುಗಳನ್ನು ಮುಚ್ಚಲು ಸರ್ಕಾರ ನಿರ್ಧರಿಸಿದೆ ಎಂದು ಮುಸ್ಲಿಮರಲ್ಲಿ ಸುಳ್ಳು ಪ್ರಚಾರ ಪ್ರಬಲವಾಗಿ ಹರಡಿತು. ಇದು ಮುಸ್ಲಿಮರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಪ್ರದೇಶಗಳಲ್ಲಿ ವ್ಯಾಪಕ ಪ್ರತಿಭಟನೆಯನ್ನು ಸೃಷ್ಟಿಸಿತು(143:14.07.59).

> "ಇದೀಗ ನಾಸ್ತಿಕರು ಅಧಿಕಾರದಲ್ಲಿದ್ದಾರೆ, ಮುಸ್ಲಿಂ ಮಸೀದಿಗಳನ್ನು, ಕ್ರೈಸ್ತ ಚರ್ಚುಗಳನ್ನು, ದೇವರನ್ನು ನಂಬುವವರ ಇತರ ಪೂಜಾ ಸ್ಥಳಗಳನ್ನು ನಾಶಮಾಡಲು ಅವರು ಪ್ರತಿಜ್ಞಾಬದ್ಧರಾಗಿದ್ದಾರೆ; ಅವರು ಕೇರಳವನ್ನು ಒಂದು ಕಮ್ಯುನಿಸ್ಟ್ ರಾಜ್ಯವನ್ನಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿದ್ದಾರೆ"*

ಮುಂತಾದ ಊಹಾಪೋಹಗಳನ್ನು ಕ್ಷಿಪ್ರಗತಿಯಲ್ಲಿ ಹಬ್ಬಿಸಿದರು. ಜನರ ಮನಸ್ಸಿನಲ್ಲಿ ಕಮ್ಯುನಿಸ್ಟ್ ಪಕ್ಷದ ಬಗ್ಗೆ ಭಯ ಮತ್ತು ದ್ವೇಷ ಬೆಳೆಯುವಂತೆ ಮಾಡುವುದೇ ಇಂಥ ವದಂತಿಗಳನ್ನು ಹಬ್ಬಿಸುವುದರ ಹಿಂದಿನ ಗುಪ್ತ ಉದ್ದೇಶವಾಗಿತ್ತು. ಕೇರಳದ ವಿವಿಧ ಜಾತಿ ಮತ್ತು ಸಮುದಾಯಗಳಿಗೆ ಸೇರಿದವರ ಜನಮಾನಸದಲ್ಲಿ 'ಕಮ್ಯುನಿಸ್ಟ್ ಕ್ರಾಂತಿ'ಯ ಭಯ ಕಾಡುತ್ತಿತ್ತು. ಹೀಗೆ ಸಮಾಜದ ಗಣನೀಯ ವರ್ಗದ ಪ್ರಕ್ಷುಬ್ಧ ಮನಸ್ಥಿತಿಯು ಜನಸಾಮಾನ್ಯರ ಉನ್ಮಾದವಸ್ಥೆಯಾಗಿ ಪರಿಣಮಿಸಿತು.**(92:)

ಮುಸ್ಲಿಂ ಮಹಿಳೆಯರನ್ನು ಕಮ್ಯುನಿಸ್ಟ್ ವಿರೋಧಿ ಚಳವಳಿಯ ಮುಖ್ಯವಾಹಿನಿಗೆ ತರಲು ಮತ್ತು ಅವರನ್ನು ಪ್ರೇರೇಪಿಸಲು ಅಂದಿನ ಮಹಿಳಾ ಪ್ರಕಾಶನದ 'ವನಿತಾ'ದ ಸಂಪಾದಕರಾಗಿದ್ದ ಹಲೀಮಾ ಬೀವಿ, ಈ ತರಹ ಕರೆ ನೀಡಿದರು:

> "ಕೇರಳದಲ್ಲಿ ಇಂದು ನಡೆಯುತ್ತಿರುವುದು ಒಂದು ಸ್ಪರ್ಧಾತ್ಮಕವಾದ ಹೋರಾಟವಾಗಿದೆ; ನೈತಿಕ ಆಂದೋಲನ; ವಾಸ್ತವವಾಗಿ ಇದೊಂದು 'ಜಿಹಾದ್'. ಮುಸ್ಲಿಂ ಮಹಿಳೆಯರು ತಮ್ಮ ಸಹೋದರರೊಂದಿಗೆ ಈ ಜಿಹಾದ್‌ನಲ್ಲಿ ಭಾಗವಹಿಸಬೇಕು. ಈ ಪವಿತ್ರ ಯುದ್ಧವು, ಇಸ್ಲಾಂ ಧರ್ಮ ಮತ್ತು ಅದರ ನೈತಿಕ ಮೌಲ್ಯಗಳ ರಕ್ಷಣೆಗಾಗಿ ನಡೆಯುತ್ತಿದೆ. ಧಾರ್ಮಿಕ ಕಾರಣಕ್ಕಾಗಿ ಈ ಹೋರಾಟದಲ್ಲಿ ಮುಸ್ಲಿಂ ಮಹಿಳೆಯರ ಭಾಗವಹಿಸುವಿಕೆಯನ್ನು ಇಸ್ಲಾಂ

---

* ಶ್ರೀ.ಹಮೀದಲಿ ಶಾಮನಾದ್‌ಅವರೊಂದಿಗೆ 16 ಅಕ್ಟೋಬರ್ 2009 ರಂದು ಕಾಸರ್ಗಾಕ್ಕೆ ಭೇಟಿ ನೀಡಿ ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು ಅವರು ಮುಸ್ಲಿಂ ಲೀಗ್‌ನ ಹಿರಿಯ ಸದಸ್ಯರಾಗಿದ್ದರು. ಅವರು 1959 ರ ಕಮ್ಯುನಿಸ್ಟ್ ವಿರೋಧಿ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು.

** ಕಮ್ಯುನಿಸ್ಟ್ ವಿರೋಧಿ ಆಂದೋಲನದ ಅನೈತಿಕ ಸ್ವರೂಪದ ಬಗ್ಗೆ ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಇದು 'ಮಾಸ್ ಹಿಸ್ಟೀರಿಯಾ' ಎಂದು ಅಭಿಪ್ರಾಯಪಟ್ಟಿದ್ದಾರೆ

ಒಪ್ಪಿಕೊಳ್ಳುತ್ತದೆ ಎಂದು ನಾನು ನಂಬುತ್ತೇನೆ. ನಫೀಸತ್ ಬೀವಿ, ಫಾತಿಮಾ ಬೀವಿ, ಶ್ರೀಮತಿ. ಪಿ.ಕೆ. ಕುಂಜು, ತಂಕಮ್ಮ ಮಾಲಿಕ್ ಮುಂತಾದ ಮಹಿಳೆಯರು ಧರಣಿಯಲ್ಲಿ ಪಾಲ್ಗೊಂಡು ಬಂಧನಕ್ಕೊಳಗಾಗಿದ್ದರು. ಅವರೆಲ್ಲರೂ ಈಗ ಜೈಲಿನಲ್ಲಿದ್ದಾರೆ. ಅವರ ಮಾದರಿಯನ್ನು ಅನುಸರಿಸಲು ಕೇರಳದ ಮುಸ್ಲಿಂ ಮಹಿಳೆಯರನ್ನು ನಾನು ವಿನಂತಿಸುತ್ತೇನೆ ...."(143:19.07.59.)

ಹೀಗೆ ಕೋಮುಭಾವನೆಗಳಲ್ಲಿ ಉನ್ಮತ್ತರಾದ ಮುಸ್ಲಿಂ ರಾಜಕೀಯ ನಾಯಕರ ಮಾತುಗಳು ಮತ್ತು ಕಾರ್ಯಗಳು ಕಮ್ಯುನಿಸ್ಟ್ ವಿರೋಧಿ ವಿಭಾಗಗಳು ಸಮನ್ವಯಗೊಳ್ಳುವ ಪ್ರಕ್ರಿಯೆಗೆ ಹೆಚ್ಚಿನ ವೇಗ ಸಿಕ್ಕಿತು.

## ರಾಜಕೀಯ ಪಕ್ಷಗಳು

### ಪ್ರಜಾ ಸೋಷಿಯಲಿಸ್ಟ್ ಪಾರ್ಟಿ (ಪಿಎಸ್‌ಪಿ)

1957ರಲ್ಲಿ ಕೇರಳ ರಾಜ್ಯ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಒಂಬತ್ತು ಪಿಎಸ್‌ಪಿ ಅಭ್ಯರ್ಥಿಗಳು ಆಯ್ಕೆಯಾಗಿದ್ದರು. ಪಕ್ಷವು ಮಲಬಾರ್‌ನಲ್ಲಿ ಮುಸ್ಲಿಂ ಲೀಗ್‌ನೊಂದಿಗೆ ಮೈತ್ರಿ ಮಾಡಿಕೊಂಡಿತ್ತು. ತಿರು-ಕೊಚ್ಚಿ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಪಟ್ಟಂತಾಣು ಪಿಳ್ಳರವರು ವಿಧಾನಸಭೆಯಲ್ಲಿ ಪಿಎಸ್‌ಪಿಯ ನಾಯಕರಾಗಿದ್ದರು. ಅಸೆಂಬ್ಲಿ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ ಪಿ.ಆರ್. ಕುರುಪ್, ಎಂ. ನಾರಾಯಣ ಕುರುಪ್, ಪಿ.ಕೆ. ಕುಂಜು ಮುಂತಾದವರು ಪಿಎಸ್‌ಪಿಯ ಇತರ ಪ್ರಮುಖ ನಾಯಕರು. ಕಮ್ಯುನಿಸ್ಟ್ ಸರ್ಕಾರವನ್ನು ಖಂಡಿಸುವ ಒಂದೇ ಒಂದು ಅವಕಾಶವನ್ನು ಸಹ ಅವರು ಹಾಳು ಮಾಡಿಕೊಳ್ಳಲಿಲ್ಲ. ಅಶೋಕ್ ಮೆಹ್ತಾ ಮತ್ತು ಡಾ. ಕೆ.ಬಿ. ಮೆನನ್‌ರಂತಹ ಪಿಎಸ್‌ಪಿಯ ರಾಷ್ಟ್ರೀಯ ನಾಯಕರು ಯಾವಾಗಲೂ ಕಮ್ಯುನಿಸ್ಟ್ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ಟೀಕಿಸುತ್ತಿದ್ದರು.

ಸರ್ಕಾರ ಮತ್ತು ಪ್ರತಿಪಕ್ಷಗಳ ನಡುವೆ ಇದ್ದಂಥ ಘರ್ಷಣೆಗಳಲ್ಲಿ ಕಟ್ಟಂಪಳ್ಳಿ ಭೂ ಆಂದೋಲನವು ಸಹ ಒಂದಾಗಿತ್ತು. ಈ ಸಮಸ್ಯೆಯಿಂದಾಗಿ, ಪಿಎಸ್‌ಪಿ ಮತ್ತು ಕಾಂಗ್ರೆಸ್ ಪಕ್ಷಗಳಿಗೆ 'ದಮನಿತ ವರ್ಗದ ಲೀಗ್' ರಚಿಸಲು ಪ್ರೇರಣೆ ದೊರಕಿತು. ಪಿ.ಎಸ್.ಪಿ. ನಾಯಕ ಹಾಗೂ ಮಲಬಾರ್ ಮೂಲದ ಪಿ.ಆರ್. ಕುರುಪ್, 1957ರ ಜುಲೈನಲ್ಲಿ ಕಟ್ಟಂಪಲ್ಲಿ ಭೂಆಂದೋಲನದ ನೇತೃತ್ವ ವಹಿಸಿದ್ದರು. 1957ರ ಡಿಸೆಂಬರ್‌ನಲ್ಲಿ ಈ ಸಮಸ್ಯೆಯನ್ನು ಪರಿಹರಿಸಲಾಗಿದ್ದರೂ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಪಿಎಸ್‌ಪಿ ಯ ಪ್ರತಿಭಟನೆಯನ್ನು ಇದು ತೀವ್ರಗೊಳಿಸಿತು.

ಕೇರಳ ವಿಶ್ವವಿದ್ಯಾಲಯದ ಮಸೂದೆ 1957ಕ್ಕೆಪಿಎಸ್‌ಪಿವಿರೋಧ ವ್ಯಕ್ತಪಡಿಸಿತ್ತು. (35:p312) ಆದರೆ, ಕೇರಳ ಶಿಕ್ಷಣ ಮಸೂದೆಯ (1957) ಪ್ರಕರಣದಲ್ಲಿ ಪಿಎಸ್‌ಪಿ ಸದಸ್ಯರಲ್ಲಿ ಒಮ್ಮತದ ನಿಲುವು ಇರಲಿಲ್ಲ. ಪಟ್ಟಂತಾಣು ಪಿಳ್ಳ ಮತ್ತು ಇತರರು ಕೇರಳ ಶಿಕ್ಷಣ ಮಸೂದೆಯನ್ನು ಬೆಂಬಲಿಸಿದರು. ಇದಕ್ಕೆ ವ್ಯತಿರಿಕ್ತವಾಗಿ, ಜೋಸೆಫ್ ಚಾಳಿಕಾಡನ್

ಇದನ್ನು ಬಲವಾಗಿ ವಿರೋಧಿಸಿದರು. ಅವರು ಈ ವಿಚಾರದಲ್ಲಿ ಕ್ಯಾಥೋಲಿಕರೊಂದಿಗೆ ಸಹಕರಿಸುತ್ತಾ ಸರ್ಕಾರವನ್ನು ಅವಮಾನಿಸಿದರು. ಮಸೂದೆಯನ್ನು ಕಾನೂನಾಗದಂತೆ ತಡೆಯಲು ರಕ್ತಪಾತದ ತ್ಯಾಗಕ್ಕೆ ಕರೆ ನೀಡಿದರು(143:20.11.58). 1958ರ ವರದಕ್ಷಿಣೆ ನಿಷೇಧ ಮಸೂದೆಯ ವಿಚಾರದಲ್ಲೂ ಇದೇ ಧೋರಣೆಯನ್ನು ಇಟ್ಟುಕೊಂಡಿದ್ದರು(102:01-03.03.58).

1957ರಲ್ಲಿ ಕೇರಳ ಅಕ್ಕಿ ಮತ್ತು ಇತರೆ ಆಹಾರ ಧಾನ್ಯಗಳ ಕೊರತೆ, ಬೆಲೆಯೇರಿಕೆ ಮುಂತಾದ ಸಮಸ್ಯೆಗಳಿಂದಾಗಿ ಕೇರಳವು ತತ್ತರಿಸಿದಾಗ ಕಾಂಗ್ರೆಸ್ ಮಾದರಿಯನ್ನು ಅನುಸರಿಸಿಕೊಂಡು ಪಿಎಸ್‌ಪಿಯು ರಾಜ್ಯದಲ್ಲಿ ಉಪವಾಸ ಜಾಥಾಗಳನ್ನು ಆಯೋಜಿಸಿತು. ಬೆಲೆಯೇರಿಕೆಯನ್ನು ತಡೆಗಟ್ಟಲು ಕ್ರಮ ತೆಗೆದುಕೊಳ್ಳಬೇಕು ಅಥವಾ ಸಚಿವ ಸಂಪುಟ ರಾಜೀನಾಮೆ ನೀಡಬೇಕು ಎಂದು ಪಿಎಸ್‌ಪಿ ತೀವ್ರವಾಗಿ ಆಗ್ರಹಿಸಿತು. ಅವರ ಉಪವಾಸ ಸತ್ಯಾಗ್ರಹ ಜುಲೈ 13, 1957ರಂದು ತಿರುವನಂತಪುರದಲ್ಲಿ ಕೊನೆಗೊಂಡಿತು(69:p141). ಕೇರಳದ ಶಿಕ್ಷಣ ಮಸೂದೆಯ ವಿಚಾರದಲ್ಲಿದ್ದಂತಯೇ ಕೇರಳದ ಕೃಷಿ ಸಂಬಂಧಗಳ ಮಸೂದೆಯ (1958) ವಿಚಾರದಲ್ಲೂ ಪಿಎಸ್‌ಪಿಗೆ ಒಂದೇ ರೀತಿಯ ನಿಲುವು ಇರಲಿಲ್ಲ. ಏಕೆಂದರೆ, ಪಕ್ಷದ ಕೆಲವು ಪ್ರಭಾವಿ ನಾಯಕರು, ಸ್ವತಃ ಭೂಮಾಲೀಕರಾಗಿದ್ದರು ಅಥವಾ ಭೂಮಾಲೀಕರ ಹಿತಾಸಕ್ತಿಗಳ ಪ್ರಭಾವಕ್ಕೊಳಗಾಗಿದ್ದರು. ಭೂಮಾಲೀಕರ ಹಿತಾಸಕ್ತಿಗಳಿಂದ ಪ್ರಭಾವಿತವಾಗಿರುವ ಈ ಪಕ್ಷವು ಮಸೂದೆಯನ್ನು ವಿರೋಧಿಸಿತು. ಸ್ವತಃ ಒಬ್ಬ ಜಮೀನ್ದಾರರಾಗಿದ್ದ ಜೋಸೆಫ್ ಚಳಿಕಾಡನ್‌ರಂತಹ ನಾಯಕರು ಈ ವಿರೋಧದ ಮುಂಚೂಣಿಯಲ್ಲೇ ಇದ್ದರು.* ಕಮ್ಯುನಿಸ್ಟ್ ವಿರೋಧಿ ಚಳುವಳಿಗೆ ಕ್ಯಾಥೋಲಿಕ್ ಚರ್ಚ್, ಪಿಎಸ್‌ಪಿಯ ಬೆಂಬಲವನ್ನು ಇದೇ ಜೋಸೆಫ್ ಚಳಿಕಾಡನ್‌ರ ಸಹಕಾರದಿಂದ ಪಡೆದಿತ್ತು.

**ಕ್ರಾಂತಿಕಾರಿ ಸಮಾಜವಾದಿ ಪಕ್ಷ (ಆರ್‌ಎಸ್‌ಪಿ)**

ಕ್ರಾಂತಿಕಾರಿ ಸಮಾಜವಾದಿ ಪಕ್ಷವು ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಪ್ರಬಲವಾದ ರಕ್ಷಣೆಯನ್ನು ಒದಗಿಸಿತು. ಎನ್. ಶ್ರೀಕಂಠನ್ ನಾಯರ್, ಟಿ.ಕೆ. ದಿವಾಕರನ್, ಕೆ. ಬಾಲಕೃಷ್ಣನ್ ಮುಂತಾದವರೇ ಕೇರಳದಲ್ಲಿ ಆರ್‌ಎಸ್‌ಪಿಯ ಪ್ರಮುಖ ನಾಯಕರಾಗಿದ್ದವರು. 1957ರ ರಾಜ್ಯ ಚುನಾವಣೆಯಲ್ಲಿ ಯಾವುದೇ ಮೈತ್ರಿಗೆ ಸೇರದೆ ಆರ್‌ಎಸ್‌ಪಿ ಸ್ಪರ್ಧಿಸಿತ್ತು. ಪರಿಣಾಮವಾಗಿ ಅವರ ಅಭ್ಯರ್ಥಿಗಳು ಚುನಾವಣೆಯಲ್ಲಿ ಗೆಲ್ಲಲು ವಿಫಲರಾದರು. ಆದರೆ ಕೊಲ್ಲಂ ಜಿಲ್ಲೆಯಲ್ಲಿ, ವಿಶೇಷವಾಗಿ ಅವರು ಟ್ರೇಡ್ ಯೂನಿಯನ್ ಕ್ಷೇತ್ರದಲ್ಲಿ ಸಕ್ರಿಯರಾಗಿದ್ದರು. ಕಮ್ಯುನಿಸ್ಟ್ ಸರ್ಕಾರವನ್ನು ವಿರೋಧಿಸುವಲ್ಲಿ ಅವರು ಉತ್ಸಾಹವನ್ನೇನು ತೋರಿಸಲಿಲ್ಲ. ಆರ್‌ಎಸ್‌ಪಿಯ ಟ್ರೇಡ್ ಯೂನಿಯನ್ ಆದ ಯುಟಿಯುಸಿ ಮತ್ತು ಕಮ್ಯುನಿಸ್ಟ್ ಪಕ್ಷದ ಟ್ರೇಡ್ ಯೂನಿಯನ್

---

* ಓಶಾನ ಮೌಂಟ್‌ನಲ್ಲಿ ಶ್ರೀ ಜೋಸೆಫ್ ಪುಲಿಕುನ್ನೆಲ್ ಅವರೊಂದಿಗೆ 26 ಜನವರಿ 2010ರಂದು ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು.

ಆದ ಎಐಟಿಯುಸಿ ನಡುವೆ ಮೇಲುಗೈ ಸಾಧಿಸಲು ಕಾರ್ಯಕರ್ತರ ನಡುವೆ ತೀವ್ರ ಪೈಪೋಟಿ ಏರ್ಪಟ್ಟಿತ್ತು. ಕಮ್ಯುನಿಸ್ಟ್ ಸರ್ಕಾರದ ಟ್ರೇಡ್ ಯೂನಿಯನ್ ನೀತಿಯನ್ನು ಆರ್‌ಎಸ್‌ಪಿ ಕಾರ್ಯಕರ್ತರು ಒಪ್ಪುತ್ತಿರಲಿಲ್ಲ.

1958, ಜುಲೈನಲ್ಲಿ, ಚಂದನತೋಪು ಎನ್ನುವಲ್ಲಿ ನಡೆದ ಕಾರ್ಮಿಕರ ಮುಷ್ಕರವನ್ನು ಹತ್ತಿಕ್ಕುವಾಗ, ಸುಲೇಮಾನ್ ಮತ್ತು ರಾಮನ್ ಎನ್ನುವವರನ್ನು ಪೊಲೀಸರು ಗುಂಡಿಕ್ಕಿ ಕೊಂದಿದ್ದರು. ಈ ಘಟನೆಯು ಕಮ್ಯುನಿಸ್ಟ್ ಸರ್ಕಾರದ ಮೇಲೆ ಆರ್‌ಎಸ್‌ಪಿಯ ದ್ವೇಷವನ್ನು ಹೆಚ್ಚಿಸುತ್ತಾ ಹೋಯಿತು. ಆರ್‌ಎಸ್‌ಪಿಯಲ್ಲಿ ದಮನಿತಗೊಂಡಿದ್ದ ಕೋಪ, ಕಮ್ಯುನಿಸ್ಟ್ ಸರ್ಕಾರದ ವಿರೋಧಿ ಚಳವಳಿಯಲ್ಲಿ ಬಲವಾಗಿ ಪ್ರತಿಬಿಂಬಿತವಾಯಿತು.

**ಭಾರತೀಯ ರಾಷ್ಟ್ರೀಯ ಕಾಂಗ್ರೆಸ್**

ಈ ಕಾಲಾವಧಿಯಲ್ಲಿ (1957–59)ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಕೇರಳದ ಅತ್ಯಂತ ಪ್ರಮುಖ ವಿರೋಧಪಕ್ಷವಾಗಿತ್ತು. ಇದಕ್ಕೆ ಸೃಜನಾತ್ಮಕವಾದ ವಿರೋಧಪಕ್ಷವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ಕೇರಳದಲ್ಲಿ ಪಕ್ಷದೊಳಗಿನ ಹಿತಾಸಕ್ತಿಗಳ ಸಂಘರ್ಷ ವಿಧಾನಸಭೆಯ ಒಳಗೆ ಮತ್ತು ಹೊರಗೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಬದಲಿಗೆ, ಅವರು ಯಾವಾಗಲೂ ಎಲ್ಲಾ ಹಂತಗಳಲ್ಲೂ ಸರ್ಕಾರವನ್ನು ಬಲವಾಗಿ ವಿರೋಧಿಸುತ್ತಾ ಬಂದರು. ವಾಸ್ತವವಾಗಿ ಕೇಂದ್ರದಲ್ಲಿ ಮತ್ತು ಬಹುತೇಕ ರಾಜ್ಯಗಳಲ್ಲಿ ಕಾಂಗ್ರೆಸ್ ಆಡಳಿತ ಪಕ್ಷವಾಗಿತ್ತು. ರಾಜ್ಯದಲ್ಲಿ ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಕ್ರೋಢೀಕರಣಕ್ಕೆ, ಕೇಂದ್ರ ಮತ್ತು ರಾಜ್ಯದಲ್ಲಿ ಕೆಲವು ಪಕ್ಷದ ನಾಯಕರ ಅಸಹಿಷ್ಣುತೆಯಿಂದಾಗಿ ಪ್ರಮುಖವಾಗಿ ಸಹಕರಿಸಿತು(69:p212). ಎಐಸಿಸಿ ಅಧ್ಯಕ್ಷರಾಗಿದ್ದ (1957–58) ಯು.ಎನ್.ಧಬಾರ್ ಮತ್ತು ಕಾರ್ಯದರ್ಶಿಯಾಗಿದ್ದ ಶ್ರೀಮನ್ ನಾರಾಯಣ್ ಇಬ್ಬರು ಸಹ ಆರಂಭದಿಂದಲೂ ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧವಿದ್ದವರು(69:;73:p174). ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಯ ಕೆಲವು ನಾಯಕರು, ವಿಶೇಷವಾಗಿ ಮಲಬಾರಿನವರು ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ಉದಾರವಾಗಿದ್ದರು. ಕೆ.ಎ. ದಾಮೋದರ ಮೆನನ್, ಸಿ.ಕೆ. ಗೋವಿಂದ ನಾಯರ್, ಎ.ವಿ. ಕುಟ್ಟಿಮಾಳು ಅಮ್ಮ ಮುಂತಾದವರು ಇದಕ್ಕೆ ಉದಾಹರಣೆ(69:p215).

ಪಿ.ಟಿ. ಚಾಕೋ ವಿಧಾನಸಭೆಯ ವಿರೋಧ ಪಕ್ಷದ ನಾಯಕರಾಗಿದ್ದರು. ಅವರು ಪ್ರತಿಭಾವಂತ ನಾಯಕ ಮತ್ತು ಉತ್ತಮ ಸಂಸದೀಯ ಪಟು. ಕಮ್ಯುನಿಸ್ಟ್ ಸರ್ಕಾರಕ್ಕೆ ಅವರ ಅವಿರತ ವಿರೋಧ, ಚರ್ಚ್ ಮತ್ತು ಜಮೀನುದಾರರ ಬಲವಾದ ಬೆಂಬಲ, ಪಟ್ಟಭದ್ರ ಹಿತಾಸಕ್ತಿಗಳ, ಮತ್ತು ಸಮುದಾಯ ಶಕ್ತಿಗಳ ಬೆಂಬಲಗಳಿಂದಾಗಿ ಏಕೀಕರಣಕ್ಕೆ ಸುಲಭವಾಗಿ ದಾರಿ ಮಾಡಿಕೊಟ್ಟಿತು. ಕೇರಳದಲ್ಲಿ ಕಾಂಗ್ರೆಸ್‌ನ ಕ್ರಿಶ್ಚಿಯನ್ ಲಾಬಿ/ಪ್ರಭಾವ ಆ ಕಾಲಘಟ್ಟದಲ್ಲಿ ಪಕ್ಷದ ನೀತಿ ಮತ್ತು ಯೋಜನೆಗಳ ಮೇಲೆ ಗಾಢವಾಗಿ ಪ್ರಭಾವ ಬೀರಿದೆ. ಪ್ರಜಾಸತ್ತಾತ್ಮಕವಾಗಿ ಆಯ್ಕೆಯಾದ ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ,

ಆಕ್ರಮಣಕಾರಿ ಮತ್ತು ಪ್ರಜಾಪ್ರಭುತ್ವ ವಿರೋಧಿ ಪ್ರತಿಭಟನೆಗಳ ನೇತೃತ್ವ ವಹಿಸಲು ಅವರು ಪಕ್ಷವನ್ನು ಪ್ರೇರೇರಿಪಿಸಿದರು.

ಆರಂಭದಲ್ಲಿ, ಕಮ್ಯುನಿಸ್ಟ್ ಸರ್ಕಾರದ ಕೆಲವು ಕ್ರಮಗಳು, ಕೇರಳದ ಪ್ರತಿಪಕ್ಷಗಳನ್ನು ಆಕ್ರೋಶಗೊಳಿಸಿದ್ದವು. ಒಕ್ಕಲೆಬ್ಬಿಸುವಿಕೆಯನ್ನು ತಡೆಯುವ ಆದೇಶ, ಕೈದಿಗಳಿಗೆ ಉಪಕಾರವಾಗುವಂಥ ಸರ್ಕಾರಿ ಆದೇಶ, ಬೇರೆ ಬೇರೆ ಅವಧಿಯ ಜೈಲುವಾಸ ಅನುಭವಿಸುತ್ತಿದ್ದ ಕೈದಿಗಳ ಬಿಡುಗಡೆ ಮತ್ತು ರಾಜಕೀಯ ಪ್ರಕರಣಗಳ ಹಿಂಪಡೆಯುವಿಕೆ ಇವೇ ಮುಂತಾದ ಕ್ರಮಗಳಿಂದಾಗಿ ಸರ್ಕಾರವು ಪ್ರತಿಪಕ್ಷಗಳಿಂದ ತೀವ್ರ ಟೀಕೆಗೆ ಗುರಿಯಾಯಿತು(69:p94).

ಆಂಧ್ರಪ್ರದೇಶದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಮುಖ ನಾಯಕರಾಗಿದ್ದು, ಆಗ ಕೇರಳ ರಾಜ್ಯದ ರಾಜ್ಯಪಾಲರಾಗಿದ್ದ ರಾಮಕೃಷ್ಣ ರಾವ್, ಕಮ್ಯುನಿಸ್ಟ್ ಸರ್ಕಾರವನ್ನು ಬೆಂಬಲಿಸಲಿಲ್ಲ. ಕೇರಳದ ಸಾಮಾಜಿಕ-ರಾಜಕೀಯ ವಾತಾವರಣದಲ್ಲಿ 'ಅಭದ್ರಾವಸ್ಥೆ' ಎನ್ನುವ ಕೂಗು ವೇಗವಾಗಿಯೂ ವ್ಯಾಪಕವಾಗಿಯೂ ಹರಡಿತು. ಕಮ್ಯುನಿಸ್ಟ್ ಪಕ್ಷದ ಘಟಕಗಳ ಮೇಲೆ ಆರೋಪಿಸಿದ್ದ 'ಸೆಲ್ ಕೋರ್ಟ್'ಗಳ ವಿರುದ್ಧದ ಟೀಕೆಗಳು ಮತ್ತು ಸುಳ್ಳು ಪ್ರಚಾರಗಳು, ಕಮ್ಯುನಿಸ್ಟ್ ವಿರೋಧಿಗಳ ಬೆಂಬಲವನ್ನು ಪಡೆಯಲು ಪ್ರತಿಪಕ್ಷಗಳಿಗೆ ಸಹಾಯ ಮಾಡಿತು. ತೋಟ/ಎಸ್ಟೇಟ್‌ಗಳನ್ನು ರಾಷ್ಟ್ರೀಕರಣಗೊಳಿಸುವುದರ ಬಗ್ಗೆ ಸರ್ಕಾರದ ಪ್ರಯತ್ನ, ಕಾರ್ಮಿಕರ ಸಹಕಾರ ಸಂಘಗಳ ರಚನೆ, ಸಾರ್ವಜನಿಕ ಸೇವೆಯಲ್ಲಿ ಉದ್ಯೋಗ ಮೀಸಲಾತಿ, ಕೇರಳ ಶಿಕ್ಷಣ ಮಸೂದೆ, ವರದಕ್ಷಿಣೆ ನಿಷೇಧ ಮಸೂದೆ, ಶಬರಿಮಲೆಯಲ್ಲಿ ನಡೆದ ಅಗ್ನಿ ಘಟನೆಯ ಬಗ್ಗೆ ತನಿಖೆಯ ವರದಿ ಪ್ರಕಟಣೆ, ದೇವಿಕುಳಂ ಉಪಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷ ಜಯಭೇರಿ ಬಾರಿಸಿದ್ದು, ನಂಬೂದಿರಿಪಾಡ್ ಅವರ ವಿವಾದಾತ್ಮಕ 'ಅಂತರ್ಯುದ್ಧ'ದ (Civil War Speech) ಭಾಷಣ, ಆಂಧ್ರ ಅಕ್ಕಿಯ ವ್ಯವಹಾರಕ್ಕೆ ಸಂಬಂಧಿಸಿದ ಆರೋಪಗಳು, ಕೃಷಿ ಮಸೂದೆ ಸೇರಿದಂತೆ ಕೆಲವು ಗಂಭೀರ ವಿಷಯಗಳು ಕೇರಳದ ವಿರೋಧಪಕ್ಷಗಳನ್ನು, ಇತರೆ ಸಂಘ-ಸಂಸ್ಥೆಗಳನ್ನು ಕೆರಳಿಸಿದವು. ವರಂತರಪಿಳ್ಳಿ ಹಿಂಸಾಚಾರ, ಮುನ್ನಾರ್‌ನಲ್ಲಿ ಪೋಲೀಸ್ ಫೈರಿಂಗ್, ಚಂದನತೋಪಿನ ಆಂದೋಲನ, ಸೀತಾರಾಮ್ ಮಿಲ್ ಆಂದೋಲನ, ದೋಣಿ ಸಾಗಣೆಕೂಲಿಗೆ ಸಂಬಂಧಿಸಿದ ವಿದ್ಯಾರ್ಥಿಗಳ ಆಂದೋಲನ ಮುಂತಾದವು ಕಮ್ಯುನಿಸ್ಟ್ ವಿರೋಧಿ ಬೆಂಕಿಗೆ ಸಾಕಷ್ಟು ಎಣ್ಣೆ ಸುರಿಯಲಾಯಿತು. ಈ ಬೆಳವಣಿಗೆಗಳು ಮತ್ತು ಇತರೆ ಕೆಲವು ಅಂತಾರಾಷ್ಟ್ರೀಯ, ರಾಷ್ಟ್ರೀಯ ಮತ್ತು ಪ್ರಾದೇಶಿಕ ಅಂಶಗಳು ಒಟ್ಟಾಗಿ ಸೇರಿ ಕೇರಳದಲ್ಲಿ ಅತ್ಯಂತ ವಿನಾಶಕಾರಿಯಾದ ಕಮ್ಯುನಿಸ್ಟ್ ವಿರೋಧಿ ಹೋರಾಟಕ್ಕೆ ದಾರಿ ಮಾಡಿಕೊಟ್ಟವು

ಫೆಬ್ರವರಿ 2, 1958ರಂದು, ಇಂದಿರಾ ಗಾಂಧಿಯವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು, ಅದೇ ವರ್ಷ ಆರ್. ಶಂಕರ್‌ರವರು ಸಹ ಕೇರಳ ಪ್ರದೇಶ

ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಆಯ್ಕೆಯಾದರು. ಅದರ ನಂತರ ಕೇರಳದ ಕಮ್ಯುನಿಸ್ಟ್ ಸರ್ಕಾರದೊಂದಿಗಿನ ಕಾಂಗ್ರೆಸ್ ವಿರೋಧವು ತೀವ್ರ ಅಸಹಿಷ್ಣುತೆಯ ಹಂತ ತಲುಪಿತು(69:p212-215). ವಿರೋಧ ಪಕ್ಷದ ನಾಯಕ ಪಿ.ಟಿ. ಚಾಕೊ ಮತ್ತು ಅವರ ಜೊತೆಗಾರರು, ಸರ್ಕಾರದ ವಿರುದ್ಧ ರಾಜಿಯಿಲ್ಲದ ಪ್ರತಿಭಟನೆಯ ನಿಲುವನ್ನು ತಳೆದರು. ಸರ್ಕಾರದ ಪ್ರತಿಯೊಂದು ಕ್ರಿಯೆಯ ಬಗ್ಗೆ ಅವರ ಅಸಮಂಜಸವಾದ ವರ್ತನೆಗಳಿಂದಾಗಿ ಆಡಳಿತ ವ್ಯವಸ್ಥೆಯ ಕಾರ್ಯನಿರ್ವಹಣೆಯಲ್ಲಿ ಬಿಕ್ಕಟ್ಟನ್ನು ಸೃಷ್ಟಿಸಿತು. ಸಂಕ್ಷಿಪ್ತವಾಗಿ ಹೇಳುವುದಾದರೆ, ಏಪ್ರಿಲ್–ಮೇ 1959ರಲ್ಲಿ ಕೇರಳದ ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳು ಕಮ್ಯುನಿಸ್ಟ್ ವಿರುದ್ಧದ ಉಗ್ರಪ್ರತಿಭಟನೆಗೆ ಅನುಕೂಲಕರ ವಾತಾವರಣವನ್ನು ಸೃಷ್ಟಿಸಿತು

**ಸಾಹಿತಿಗಳ ಮತ್ತು ಸಾಂಸ್ಕೃತಿಕ ಕಾರ್ಯಕರ್ತರ ಧ್ರುವೀಕರಣ**

1912ರಲ್ಲಿ ಸ್ವದೇಶಾಭಿಮಾನಿ ರಾಮಕೃಷ್ಣ ಪಿಳ್ಳರವರು ಮಲಯಾಳಂನಲ್ಲಿ ಕಾರ್ಲ್ ಮಾರ್ಕ್ಸ್ ಅವರ ಸಣ್ಣ ಜೀವನ ಚರಿತ್ರೆಯನ್ನು ಬರೆದರು. ತರುವಾಯ, ಕಮ್ಯುನಿಸ್ಟ್ ಸಿದ್ಧಾಂತ ಮತ್ತು ಪಕ್ಷದ ಕಾರ್ಯಕ್ರಮಗಳನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರಚಾರ ಮಾಡುವ ಹಲವಾರು ಸಾಹಿತ್ಯ ಕೃತಿಗಳು ಕೇರಳದಲ್ಲಿ ಪ್ರಕಟವಾದವು. ಇದೇ ಕಾಲಘಟ್ಟದಲ್ಲಿ ನಾಟಕ, ಕವನ, ಪ್ರಬಂಧಗಳು, ಕಥೆಗಳು ವಿಡಂಬನೆಮುಂತಾದ ವಿವಿಧ ಪ್ರಕಾರಗಳ ಕಮ್ಯುನಿಸ್ಟ್ ವಿರೋಧಿ ಸಾಹಿತ್ಯ ಕೃತಿಗಳು ಸಹ ಕಾಣಿಸಿಕೊಂಡವು. ಮೊದಲ ಕಮ್ಯುನಿಸ್ಟ್ ಸರ್ಕಾರವನ್ನು ಕೊನೆಗಾಣಿಸಲು ಸಾಂಸ್ಕೃತಿಕ ಕಾರ್ಯಕರ್ತರ ಗುಂಪೊಂದು ಪ್ರಯತ್ನಿಸಿತು. ಅವರು ಮತ್ತು ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಸಂಘಗಳು ಸೇರಿಕೊಂಡು, ಎರ್ನಾಕುಲಂನಲ್ಲಿ 'ಡೆಮಾಕ್ರಟಿಕ್ ಪಬ್ಲಿಕೇಷನ್ಸ್ ಲಿಮಿಟೆಡ್' ಎನ್ನುವುದನ್ನು ಸ್ಥಾಪಿಸಿದರು. 'ದೀನಬಂಧು' (ದೈನಿಕ), 'ದಿ ವೀಕ್ಲಿ ಕೇರಳಾ' (ನ್ಯೂಸ್ ವೀಕ್ಲಿ), 'ದಿ ಡೆಮಾಕ್ರಟಿಕ್ ಬುಕ್‌ಸ್ಟಾಲ್'ಮುಂತಾದವು ಪ್ರಸ್ತುತ ಪ್ರಕಾಶನ ಕಂಪನಿಗಳ ಒಡೆತನದಲ್ಲಿತ್ತು(37:p170-178). ಈ ಕಂಪನಿಯು ತನ್ನದೇ ಆದ ಬರಹಗಾರರನ್ನು ಹೊಂದಿತ್ತು. 'ನೈತಿಕ ಪುನರ್ನಿರ್ಮಾಣ/ದಿ ಮಾರಲ್ ರಿ ಆರ್ಮೆಂಟ್' (ಒಖಂ) ದಿ ಆಂಟಿ ಕಮ್ಯುನಿಸಂ ಕ್ರುಸೇಡ್, ಅಮೇರಿಕದ ಕೇಂದ್ರ ಗುಪ್ತಚರ ಸಂಸ್ಥೆ (ಅಖಂ) ಮತ್ತು ಕ್ಯಾಥೋಲಿಕ್ ಚರ್ಚ್ ಮುಂತಾದವರು ಈ ಕಂಪನಿಗಳ ಅನುದಾನಿತ ಏಜೆನ್ಸಿಗಳು. (37:p170-178) ಪಟ್ಟಭದ್ರ ಹಿತಾಸಕ್ತಿಗಳನ್ನು ಮೆಚ್ಚಿಸಲು ಹಲವಾರು ಕಮ್ಯುನಿಸ್ಟ್ ವಿರೋಧಿ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದರು.

ಎಂ. ಗೋವಿಂದನ್, ಪಿ. ಕೇಶವದೇವ್, ಸಿ.ಜೆ. ಥಾಮಸ್, ಎಂ.ಕೆ. ಸಾನು, ಎಂ.ವಿ. ದೇವನ್ ಮತ್ತು ಸುಕುಮಾರ್ ಅಳಿಕೋಡ್ ಮುಂತಾದವರು ಆ ಕಾಲದ ಕಮ್ಯುನಿಸ್ಟ್ ವಿರೋಧಿ ಸಾಂಸ್ಕೃತಿಕ ಕಾರ್ಯಕರ್ತರಲ್ಲಿ ಪ್ರಸಿದ್ಧ ವ್ಯಕ್ತಿಗಳು. 'ವೃಷವೃಕ್ಷಂ' ಎನ್ನುವ ತಮ್ಮ ನಾಟಕವಲ್ಲದೆ, ಅವರು ಕಮ್ಯುನಿಸ್ಟರ ವಿರುದ್ಧ ಇಂಗ್ಲಿಷಿನಲ್ಲೂ

ಮಲಯಾಳಂನಲ್ಲೂ ಬೇರೆ ಬೇರೆ ಕಾವ್ಯನಾಮಗಳಿಂದ ಸಿ.ಜೆ. ತೋಮಸ್ ಬಹಳಷ್ಟು ಲೇಖನಗಳನ್ನು ಬೇರೆ ಬೇರೆ ಪತ್ರಿಕೆಗಳಿಗಾಗಿ ಬರೆದು ಪ್ರಕಟಿಸಿದರು.* ವಿಮರ್ಶೆಗಳಲ್ಲಿ ಭಾವನೆಯನ್ನು ಬೆರೆಸಿದ ಪಿ. ಕೇಶವದೇವ್ ತಮ್ಮ ಕೃತಿಗಳ ಮೂಲಕ ಅವರು ಕಮ್ಯುನಿಸ್ಟ್ ವಿರೋಧಿಗಳ ಉತ್ಸಾಹವನ್ನು ಕೆರಳಿಸಿದರು.** ಎನ್.ಎ. ತಂಕಪ್ಪನ್, ವೆಟ್ಟೂರು ರಾಮನ್ ನಾಯರ್, ಕೆ.ಜಿ ಗೋಪಾಲಕೃಷ್ಣನ್, ಕಮ್ಯುನಿಸ್ಟ್ ವಿರೋಧಿ ಬರಹಗಾರರಲ್ಲಿ 'ಮಹಾಕವಿ ಜನಕೀಯನ್'***, ಮುಂತಾದವರು ಸಹ ಕಮ್ಯುನಿಸ್ಟ್ ವಿರುದ್ಧದ ಸಾಹಿತಿಗಳ ಪಟ್ಟಿಯಲ್ಲಿದ್ದಾರೆ(37:p177-178). ಕಲ್ಲೆಕ್ಕಲ್ ಭಾಸ್ಕರನ್, ಜಾರ್ಜ್ ತರಕನ್, ಕೆ.ಕೆ ಮಾಧವನ್, ಟಿ.ಒ. ಬಾವ, ವಯಲರ್ ರವಿ. ಆನಿ ಥೈಲ್ ಮುಂತಾದ ಕಾಂಗ್ರೆಸ್ ನಾಯಕರು ಕಮ್ಯುನಿಸ್ಟರ ವಿರುದ್ಧದ ಸಂಘಟಿತ ಸಾಂಸ್ಕೃತಿಕ ಅಭಿಯಾನಕ್ಕೆ ಕೊಡುಗೆ ನೀಡಿದ್ದಾರೆ(69:p264). ಆರ್‌ಎಸ್‌ಪಿ ನಾಯಕರು ಮತ್ತು ಎಡಪಂಥೀಯ ಚಿಂತಕರು ಆಗಿದ್ದ, 'ಕೌಮುದಿ' ದಿನಪತ್ರಿಕೆಯ ಸಂಪಾದಕ ಕೆ. ಬಾಲಕೃಷ್ಣನ್‌ರವರ ನಿರರ್ಗಳ ಭಾಷಣಗಳು ಮತ್ತು ಆಳವಾದ ಬರಹಗಳು ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಸಾಂಸ್ಕೃತಿಕ ಅಭಿಯಾನದಲ್ಲಿ ನಿರ್ಣಾಯಕ ಪಾತ್ರ ವಹಿಸಿತ್ತು.

ಈ ಅವಧಿಯಲ್ಲಿ ಕೇರಳದಲ್ಲಿ ಒಟ್ಟು ಇಪ್ಪತ್ತೇಳು ಸುದ್ದಿ ಪತ್ರಿಕೆಗಳು ಪ್ರಕಟವಾಗುತ್ತಿದ್ದವು(47:p81). ಇವುಗಳಲ್ಲಿ ಮೂರು ಮಾತ್ರ ಕಮ್ಯುನಿಸ್ಟ್ ಪಕ್ಷದ ನಿಯಂತ್ರಣದಲ್ಲಿದ್ದು,**** ಉಳಿದ ಪತ್ರಿಕೆಗಳು ಕಮ್ಯುನಿಸ್ಟ್ ಸರ್ಕಾರವನ್ನು ವಿರೋಧಿಸಲು ಮತ್ತು ಕಮ್ಯುನಿಸ್ಟ್ ವಿರೋಧಿಗಳನ್ನು ಬೆಂಬಲಿಸಲು ಅವರು ಯಾವುದೇ ಅವಕಾಶವನ್ನು ವ್ಯರ್ಥ ಮಾಡಿಕೊಳ್ಳಲಿಲ್ಲ. ಕೆಲವು ಪತ್ರಿಕೆಗಳು ನೈತಿಕತೆಯ ಗಡಿಯನ್ನು ಉಲ್ಲಂಘಿಸಿ ಸುಳ್ಳಿನ ಪ್ರಚಾರದಲ್ಲಿ ತೊಡಗಿಕೊಂಡಿದ್ದವು. ಓದುಗರ ಮನಸ್ಸಿನಲ್ಲಿ ಕಮ್ಯುನಿಸ್ಟರ ಬಗ್ಗೆ ಅವರು ದೊಡ್ಡ ರೀತಿಯಲ್ಲಿ ದ್ವೇಷವನ್ನು ಬೆಳೆಸಿದರು.

●

---

* ಆ ಸಮಯದಲ್ಲಿ ಎರ್ನಾಕುಲಂನಿಂದ ಹೊರತರುತ್ತಿದ್ದ ಇಂಗ್ಲಿಷ್ ವಾರಪತ್ರಿಕೆ 'ವೀಕ್ಲಿ ಕೇರಳ'ದಲ್ಲಿ ಅನೇಕ ಕಮ್ಯುನಿಸ್ಟ್ ವಿರೋಧಿ ಲೇಖನಗಳು ಮತ್ತು ಪ್ರಬಂಧಗಳು ಪ್ರಕಟವಾಗಿದ್ದವು. ಪ್ರಸಿದ್ಧ ಬರಹಗಾರರಾಗಿದ್ದ ಸಿ.ಜೆ. ಥಾಮಸ್ ವೀಕ್ಲಿಯ ಪ್ರಮುಖ ಲೇಖಕರಾಗಿದ್ದರು. ಅವರು ಅದೇ ಸಂಚಿಕೆಯಲ್ಲಿ 'ಇತಿಹಾಸಕಾರ', 'ಡಯೋನಿಸಿಯಸ್', 'ವೀಕ್ಷಕ', ಮುಂತಾದ ವಿವಿಧ ಕಾವ್ಯನಾಮಗಳು ಮತ್ತು ಗುಪ್ತನಾಮಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಅನೇಕ ರೀತಿಯ ಲೇಖನಗಳನ್ನು ಅವರು ಬರೆದಿದ್ದರು.

** ಶ್ರೀ. ಕೆ.ಎಂ. ಚುಮ್ಮಾರೊಂದಿಗೆ ಪಾಲಾ, ಪ್ರವಿತಾನಂ ವೆಹಂಗಾನಂ ಮುಂತಾದ ಸ್ಥಳಗಳಲ್ಲಿರುವ ಅವರ ನಿವಾಸದಲ್ಲಿ 26 ಜನವರಿ 2010ರಂದು ಸಂದರ್ಶನ ನಡೆಸಲಾಯಿತು.

*** ಮಹಾಕವಿ ಜನಕೀಯ ಎಂಬುದು ಕಾವ್ಯನಾಮವಾಗಿತ್ತು. ನಿಜವಾದ ಹೆಸರನ್ನು ಬಹಿರಂಗಪಡಿಸಿರಲಿಲ್ಲ.

**** ಕಮ್ಯುನಿಸ್ಟ್ ಪಕ್ಷದ ನಿಯಂತ್ರಣದಲ್ಲಿರುವ ಪತ್ರಿಕೆಗಳ ಪೈಕಿ, ತಿರುವನಂತಪುರದಿಂದ 'ಜನಯುಗಂ', ತ್ರಿಶೂರಿನಿಂದ 'ನವಜೀವನ' ಮತ್ತು ಕೋಳಿಕ್ಕೋಡ್‌ನಿಂದ 'ದೇಶಾಭಿಮಾನಿ' ಮಾತ್ರ ಪ್ರಕಟವಾಗುತ್ತಿದ್ದವು.

# 6

## 'ವಿಮೋಚನಾ ಸಮರಂ'

*(ಸರ್ಕಾರದ ವಿರುದ್ಧದ ವಿಮೋಚನಾ ಹೋರಾಟದ ಪರಾಕಾಷ್ಠೆಯ ವಿವಿಧ ಆಂದೋಲನಗಳ ವಿವರಣೆಗಳನ್ನು ಈ ಅಧ್ಯಾಯವು ವಿವರಿಸುತ್ತದೆ. ಸರ್ಕಾರದ ಅತ್ಯಂತ ವಿವಾದಾತ್ಮಕ ಎಂದು ಪರಿಗಣಿಸಲ್ಪಟ್ಟ, ಕೇರಳ ಶಿಕ್ಷಣ ನೀತಿಯ ವಿರುದ್ಧ ಕೋಮುವಾದಿ ಶಕ್ತಿಗಳು ನಡೆಸಿದ ಅತ್ಯಾಕರ್ಷಕವಾದ ಮುನ್ನಡೆಯನ್ನು ಈ ಅಧ್ಯಾಯ ವಿಶ್ಲೇಷಿಸುತ್ತದೆ. ಆಂಧ್ರ ಅಕ್ಕಿ ಒಪ್ಪಂದ, ಕಾಟ್ಟಂಪಲ್ಲಿ ಭೂ ಅತಿಕ್ರಮಣ ಆಂದೋಲನ, ವಿವಾದಾತ್ಮಕವಾದ ಮೀಸಲಾತಿ ವಿಷಯ ಇವೇ ಮುಂತಾದವುಗಳಲ್ಲಿ ಅಂತರ್ಗತವಾಗಿರುವ ಸತ್ಯವನ್ನು ಬಹಿರಂಗಪಡಿಸಲು ಪ್ರಯತ್ನಿಸುತ್ತದೆ. 'ಸರಕಾರದ ವಿಕೃತ ಪೊಲೀಸ್ ನೀತಿಯು ರಾಜ್ಯದಲ್ಲಿ ಅಭದ್ರತೆಯನ್ನು ಸೃಷ್ಟಿಸಿದೆ' ಎಂಬ ಪ್ರತಿಪಕ್ಷಗಳ ಆರೋಪದ ಪರಿಣಾಮಗಳನ್ನು ಸಹ ಇದು ಬಹಿರಂಗಪಡಿಸುತ್ತದೆ. ರೈತರಿಗೆ ಹಿತಕರವಾದ ಮತ್ತು ಭೂಮಾಲೀಕರಿಗೆ ಹಾನಿಕಾರಕವಾದ ಕೃಷಿ ಸುಧಾರಣಾ ಕ್ರಮಗಳ ಆಳವಾದ ವಿಶ್ಲೇಷಣೆಯನ್ನು ಈ ಅಧ್ಯಾಯವು ಮಾಡುತ್ತದೆ. ಸರ್ಕಾರದ ವಿರೋಧಿ ಆಂದೋಲನವನ್ನು ತೀವ್ರಗೊಳಿಸಲು ಜಾತಿ/ಸಮುದಾಯದ ಶಕ್ತಿಗಳು ಈ ಅವಕಾಶವನ್ನು ಹೇಗೆ ಬಳಸಿಕೊಂಡವು ಎಂಬುದನ್ನು ವಿವರಿಸುತ್ತದೆ. ಕಮ್ಯುನಿಸ್ಟ್ ಸರ್ಕಾರವನ್ನು ಹೊರಹಾಕಲು ಕಾರಣವಾದ ವಿಮೋಚನಾ ಹೋರಾಟಕ್ಕೆ ವಿವಿಧ ಸರ್ಕಾರ ವಿರೋಧಿ ಗುಂಪುಗಳ/ಸಂಘಟನೆಗಳ ತಂತ್ರಗಳನ್ನು ಮತ್ತು ಚಾತುರ್ಯಗಳನ್ನು ಇಲ್ಲಿ ವಿವರವಾಗಿ ವಿವರಿಸಲಾಗಿದೆ.)*

1957ರ ಕೇರಳ ವಿಧಾನಸಭಾ ಚುನಾವಣೆಯ ಫಲಿತಾಂಶಗಳು ಮತ್ತು ಮೊದಲ ಕಮ್ಯುನಿಸ್ಟ್ ಸರ್ಕಾರದ ರಚನೆಯಿಂದಾಗಿ, ರಾಜ್ಯದ ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳಿಗೆ, ಸಮುದಾಯ ಸಂಘಟನೆಗಳಿಗೆ ಮತ್ತು ಪಟ್ಟಭದ್ರ ಹಿತಾಸಕ್ತಿಗಳ ಸಂಘಟನೆಗಳಿಗೆ ಭಾರೀ ಆಘಾತವನ್ನೇ ನೀಡಿತು. ಕಮ್ಯುನಿಸ್ಟ್ ಪಕ್ಷ ಅಧಿಕಾರಕ್ಕೆ ಬಂದಾಗಿನಿಂದ ಈ ಸಂಘಟನೆಗಳು, ವಿರೋಧಪಕ್ಷಗಳು ತೀವ್ರವಾದ ಅಸಹಿಷ್ಣುತೆಯನ್ನು ತೋರ್ಪಡಿಸುತ್ತಾ, ಅಧಿಕಾರದಲ್ಲಿರುವ ಕಮ್ಯುನಿಸ್ಟ್ ಸರ್ಕಾರದ ಪ್ರತಿಯೊಂದು ಕ್ರಮಗಳನ್ನು ವಿರೋಧಿಸುತ್ತಾ ಬಂದಿವೆ. ಈ ವಿಚಾರದಲ್ಲಿ, ಪಟ್ಟಭದ್ರ ಹಿತಾಸಕ್ತಿಸಂಘಟನೆಗಳ ಮತ್ತು ಜಾತಿ/ಸಮುದಾಯ ಶಕ್ತಿಗಳ ಒಡೆತನದಲ್ಲಿರುವ ಜನಪ್ರಿಯ ಮಾಧ್ಯಮಗಳು ನಿರ್ಣಾಯಕ ಪಾತ್ರವನ್ನು ವಹಿಸಿದವು. ಕೇರಳದಲ್ಲಿ ಕಮ್ಯುನಿಸ್ಟರು ನಿರಂಕುಶ ಆಡಳಿತವನ್ನು ಹೇರುತ್ತಾರೆ ಎಂಬ ಭಯ ವಿರೋಧಪಕ್ಷಗಳ ಮನದಲ್ಲಿ ಬೇರೂರಿತ್ತು. ಕಮ್ಯುನಿಸ್ಟರು ರಾಜ್ಯದ

ಹಿತಾಸಕ್ತಿಗಳಿಗಿಂತ ಪಕ್ಷದ ಹಿತಾಸಕ್ತಿಗಳಿಗಾಗಿ ಹೆಚ್ಚು ಆದ್ಯತೆ ನೀಡುತ್ತಾರೆನ್ನುವ ಆತಂಕ ಅವರನ್ನು ಕಾಡುತ್ತಿತ್ತು. ಒಕ್ಕಲೆಬ್ಬಿಸುವಿಕೆಯ ವಿರುದ್ಧದ ಕ್ರಮಗಳು, ರಾಜಕೀಯ ಕೈದಿಗಳ ಬಿಡುಗಡೆ ಮತ್ತು ಕೈದಿಗಳ ಮರಣದಂಡನೆಯ ಶಿಕ್ಷೆಯಲ್ಲಿ ವಿನಾಯಿತಿಗಳಂತಹ ಸರ್ಕಾರದ ಕೆಲವು ತಕ್ಷಣದ ಕ್ರಮಗಳು ಕಮ್ಯುನಿಸ್ಟ್ ವಿರೋಧಿ ಪಾಳಯದ ಆಕ್ರೋಶ ಮುಗಿಲುಮುಟ್ಟುವಂತೆ ಮಾಡಿತು.

ಕೇರಳದ ಕಮ್ಯುನಿಸ್ಟರು ಸಾಮಾನ್ಯವಾಗಿ (ವಿಶೇಷವಾಗಿ ಆ ಸಮಯದಲ್ಲಿ) ತಮ್ಮ ಪಕ್ಷವು ದುಡಿಯುವ ವರ್ಗವನ್ನು ಪ್ರತಿನಿಧಿಸುತ್ತದೆ ಎನ್ನುವ ನಂಬಿಕೆಯನ್ನು ಹೊಂದಿದ್ದರು. ಆದ್ದರಿಂದ ದುಡಿಯುವವರ್ಗವು ಪಕ್ಷದಿಂದ ದೊರಕುವ ರಕ್ಷಣೆಗೆ ಅರ್ಹರು ಎಂದು ಅವರು ಭಾವಿಸಿದರು. ಎಲ್ಲಾ ವರ್ಗದವರನ್ನು ನಿರ್ಮೂಲನೆ ಮಾಡದೆ ಕಮ್ಯುನಿಸಂ (ಕಾರ್ಮಿಕ ವರ್ಗವನ್ನು ಹೊರತುಪಡಿಸಿ) ವರ್ಗರಹಿತ ಸಮಾಜ ಸ್ಥಾಪನೆ ಸಾಧ್ಯವಿಲ್ಲವೆಂದೂ ದುಡಿಯುವ ವರ್ಗದ ಪಕ್ಷವಾದ ಕಮ್ಯುನಿಸ್ಟ್ ಪಕ್ಷಕ್ಕೆ ಮಾತ್ರವೇ ಇದನ್ನು ಮಾಡಲು ಸಾಧ್ಯವಾಗುತ್ತದೆ ಎಂದೂ ಪ್ರಣಾಳಿಕೆಯು ವ್ಯಾಖ್ಯಾನಿಸುತ್ತದೆ. ಆದಾಗ್ಯೂ, ಭಾರತ ಮತ್ತು ಕೇರಳದಲ್ಲಿ ಇತರ ರಾಜಕೀಯ ಪಕ್ಷಗಳಂತೆ, ಕಾರ್ಮಿಕ ಅಥವಾ ದುಡಿಯುವ ವರ್ಗದ ಪಕ್ಷವಾದ ಕಮ್ಯುನಿಸ್ಟ್ ಪಕ್ಷವು, ಸಂವಿಧಾನದ ನಿಬಂಧನೆಗಳಿಗೆ, ವ್ಯವಸ್ಥೆಗಳಿಗೆ, ನಿಯಮಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತಿದೆ. ಈ ಪರಿಸ್ಥಿತಿಯಲ್ಲೂ ಇಲ್ಲಿನ ಕಮ್ಯುನಿಸ್ಟರು ಪಕ್ಷವನ್ನು ಅಧಿಕಾರಕ್ಕೆ ಏರಿಸಲು ಪ್ರತಿಜ್ಞಾಬದ್ಧರಾಗಿದ್ದರು. ಕಾರ್ಮಿಕರ ಗೆಲುವನ್ನೂ ಪಕ್ಷದ ಗೆಲುವನ್ನೂ ಒಂದೇ ಎಂದು ಪರಿಗಣಿಸಲಾಗುತ್ತಿದೆ. ಕಮ್ಯುನಿಸ್ಟ್ ಪಕ್ಷವು ದುಡಿಯುವ ವರ್ಗವನ್ನು ಪ್ರತಿನಿಧಿಸುತ್ತದೆ, ಆದ್ದರಿಂದ, ವರ್ಗರಹಿತ ಸಮಾಜವನ್ನು ರಚಿಸುವುದು ಅವರ ಗುರಿಯಾಗಿದೆ. ಆದ್ದರಿಂದಲೇ ಪಕ್ಷವು ಅಧಿಕಾರದಲ್ಲಿದ್ದಾಗ, ರಾಜ್ಯದ ಹಿತಾಸಕ್ತಿ ಮತ್ತು ಗುರಿಗಳು, ಕಮ್ಯುನಿಸ್ಟ್ ಪಕ್ಷದ ಹಿತಾಸಕ್ತಿ ಮತ್ತು ಗುರಿಗಳು ಒಂದೇ ಆಗಿರುತ್ತವೆ ಎನ್ನುವ ವ್ಯಾಖ್ಯಾನಗಳು ಉಂಟಾದವು. ಬೂರ್ಜ್ವಾ ಭೂಮಾಲೀಕರ ವರ್ಗಗಳ, ಜಾತಿ ಆಧಾರಿತ ಕೋಮುವಾದಿ ಶಕ್ತಿಗಳ, ಹಿತಾಸಕ್ತಿಗಳಿಗಾಗಿ ನೆಲೆಗೊಂಡಿದ್ದ ಪಕ್ಷಗಳ ನಿಲುವುಗಳ ಮತ್ತು ದುಡಿಯುವ ವರ್ಗಗಳ ಹಿತಾಸಕ್ತಿಗಳಿಗಾಗಿ ಕಾರ್ಯನಿರ್ವಹಿಸುವ ಕಮ್ಯುನಿಸ್ಟ್ ಪಕ್ಷಗಳ ನಿಲುವುಗಳ ನಡುವಿನ ಸಂಘರ್ಷವು ಅನಿವಾರ್ಯವಾಗುವಂಥ ಪರಿಸ್ಥಿತಿ ಉಂಟಾಯಿತು. ಕಾರ್ಮಿಕ ವರ್ಗಕ್ಕೆ ಸೇರಿದ ಪಕ್ಷದ ಕೆಲಸ ಮತ್ತು ಬೂರ್ಜ್ವಾ ಭೂಮಾಲೀಕ ಪಕ್ಷಗಳ ಕೆಲಸ, ಇವುಗಳ ನಡುವೆ ಗಣನೀಯವಾದ ವ್ಯತ್ಯಾಸವಿದೆಯೆಂದೂ ಬೂರ್ಜ್ವಾ ಪ್ರಜಾಪ್ರಭುತ್ವ ವ್ಯವಸ್ಥೆಗೆ ಒಳಪಟ್ಟಿದ್ದರೂ, ಕಾರ್ಮಿಕ ವರ್ಗದ ಪಕ್ಷದ ಕಾರ್ಯನಿರ್ವಹಣೆಯು ಆ ವ್ಯವಸ್ಥೆಗೆ ವಿರುದ್ಧವಾದ ಕಾರ್ಮಿಕ ವರ್ಗದ ಕ್ರಾಂತಿಕಾರಿ ಹೋರಾಟಕ್ಕೆ ಅಧೀನ ಮಾಡಿಕೊಂಡೇ ಎಂದೂ ಇಎಂಎಸ್ ಅವಲೋಕಿಸುತ್ತಿದ್ದಾರೆ(12:V4p91).

ಮೇಲ್ವರ್ಗದವರಿಗೆ ಸೇರಿದ ಸಂವಿಧಾನ, ನಿಯಮಗಳು, ಕಾನೂನುಗಳು,

ಸರ್ಕಾರದ ನೀತಿಗಳು ಇವೇ ಮುಂತಾದವುಗಳ ವಿರುದ್ಧ ಹೋರಾಡುತ್ತಿರುವ, ಹೋರಾಡುವುದಕ್ಕೆ ಬದ್ಧವಾಗಿರುವ ಕ್ರಾಂತಿಕಾರಿ ಕಾರ್ಮಿಕವರ್ಗದ ಪಕ್ಷವೇ, ಕೇರಳದಲ್ಲಿ ಔಪಚಾರಿಕವಾಗಿ ಅಧಿಕಾರದಲ್ಲಿದೆ ಎನ್ನುವ ಪ್ರಜ್ಞೆ ಕಮ್ಯುನಿಸ್ಟ್ ಪಕ್ಷಕ್ಕಿತ್ತು(12:V4). ಆದರೆ, ತಾವು ನಿರಂತರವಾಗಿ ವಿರೋಧಿಸುವ ಮತ್ತು ಮೇಲ್ವರ್ಗದವರ ಹಿತಾಸಕ್ತಿಗಳನ್ನು ರಕ್ಷಿಸುವ ಕಾಂಗ್ರೆಸ್ ಪಕ್ಷವು ಕೇಂದ್ರವನ್ನು ಆಳುತ್ತಿರುವಾಗ, ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯ ಭಾಗವಾಗಿಯೇ ಇದ್ದುಕೊಂಡು, ಕೇರಳದಲ್ಲಿ ಅಧಿಕಾರದ ಚಲಾಯಿಸುವಿಕೆ ಎನ್ನುವುದು, ಕಮ್ಯುನಿಸ್ಟ್ ಪಕ್ಷದ ಕಾರ್ಯತಂತ್ರದ ವಿಧಾನವಾಗಿತ್ತು.

ಕಮ್ಯುನಿಸ್ಟರ ಉದ್ದೇಶಿತ ಗುರಿಗಳ ಬಗ್ಗೆ ಕೆಲವು ಭಯದ ಆತಂಕಗಳನ್ನು ವಿರೋಧಪಕ್ಷದ ಅನುಯಾಯಿಗಳಲ್ಲಿ ಸೃಷ್ಟಿಸಲಾಗಿದ್ದವು. ಅದೇ ರೀತಿಯಲ್ಲಿ ಕೆಲವು ವಿರೋಧಪಕ್ಷದ ನಾಯಕರು ಕಮ್ಯುನಿಸ್ಟ್ ಪಕ್ಷದ ಅನುಯಾಯಿಗಳಲ್ಲೂ ಭಯ ಹುಟ್ಟಿಸುವಂಥ ವಿಧದಲ್ಲಿ ಕೆಲವು ವಿರೋಧಪಕ್ಷಗಳ ನಾಯಕರು ವಿದ್ವೇಷದ ಭಾಷಣಗಳನ್ನು ಮಾಡಿದ್ದರು. ಎರಡೂ ಕಡೆಗಳಲ್ಲಿ, ನೈಜವಾದದ್ದೋ ಕಾಲ್ಪನಿಕವಾದದ್ದೋ ಆದಂಥ ಭಯಗಳು ಪರಸ್ಪರ ಘರ್ಷಣೆಗೆ ಕಾರಣವಾಗುವಂತೆಯು ಮತ್ತು ಕೇರಳದಲ್ಲಿ ಉದ್ವಿಗ್ನ ರಾಜಕೀಯ ವಾತಾವರಣ ಉಂಟಾಗುವಂತೆಯು ನೋಡಿಕೊಳ್ಳಲಾಯಿತು. ಪರಿಣಾಮವಾಗಿ, ಕೆಲವು ಸ್ಥಳಗಳಲ್ಲಿ ಹಿಂಸಾಚಾರ, ಕೊಲೆ, ಮುಷ್ಕರ ಪೋಲಿಸ್ ಫೈರಿಂಗ್ ಮುಂತಾದವು ನಡೆದವು.

**ಅಭದ್ರತೆಯ ಕೂಗು**

ಕೈಗಾರಿಕಾ ವಿವಾದಗಳ ಬಗ್ಗೆ ಹೊಸ ಕಾರ್ಯವಿಧಾನ ಮತ್ತು ಹೊಸ ಪೋಲೀಸ್ ನೀತಿಗಳು ಸೇರಿದಂತೆ ಕಮ್ಯುನಿಸ್ಟ್ ಸರ್ಕಾರದ ಆರಂಭಿಕ ಕ್ರಮಗಳು, ಪರಂಪರಾಗತ ಶ್ರೀಮಂತವರ್ಗದವರ ಹಿತಾಸಕ್ತಿಗಳಿಗೆ ಹಾನಿಕರವಾಗಿತ್ತು. ಈ ವರ್ಗವು ಯಾವಾಗಲೂ ಸ್ಥಾನ ಮತ್ತು ಶಕ್ತಿಯಿಂದ, ಕಾರ್ಮಿಕರ ಅಗತ್ಯತೆ ಅಥವಾ ಬೇಡಿಕೆಗಳನ್ನು ನಿರ್ವಹಿಸುವ ರೀತಿಯೆನ್ನುವುದು, ದುಡ್ಡಿದ್ದವನೇ ದೊಡ್ಡಪ್ಪ ಎನ್ನುವಂತಿತ್ತು.

1957–58ರ ರಾಜ್ಯ ಬಜೆಟ್ ಶ್ರೀಮಂತರ ಮೇಲೆ ಭಾರೀ ತೆರಿಗೆಯನ್ನು ವಿಧಿಸಲು ಮುಂದಾಯಿತು. ಕೇರಳದಲ್ಲಿ ಸುಸಂಘಟಿತವಾಗಿ ಆಯೋಜಿಸಲಾದ ಈ ಕ್ರಮವು ಶ್ರೀಮಂತರಿಗೆ ಹಾನಿಕರವಾಗಿತ್ತು. ಆದರೆ, ಅವರು ಶಾಂತವಾಗಿ ಬಗ್ಗಲು ಸಿದ್ಧರಿರಲಿಲ್ಲ. ಕಮ್ಯುನಿಸ್ಟ್ ಆಳ್ವಿಕೆಯಲ್ಲಿ ಅಭದ್ರತೆ ಕಾಡುತ್ತಿದೆ, ಎನ್ನುವ ಅಪಪ್ರಚಾರದಲ್ಲಿ ತೊಡಗಿಕೊಂಡರು. ವೃತ್ತಪತ್ರಿಕೆಗಳಲ್ಲಿ ಮತ್ತು ಭಾಷಣಗಳ ವೇದಿಕೆಗಳಲ್ಲಿ ಅಭದ್ರತೆಯ ಕೂಗು ಪುನರಾವರ್ತಿಸುತ್ತಲೇ ಇತ್ತು. 'ಕಮ್ಯುನಿಸ್ಟರು ಯಾವುದೇ ಸಾಹಸಕ್ಕೂ ಸಿದ್ಧರಾದವರು.' 'ಕಮ್ಯುನಿಸ್ಟರು ಸಂವಿಧಾನವನ್ನು ಬುಡಮೇಲು ಮಾಡುತ್ತಿದ್ದಾರೆ.' 'ಕೇರಳದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ, ಜೀವ ಮತ್ತು ಆಸ್ತಿಗೆ ತೀವ್ರ

ಬೆದರಿಕೆಯಿದೆ,' ಮುಂತಾದ ರೋದನಗಳಿಂದಾಗಿ ಕೇರಳದ ವಾತಾವರಣ ಸದ್ದು ಮಾಡತೊಡಗಿತು. ಇಂತಹ ಕೂಗುಗಳ ಅಲೆಯಬ್ಬರ ದೇಶಾದ್ಯಂತ ಪ್ರತಿಧ್ವನಿಸಿತು(48:p46). ಸರ್ಕಾರದ ವಕ್ತಾರರ ಪ್ರಕಾರ, ಶ್ರೀಮಂತವರ್ಗದವರ ಕಾಳಜಿಗೆ ಕಾರಣಗಳಿರಬಹುದು.

> "ಪ್ರಥಮ ಬಾರಿಗೆ ಚುನಾವಣಾ ಭರವಸೆಗಳನ್ನು ಈಡೇರಿಸುವ ಸರಕಾರವೊಂದು ಇಲ್ಲಿ ಜನ್ಮತಾಳಿದೆ. ಈ ಸರ್ಕಾರವು ಪ್ರಗತಿಪರ ಗುರಿಗಳನ್ನು ಮತ್ತು ಲಕ್ಷಾಂತರ ಜನರ ಅಗತ್ಯಗಳನ್ನು ಪೂರೈಸುವಲ್ಲಿ ಯಾವುದೇ ರಾಜಿಯನ್ನು ಮಾಡಿಕೊಂಡಿರಲಿಲ್ಲ. ಹಾಗೆಯೇ ಶ್ರೀಮಂತರ ಪ್ರಲೋಭನೆಗಳಿಗೋ ಅದ್ದೂರಿಯಾದ ಔತಣಕೂಟಗಳಿಗೋ ಮಣಿದಿರುವುದಿಲ್ಲ. ಸಂಕ್ಷಿಪ್ತದಲ್ಲಿ ಹೇಳುವುದಾದರೆ, ಅವರು ಸಾಧಾರಣಕ್ಕೆ ನಿಭಾಯಿಸಲು ಅಸಾಧ್ಯವಾದಂಥ ಒಂದು ತರಹದ ಜನರಾಗಿದ್ದರು(40:21.07.57).

ಕಮ್ಯುನಿಸ್ಟ್ ಮಂತ್ರಿಮಂಡಲವು ಅನುಸರಿಸುತ್ತಿರುವ ಜನಪ್ರಿಯ ನೀತಿಗಳು, ಬಹಳ ಕಾಲಗಳಿಂದ ಸಂಕಷ್ಟದಲ್ಲಿರುವ ದುಡಿಯುವ ಜನರಲ್ಲಿ ಹೊಸ ಜಾಗೃತಿ ಮೂಡಿಸಿತು. ಕೇರಳದ ಕಾರ್ಮಿಕವರ್ಗ ಮತ್ತು ಕಾರ್ಮಿಕವರ್ಗದ ಇತರ ವಿಭಾಗಗಳು, ತಮ್ಮ ಪಕ್ಷವು ಗಳಿಸಿದ ಯಶಸ್ಸಿನಿಂದ ಅವರನ್ನು ಹೆಚ್ಚು ಆನಂದಭರಿತರನ್ನಾಗಿಸಿತ್ತು. ಕೇರಳದಾದ್ಯಂತ ಜನಪರವಾದ ಆವೇಶದ ಅಲೆ ಎದ್ದಿತು. ಸಾಂಪ್ರದಾಯಿಕ ವಿಧಾನಕ್ಕಿಂತ ಭಿನ್ನವಾಗಿ, ಸರ್ಕಾರದ ಒತ್ತಡಗಳು ಶ್ರೀಮಂತರಿಗೆ ಅನುಕೂಲಕರವಾಗುವುದನ್ನು ಕಮ್ಯುನಿಸ್ಟ್ ಮಂತ್ರಿಮಂಡಲವು ನಿರ್ಬಂಧಿಸಿದ್ದರಿಂದ, ಅವರ ಚೌಕಾಶಿ ಸಾಮರ್ಥ್ಯವು ಬಹಳ ಕಡಿಮೆಯಾಯಿತಲ್ಲದೆ, ಕಾರ್ಮಿಕರು ಮತ್ತು ರೈತರು ಗಮನಾರ್ಹ ಲಾಭವನ್ನು ಪಡೆಯಲು ಸಾಧ್ಯವಾಯಿತು(40:V4N431957). ದುಡಿಯುವ ಜನರ ಅವಶ್ಯತೆಗಳನ್ನು ತಡೆಯಲು ಸಾಧ್ಯವಾಗದೆ, ಪಟ್ಟಭದ್ರ ಹಿತಾಸಕ್ತಿ ಗುಂಪುಗಳಿಗೆ ಅಸುರಕ್ಷಿತೆಯುಂಟಾಯಿತೆಂದು ದೂರ ತೊಡಗಿದರು(40:V4N491957).

ಕೇರಳದ ಮಂತ್ರಿಗಳು ಭಾರತದ ಸಂವಿಧಾನದ ನಿಬಂಧನೆಗಳಿಗೆ ಬದ್ಧರಾಗಿ ಕಾರ್ಯ ನಿರ್ವಹಿಸಲು ಪ್ರತಿಜ್ಞೆಗೈದರು(84:07.04.57). ಆದರೆ, ಕೇರಳದಲ್ಲಿ ವಿರೋಧ ಪಕ್ಷಗಳು, ಸಂವಿಧಾನಕ್ಕೆ ಅನುಗುಣವಾದ ರೀತಿಯಲ್ಲಿ ಕಮ್ಯುನಿಸ್ಟರು ಕಾರ್ಯವಹಿಸುತ್ತಾರೆನ್ನುವ ಕಮ್ಯುನಿಸ್ಟರ ಪ್ರಾಮಾಣಿಕತೆಯನ್ನು ಸಂಶಯವಾಗಿಯೇ ನೋಡುತ್ತಿದ್ದರು (86:28.11.59p1595). ವಿವಿಧ ಕಮ್ಯುನಿಸ್ಟ್ ತಂತ್ರಗಳನ್ನು ಪ್ರಯೋಗಿಸಿಕೊಂಡು, ಸರ್ಕಾರಿ ವ್ಯವಸ್ಥೆಗಳಲ್ಲಿ ನುಸುಳಿಕೊಂಡು, ಆಂತರಿಕವಾಗಿ ಅವುಗಳನ್ನು ಅವ್ಯವಸ್ಥೆಗೊಳಿಸಿಬಿಡುತ್ತಾರೆ ಎಂದು ಅವರು ನಂಬಿದ್ದರು(86:28.11.59p1595). ಚುನಾವಣಾ ಫಲಿತಾಂಶ ಪ್ರಕಟವಾಗುತ್ತಿದ್ದಂತೆ, ಹಿಂದಿನ ಎಐಸಿಸಿ ಅಧ್ಯಕ್ಷ ಯು.ಎನ್.ಧಬಾರ್ ರಾಜ್ಯದ ಕಮ್ಯುನಿಸ್ಟ್ ಪಕ್ಷ ಸರ್ಕಾರ ರಚಿಸುವುದನ್ನು ಬಲವಾಗಿ ವಿರೋಧಿಸಿದರು. ಈ ಅವಕಾಶವನ್ನು ಬಳಸಿಕೊಂಡು ಸಿಪಿಐ ಪಕ್ಷವು ಕೇರಳದಲ್ಲಿ ಕಮ್ಯುನಿಸ್ಟ್ ಸಿದ್ಧಾಂತ ಹರಡುತ್ತದೆ ಎನ್ನುವ ಆತಂಕವನ್ನು ವ್ಯಕ್ತಪಡಿಸಿದರು(33:28.03.57). ಈ ಸರ್ಕಾರವು ಒಂದು ವರ್ಷಕ್ಕೂ ಹೆಚ್ಚು

ಕಾಲ ಉಳಿಯುವುದಿಲ್ಲ ಎಂದು ಕಾಂಗ್ರೆಸ್ ನಾಯಕ ಮತ್ತು ತಿರು–ಕೊಚ್ಚಿ ರಾಜ್ಯದ ಮಾಜಿ ಮುಖ್ಯಮಂತ್ರಿ ಪನಂಪಲ್ಲಿ ಗೋವಿಂದ ಮೆನನ್ ಘೋಷಿಸಿದರು(143:28.03.59.)

ಪಟ್ಟಭದ್ರ ಹಿತಾಸಕ್ತಿಗಳ ಪರವಾಗಿಯೇ ಬಹುಪಾಲು ಪತ್ರಿಕೆಗಳು ನಡೆಯುತ್ತಿದ್ದು, ಅವುಗಳೆಲ್ಲವೂ ಕೇರಳದ ಕಮ್ಯುನಿಸ್ಟ್ ಆಡಳಿತದ ವಿರುದ್ಧವಾಗಿದ್ದವು. ಕಮ್ಯುನಿಸ್ಟ್ ಆಡಳಿತದಲ್ಲಿ ಕಾನೂನು ಸುವ್ಯವಸ್ಥೆ ಹದಗೆಟ್ಟಿದೆ ಎನ್ನುವ ಸುಳ್ಳು ಪ್ರಚಾರಗಳಲ್ಲಿ ಅವರು ತೊಡಗಿಕೊಂಡಿದ್ದರು. ಕಾನೂನು ಮಿತಿಯಲ್ಲಿ ನಡೆದ ಎಲ್ಲ ಜನಪರ ಹೋರಾಟಗಳನ್ನು ಉತ್ಪ್ರೇಕ್ಷಿಸಿ ಚಿತ್ರಿಸಲಾದವು. ತೋಟ/ಎಸ್ಟೇಟ್‌ಗಳಲ್ಲಿ, ಕಾರ್ಖಾನೆಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅಲ್ಲೊಂದು ಇಲ್ಲೊಂದು ನಡೆದ ಅಂತಹ ಘಟನೆಗಳಿಗೆ ವ್ಯಾಪಕ ಪ್ರಚಾರನೀಡಿದವು. ಅಂತಹ ಕೆಲವು ಘಟನೆಗಳ ವರದಿಗಳನ್ನು ಆಯ್ದುಕೊಂಡು. ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಹದಗೆಟ್ಟಿದೆ ಎಂದು ಸ್ಥಾಪಿಸಲು ಯತ್ನಿಸಿದರು(48:p47).

ಆಗಾಗ್ಗೆ ಕೆಲವು ಘರ್ಷಣೆಗಳು ನಡೆದಿದ್ದವು. ಕಾರ್ಮಿಕರು ಮತ್ತು ಉದ್ಯೋಗದಾತರ ನಡುವಿನ ಕೆಲವು ಘರ್ಷಣೆಗಳು ಗಂಭೀರವಾಗಿದ್ದು, ಹಿಂಸಾತ್ಮಕವೂ ಆಗಿದ್ದವು. ಇವುಗಳಲ್ಲಿ ಅಸಾಮಾನ್ಯವಾದವುಗಳ್ಯಾವುವೂ ಇರಲಿಲ್ಲ. ಕಮ್ಯುನಿಸ್ಟರು ಅಧಿಕಾರಕ್ಕೆ ಬರುವ ಮೊದಲು ಸಹ ಅಂತಹ ಘರ್ಷಣೆಗಳು ನಡೆದಿದ್ದವು. ನಿಜವಾಗಿಯೂ ವಿಶೇಷವಾಗಿ ಹೇಳುವ ರೀತಿಯ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ತರುವಂಥದ್ದೇನೂ ಕೇರಳದಲ್ಲಿ ನಡೆದಿರಲಿಲ್ಲ.

ವಾಸ್ತವವಾಗಿ 'ಅಭದ್ರತೆ' ಎನ್ನುವ ಕೂಗಿನ ಹಿಂದೆ, ಕಮ್ಯುನಿಸ್ಟ್ ಮಂತ್ರಿಮಂಡಲದ ಉಪಸ್ಥಿತಿಯು ಪಟ್ಟಭದ್ರ ಹಿತಾಸಕ್ತಿಗಳ ಗುಂಪುಗಳಿಗೆ ಒಂದು ರೀತಿಯ ಭಯ ಆವರಿಸಿಕೊಂಡಿದ್ದು ಮಾತ್ರವಾಗಿತ್ತು. ಸಂವಿಧಾನಾತ್ಮಕ ಚೌಕಟ್ಟಿನೊಳಗೆ ಕೆಲಸ ಮಾಡುತ್ತಿದ್ದರೂ ಸಹಿಸಿಕೊಂಡಿರಲು ಅವರಿಂದ ಸಾಧ್ಯವಾಗುತ್ತಿರಲಿಲ್ಲ. ದಕ್ಷಿಣ ಬಾರತದ ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್‌ನ ಅಧ್ಯಕ್ಷ ಕಾಲ್ಡರ್ ವುಡ್ ಈ ಭಾವನೆಯನ್ನು ಪ್ರತಿಬಿಂಬಿಸಿದ್ದಾರೆ. ಈ ಸಂಸ್ಥೆಯ 64ನೇ ವಾರ್ಷಿಕ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡುವಾಗ ಅವರು ಹೀಗೆ ಹೇಳಿದರು:

> "ಪ್ರಸ್ತುತ (ಕಮ್ಯುನಿಸ್ಟ್) ಸರ್ಕಾರವು, ಪ್ರಜಾಸತ್ತಾತ್ಮಕವಾಗಿ ಸ್ಥಾಪಿತಗೊಂಡು ಭಾರತದ ಒಕ್ಕೂಟದ ಸಾಂವಿಧಾನಿಕ ಚೌಕಟ್ಟಿನಿಂದ ನಿಯಂತ್ರಿಸಲ್ಪಟ್ಟಿದ್ದರೂ ಇದು ಯಾವುದೇ ಖಾಸಗಿ ಉದ್ಯಮಕ್ಕೂ ಅದರ ಅಪಾಯ ಉಂಟುಮಾಡದೇ ಇರುವುದಿಲ್ಲ. ಈ ಉದ್ಯಮ ಸಿದ್ಧಾಂತವನ್ನು ಅದು ಬಲವಾಗಿ ವಿರೋಧಿಸುತ್ತಲೂ ಇದೆ. ಕೇರಳ ಸರ್ಕಾರವು ತೋಟ/ಎಸ್ಟೇಟ್‌ಗಳನ್ನು ರಾಷ್ಟ್ರೀಕರಣಗೊಳಿಸಬಹುದು ಎಂಬ ಭಯವನ್ನು ಅವರು ತೋಟ/ಎಸ್ಟೇಟ್ ಮಾಲೀಕರಲ್ಲಿ ವ್ಯಕ್ತಪಡಿಸಿದರು. ಈ ದೇಶದ ಬಹುಪಾಲು ಜನರ ನಂಬಿಕೆ ಮತ್ತು ಗುರಿಗಳಿಗೆ, ಬೇರೆಯದೇ ಆದ ವಿದೇಶಿ ಪ್ರಭಾವವಿರುವ ಒಂದು ಆರಾಧನಾ ರೀತಿಯ ಕಾನೂನಿಗೆ

ಒಳಪಟ್ಟುಬಿಡುತ್ತದೆಯೋ ಎನ್ನುವ ಭಯ ನಮ್ಮದು. ಕೇರಳದಲ್ಲಿ ಇಂದಿನ ತೆರಿಗೆ ವ್ಯವಸ್ಥೆಯಲ್ಲಿ ನಾನು ನೋಡುತ್ತಿರುವುದು ಕೈಗಾರಿಕೆಗಳ ನಿರ್ವಹಣೆ ಮತ್ತು ಬೆಳವಣಿಗೆಗೆ ಅಗತ್ಯವಿರುವ ದೃಢಸಂಕಲ್ಪವನ್ನಲ್ಲ, ಬದಲಿಗೆ, ಪ್ರಸ್ತುತ ನಿಗೂಢ ಆರ್ಥಿಕ ವಿಧಾನಗಳ ಮೂಲಕ ಅವುಗಳನ್ನು ನಾಶಮಾಡುವ ಕ್ರಮಗಳಾಗಿವೆ( 109:28.08.57).

ತಿರುವನಂತಪುರದ ತಮ್ಮ ಭಾಷಣದ ಸಂದರ್ಭದಲ್ಲಿ, ಅಂದಿನ ಭಾರತದ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ್ ಹೀಗೆ ಅವಲೋಕಿಸಿದರು.

"ಕೇರಳ ಸರಕಾರವು ಉತ್ಸಾಹ ಮತ್ತು ಸೇವಾ ಮನೋಭಾವದೊಂದಿಗೆ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಾರ್ಯವೆಸಗುತ್ತಿದೆ. ರಾಜ್ಯದಲ್ಲಿ ನಡೆಯುತ್ತಿರುವ ಈ ಮಹತ್ತರ ಪ್ರಯೋಗ ಬೇರೆ ರಾಜ್ಯಗಳಿಗೆ ಮಾತ್ರವಲ್ಲ ದೇಶಕ್ಕೆ ಸಮಗ್ರ ಮತ್ತು ಅನುಕರಣೀಯ ಮಾದರಿಯಾಗಲಿದೆ. ಸರ್ವರಿಗೂ ಒಳ್ಳೆಯದಾಗಲೆಂದು ಆಶಿಸುವ ಸಹಬಾಳ್ವೆಗೆ ಇದು ಒಂದು ಪರಿಪೂರ್ಣ ಉದಾಹರಣೆಯಾಗಿದೆ" (84:25.08.57).

ರಾಜಕೀಯ ಖೈದಿಗಳ ಬಿಡುಗಡೆ ಮತ್ತು ಮರಣದಂಡನೆ ಶಿಕ್ಷೆಯಲ್ಲಿ ತೋರಿಸಿದ ರಿಯಾಯಿತಿ ಮುಂತಾದ ಕೆಲವು ಸರ್ಕಾರದ ಕ್ರಮಗಳು ಪ್ರತಿಪಕ್ಷಗಳನ್ನು ಕೆರಳಿಸಿದ್ದವು. ಕಮ್ಯುನಿಸ್ಟ್ ಸರ್ಕಾರವು ಅಧಿಕಾರಕ್ಕೆ ಏರಿದ ಸಂಭ್ರಮಾಚರಣೆಯಾಗಿ ಇಂಥ ಸುಧಾರಣಾ ಕ್ರಮಗಳನ್ನು ಕೈಗೊಂಡಿತ್ತು. ಇದು ಭಾರತದ ಇತರೇ ಹಲವು ರಾಜ್ಯಗಳಲ್ಲಿದ್ದಂಥ ಸಾಮಾನ್ಯ ಪದ್ಧತಿಯಾಗಿತ್ತು(45:p125). ಆದರೆ, ಇದು ಕಮ್ಯುನಿಸ್ಟ್ ವಿರೋಧಿಗಳನ್ನು ಕೆರಳಿಸಿತು. ರಾಜ್ಯದಲ್ಲಿ ಭಯೋತ್ಪಾದನೆಯನ್ನು ಹುಟ್ಟುಹಾಕಲು ಕಮ್ಯುನಿಸ್ಟ್ ಸರ್ಕಾರವು ಉದ್ದೇಶಪೂರ್ವಕವಾಗಿ ಜಾರಿಗೆ ತಂದ ಕ್ರಮ ಇದೆಂದು ಕಾಂಗ್ರೆಸ್ಸಿಗರು ಮತ್ತು ಕ್ಯಾಥೋಲಿಕರು ಭಾವಿಸಿದರು. ಸರ್ಕಾರ 350ಕ್ಕೂ ಹೆಚ್ಚು ಅಪರಾಧಿ ಪ್ರಕರಣಗಳನ್ನು ನ್ಯಾಯಾಲಯದಿಂದ ಹಿಂಪಡೆದುಕೊಂಡಿತು (86:28.11.59p1595). ಇವುಗಳಲ್ಲಿ ಬಹುಪಾಲು ಆರೋಪಿಗಳು ಕಮ್ಯುನಿಸ್ಟರೇ ಆಗಿದ್ದಾರೆಂದು ಎಂದು ಪ್ರತಿಪಕ್ಷಗಳು ವಾದಿಸಿದವು. ನ್ಯಾಯಾಲಯಗಳಿಂದ ಅಪರಾಧ ಪ್ರಕರಣಗಳನ್ನು ಹಿಂಪಡೆದದ್ದೂ ಖೈದಿಗಳನ್ನು ಬಿಡುಗಡೆಗೊಳಿಸಿದ್ದೂ ಕಮ್ಯುನಿಸ್ಟರು ಸುಲಭವಾಗಿ ಕಾನೂನನ್ನು ತಮ್ಮ ಕೈಗೆ ತೆಗೆದುಕೊಳ್ಳಲು ಸಾಧ್ಯವಾಗಿಸುವುದರ ಸಂಕೇತವಾಗಿದೆ ಎನ್ನುವ ಭಾವನೆಯನ್ನು ಉಂಟುಮಾಡಿ, ಜನರ ಮನಸ್ಸಿನಲ್ಲಿ ಭಯ ಹುಟ್ಟಿಸುತ್ತಿದೆ ಎಂದೂ ಅವರು ಆರೋಪಿಸಿದರು(168:p60). ನಂತರದಲ್ಲಿ ನ್ಯಾಯಮೂರ್ತಿ ಶಂಕರನ್* ಹೀಗೆ ಅವಲೋಕಿಸಿದರು:

"ಒಂದು ಪ್ರಜಾಪ್ರಭುತ್ವ ಸರಕಾರದ ಇಂತಹ ಕ್ರಮಗಳ ಉದ್ದೇಶವನ್ನು ಪ್ರಶ್ನೆ

* ಜಸ್ಟೀಸ್ ಶಂಕರನ್ ನಂತರದಲ್ಲಿ ಕೇರಳ ಹೈಕೋರ್ಟ್ ಮುಖ್ಯ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿದ್ದರು.

ಮಾಡಬಹುದಾಗಿದೆ." (86:28.11.59p1595)

ಕೇರಳ ಘಟಕದ ಕಾಂಗ್ರೆಸ್ ಬಣ ಮತ್ತು ಅದರ ಕೇಂದ್ರ ನಾಯಕರು, ರಾಜ್ಯದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಟ್ಟಿದೆ ಎಂದು ಆಪಾದನೆಯ ಬಗ್ಗೆ ಕಟುವಾಗಿ ಟೀಕಿಸಿದರು. ಎಐಸಿಸಿ ಕಾರ್ಯದರ್ಶಿಯಾದ ಶ್ರೀಮನ್ನಾರಾಯಣ್ ಕಮ್ಯುನಿಸ್ಟ್ ಮಂತ್ರಿಮಂಡಲದ ವಿರುದ್ಧ, ಅರಾಜಕತೆಗೆ ಪ್ರಚೋದನೆ ನೀಡುತ್ತಿದ್ದಾರೆ ಎಂದು ಆರೋಪಿಸಿದರು. ಏಕಪಕ್ಷದ ಸರ್ವಾಧಿಕಾರದ ಆಧಾರದ ಮೇಲೆ ಸರ್ಕಾರ ಸಂವಿಧಾನದ ವಿಧ್ವಂಸಕ ಕೃತ್ಯಕ್ಕೆ ಯತ್ನಿಸುತ್ತಿದ್ದಾರೆನ್ನುವ ಆರೋಪವನ್ನೂ ಅವರು ಮಾಡಿದರು(48:p19). ಏಪ್ರಿಲ್ 8ರಂದು ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಯು ಎರ್ನಾಕುಲಂನಲ್ಲಿ ಸಭೆ ಸೇರಿದಾಗ, ಸಭೆಯಲ್ಲಿ ಅವರು ಮಾತನಾಡಿದ್ದು ಹೀಗೆ:

"ಹೊಸ ಸರಕಾರ ತೆಗೆದುಕೊಂಡ ಮೊದಲ ಎರಡು ಹೆಜ್ಜೆಗಳು ಆತಂಕಕಾರಿ ಬೆಳವಣಿಗೆಯಾಗಿವೆ. ಸಾಬೀತಾದ ಕೊಲೆಗಾಗಿ ಮರಣದಂಡನೆಯ ಶಿಕ್ಷೆಯನ್ನು ವಿಧಿಸಿದವರಿಗೆ ನೀಡಲಾದ ರಿಯಾಯಿತಿಯೆನ್ನುವುದು ಮೊದಲನೆಯದು. ಕೊಲೆ, ಹಿಂಸೆ, ಬೆಂಕಿ ಹಚ್ಚುವಿಕೆ ಇವೇ ಮುಂತಾದ ಗಂಭೀರವಾದ ಅಪರಾಧಗಳಲ್ಲಿ ಶಿಕ್ಷೆಗೊಳಗಾದವರನ್ನು ರಾಜಕೀಯ ಕೈದಿಗಳೆಂದು ಬಿಡುಗಡೆಮಾಡುವುದು ಎರಡನೆಯದು(50:09.04.57).

ರಾಜ್ಯ ಕಾಂಗ್ರೆಸ್ ನಾಯಕರಿಗೆ ಶ್ರೀಮನ್ನಾರಾಯಣರವರಿಂದ ಸುಳಿವು ಸಿಕ್ಕ ನಂತರ, ಸರ್ಕಾರದ ವಿರುದ್ಧ ತೀವ್ರ ತರಹದಲ್ಲಿ ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಹದಗೆಟ್ಟಿದೆ ಎಂದು ಅಪಪ್ರಚಾರ ಮಾಡತೊಡಗಿದರು(169:p3). ಏಪ್ರಿಲ್ 1957ರಲ್ಲಿ ನಡೆದ ಕೇರಳ ವಿಧಾನಸಭೆಯ ಮೊದಲ ಅಧಿವೇಶನದಲ್ಲಿ ವಿರೋಧಪಕ್ಷದ ನಾಯಕರು ಕಾನೂನು ಮತ್ತು ಸುವ್ಯವಸ್ಥೆಯ ವಿಷಯವನ್ನು ಪ್ರಸ್ತಾಪಿಸುತ್ತಾ, ಕೇಂದ್ರದ ಹಸ್ತಕ್ಷೇಪವನ್ನು ಸ್ವಾಗತಿಸಿದರು(169:p3).

### ಪೊಲೀಸ್ ನೀತಿಯ ವಿರುದ್ಧ

ಸರ್ಕಾರದ ಸ್ಪಷ್ಟ ಮತ್ತು ಪಾರದರ್ಶಕ ಪೊಲೀಸ್-ಕಾನೂನು ಮತ್ತು ಸುವ್ಯವಸ್ಥೆ ನೀತಿಯ ವಿರುದ್ಧ ವಿರುದ್ಧಶಕ್ತಿಗಳು ನೆಲೆಗೊಂಡವು. ಸರಕಾರದ ಕಾರ್ಮಿಕ ನೀತಿಗೆ ಅನುಗುಣವಾಗಿ ಕೈಗಾರಿಕೆ-ಕೃಷಿಗೆ ಸಂಬಂಧಿಸಿದ ವಿವಾದದಲ್ಲಿ ಮಧ್ಯಪ್ರವೇಶಿಸಲು ಪೊಲೀಸರಿಗೆ ಅವಕಾಶವಿರಲಿಲ್ಲ(45:p133). ನಿಜವಾದ ಅಪರಾಧಿಗಳನ್ನು ಹುಡುಕಿ ಶಿಕ್ಷಿಸುವುದು, ಕೈಗಾರಿಕೆ ಮತ್ತು ಕೃಷಿಗೆ ಸಂಬಂಧಿಸಿದ ವಿಚಾರಗಳಲ್ಲಿಅಶಾಂತಿಯ ಸಮಯದಲ್ಲಿ ಗಲಭೆ ಮತ್ತು ಹಿಂಸಾಚಾರವನ್ನು ತಡೆಯುವುದು, ಇವುಗಳಲ್ಲಿ ಮಾತ್ರ ಪೊಲೀಸರ ಕರ್ತವ್ಯವಿರುತ್ತದೆ. 'ಪೊಲೀಸ್ ಪಡೆಗಳನ್ನು ಮಾಲೀಕರಿಗೆ ಅನುಕೂಲಕರವಾಗಿ ಬಳಸುತ್ತಿರುವುದರಿಂದ ದುಡಿಯುವ ವರ್ಗದ ಮೂಲಭೂತ

ಹಕ್ಕುಗಳ ಉಲ್ಲಂಘನೆಯಾಗುತ್ತಿದೆ' ಎನ್ನುವ ಸರ್ಕಾರದ ಅಭಿಪ್ರಾಯವನ್ನೇ ಸರ್ಕಾರ ಪಾಲಿಸಿಕೊಂಡು ಬಂದಿದ್ದು(86:28.11.59p1595).

ಈ ಪೊಲೀಸ್ ನೀತಿಯಿಂದಾಗಿ ಪೊಲೀಸ್ ಪಡೆ ದುರ್ಬಲಗೊಳ್ಳಲಿದೆ ಎಂದು ಪ್ರತಿಪಕ್ಷಗಳು ವಿರೋಧಿಸಿದವು(168:p56). ಪೊಲೀಸ್ ಸೇನೆಗೆ ರಕ್ಷಣೆ ಇಲ್ಲದಂತಾಗಿದೆ ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಶಿಕ್ಷೆಯ ಬಗ್ಗೆ ಹೆದರದೆ, ಕಮ್ಯುನಿಸ್ಟರಿಗೆ ನಿರ್ಭಯವಾಗಿ ಏನು ಬೇಕಾದರೂ ಮಾಡುವ ಸ್ವಾತಂತ್ರ್ಯ ಸಿಗುತ್ತದೆ ಎನ್ನುವ ಭಯ ಅವರನ್ನು ಕಾಡಿತು(168:p56). ವಿರೋಧಪಕ್ಷಗಳು ಮತ್ತು ಇತರೆ ಕಮ್ಯುನಿಸ್ಟ್ ವಿರುದ್ಧವಿರುವ ಸಂಘಗಳು ಈ ಪರಿಸ್ಥಿತಿಯನ್ನು ತಮಗೆ ಅನುಕೂಲವಾಗುವಂತೆ ಮಾಡಿಕೊಂಡರು. ರಾಜಕೀಯ ಕೈದಿಗಳ ಬಿಡುಗಡೆ ಮಾಡಿದ್ದು, ಹೊಸ ಕಾರ್ಮಿಕ/ಪೊಲೀಸ್ ನೀತಿಗಳ ಅನುಷ್ಠಾನಗೊಳಿಸಿದ್ದರ ನಂತರ ರಾಜ್ಯದ ಅಭದ್ರತೆಯ ಬಗ್ಗೆ 'ದೀಪಿಕಾ' ಪತ್ರಿಕೆ ಸುಳಿವು ನೀಡಿತು. ಸಾಮಾನ್ಯವಾಗಿ ಕ್ರೈಸ್ತರು ಮತ್ತು ನಿರ್ದಿಷ್ಟವಾಗಿ ಕ್ಯಾಥೋಲಿಕರು ವಿಶೇಷವಾಗಿ ಭದ್ರತಾ ಸಿದ್ಧಾಂತಕ್ಕೆ ವ್ಯಾಪಕ ಪ್ರಚಾರ ನೀಡಿದರು(108:05.05.57). ಈ ಪರಿಸ್ಥಿತಿಯಲ್ಲಿ ವಿರೋಧ ಪಕ್ಷಗಳು ಮತ್ತು ಪಟ್ಟಭದ್ರ ಹಿತಾಸಕ್ತಿಗಳ ಗುಂಪುಗಳು ಎರಡು ಕ್ರಿಯಾ ಯೋಜನೆಗಳನ್ನು ರೂಪಿಸಿದವು:

1) ಪೊಲೀಸರನ್ನು ದುರ್ಬಲಗೊಳಿಸುವುದನ್ನು ಎದುರಿಸುವುದಕ್ಕಾಗಿ, ಸ್ವಯಂ-ರಕ್ಷಣಾ ಸ್ವಯಂಸೇವಕ ಸಂಘವನ್ನು ತ್ವರಿತವಾಗಿ ಸಂಘಟಿಸುವುದು.
2) ಕಮ್ಯುನಿಸ್ಟ್ ಸರ್ಕಾರವನ್ನು ನಿಯಂತ್ರಿಸುವುದಕ್ಕಾಗಿ ತಮ್ಮ ಅಭದ್ರತೆಯ ಬಗ್ಗೆ ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವುದು(168:p56). ಸ್ವರಕ್ಷಣಾ ಸ್ವಯಂಸೇವಕರ ಸೋಗಿನಲ್ಲಿ ಪಟ್ಟಭದ್ರ ಹಿತಾಸಕ್ತಿ ಮತ್ತು ಕೋಮುಶಕ್ತಿಗಳಿಂದ ಹಿಂಸಾಚಾರದಿಂದ ಕೂಡಿದ ಪ್ರತಿಭಟನೆ ಮತ್ತು ವಿಧ್ವಂಸಕ ಚಟುವಟಿಕೆಗಳಿಗಾಗಿ ಖಾಸಗಿ ಅರೆಸೈನಿಕರನ್ನು ಸಿದ್ಧಪಡಿಸಿಟ್ಟುಕೊಂಡರು(113:p36).

ಆದರೆ ಕಮ್ಯುನಿಸ್ಟ್ ಪಕ್ಷಕ್ಕೆ ಹೇಳಬೇಕಾಗಿದ್ದ ಇನ್ನೊಂದು ಅಂಶವಿತ್ತು.

"1957ರ ಆರಂಭಿಕ ದಿನಗಳಲ್ಲಿ ಹೊರಹೊಮ್ಮಿದ್ದ ಕಾನೂನು ಮತ್ತು ಸುವ್ಯವಸ್ಥೆಯ ಪರಿಸ್ಥಿತಿಯ ಕುರಿತು ಎದ್ದಿದ್ದ ಕೂಗು, ಸಂಪೂರ್ಣವಾಗಿ ಹಾಸ್ಯಾಸ್ಪದವಾಗಿತ್ತು. ಅದರ ಆಧಾರದಲ್ಲಿ ಬಹಳಷ್ಟು ಕೈದಿಗಳನ್ನು ಜೈಲುಗಳಿಂದ ಬಿಡುಗಡೆಗೊಂಡಿದ್ದರು ಮತ್ತು ಪೊಲೀಸ್ ಚಿತ್ರಹಿಂಸೆ ಕೊನೆಗೊಂಡಿತ್ತು. ಆಂಧ್ರಪ್ರದೇಶ ರಾಜ್ಯ ರಚನೆ ನಂತರ, ಅಲ್ಲಿಯ ಸರ್ಕಾರವು ಇಲ್ಲಿಗಿಂತ ನೂರು ಪಟ್ಟು ಹೆಚ್ಚು ಕೈದಿಗಳನ್ನು ಬಿಡುಗಡೆ ಮಾಡಿತ್ತು. ಆದರೂ ಕಾಂಗ್ರೆಸ್ ಆಡಳಿತವಿರುವ ರಾಜ್ಯದಲ್ಲಿ ಅಭದ್ರತೆಯ ಕೂಗುಗಳೇನು ಎದ್ದಿರಲಿಲ್ಲ. ಶಾಂತಿ ಸುವ್ಯವಸ್ಥೆಯ ಹೆಸರಿನಲ್ಲಿ ಅಲ್ಲಿ ಅನುಸರಿಸುತ್ತಿದ್ದ ಮೂರನೇ ಡಿಗ್ರಿ ಪ್ರಯೋಗದ ಬಗ್ಗೆ ಸಂಬಂಧಪಟ್ಟವರು ಮೌನವಾಗಿದ್ದರು. ಸತ್ಯಗಳ ಬೆಂಬಲವಿಲ್ಲದೆ ವಿರೋಧಪಕ್ಷಗಳ ವಾದಗಳಲ್ಲಿ ಯಾವುದೇ ಹುರುಳಿಲ್ಲದೇ ನಿರರ್ಥಕವಾಗುತ್ತಿದೆ. ಅದು ಕಾಂಗ್ರೆಸ್ ಪಕ್ಷದಲ್ಲಿ

ಅಸಹಿಷ್ಣುತೆಯಿದ್ದ ಹಿರಿಯರ ಮತ್ತು ಕೇರಳದಲ್ಲಿ ಆ ಹಿರಿಯರ ಜೊತೆಗಿದ್ದವರ ಮೊದಲ ದಾಳಿಯಾಗಿತ್ತು(169:p3).

### ಶೈಕ್ಷಣಿಕ ಸುಧಾರಣೆಗಳ ವಿರುದ್ಧ

ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಹೆಚ್ಚು ನಿರ್ಣಾಯಕವಾದ ಪ್ರತಿಭಟನೆ ಮತ್ತು ಆಂದೋಲನಗಳು ನಡೆದದ್ದು ಶಿಕ್ಷಣ ಸುಧಾರಣೆಯ ಬಗ್ಗೆಯಾಗಿತ್ತು. ಸಾರ್ವಜನಿಕ ಶಿಕ್ಷಣದ ಗುಣಮಟ್ಟ ಮತ್ತು ಶಿಕ್ಷಕರ ಉದ್ಯೋಗದ ಪರಿಸ್ಥಿತಿಗಳಲ್ಲಿ ಸುಧಾರಣೆಗಳನ್ನು ತರಲು ಕಾನೂನುಗಳ ಆಧಾರಗಳ ಮೇಲೆ ಸರ್ಕಾರವು ಸೂಕ್ತ ಅಡಿಪಾಯವನ್ನು ಹಾಕಲು ನಿರ್ಧರಿಸಿತು. ಜುಲೈ 7, 1957ರಲ್ಲಿ ಕೇರಳ ಶಿಕ್ಷಣ ಮಸೂದೆಯನ್ನು ಮಂಡನೆ ಮಾಡಿದ್ದಲ್ಲದೆ, ಆಯ್ಕೆ ಸಮಿತಿಯ ಪರಿಶೋಧನೆಯ ನಂತರ, ಸೆಪ್ಟೆಂಬರ್ 20ರಂದು ಎರಡನೇ ಓದುವಿಕೆಯ ಘಟ್ಟದೆಡೆಗೆ ಅದನ್ನು ತಲುಪಿಸಲಾಯಿತು. ಕೇಂದ್ರ ಸರ್ಕಾರದ ಸಹಯೋಗದಲ್ಲಿ ವಿರೋಧಪಕ್ಷವು ಇದನ್ನು ಜೂನ್ 1959ರವರೆಗೆ ಮುಂದೂಡಿಕೊಂಡು ಹೋಗುವಲ್ಲಿ ಯಶಸ್ವಿಯಾಯಿತು. ಕಮ್ಯುನಿಸ್ಟ್ ವಿರೋಧಿ ಗುಂಪುಗಳ ಕೋಪವನ್ನು ಅದರ ವಿರುದ್ಧ ತಿರುಗಿಸಿ ಬಿಡುವುದು ಅವರ ಗುರಿಯಾಗಿತ್ತು.

ಸಾರ್ವಜನಿಕ ಶಿಕ್ಷಣವನ್ನು ಉತ್ತಮವಾಗಿ ಸಂಘಟಿಸುವುದು ಮಸೂದೆಯ ಗುರಿಗಳಲ್ಲೊಂದಾಗಿತ್ತು. ಶಿಕ್ಷಣ ಸಂಸ್ಥೆಗಳ ಆಡಳಿತಕ್ಕಾಗಿ ಮತ್ತು ಶಿಕ್ಷಕರ ವೇತನ ಮತ್ತು ಅವರ ಸೇವೆಗಳ ಭದ್ರತೆಯ ಸಮರ್ಪಕ ನಿಯಂತ್ರಣವನ್ನು ಕಲ್ಪಿಸುವುದು ಮಸೂದೆಯ ಉದ್ದೇಶವಾಗಿತ್ತು(170:07.57). ಮಸೂದೆಯ ಮೇಲಿನ ಚರ್ಚೆಗೆ ಪ್ರತಿಕ್ರಿಯೆಯಾಗಿ, ಶಿಕ್ಷಣ ಸಚಿವ ಜೋಸೆಫ್ ಮುಂಡಸ್ಸೆರಿ, ಶಿಕ್ಷಕರ ಹಕ್ಕುಗಳನ್ನು ರಕ್ಷಿಸುವ ಉದ್ದೇಶವನ್ನು ಒತ್ತಿ ಹೇಳಿದರು.

> "ವ್ಯವಸ್ಥಾಪಕರ/ಮೇನೆಜ್ಮೆಂಟಿನ ದಯೆಗಾಗಿ ಅವಲಂಬಿಸುವಂಥ ಅವರ ಅನಿಶ್ಚಿತತೆ ಕೊನೆಗೊಳ್ಳಬೇಕು".*

ಶಿಕ್ಷಣ ಸುಧಾರಣೆಗಾಗಿ ಸರ್ಕಾರದ ಉಪಕ್ರಮವು, ಪ್ರಸ್ತುತ ವ್ಯವಸ್ಥೆಯಲ್ಲಿ ತೊಡಗಿಕೊಂಡಿರುವ ವಿವಿಧ ಸಂಘಗಳ ತಕ್ಷಣದ ಗಮನವನ್ನು ಸೆಳೆದಿತ್ತು. ಮುಕ್ತವಾದ 'ಸಾಮೂಹಿಕ ಬದಲಾವಣೆ' ಮೂಲಕ ಗೂಢವಾದ 'ಗುಣಾತ್ಮಕ ಬದಲಾವಣೆ'ಯನ್ನು ಶಿಕ್ಷಣ ಕ್ಷೇತ್ರದಲ್ಲಿ ತರಲು ಸರ್ಕಾರ ಪ್ರಯತ್ನಿಸುತ್ತಿದೆ ಎಂದು ಕೇರಳದ ವಿರೋಧ ಪಕ್ಷಗಳು ಆರೋಪಿಸಿದವು. ಕೆಪಿಸಿಸಿ ಮಾತುಗಳಲ್ಲಿ ಹೇಳುವುದಾದರೆ,

> "ಶಿಕ್ಷಣ ಕ್ಷೇತ್ರದಲ್ಲಿ ಅವರ ನವೀಕರಣಗಳು ಅಥವಾ ನಾವೀನ್ಯತೆಗಳು ಸಾರ್ವತ್ರಿಕವಾಗಿ ಅಂಗೀಕರಿಸಲ್ಪಟ್ಟ ಆದರ್ಶಗಳಿಂದ ಮರೆಮಾಡಿಕೊಂಡು,

* ಮೂರನೇ ಅಧ್ಯಾಯವು ಮಸೂದೆಯ ಪ್ರಮುಖ ನಿಬಂಧನೆಗಳ ಬಗ್ಗೆ ಪ್ರತಿಪಾದಿಸುತ್ತದೆ.

ಕಮ್ಯುನಿಸ್ಟ್ ಸರ್ವಾಧಿಕಾರಕ್ಕೆ ಅಡಿಪಾಯ ಹಾಕುವಷ್ಟು ಅವರು ಪ್ರಬುದ್ಧರಾಗಿದ್ದಾರೆ. ಕಠಿಣ ಶಿಸ್ತುಕ್ರಮಗಳನ್ನು ಹೇರುವುದರ ಮೂಲಕ ಅದನ್ನು ಸುಲಭ ಸಾಧ್ಯವಾಗಿಸುವುದೆಂದರೆ ಭವಿಷ್ಯದ ಪೀಳಿಗೆಯನ್ನು ಬ್ರೈನ್‌ವಾಶ್ ಮಾಡುವುದೆಂದೇ ಅರ್ಥ"(171:p205).

ಈ ತರ್ಕವನ್ನು ಬರವಣಿಗೆ ಮತ್ತು ಮೌಖಿಕ ಭಾಷಣಗಳ ಮೂಲಕ ಮತ್ತೆ ಮತ್ತೆ ಪ್ರಚಾರ ಮಾಡಲಾಯಿತು. ಇದು ಬಹುಸಂಖ್ಯೆಯ ಜನರ ಕೋಪವನ್ನು ಕೆರಳಿಸುವಲ್ಲಿ ಕೊನೆಗೊಂಡಿತು.

ಕ್ಯಾಥೋಲಿಕ್ ಕ್ರಿಶ್ಚಿಯನ್ನರು ಮಸೂದೆಯ ಅತ್ಯಂತ ಪ್ರಬಲ ವಿರೋಧಿಗಳಾಗಿದ್ದರು. ಮಸೂದೆಯನ್ನು ಮಂಡಿಸುವುದಕ್ಕೂ ಮುಂಚೆಯೇ, ಅವರು ಸಾಮಾನ್ಯ ಜನರ ಅಭಿಪ್ರಾಯವನ್ನು ಪ್ರಭಾವಿಸಲು ಮತ್ತು ತಮಗೆ ಅನುಕೂಲಕರವಾಗುವ ರೀತಿಯಲ್ಲಿ ಅದನ್ನು ಪರಿವರ್ತಿಸಿಕೊಳ್ಳಲು ಅಭಿಯಾನವನ್ನು ಆಯೋಜಿಸಿದ್ದರು. ಮಸೂದೆಯ ಪ್ರಕಟಣೆಯ ನಂತರ, ಕೇರಳದ ಎಲ್ಲಾ ಕ್ರಿಶ್ಚಿಯನ್ ಬಿಷಪ್‌ಗಳು ಕೊಟ್ಟಾಯಂನಲ್ಲಿ ಸಮ್ಮೇಳನವನ್ನು ಸಂಘಟಿಸಿ, ಅಲ್ಲಿ ಶೈಕ್ಷಣಿಕ ಸುಧಾರಣೆಗಳನ್ನು ಕಟುವಾಗಿ ಟೀಕಿಸುವ ನಿರ್ಣಯವನ್ನು ಅಂಗೀಕರಿಸಿದರು(172:p48). ಮಸೂದೆ ಜಾರಿಯಾದರೆ ರಾಜ್ಯದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಅವ್ಯವಸ್ಥೆ ಉಂಟಾಗಲಿದೆ ಎಂದು ಸರ್ಕಾರಕ್ಕೆ ಎಚ್ಚರಿಕೆ ನೀಡಿದರು(173:29.10.57). ಕ್ಯಾಥೋಲಿಕರು ಮಸೂದೆಯ ವಿರುದ್ಧ ತಪ್ಪು ಕಲ್ಪನೆಗಳನ್ನು ಹರಡುವ ಪ್ರಚಾರದಲ್ಲಿ ತೊಡಗಿಕೊಂಡರು. ಸಾರ್ವಜನಿಕ ಸೇವಾ ಆಯೋಗ ಅಥವಾ ಸರ್ಕಾರ ಸಿದ್ಧಪಡಿಸುವ ಉದ್ಯೋಗಾರ್ಥಿಗಳ ಪಟ್ಟಿಯಿಂದ ಅನುದಾನಿತ ಶಾಲೆಗಳ ಶಿಕ್ಷಕರನ್ನು ನೇಮಿಸಲು ಉದ್ದೇಶಿತ ಮಸೂದೆಯಲ್ಲಿಯ ನಿಬಂಧನೆಯೆನ್ನುವುದು ಖಾಸಗಿ ಶಾಲಾ ವ್ಯವಸ್ಥಾಪಕರಿಗೆ ಸರಕಾರ ಬೀಸಿದ ಬಲೆ ಎಂದು ಅವರು ಚಿತ್ರೀಕರಿಸಿದರು. ಶಿಕ್ಷಣ ಕ್ಷೇತ್ರದಿಂದ ಖಾಸಗಿ ಏಜೆನ್ಸಿಗಳನ್ನು ಸಂಪೂರ್ಣವಾಗಿ ಹೊರಗಿಡುವ ತಂತ್ರ ಎಂದು ಅವರು ಭಾವಿಸುವಂತೆ ಮಾಡಿದರು(174:26.07.57). ಚರ್ಚ್ ಪದಾಧಿಕಾರಿಗಳು ಸುಧಾರಣಾ ಪ್ರಸ್ತಾಪಗಳ ವಿರುದ್ಧ ಅನೇಕ ನಿರ್ಣಯಗಳನ್ನು ಅಂಗೀಕರಿಸಿದರು. ವಿದ್ಯಾರ್ಥಿಗಳಲ್ಲಿ ನಾಸ್ತಿಕತೆ ಮತ್ತು ಕಮ್ಯುನಿಸ್ಟ್ ವಿಚಾರಗಳನ್ನು ವಿದ್ಯಾರ್ಥಿಗಳ ಮನಸ್ಸಿನೊಳಕ್ಕೆ ತುರುಕುವ ಗೂಢ ದುರುದ್ದೇಶದಿಂದ ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಲು ಸರ್ಕಾರ ಉದ್ದೇಶಿಸಿದೆ, ಎಂದು ನಿರ್ಣಯಗಳು ಆರೋಪಿಸಿದವು(84:04.07.57). ಮಸೂದೆಯ ವಿರುದ್ಧ ಆಂದೋಲನವನ್ನು ಮುಂದುವರೆಸುವ ಸಲುವಾಗಿ, ಖಾಸಗಿ ಶಾಲಾ ಹಕ್ಕುಗಳ ಸಂರಕ್ಷಣಾ ಸಮಿತಿಯನ್ನು ಜೂನ್ 10, 1957ರಂದು ರಚಿಸಿದರು(108:11.06.57). ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್ ಸಮಿತಿಯು 1957 ಜೂನ್ 10ರಂದು ಕೊಟ್ಟಾಯಂನಲ್ಲಿ ಸಭೆ ನಡೆಸಿ, ಒಂದು ನಿರ್ಣಯವನ್ನು ಅಂಗೀಕರಿಸಿತು. ಧರ್ಮ, ಸಂಸ್ಕೃತಿ, ಭಾಷೆ ಮತ್ತು ಲಿಪಿಯನ್ನು ರಕ್ಷಿಸಲು ಅಲ್ಪಸಂಖ್ಯಾತರ ಸಾಂವಿಧಾನಿಕ ಹಕ್ಕುಗಳನ್ನು ಉಲ್ಲಂಘಿಸುವ ಯಾವುದೇ ನಿಬಂಧನೆಗಳನ್ನು ಉದ್ದೇಶಿತ ಮಸೂದೆಯಲ್ಲಿ ಸೇರಿಸಬಾರದು

ಎಂದು ನಿರ್ಣಯವು ಸರ್ಕಾರವನ್ನು ಕೇಳಿತು(137:p52). ಪ್ರಸ್ತಾವಿತ ಮಸೂದೆಯು ತಮ್ಮ ಅಸ್ತಿತ್ವವನ್ನೇ ಅಪಾಯಕ್ಕೀಡು ಮಾಡುತ್ತದೆ ಎನ್ನುವ ಭೀತಿಯನ್ನು ಚರ್ಚ್ ವ್ಯಕ್ತಪಡಿಸಿತು. ಪೋಷಕರಿಗೆ ಸಂಬಂಧಿಸಿದಂತೆ ತಮ್ಮ ಮಕ್ಕಳಿಗೆ ಕ್ರೈಸ್ತ ಪರಿಸ್ಥಿತಿಯಲ್ಲಿ ಶಿಕ್ಷಣ ದೊರೆಯಬೇಕೆನ್ನುವ ಅವರ ಅವಕಾಶವನ್ನು ಇಲ್ಲದಂತಾಗಿ ಬಿಡಬಹುದೆನ್ನುವ ಸಂದೇಹ ಅವರಲ್ಲಿ ಮೂಡಿತು. ಮಸೂದೆಯು ನಾಗರಿಕರ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತದೆ ಎಂದು ಕೂಡ ಪ್ರಚಾರ ಮಾಡಲಾಯಿತು. 'ಧರ್ಮ ಅಪಾಯದಲ್ಲಿದೆ' ಎನ್ನುವ ಕೂಗನ್ನು ಇದು ಮತ್ತೂ ಬಲಪಡಿಸಿತು(108:02.07.57).

ಜುಲೈ 7, 1957ರಂದು ಮಸೂದೆಯನ್ನು ಪ್ರಕಟಿಸಿದ ನಂತರ, ಕ್ಯಾಥೋಲಿಕರು ತಮ್ಮ ಆಂದೋಲನವನ್ನು ತೀವ್ರಗೊಳಿಸಿದರು. ಪ್ರತಿಭಟನಾ ಸಭೆಗಳ ಸಂಖ್ಯೆ ಮತ್ತು ಪುನರಾವರ್ತನೆಗಳು ಹೆಚ್ಚಾದವು. ಜುಲೈ 9, 1957ರಂದು ತ್ರಿಶೂರಿನಲ್ಲಿ ಸೇರಿದ ಕ್ಯಾಥೋಲಿಕ್ ಚರ್ಚ್ ಸಭೆಯಲ್ಲಿ, ಧರ್ಮಪ್ರಾಂತ್ಯದ ಪರಿಧಿಯೊಳಗೆ ಬರುವ ಶಿಕ್ಷಣ ಮತ್ತು ಕೈಗಾರಿಕಾ ಸಂಸ್ಥೆಗಳಲ್ಲಿ ಮಸೂದೆಯನ್ನು ವಿರೋಧಿಸಿ ಪ್ರತಿಭಟಿಸಲು ಜುಲೈ 12ರಂದು ಹರತಾಳ ನಡೆಸಲು ನಿರ್ಧರಿಸಲಾಯಿತು (1957)(32:11.07.57). ಇದರ ಬೆನ್ನಿಗೆ, ಪಾಲಾ ಡಯಾಸಿಸ್ನಲ್ಲೂ 1957, ಜುಲೈ 13ರಂದು ಹರತಾಳ ಹಮ್ಮಿಕೊಳ್ಳಲಾಯಿತು.

> "ಕಮ್ಯುನಿಸ್ಟ್ ಮಾದರಿಯಲ್ಲಿ ಶಿಕ್ಷಣವನ್ನು ಆಯೋಜಿಸುವುದೇ ಮಸೂದೆಯ ಉದ್ದೇಶ ಎಂದು ಕ್ಯಾಥೋಲಿಕ್ಕರು ಪ್ರತಿಕ್ರಿಯಿಸಿದರು. ಈ ಮೂಲಕ ಕೇರಳವನ್ನು ಕಮ್ಯುನಿಸ್ಟ್ ರಾಜ್ಯವನ್ನಾಗಿ ಪರಿವರ್ತಿಸುವುದೇ ಕಮ್ಯುನಿಸ್ಟರ ಗುಪ್ತಗುರಿ. ಮಸೂದೆಯನ್ನು ಪ್ರಸ್ತುತ ಪಡಿಸಿದ ಸ್ಥಳೀಯ ಶಿಕ್ಷಣ ಅಧಿಕಾರಿಗಳ ಮತ್ತು ಸ್ಥಳೀಯ ಶಿಕ್ಷಣ ಸಮಿತಿಯ ಉದ್ದೇಶವು, ಖಾಸಗಿ ಶಾಲೆಗಳಲ್ಲಿ ಕಮ್ಯುನಿಸ್ಟ್‌ರು ನುಸುಳಿಕೊಳ್ಳುವುದೇ ಆಗಿರುತ್ತದೆ.ಇದು ಪಿಎಸ್ಎಸ್ ಯೋಜನೆಯ ನಿಯಮಗಳ ಉಲ್ಲಂಘನೆಯಾಗಿದೆ. ಅಂತೆಯೇ, ಕ್ರಿಶ್ಚಿಯನ್ ಪರಿಸರದಲ್ಲಿ ತಮ್ಮ ಮಕ್ಕಳಿಗೆ ಕಲಿಸಲು ಪೋಷಕರಿಗಿರುವ ಸ್ವಾಭಾವಿಕವಾದ ಹಕ್ಕನ್ನು ಇದು ನಾಶಗೊಳಿಸುತ್ತದೆ. ಪ್ರಸ್ತಾವಿತ ಮಸೂದೆಯ ನಿಬಂಧನೆಗಳನ್ನು ಉಲ್ಲಂಘಿಸುವ ಅಥವಾ ಪಾಲಿಸದ ಪಾಲಕರು ಶಿಕ್ಷಾರ್ಹರು. ಇದು ಏಕಪಕ್ಷದ ಸರ್ವಾಧಿಕಾರದ ನಿರ್ಲಜ್ಜದ ಅಭಿವ್ಯಕ್ತಿಯಾಗಿದೆ. ಏಕೆಂದರೆ ಅದು ನ್ಯಾಯಾಂಗ ಇಲಾಖೆಯ ಅಧಿಕಾರಗಳನ್ನು ನಿಯಂತ್ರಿಸುತ್ತದೆ ಮತ್ತು ಕಾರ್ಯನಿರ್ವಾಹಕ ಇಲಾಖೆಗೆ ಏಕಪಕ್ಷೀಯವಾಗಿ ವ್ಯಾಖ್ಯಾನಿಸಲು ಸಾಕಷ್ಟು ಅವಕಾಶವನ್ನು ನೀಡುತ್ತದೆ"(108:17.07.57).

ಧಾರ್ಮಿಕ ಕರೆಗಳೂ ಸೇರಿದಂತೆ ತಮ್ಮಲ್ಲಿ ಸ್ಥಾಪಿತಗೊಂಡಿರುವ ಸರ್ವ ಶಕ್ತಿಗಳನ್ನೂ ಉಪಯೋಗಿಸಿಕೊಂಡು ಕ್ರೈಸ್ತ ಅಧಿಕಾರಶ್ರೇಣಿ ಮಸೂದೆಯನ್ನು ಶಕ್ತವಾಗಿ ವಿರೋಧಿಸಲು ನಿರ್ಧರಿಸಿತು. ಜುಲೈ 13, 1957ರಂದು ಕೊಟ್ಟಾಯಂನಲ್ಲಿ ಸೇರಿದ ಆರ್ಚ್ ಬಿಷಪ್‌ರು, ಬಿಷಪ್‌ಗಳು ಮತ್ತು ಇತರ ಪಾದ್ರಿಗಳ ಸಭೆಯು ಒಂದು ಕ್ರಿಯಾ

ಸಮಿತಿಯನ್ನು (ಕೇರಳ ಕ್ಯಾಥೋಲಿಕ್ ಬಿಷಪ್ಸ್ ಎಜುಕೇಶನ್ ಆಕ್ಷನ್ ಸಮಿತಿ-ಕೆಸಿಬಿಇಎಸಿ) ರಚಿಸಲಾಯಿತು. ಸಾಮಾನ್ಯ ಜನರ ಮತ್ತೊಂದು ಕಾರ್ಯಕಾರಿ ಸಮಿತಿ ರಚನೆಗೆ ಸಭೆ ನಿರ್ದೇಶನ ನೀಡಿತು. ಈ ಸಮಿತಿಯನ್ನು ಕ್ರಿಶ್ಚಿಯನ್ ಶಿಕ್ಷಣ ಕ್ರಿಯಾ ಸಮಿತಿ ಎಂದು ಮರುನಾಮಕರಣ ಮಾಡಲಾಯಿತು (ಸಿಇಎಸಿ). ಶಿಕ್ಷಣ ಮಸೂದೆಯನ್ನು ವಿರೋಧಿಸಿ 1957 ಜುಲೈ 21ನ್ನು 'ಪ್ರಾರ್ಥನಾ ದಿನ' ಎಂದು ಆಚರಿಸುವ ಕರೆಯನ್ನೂ ನೀಡಲಾಯಿತು(32:14.07.57). ಪಾದ್ರಿ/ಪುರೋಹಿತಶ್ರೇಷ್ಠರ ಕರೆಗೆ ಅಲ್ಮೇನಿಗಳು/ಸಾಮಾನ್ಯ ಜನರು ಅನುಕೂಲಕರವಾಗಿ ಪ್ರತಿಕ್ರಿಯಿಸಿದರು(32:23.07.57). ಮುಷ್ಕರಗಳು, ಪ್ರದರ್ಶನಗಳು ಮತ್ತು ಇತರ ಪ್ರತಿಭಟನಾ ಸಭೆಗಳು ನಡೆದವು. ಪ್ರತಿಭಟನಾ ಸಭೆಗಳಲ್ಲಿ ಮಸೂದೆಯನ್ನು ಟೀಕಿಸಿ ಅಂಗೀಕರಿಸಲಾದ ನಿರ್ಣಯಗಳನ್ನು, ಭಾರತದ ರಾಷ್ಟ್ರಪತಿ, ಕೇಂದ್ರ ಗೃಹ ಸಚಿವರು, ರಾಜ್ಯದ ರಾಜ್ಯಪಾಲರು ಮತ್ತು ರಾಜ್ಯ ಶಿಕ್ಷಣ ಸಚಿವರುಗಳಿಗೆ ಕಳುಹಿಸಿಕೊಡಲಾಯಿತು. ಬಿಲ್ ಅನ್ನು ತಕ್ಷಣವೇ ಹಿಂಪಡೆಯದಿದ್ದರೆ ಕಾನೂನನ್ನು ಮುರಿಯಲು ಫಾದರ್ ವಡಕ್ಕನ್ ಕ್ರೈಸ್ತ ಸಮುದಾಯಕ್ಕೆ ಕರೆ ನೀಡಿದರು(32:23.07.57). ಜುಲೈ 20, 1957ರಂದು, ಆಯ್ಕೆ ಮಾಡಿದ, ವಿಧಾನಸಭಾ ಸಮಿತಿಯ ಪರಿಗಣನೆಗೆ ಬಿಡಲಾಯಿತು. ಕ್ಯಾಥೋಲಿಕರು ವಿಶೇಷವಾದ ನವೀನ ತಂತ್ರವನ್ನು ರೂಪಿಸಿದರು. ಸಮಿತಿ ಸದಸ್ಯರು ಆಲುವಾದಲ್ಲಿ ಸಭೆ ನಡೆಸಿ, ಸಾಕ್ಷ್ಯಗಳನ್ನು ಸಂಗ್ರಹಿಸುವ ವೇಳೆಯಲ್ಲಿ, ಮಸೂದೆಯ ವಿರುದ್ಧ ಬಡವರ ಮತ್ತು ಅಷ್ಟೇನು ಶಿಕ್ಷಣವಿಲ್ಲದವರ ಬೆಂಬಲ ಪಡೆದುಕೊಳ್ಳುವ ಉದ್ದೇಶವನ್ನಿಟ್ಟುಕೊಂಡಿದ್ದರು. ಮಸೂದೆಯನ್ನು ರದ್ದುಗೊಳಿಸುವಂತೆ ಕೋರಿ ಲಕ್ಷಾಂತರ ಕ್ಯಾಥೋಲಿಕರು ಸಹಿ ಮಾಡಿದ ಮನವಿಯನ್ನು ರಾಜ್ಯಪಾಲರಿಗೆ ಸಲ್ಲಿಸಲಾಯಿತು. ಮತ್ತೊಂದು ಬೃಹತ್ ಮನವಿಯನ್ನು ಶಾಸಕಾಂಗ ಕಾರ್ಯದರ್ಶಿಗೂ ಸಲ್ಲಿಸಲಾಯಿತು(108:23.07.57). ಮಸೂದೆಯನ್ನು ವಿರೋಧಿಸುವುದು ಧಾರ್ಮಿಕ ಕರ್ತವ್ಯ ಎಂದು ನೆನಪಿಸುವ ಪ್ರಕಟಣೆಗಳು, ಕರಪತ್ರಗಳು, ಲೇಖನಗಳು ಮುಂತಾದವುಗಳನ್ನು ಚರ್ಚ್ ಶ್ರೇಣಿಯ ಪ್ಯಾರಿಷ್ ಧರ್ಮಾಧಿಕಾರಿಗಳಿಗೂ ಸಾಮಾನ್ಯ ಜನರಿಗೂ ಕಳುಹಿಸಿಕೊಡುತ್ತಾ ಇದ್ದರು.

ಮಸೂದೆಯು ಕಾನೂನಾಗುವುದು ಖಚಿತವಾದಾಗ, ಮಸೂದೆಯ ವಿರುದ್ಧ ನಡೆಸಲಾದ ಮುಷ್ಕರವನ್ನು, ಚರ್ಚ್ ಶ್ರೇಣಿಯು ಸರ್ಕಾರವನ್ನು ಉರುಳಿಸುವ ಆಂದೋಲನವನ್ನಾಗಿ ಪರಿವರ್ತಿಸಲಾಯಿತು. ಆಗಸ್ಟ್ 14, 1957ರಂದು, ದೀಪಿಕಾ ಡೈಲಿ 'ಶಿಕ್ಷಣ ಮಸೂದೆ ಒಂದು ಪೊಲಿಟಿಕಲ್ ಡೈನಮೈಟ್' ಶೀರ್ಷಿಕೆಯ ಸಂಪಾದಕೀಯ ಲೇಖನವನ್ನು ಪ್ರಕಟಿಸಲಾಯಿತು. ಈ ಸಂಪಾದಕೀಯವು, ಮಸೂದೆಯನ್ನು ತಿದ್ದುಪಡಿ ಮಾಡುವ ಬದಲು ಸರ್ಕಾರವನ್ನೇ ಅಧಿಕಾರದಿಂದ ಕಿತ್ತುಹಾಕುವಂತೆ ಜನಸಾಮಾನ್ಯರಿಗೆ ಕರೆ ನೀಡಿತು(108:14.08.57). ಸಿಇಎಸಿಯ ಮತ್ತು ಪಿಎಸ್ಆರ್‌ಡಿಸಿಯ ಹೆಸರಿನಲ್ಲಿ ನಿಯೋಗ ಮುಖ್ಯಮಂತ್ರಿಯನ್ನೂ ಭೇಟಿ ಮಾಡಿ, ತಕ್ಷಣವೇ ಮಸೂದೆಯನ್ನು ಹಿಂಪಡೆಯಬೇಕೆನ್ನುವ ಶಕ್ತವಾದ ಅಪೇಕ್ಷೆಯನ್ನು ಮುಂದಿಟ್ಟಿತು.

ಶಾಸಕಾಂಗದ ಆಯ್ಕೆ ಸಮಿತಿಯ ವರದಿಯ ಹಿನ್ನೆಲೆಯಲ್ಲಿ ವಿಧೇಯಕದ ಮರುಪರಿಶೀಲನೆಯ ವೇಳೆಯಲ್ಲಿ ವಿಧಾನಸೌಧದ ಮುಂದೆ ಪ್ರತಿಭಟನೆಯನ್ನು ಆಯೋಜಿಸಲು, ಆಗಸ್ಟ್ 20, 1957ರಂದು, ಕೊಟ್ಟಾಯಂನಲ್ಲಿ ಸೇರಿದ ಕ್ರೈಸ್ತ ಶಿಕ್ಷಣ ಕ್ರಿಯಾ ಸಮಿತಿ ಸಭೆ ನಿರ್ಧರಿಸಿತು(143:21.08.57). ಮೋಕ್ಷ ಪ್ರಾಪ್ತಿಗಾಗಿ ಅಗತ್ಯದ ಪ್ರಾಯಶ್ಚಿತ್ತವೆನ್ನುವ ನೆಲೆಯಲ್ಲಿ, ಪ್ರದರ್ಶನ ಮತ್ತು ಪ್ರತಿಭಟನೆಗಳಲ್ಲಿ ಭಾಗವಹಿಸಲು ಪಾದ್ರಿಗಳು ಸಾಮಾನ್ಯರಿಗೆ ಕರೆ ನೀಡಿದರು(102:p449). ಆಗಸ್ಟ್ 26, 1957ರಂದು, 70,000 ಜನರ ಗುಂಪು ವಿಧಾನಸಭೆಯ ಮುಂದೆ ಪ್ರಬಲ ಪ್ರದರ್ಶನವನ್ನು ನಡೆಸಿತು. ಮಸೂದೆಯನ್ನು ಹಿಂಪಡೆಯುವುದು, ರಾಜ್ಯ ಕಾನೂನು ಮತ್ತು ಸುವ್ಯವಸ್ಥೆ ಪರಿಸ್ಥಿತಿಯನ್ನು ತಡೆಗಟ್ಟುವುದು, ಜನರಲ್ಲಿ ಭದ್ರತಾ ಜಾಗೃತಿಯನ್ನು ಮರುಸ್ಥಾಪಿಸುವುದು, ಕೇಂದ್ರ ಸರ್ಕಾರ ಮಧ್ಯಸ್ಥಿಕೆ ವಹಿಸುವುದು ಇವೇ ಮುಂತಾದ ಅಗತ್ಯತೆಗಳನ್ನು ಒತ್ತಾಯಿಸಿ ಪ್ರತಿಭಟನೆ ನಡೆಸಿದ ಜನರು ಸಭೆ ಸೇರಿ, ನಿರ್ಣಯಗಳನ್ನು ಅಂಗೀಕರಿಸಿದರು(143:27.08.57).

ಅಂತಿಮ ಅನುಮೋದನೆಗಾಗಿ ಶಾಸನಸಭೆಯಲ್ಲಿ ಮಸೂದೆಯನ್ನು ಮಂಡಿಸುವಾಗ, ಕ್ಯಾಥೋಲಿಕರು ಸರ್ಕಾರದೊಂದಿಗೆ ನೇರ ಘರ್ಷಣೆಯನ್ನು ಕೈಗೊಳ್ಳುವ ಬಗ್ಗೆ ಯೋಜನೆ ಹಾಕಿದರು. ಸೆಪ್ಟೆಂಬರ್ 1, 1957ರಂದು, 'ಮುಂದೇನು?' ಎನ್ನುವ ಶೀರ್ಷಿಕೆಯಡಿಯಲ್ಲಿ ದೀಪಿಕಾ ಸಂಪಾದಕೀಯ ಬರೆಯಿತು. ಈ ದಿಕ್ಕಿನಲ್ಲಿ ಯಾವುದೆಲ್ಲ ಕ್ರಮಗಳನ್ನು ಕೈಗೊಳ್ಳಬೇಕೆಂದು, ಮೇಲ್ಕಂಡ ಸಂಪಾದಕೀಯದಲ್ಲಿ ಸ್ಪಷ್ಟಪಡಿಸಲಾಯಿತು. ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ರಕ್ಷಿಸಲು ಏಕರೂಪದ ವಸ್ತ್ರ ಧರಿಸಿದ ಸಶಸ್ತ್ರ ಸ್ವಯಂಸೇವಕ ಪಡೆಗಳನ್ನು ರಚಿಸುವುದು, ಮತ್ತು ಆಂದೋಲನಕ್ಕಾಗಿ ನಿಧಿ ಸಂಗ್ರಹಿಸುವುದು, ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರು ಜಂಟಿಯಾಗಿ 'ಪ್ರಾರ್ಥನಾ ಅಭಿಯಾನ'ವನ್ನು ಸಂಘಟಿಸುವುದು, ಹೆಚ್ಚಿನ ಹುರುಪಿನಿಂದ ಹೋರಾಟವನ್ನು ಮುನ್ನಡೆಸುವುದು, ಇವೇ ಮುಂತಾದ ಕ್ರಮಗಳ ಬಗ್ಗೆ ಚರ್ಚೆ ನಡೆಸಲಾಯಿತು(108:01.08.57). ಮಸೂದೆಯನ್ನು ಅಸೆಂಬ್ಲಿಯಲ್ಲಿ ಅಂಗೀಕಾರಗೊಂಡ ದಿನದಂದು, ಕೆಸಿಬಿಇಎ ಮತ್ತು ಸಿಇಎಸಿ ಜಂಟಿಯಾಗಿ ಸಭೆ ಸೇರಿ, ಪ್ರಸ್ತುತ ಕ್ರಮವು 'ನಿರಂಕುಶಾಧಿಕಾರ' ಮತ್ತು 'ಅಸಂವಿಧಾನಿಕ' ಎಂದು ಖಂಡಿಸಿ, ರಾಜ್ಯಪಾಲರು ಮತ್ತು ರಾಷ್ಟ್ರಪತಿಗಳು ಮಸೂದೆಗೆ ಅಂಗೀಕಾರ ನೀಡುವುದನ್ನು ತಡೆಯುವಂತೆ ಆಂದೋಲನವನ್ನು ತೀವ್ರಗೊಳಿಸಲು ನಿರ್ಧರಿಸಿತು(108:03.09.57). ವಿಧೇಯಕಕ್ಕೆ ಅಂತಿಮ ಅನುಮೋದನೆ ನೀಡಬಾರದೆಂದು ವಿನಂತಿಸುತ್ತಾ, ರಾಷ್ಟ್ರಪತಿಗಳಿಗೆ, ಕೇಂದ್ರ ಗೃಹ ಸಚಿವರಿಗೆ, ರಾಜ್ಯಪಾಲರಿಗೆ ಹಲವಾರು ಟೆಲಿಗ್ರಾಂಗಳು ಹೋದವು.

ಹೋರಾಟವನ್ನು ತೀವ್ರಗೊಳಿಸುವ ನಿಟ್ಟಿನಲ್ಲಿ ಕ್ರೈಸ್ತ ಶಿಕ್ಷಣ ಕ್ರಿಯಾ ಸಮಿತಿಯು, ಆಂದೋಲನಕ್ಕೆ ಹೆಚ್ಚಿನ ಸದಸ್ಯರನ್ನು ಸೇರಿಸುತ್ತಾ, ವಿಧೇಯಕಕ್ಕೆ ಅನುಮೋದನೆ ನೀಡದಂತೆ ರಾಷ್ಟ್ರಪತಿ ಹಾಗೂ ರಾಜ್ಯಪಾಲರಿಗೆ ಮನವಿ ಪತ್ರ ಸಲ್ಲಿಸಲಾಯಿತು(108:03.09.57).

ಮಸೂದೆಯನ್ನು ಅನುಷ್ಠಾನಗೊಳಿಸುವುದಕ್ಕೆ ತಡೆಗಟ್ಟಲು ಹಲವಾರು ಉಪಸಮಿತಿಗಳನ್ನು ರಚಿಸಲಾಯಿತಲ್ಲದೆ, ಸ್ವಯಂಸೇವಕರನ್ನು ಸಜ್ಜುಗೊಳಿಸುವುದಕ್ಕಾಗಿ ಕರೆಗಳನ್ನು ಪುನರಾವರ್ತಿಸಲಾಯಿತು. ಸೆಪ್ಟೆಂಬರ್ 7, 1957ರಂದು ಸಿಇಎಸಿ ನಿರ್ಣಯದ ಮೂಲಕ, ಮಸೂದೆ ವಿರುದ್ಧ ಪ್ರತಿಭಟನೆಯ ಭಾಗವಾಗಿ, ರಾಜ್ಯದ ಖಾಸಗಿ ಶಾಲೆಗಳಿಗೆ ಸೆಪ್ಟೆಂಬರ್ 13, 1957ರಂದು ಹರತಾಳವನ್ನು ಆಚರಿಸಲು ತಿಳಿಸಲಾಯಿತು (108:10.08.57). ಕ್ರೈಸ್ತ ಶಿಕ್ಷಣ ಕ್ರಿಯಾ ಸಮಿತಿಗೆ ಡಯೋಸಿಸನ್ ಸಮಿತಿಗಳು ಕರೆ ನೀಡುವುದನ್ನು ಪುನರಾವರ್ತಿಸಲಾಯಿತು. ಆದಾಗ್ಯೂ, ಎಲ್ಲಾ ಪಂಗಡಗಳ ಕ್ರಿಶ್ಚಿಯನ್ನರು ಈ ಚಳುವಳಿಯನ್ನು ಪೂರ್ಣ ಮನಸ್ಸಿನಿಂದ ಬೆಂಬಲಿಸಿದರು ಎಂದು ಹೇಳಲಾಗುವುದಿಲ್ಲ. ಉದಾಹರಣೆಗೆ, ಆರ್ಚ್‌ಬಿಷಪ್ ಮಾರ್ಥೋಮಾ ಕೌನ್ಸಿಲ್ ಉದ್ದೇಶಿತ ಹರತಾಳದಲ್ಲಿ ಭಾಗವಹಿಸದಿರಲು ನಿರ್ಧರಿಸಿತ್ತು(143:10.09.57).

ಪಿಎಸ್‌ಆರ್‌ಡಿಸಿಯ ಒಂದು ನಿಯೋಗದಿಂದ 1957, ಸೆಪ್ಟಂಬರ್ 10ರಂದು ರಾಜ್ಯಪಾಲರನ್ನು ಭೇಟಿ ಮಾಡಿ, ವಿಧೇಯಕ ಅಂಗೀಕಾರ ಮಾಡಿದ ನಂತರ ಪರಿಸ್ಥಿತಿಯನ್ನು ಚರ್ಚಿಸಿ, ಮಸೂದೆಗೆ ಅನುಮೋದನೆ ನೀಡದಂತೆ ಅವರಿಗೆ ಮನವಿ ಪತ್ರ ಸಲ್ಲಿಸಲಾಯಿತು. ಸಿಇಎಸಿಯ ಕರೆಯ ಮೇರೆಗೆ ಸೆಪ್ಟೆಂಬರ್ 13, 1957ರಂದು ಹರ್ತಾಳ ನಡೆಯಿತು. ಕೆಲವು ಕ್ಯಾಥೋಲಿಕ್ ಕೇಂದ್ರಗಳಲ್ಲಿ ಪ್ರದರ್ಶನಗಳೂ ನಡೆದವು. ರಾಜ್ಯದ ಸುಮಾರು 7000ಕ್ಕೂ ಹೆಚ್ಚು ಶಾಲೆಗಳ ಪೈಕಿ, ಕ್ಯಾಥೋಲಿಕ್ ಕೇಂದ್ರಗಳ ಸಾವಿರದಷ್ಟು ಶಾಲೆಗಳು ಮಾತ್ರ ಪ್ರಸ್ತುತ ಹರತಾಳದಲ್ಲಿ ಭಾಗವಹಿಸಿತ್ತು ಎಂದು ಮಲಯಾಳ ಮನೋರಮಾ ಪತ್ರಿಕೆ ವರದಿ ಮಾಡಿತು(32:14.09.57).

ಶಿಕ್ಷಣ ಮಸೂದೆ ವಿರುದ್ಧದ ಪ್ರತಿಭಟನೆಯಲ್ಲಿ ವಿರೋಧಪಕ್ಷದವರಿಗೆ ಒಂದು ಐಕ್ಯರಂಗವನ್ನು ಕಟ್ಟಲು ಸಾಧ್ಯವಾಗಲಿಲ್ಲ. ಕಾಂಗ್ರೆಸ್ ನಾಯಕರು ಚರ್ಚ್ ಅಧಿಕಾರಿಗಳ ಸಹಯೋಗದೊಂದಿಗೆ ಕೆಲಸ ಮಾಡಿದರು. 'ಏಕಪಕ್ಷೀಯ ಪಾರಮ್ಯದ ಸ್ಪಷ್ಟ ಸಾಕ್ಷಾತ್ಕಾರ'ವಾಗಿ ಮಸೂದೆಯನ್ನು ಮಾಜಿ ಶಿಕ್ಷಣ ಸಚಿವ ಎಲ್.ಎಂ.ಪೈಲಿಯವರು ಮೌಲ್ಯಮಾಪನ ಮಾಡಿದ್ದಾರೆ.

> "ವಿರೂಪಗೊಳಿಸಲ್ಪಟ್ಟ, ತಪ್ಪಾಗಿ ಅರ್ಥೈಸಲಾದ, ಸಮಗ್ರವಾದ ನಿರಂಕುಶ ಪ್ರಭುತ್ವ ಪ್ರವೃತ್ತಿಯಿಂದ ಕೂಡಿದೆ ಪ್ರಸ್ತುತ ಮಸೂದೆ"

ಎಂದು ಕೆಪಿಸಿಸಿ ಮತ್ತು ಕಾಂಗ್ರೆಸ್ ಶಾಸಕಾಂಗ ಪಕ್ಷವು ಆರೋಪಿಸಿತು. ಈ ಮಸೂದೆಯು ಶೈಕ್ಷಣಿಕ ಚಟುವಟಿಕೆಗಳನ್ನು ಮಿಲಿಟರಿ ಶಿಸ್ತಿಗೆ ಅಧೀನಗೊಳಿಸಲು ದಾರಿ ಮಾಡಿಕೊಡುತ್ತಿದೆ ಎಂದು ಖಂಡಿಸಿದರು(140:09.77p10). ಕಾಂಗ್ರೆಸ್ ಶಾಸಕ ಹಾಗೂ ಎಸ್‌ಎನ್‌ಡಿಪಿ ಯ ಪ್ರಧಾನ ಕಾರ್ಯದರ್ಶಿಯಾದ ಕೆ.ಆರ್.ನಾರಾಯಣನ್ ಮಸೂದೆಗೆ ಅಂಗೀಕಾರ ನೀಡುತ್ತಾ, ಶಿಕ್ಷಣ ವ್ಯವಸ್ಥೆಯಲ್ಲಿ ಅವರ ಸಿದ್ಧಾಂತವನ್ನು ಸೇರ್ಪಡೆಗೊಳಿಸುವಂಥ ಯಾವುದೇ ನಡೆಗಳು ಇದರಲ್ಲಿ ಕಾಣಿಸುತ್ತಿಲ್ಲವೆಂದು

ಘೋಷಿಸಿದರು. ಅವರು ಮಸೂದೆಯನ್ನು ಪೂರ್ಣ ಮನಸ್ಸಿನಿಂದ ಬೆಂಬಲಿಸಿದರು(102:20.07.57). ಆದರೆ ವಿಧೇಯಕವನ್ನು ವಿರೋಧಿಸಿದ ವಿರೋಧ ಪಕ್ಷದ ನಾಯಕ ಪಿ.ಟಿ.ಚಾಕೊ, ಚರ್ಚ್ ಅಧಿಕಾರಶ್ರೇಣಿಯ, ಪಟ್ಟಭದ್ರ ಹಿತಾಸಕ್ತಿಯ ಸಂಘಗಳ ಪ್ರಯತ್ನಗಳನ್ನು ಬೆಂಬಲಿಸಿದರು. ಪಿ.ಟಿ.ಚಾಕೊ ಮತ್ತು ಪ್ರತಿಪಕ್ಷಗಳು, ಉಪನಾಯಕ ಪಿ.ಪಿ.ಉಮ್ಮರ್‌ಕೋಯಾ ಅವರು ಮಸೂದೆಯ ವಿಚಾರದಲ್ಲಿ ಸಾರ್ವಜನಿಕರ ಅಭಿಪ್ರಾಯ ಪಡೆಯಲು ಸಂಬಂಧಪಟ್ಟವರ ಸಭೆ ಕರೆಯಬೇಕು ಎಂದು ಅಪೇಕ್ಷಿಸಿದರು. ಲೀಲಾ ದಾಮೋದರಮೆನನ್ ಈ ಅಭಿಪ್ರಾಯಕ್ಕೆ ಬೆಂಬಲ ವ್ಯಕ್ತಪಡಿಸಿದರು(102:20.07.57). ಸಿ.ಎ.ಮ್ಯಾಥ್ಯೂ, ಕೆ.ಸಿ.ಅಬ್ರಹಾಂ, ಅಲೆಕ್ಸಾಂಡರ್ ಪಿ.ಪರಂಬಿತರ, ಕೆ.ಎಂ.ಜಾರ್ಜ್, ಇ.ಪಿ.ಪೌಲೋಸ್ ಮತ್ತು ಇತರೆ ಕಾಂಗ್ರೆಸ್ಸಿನ ತೀವ್ರವಾದಿ ಕ್ರಿಶ್ಚಿಯನ್ ನಾಯಕರು ಈ ಮಸೂದೆಗೆ ತೀವ್ರ ವಿರೋಧ ವ್ಯಕ್ತಪಡಿಸಿದರು (102:20.07.57-26.11.57). ಕೇಂದ್ರ ಮತ್ತು ಸ್ಥಳೀಯ ಮಟ್ಟದಲ್ಲಿ ಶಿಕ್ಷಣ ಮಸೂದೆಯ ವಿರೋಧಿ ಆಂದೋಲನದ ಯಶಸ್ಸಿನ ಸಾಧ್ಯತೆಗಳು ಹೆಚ್ಚಾದಾಗ, ರಾಜ್ಯ ಕಾಂಗ್ರೆಸ್ ಪಕ್ಷದ ಜಾಗ್ರತಗೊಂಡ ರಾಜಕಾರಣಿಗಳು, ಮೇಲಿನ ತೀವ್ರವಾದಿ ನಾಯಕರೊಂದಿಗೆ ಸೇರಿಕೊಂಡರು(140:09.77p12). ಶಿಕ್ಷಣ ಮಸೂದೆಯನ್ನು ಈ ಹಂತದಲ್ಲಿ ಜಂಟಿಯಾಗಿ ವಿರೋಧಿಸಿದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಸೇರಿಕೊಂಡು, ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗುವಂಥ ಕ್ರಮಗಳನ್ನು ಸಾರ್ವಜನಿಕ ವೇದಿಕೆಗಳಲ್ಲಿ ಬಹಿರಂಗವಾಗಿ ಟೀಕಿಸಲಾಯಿತು. ಅವರು ಈ ವಿಚಾರದಲ್ಲಿ ಗಣನೀಯವಾದ ಬೆಂಬಲವನ್ನೂ ಗಳಿಸಿದರು.

ಶಿಕ್ಷಣ ಮಸೂದೆಯ ವಿರುದ್ಧದ ಆಂದೋಲನವನ್ನು 'ಮಾತೃಭೂಮಿ', 'ಕೇರಳ ಕೌಮುದಿ'ಯಂಥ ಕೆಲವು ಪತ್ರಿಕೆಗಳು ಬೆಂಬಲಿಸಲಿಲ್ಲ. ಶಿಕ್ಷಣ ಮಸೂದೆ ವಿರುದ್ಧದ ಆಂದೋಲನ ಮಲಬಾರಿನಲ್ಲಿ ಪ್ರಬಲವಾಗಿರಲಿಲ್ಲ. ಅದು ಕ್ರಿಶ್ಚಿಯನ್ ಮಿಷನರಿ ಶಾಲೆಗಳಿಗೆ ಸೀಮಿತವಾಗಿತ್ತು(29:29.07.59). ತಿರುವಾಂಕೂರು ಮತ್ತು ಕೊಚ್ಚಿ ಪ್ರದೇಶಗಳ ಕ್ರೈಸ್ತ ಮುಖಂಡರು ಕೂಡ ಮಸೂದೆಯ ವಿರುದ್ಧ ಪ್ರಚಾರ ಮಾಡಲು ಸಾರ್ವಜನಿಕವಾಗಿ ಆಂದೋಲನಕ್ಕೆ ಪಾದಾರ್ಪಣೆ ಮಾಡಿದರು. ಇದಕ್ಕೆ ವಿರುದ್ಧವಾಗಿ, ಕೋಳಿಕ್ಕೋಡ್ ಕಾಂಗ್ರೆಸ್ ಪಕ್ಷದ ಸದಸ್ಯರು ಸಾರ್ವಜನಿಕವಾಗಿ ಮಸೂದೆಯನ್ನು ಬೆಂಬಲಿಸಿದರು(84:17.07.57).

ಶಿಕ್ಷಣ ಮಸೂದೆ ವಿರುದ್ಧದ ಅಭಿಯಾನದಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ದೃಢವಾಗಿ ನಿಂತರು. ಆದರೆ ಈ ನಿಟ್ಟಿನಲ್ಲಿ ಪಿಎಸ್‌ಪಿಯೊಂದಿಗೆ ತಿಳುವಳಿಕೆಯನ್ನು ಸಾಧಿಸಲು ಮತ್ತು ಸರ್ವಪಕ್ಷ ವೇದಿಕೆಯನ್ನು ರಚಿಸಲು ನಡೆಸಿದ ಅವರ ಆರಂಭಿಕ ಪ್ರಯತ್ನಗಳು ವಿಫಲವಾದವು(140:09.77p12). ಪಿಎಸ್‌ಪಿಯ ರಾಷ್ಟ್ರೀಯ ಪರಿಷತ್ತು ಈ ಆಂದೋಲನದ ಪರವಾಗಿರಲಿಲ್ಲ(115:19.07.57). ಪಿಎಸ್‌ಪಿ ರಾಜ್ಯ ನಾಯಕ ಪಟ್ಟಂ ತಾನು ಪಿಳ್ಳೆ ತಟಸ್ಥರಾದಾಗ, ಪಕ್ಷದ ಉಪನಾಯಕ ಎಂ.ಎಸ್. ನಾರಾಯಣ ಕುರುಪ್ ಅವರು

ಮಸೂದೆಯನ್ನು ಬೆಂಬಲಿಸಿದರು. ಆದಾಗ್ಯೂ, ಪಿಎಸ್ಪಿಯ ಕ್ರಿಶ್ಚಿಯನ್ ಮುಖಂಡರಾದ ಕೆ.ಎ. ಥಾಮಸ್ ಮತ್ತು ಜೋಸೆಫ್ ಚಳಿಕಾಡನ್ ಮಸೂದೆಯನ್ನು ಶಕ್ತವಾಗಿ ವಿರೋಧಿಸಿದರು(84:01.09.57). ಹೀಗೆ ಚರ್ಚ್ ಮತ್ತು ವಿರೋಧಪಕ್ಷಗಳ ಕ್ರಿಶ್ಚಿಯನ್ ನಾಯಕರು ಸಾಧ್ಯವಾಗುವ ಎಲ್ಲಾ ರೀತಿಗಳಲ್ಲೂ ಶಿಕ್ಷಣಕ್ಷೇತ್ರದ ಸುಧಾರಣೆಯನ್ನು ವಿರೋಧಿಸಿದರು. ಇದರ ಭಾಗವಾಗಿ ಅವರು ರ್ಯಾಲಿಗಳು, ಪ್ರದರ್ಶನಗಳು, ಹರತಾಳ ಮುಂತಾದವುಗಳ ಮೂಲಕ ಶಕ್ತವಾದ ಪ್ರಚಾರವನ್ನು ಆಯೋಜಿಸಿದರು. ಡಿಸೆಂಬರ್ 18, 1957ರಂದು ಕೇರಳ ಕೃಷಿ ಸಂಬಂಧಿಸಿದ ಮಸೂದೆ ಪ್ರಕಟಣೆಯಾದ ನಂತರ, ಕೇರಳದ ರಾಜಕೀಯ ಪರಿಸ್ಥಿತಿಯು ಗಣನೀಯವಾಗಿ ಪರಿವರ್ತನೆಗೊಳಗಾದ ವಿಷಯವು, ಈ ಸಂದರ್ಭದಲ್ಲಿ ಉಲ್ಲೇಖಾರ್ಹ. ಪ್ರಸ್ತುತ ಮಸೂದೆಯು ಕೇರಳದ ಭೂಸಂಬಂಧಗಳನ್ನು ದೃಢೀಕರಿಸುವ ಉದ್ದೇಶವನ್ನು ಹೊಂದಿತ್ತು. ಈ ಕ್ರಮವು ನಾಯರ್ ಭೂಮಾಲೀಕರ ಹಿತಾಸಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವುದರಿಂದ, ನಾಯರ್ ಸರ್ವೀಸ್ ಸೊಸೈಟಿ ಮತ್ತು ಅದರ ಮುಖ್ಯಸ್ಥರಾದ ಮನ್ನತ್ ಪದ್ಮನಾಭನ್ ಕೂಡ ಸರ್ಕಾರದ ವಿರುದ್ಧ ತಿರುಗಿಬಿದ್ದರು.

ಶಿಕ್ಷಣ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿದಾಗ (1957), ವಾಸ್ತವವಾಗಿ ಮನ್ನತ್ ಪದ್ಮನಾಭನ್ ಅದನ್ನು ಬಲವಾಗಿ ಬೆಂಬಲಿಸಿದ್ದರು. ಶೈಕ್ಷಣಿಕ ಸುಧಾರಣೆಗಳ ಸಾಂಪ್ರದಾಯಿಕ ಶತ್ರುಗಳು ಎನ್ನುವ ನೆಲೆಯಲ್ಲಿ, ಅವರು ಕ್ರಿಶ್ಚಿಯನ್ನರನ್ನು ಮತ್ತು ಅವರ ಅಧಿಕಾರಶ್ರೇಣಿಯನ್ನು ಆಕ್ಷೇಪಿಸಿದ್ದರು. ಶೈಕ್ಷಣಿಕ ಸಮಸ್ಯೆಗಳ ಬಗ್ಗೆ ಅವರ ಸಂಕುಚಿತ ವಿಧಾನಗಳಿಗಾಗಿ ಅವರು ಅವರನ್ನು ಖಂಡಿಸಿದ್ದರು(143:5.07.57). ಪಿಎಸ್‌ಸಿ ಮೂಲಕ ಸಿದ್ಧಪಡಿಸಲಾದ ಉದ್ಯೋಗಾಕಾಂಕ್ಷಿಗಳ ಪಟ್ಟಿಯಿಂದ ಅನುದಾನಿತ ಶಾಲೆಗಳ ಅಧ್ಯಾಪಕರ ನೇಮಕಾತಿ ಮಾಡಬೇಕೆನ್ನುವ ನಿರ್ದೇಶನವನ್ನು, ಶಿಕ್ಷಣ ವಿಧೇಯಕಕ್ಕೆ ಬೆಂಬಲ ನೀಡುವ ಸಂದರ್ಭದಲ್ಲಿ ಅವರು ಸರ್ಕಾರಕ್ಕೆ ಸಲ್ಲಿಸಿದ್ದರು. ದೋಷರಹಿತ ರೀತಿಯಲ್ಲಿ ಶಿಕ್ಷಣವನ್ನು ಉತ್ತೇಜಿಸಲು ಆಸಕ್ತಿ ಹೊಂದಿರುವ ಎಲ್ಲರಲ್ಲೂ ಶಿಕ್ಷಣ ಮಸೂದೆಯನ್ನು ಬೆಂಬಲಿಸುವಂತೆ ಅವರು ಮನವಿ ಮಾಡಿದರು(143:5.07.57). ಎನ್‌ಎಸ್‌ಎಸ್ ಕಾರ್ಯಕಾರಿ ಸಮಿತಿಯು ಅಂತಹ ನಿರ್ಣಯವನ್ನು ಅಂಗೀಕರಿಸಿತು.

ವಿಧಾನಪರಿಷತ್ ಆಯ್ಕೆ ಸಮಿತಿಯ ಪರಿಶೀಲನೆ ನಡೆಸಿದ ನಂತರ, ಪರಿಷ್ಕೃತ ವಿಧೇಯಕವನ್ನು ವಿಧಾನಸಭೆಯಲ್ಲಿ ಮಂಡಿಸಿದಾಗ, ಸರ್ವರಿಗೂ ಸ್ವೀಕಾರಾರ್ಹ ರೀತಿಯಲ್ಲಿ ತಿದ್ದುಪಡಿ ಮಾಡಿದ್ದಾರೆ ಎಂದು ಮನ್ನತ್‌ಪದ್ಮನಾಭನ್ ಕಮ್ಯುನಿಸ್ಟರನ್ನು ಅಭಿನಂದಿಸಿದರು. ಅವರು ಆಗ ಹೇಳಿದ್ದು ಹೀಗೆ:

> "ಆಂದೋಲನವನ್ನು ಕ್ರಿಶ್ಚಿಯನ್ ಚರ್ಚ್ ಆಯೋಜಿಸುತ್ತಿದೆ. ಬಿಷಪ್‌ಗಳು ಮತ್ತು ಪಾದ್ರಿಗಳು ಚಳವಳಿಯ ಹೃದಯ ಮತ್ತು ಆತ್ಮಗಳಾಗಿದ್ದಾರೆ. ಮಸೂದೆಗೆ ಅಗಾಧವಾದ ಜನಬೆಂಬಲವಿದೆ. ಆದ್ದರಿಂದ ಅದು ಕಾನೂನಾಗಿ

ಹೊರಹೊಮ್ಮಿದರೆ, ಅಸ್ತಿತ್ವದಲ್ಲಿರುವ ಸರ್ಕಾರ ಖಂಡಿತಾ ಜಾರಿಗೆ ತರುವಲ್ಲಿ ಯಶಸ್ವಿಯಾಗುತ್ತದೆ" (143:28.08.57).

ಆದರೆ ಕೃಷಿ ಸಂಬಂಧಗಳ ಮಸೂದೆಯ ಮಂಡನೆಯ ಬಗ್ಗೆ ಮನ್ನತ್ ಪದ್ಮನಾಭನ್ ಹಾಗೂ ಎನ್ ಎಸ್ ಎಸ್ ಧೋರಣೆ ಸಂಪೂರ್ಣವಾಗಿ ಬದಲಾಯಿತು. ಮಿತಿಮೀರಿ ಬೆಂಬಲಿಸಿದ್ದ ಶಿಕ್ಷಣ ಮಸೂದೆಯನ್ನು ಅವರು ಅಂಗೀಕರಿಸುವಲ್ಲಿ, ರಾಜಿಯಿಲ್ಲದ ರೀತಿಯಲ್ಲಿ ಸರ್ಕಾರವನ್ನು ವಿರೋಧಿಸಲು ಪ್ರಾರಂಭಿಸಿದರು. ಪಾಲಕ್ಕಾಡ್ ಎಂಜಿನಿಯರಿಂಗ್ ಕಾಲೇಜು ಆರಂಭಿಸಲು ಎನ್‌ಎಸ್‌ಎಸ್‌ನ ಅರ್ಜಿಯನ್ನು ತಿರಸ್ಕರಿಸಿದ ಹಿನ್ನೆಲೆಯಿಂದಾಗಿ, ಸರ್ಕಾರ ಮತ್ತು ಎನ್‌ಎಸ್‌ಎಸ್ ನಡುವಿನ ಸಂಬಂಧ ಹೆಚ್ಚು ಕಲುಷಿತಗೊಂಡಿತ್ತು(35:p295). NSSನ ಬೇಡಿಕೆಯನ್ನು ತಿರಸ್ಕರಿಸಿದ್ದರ ವಿರುದ್ಧ ಮನ್ನತ್ ಪದ್ಮನಾಭನ್ ಖಾರವಾಗಿ ಪ್ರತಿಕ್ರಿಯಿಸಿದರು. ಕಮ್ಯುನಿಸ್ಟ್ ಸರ್ಕಾರವನ್ನು ಹೊರಹಾಕದೆ ತನಗೆ ಶಾಂತವಾಗಿ ವಿಶ್ರಾಂತಿ ಪಡೆಯಲು ಸಾಧ್ಯವಿಲ್ಲ ಎಂದು ಅವರು ಶಪಥ ಮಾಡಿದರು(67:27.07.57).

ಅಧಿಕಾರದಲ್ಲಿರುವ ಸರ್ಕಾರವು 'ಈಳವ/ಈಡಿಗ-ಪರ' ಮತ್ತು 'ನಾಯರ್ ವಿರುದ್ಧ' ಆಗಿದೆಯೆಂದು ಪ್ರಚಾರ ಮಾಡುತ್ತಾ, ತಮ್ಮ ತಂತ್ರಗಳ ಭಾಗವಾಗಿ, ಕೋಮು ಭಾವನೆ ಕೆರಳಿಸಲು ಯತ್ನಿಸಿದರು. ಜನರನ್ನು ಜಾತಿ-ಕೋಮು ಆಧಾರಿತವಾಗಿ ವಿಭಜಿಸಲು ಮತ್ತು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಪ್ರಬಲ ವರ್ಗವನ್ನು ತಿರುಗಿಸಿಬಿಡಲು,ಈ ಪ್ರಚಾರಗಳ ಮೂಲಕ ಮನ್ನತ್ ಪದ್ಮನಾಭನ್ ಅವರಿಗೆ ಸಾಧ್ಯವಾಯಿತು(161:p153). ಸರ್ಕಾರಿ ಸೇವೆಗೆ ನೇಮಕಾತಿಗಾಗಿ ಮತ್ತು ವೃತ್ತಿಪರ ಕಾಲೇಜುಗಳಿಗೆ ಪ್ರವೇಶಕ್ಕಾಗಿ, ಸಮುದಾಯ/ಜಾತಿಯಾಧರಿತ ಮೀಸಲಾತಿ ವ್ಯವಸ್ಥೆಯ ವಿರುದ್ಧ ಕೋಮು ಭಾವನೆಯ ಬೆಂಕಿಯನ್ನು ಹೊತ್ತಿ ಉರಿಸಲು ಪದ್ಮನಾಭನ್ ಯತ್ನಿಸಿದರು. ಈಳವ/ಈಡಿಗ-ನಾಯರ್‌ಗಳ ಹಿತಾಸಕ್ತಿಗಳಿಗೆ ಉದ್ದೇಶಪೂರ್ವಕವಾಗಿ ಹಾನಿಯನ್ನು ಉಂಟುಮಾಡುತ್ತಿರುವುದಾಗಿ ಅರ್ಥೈಸಲಾಯಿತು. ಸಮಾಜದಲ್ಲಿ ಒತ್ತಡವನ್ನು ಹೆಚ್ಚಿಸುವುದಕ್ಕಾಗಿ, 'ನಾಯರುಗಳ ಹಿತಾಸಕ್ತಿ ಅಪಾಯದಲ್ಲಿದೆ', ಎನ್ನುವ ಹುಯಿಲೆಬ್ಬಿಸಲಾಯಿತು(143:30.05.58).

ಮನ್ನತ್ ಪದ್ಮನಾಭನ್ ಮತ್ತು ಎನ್‌ಎಸ್‌ಎಸ್ ಆರಂಭಿಸಿದ ಪ್ರಬಲವಾದ ಅಭಿಯಾನದಿಂದಾಗಿ, ಕ್ರೈಸ್ತ ಚರ್ಚುಗಳು ಸಂಘಟಿಸಿದ, ನಂತರದಲ್ಲಿ ದುರ್ಬಲಗೊಳ್ಳುತ್ತಿದ್ದ ಶಿಕ್ಷಣ ಮಸೂದೆ ವಿರುದ್ಧದ ಆಂದೋಲನಕ್ಕೆ ಹೊಸ ಹುರುಪು ಸಿಕ್ಕಂತಾಯಿತು. ನಾಯರ್ ಮತ್ತು ಕ್ರಿಶ್ಚಿಯನ್ನರ ಮೈತ್ರಿ ಸರ್ಕಾರಕ್ಕೆ ಮಾರಕವಾಗಿ ಪರಿಣಮಿಸಿತು.

**ಪಠ್ಯಪುಸ್ತಕ ವಿವಾದ ಮತ್ತು ವಾಸ್ತವತೆ**

ಸರ್ಕಾರದ ಶಿಕ್ಷಣ ನೀತಿ ಬಗ್ಗೆ ಚರ್ಚ್‌ಗಳು ವಿರೋಧಿಸುವುದಕ್ಕೆ ಮತ್ತೊಂದು ಕಾರಣ, ಪಠ್ಯಪುಸ್ತಕಗಳ ತಯಾರಿಕೆಗೆ ಸಂಬಂಧಿಸಿದ್ದು. ಹೊಸಪಠ್ಯಪುಸ್ತಕಗಳ

ತಯಾರಿಕೆಯಲ್ಲೂ ಶಿಫಾರಸ್ಸುಗಳಲ್ಲೂ 1958ರ ಮಧ್ಯದಲ್ಲಿ, ಕಮ್ಯುನಿಸ್ಟರ 'ಕುಟಿಲ ಉದ್ದೇಶದ ಮರೆಯಲ್ಲಿದ್ದ ಪಿತೂರಿ' ಬಹಿರಂಗಗೊಂಡಿತೆಂದು ಆರೋಪಿಸಲಾಯಿತು.

"ಪಠ್ಯಕ್ರಮ, ಬೋಧನಾ ಶೈಲಿ, ಶಿಸ್ತು ಮುಂತಾದವುಗಳ ಮೇಲೆ ಕಟ್ಟುನಿಟ್ಟಾದ ನಿಯಂತ್ರಣ ಹೇರುವ ಮೂಲಕ, ವಿದ್ಯಾರ್ಥಿಗಳ ಮನಸ್ಸನ್ನು ಆಡಳಿತಗಾರರ ಸಿದ್ಧಾಂತಕ್ಕೆ ಒಳಪಡಿಸಲು ಸರ್ಕಾರ ಪ್ರಯತ್ನಿಸಿತು..."

"ಇದೆಲ್ಲ ಏಕಪಕ್ಷ ನಿರಂಕುಶ ಪ್ರಭುತ್ವಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಲಕ್ಷಣವಾಗಿದೆ"(100:p22;171:p117).

ಇಂತಿದ್ದವು ಕೇರಳದ ಕ್ಯಾಥೋಲಿಕ್ ಚರ್ಚ್ ವಕ್ತಾರರ ಮತ್ತು ಕೆಪಿಸಿಸಿಯ ಆರೋಪಗಳು.

ವಾಸ್ತವವಾಗಿ ಪ್ರೊ.ಜೋಸೆಫ್ ಮುಂಡಸ್ಸೆರಿ ಶಿಕ್ಷಣ ಕ್ಷೇತ್ರದ ಒಬ್ಬ ದಾರ್ಶನಿಕರಾಗಿದ್ದರು. ಶಾಲೆಗಳಲ್ಲಿ ಪಠ್ಯ ಯೋಜನೆ ಮತ್ತು ಕ್ರಮ, ಪಠ್ಯಪುಸ್ತಕದ ವಿಷಯ ಮುಂತಾದವುಗಳನ್ನು ನವೀಕರಿಸಲು ಅವರು ಉಪಕ್ರಮವನ್ನು ತೆಗೆದುಕೊಂಡರು(35:p330.359). ಮುಂದಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಪ್ರಾಥಮಿಕ ತರಗತಿಗಳಿಗೆ ಹೊಸ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಲು, 1957ರಲ್ಲಿ ಸರ್ಕಾರವು ವಿವಿಧ ಪಠ್ಯಪುಸ್ತಕ ಸಮಿತಿಗಳನ್ನು ನೇಮಿಸಿತು. ಚರ್ಚ್ ಅಧಿಕಾರಿಗಳು, ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್, ಇತರ ಸಮುದಾಯದ ಮುಖಂಡರು, ಕೆಲವು ವಿರೋಧ ಪಕ್ಷಗಳ ಮುಖಂಡರು, ಮುಂತಾದವರೆಲ್ಲರೂ ಹೊಸ ಪಠ್ಯಪುಸ್ತಕಗಳ ವಿರುದ್ಧ ಗಂಭೀರವಾದ ಆರೋಪಗಳನ್ನು ಮಾಡಿದರು. 'ದೀಪಿಕಾ' ಸೇರಿದಂತೆ ಕೇರಳದ ಕೆಲವು ಪ್ರಮುಖ ಪತ್ರಿಕೆಗಳಲ್ಲಿ ಹೊಸ ಪಠ್ಯಪುಸ್ತಕಗಳನ್ನು ಸಂಪೂರ್ಣವಾಗಿ ನಿಂದನೀಯ, ಎಂದು ಬಿಂಬಿಸಲಾಯಿತು (175:; 35:p333; 69:p167.170;102:08.07.58, 12.12.58; 108:19.08.58,12.10.58).

ಹೊಸ ಪಠ್ಯಪುಸ್ತಕಗಳ ವಿರುದ್ಧ ಕೇಳಿಬಂದ ಪ್ರಮುಖ ಟೀಕೆಗಳು ಈ ಕೆಳಗಿನಂತಿವೆ.

(ಅ) ಹೊಸ ಪಠ್ಯಪುಸ್ತಕಗಳು ಉದ್ದೇಶಪೂರ್ವಕವಾಗಿ, ಸುಲಭವಾಗಿ ಪ್ರಭಾವಕ್ಕೊಳಗಾಗುವ ಮನಸ್ಥಿತಿ ಹೊಂದಿರುವ ವಿದ್ಯಾರ್ಥಿಗಳಲ್ಲಿ ತಿರಸ್ಕಾರವನ್ನು ಉಂಟುಮಾಡಿ, ಧರ್ಮ ಮತ್ತು ಪುರೋಹಿತರ / ಪಾದ್ರಿಗಳ ಮೇಲೆ ದಾಳಿಮಾಡಿದವು.

(ಆ) ಅವರು ಧಾರ್ಮಿಕ ಮತ್ತು ನೈತಿಕ ಮೌಲ್ಯಗಳನ್ನು ತಿರಸ್ಕರಿಸುತ್ತಾ, ಆ ಸ್ಥಾನದಲ್ಲಿ ಭೌತಿಕವಾದ ಆನಂದದ ಅನುಭೂತಿಯ ಸಿದ್ಧಾಂತಗಳನ್ನು ಸ್ಥಾಪಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದರು.

(ಇ) ಭಾರತದ ಸಾಧನೆಗಳನ್ನೂ ಸಂಸ್ಕೃತಿಯನ್ನೂ ಅವಮಾನಿಸುವ ಕೆಲಸ ಅವರು ಮಾಡುತ್ತಾರೆ. ಇದರಿಂದಾಗಿ ಭಾರತಕ್ಕೆ ಮಹತ್ವದ ಇತಿಹಾಸ, ಸಂಸ್ಕೃತಿ ಇಲ್ಲ ಎನ್ನುವ ಭಾವನೆಗಳು ಯುವಕರ ಮನಸ್ಸುಗಳಲ್ಲಿ ಹೊರಹೊಮ್ಮುತ್ತವೆ.

ಮಹಾನ್ ರಾಷ್ಟ್ರೀಯ ಪರಂಪರೆಯ ಬಗ್ಗೆಯ ಈ ನಿರ್ಲಕ್ಷ್ಯ, ದೇಶದಲ್ಲಿ ದೇಶಾಭಿಮಾನರಹಿತವಾದ ಪೀಳಿಗೆಯ ಹೊರಹೊಮ್ಮುವಿಕೆಗೆ ಕಾರಣವಾಗುತ್ತದೆ.

(ಈ) ಈ ಪುಸ್ತಕಗಳು, ಕಮ್ಯುನಿಸ್ಟ್ ದೇಶಗಳಾದ ರಷ್ಯಾ, ಚೀನಾ ಮುಂತಾದವುಗಳ ಕಾಲ್ಪನಿಕ ಮತ್ತು ನೈಜ ಸಾಧನೆಗಳನ್ನು ವೈಭವೀಕರಿಸುತ್ತಾ, ಕಮ್ಯುನಿಸಂನ ಸಿದ್ಧಾಂತ ಮತ್ತು ಪ್ರಯೋಗಗಳಲ್ಲಿರುವ ನಿಕೃಷ್ಟ ಅಂಶಗಳನ್ನು ಮರೆಮಾಚುವ ಕಾರ್ಯವನ್ನು ಮಾಡುತ್ತದೆ. ಕೇರಳದ ಯುವಕರಲ್ಲಿ ಅಂತರಾಷ್ಟ್ರೀಯ ಆದರ್ಶಗಳು ಮತ್ತು ಆಕಾಂಕ್ಷೆಗಳು ಮನಸ್ಸಿನಿಂದ ಅಳಿಸಿಹೋಗುವಂತೆ ಮಾಡಲಾಗುತ್ತಿದೆ. ಕಮ್ಯುನಿಸ್ಟ್ ರಾಷ್ಟ್ರಗಳ ಆದರ್ಶೀಕರಣ ಮತ್ತು ವೈಭವೀಕರಣದ ಚಿತ್ರಗಳನ್ನು ಪಠ್ಯಪುಸ್ತಕಗಳಲ್ಲಿ ತುಂಬಿಸಲಾಗುತ್ತಿದೆ. ಅಂತಹ ಪ್ರಚಾರದಲ್ಲಿ ಅಂತರ್ಗತವಾಗಿರುವ ಅಪಾಯಗಳು ಅಗಾಧವಾಗಿವೆ(176:p3-4).

ಆದರೆ ಹಳೆಯ ಮತ್ತು ಹೊಸ ಪಠ್ಯಪುಸ್ತಕಗಳ ವ್ಯಾಖ್ಯಾನಗಳನ್ನು ಹೋಲಿಕೆ ಮಾಡಿ ನೋಡುವಾಗ, ಅಂತಹ ಆರೋಪಗಳು ನಿರಾಧಾರ ಎಂಬುದು ಸ್ಪಷ್ಟವಾಗುತ್ತದೆ(86:07.59p892).

ಜೋಸೆಫ್ ಮುಂಡಸ್ಸೇರಿಯವರು ನೀಡಿದ ಹೇಳಿಕೆಯನ್ನು ಆಧರಿಸಿ ಕ್ಯಾಥೋಲಿಕ್ ಚರ್ಚ್ ಈ ಆರೋಪ ಮಾಡಿದೆ. ಹೇಳಿಕೆಯು ಹೀಗಿದೆ:

"ವಿಶ್ವಧರ್ಮದ ವಕ್ತಾರರಿಂದ ಈ ರೀತಿ ಬರುತ್ತಿರುವುದು ಅತ್ಯಂತ ವಿರೋಧಾಭಾಸವಾಗಿದೆ. ಈ ಧರ್ಮವು ಶತಮಾನಗಳಿಂದಲೂ ಅದರ ತತ್ವಗಳನ್ನು ಹೇರುತ್ತಾ ಬರುತ್ತಿದ್ದು, ಅದರ ಬಗ್ಗೆ ಪ್ರಶ್ನಿಸುವುದನ್ನಾಗಲೀ ಸವಾಲೆಸೆಯುವುದನ್ನಾಗಲೀ ಮಾಡುವವರನ್ನು ಶಿಕ್ಷಿಸುತ್ತಾ ಬರಲಾಗಿದೆ. ಅಲ್ಲದೆ ನಿಷೇಧಿಷಲ್ಪಟ್ಟ ಪಟ್ಟಿಯಲ್ಲಿರುವ ಪುಸ್ತಕಗಳನ್ನು ಓದುವುದಕ್ಕೆ ಏಕಪಕ್ಷೀಯವಾಗಿ ವಿಶ್ವಾಸಿಗಳನ್ನು/ಭಕ್ತರನ್ನು ನಿರ್ಬಂಧಿಸಲಾಗುತ್ತಿದೆ"(177:p14).

ಆದಾಗ್ಯೂ ಈ ಪಠ್ಯಪುಸ್ತಕಗಳ ಬಗ್ಗೆ ಮಾಡಿರುವ ಆರೋಪಗಳ ಕುರಿತು, ಕುರುವಿಳ ಜೇಕಬ್ ಅವರ ಅಧ್ಯಕ್ಷತೆಯಲ್ಲಿ ವಿಚಾರಣೆ ನಡೆಸಲು ಸಮಿತಿಯನ್ನು ಸರಕಾರ ನೇಮಿಸಿತು. ವಿಚಾರಣಾ ಸಮಿತಿಯ ವರದಿಯಲ್ಲಿ, ಪಠ್ಯಪುಸ್ತಕಗಳ ತಯಾರಿಕೆಯ ಮೇಲೆ ಉಸ್ತುವಾರಿ ವ್ಯವಸ್ಥೆಯ ಅಸಮರ್ಪಕತೆ ಬಗ್ಗೆ ಸೂಚಿಸಲಾಯಿತು.

"ಧರ್ಮ ವಿರುದ್ಧದ ಆಶಯಗಳನ್ನೋ, ಕಮ್ಯೂನಿಸ್ಟ್ ಸಿದ್ಧಾಂತವನ್ನೋ ವಿದ್ಯಾರ್ಥಿಗಳ ಮನಸ್ಸಿನಲ್ಲಿ ತುರುಕುವುದಕ್ಕಾಗಲೀ ಭಾರತದ ಸಾಧನೆಗಳ ಬಗ್ಗೆ ಅವರಲ್ಲಿ ಅಗೌರವವನ್ನು ತೋರಿಸುವ ಪ್ರಯತ್ನವಾಗಲೀ ಸಂಘಟಿತವಾದ ಯಾವುದೇ ಪ್ರಯತ್ನವೂ ಅಧಿಕಾರಿಗಳ ಕಡೆಯಿಂದ ಕಂಡುಬಂದಿರುವುದಿಲ್ಲ"

ಎಂದು ತನಿಖಾ ಸಮಿತಿಯ ವರದಿಯ ಕೊನೆಯ ಭಾಗದಲ್ಲಿ ಒತ್ತಿ ಹೇಳಲಾಗಿದೆ (84:03.10.58;103:p43.44). ಹಳೆಯ ಮತ್ತು ಹೊಸ ಪಠ್ಯಪುಸ್ತಕಗಳ ಹೋಲಿಕೆಯಿಂದ ತಿಳಿದುಬರುವಂಥದ್ದೇನೆಂದರೆ,

"ಹಳೆಯ ವ್ಯಾಖ್ಯಾನದಲ್ಲಿ ಚಾರಿತ್ರಿಕವಲ್ಲದ ವಾಸ್ತವ ಸಂಗತಿಗಳ, ತಪ್ಪಾದ ಮೌಲ್ಯನಿರ್ಣಯಗಳ ಬಗ್ಗೆ ಮಾತ್ರವಲ್ಲದೆ, ಕಮ್ಯೂನಿಸಂನ್ನು ದೂಷಿಸುವ ರೀತಿಯಲ್ಲಿ ಅದನ್ನು ವಿಕಲವಾಗಿ ಚಿತ್ರಿಸಿರುವುದನ್ನು ಸಹ ಒಳಗೊಳಿಸಲಾಗಿತ್ತು" ಎನ್ನುವುದಾಗಿದೆ(86:07.59p892).

ಪ್ರಕರಣವನ್ನು ತಳ್ಳಿಹಾಕಿ, ಕುರುವಿಳ ಜೇಕಬ್ 1959 ಜನವರಿಯಲ್ಲೇ ಅವರ ವರದಿ ಸಲ್ಲಿಸಲಾಯಿತು. ಆದರೆ ತಾವು ಎತ್ತಿದ ಆಕ್ಷೇಪಗಳನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಾ ವಿರೋಧಪಕ್ಷಗಳು ಮತ್ತು ಕ್ಯಾಥೋಲಿಕ್ ಚರ್ಚ್ ಪಠ್ಯಪುಸ್ತಕವಿವಾದವನ್ನು ಜೀವಂತವಾಗಿರಿಸಿಕೊಂಡಿತು.

## ಆಂಧ್ರ ಅಕ್ಕಿ ವ್ಯವಹಾರ ಮತ್ತು ಅದಕ್ಕೆ ಸಂಬಂಧಿಸಿದ ವಿವಾದ

ಆಂಧ್ರ ಅಕ್ಕಿ ವ್ಯವಹಾರಕ್ಕೆ ಸಂಬಂಧಿಸಿದ ಆರೋಪಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಜುಡೀಶಿಯಲ್ ತನಿಖಾ ಆಯೋಗದ ವರದಿಗಳನ್ನು ಸರ್ಕಾರದ ವಿರುದ್ಧದ ಪ್ರಚಾರಕ್ಕೂ ಚಳವಳಿಗೂ ವಿರೋಧ ಪಕ್ಷಗಳಿಗೆ ದೊಡ್ಡ ಅವಕಾಶವನ್ನು ಒದಗಿಸಿತು. ಆಹಾರ ಕೊರತೆಯ ರಾಜ್ಯವೆನ್ನುವ ನೆಲೆಯಲ್ಲಿ, ಕೇರಳದಲ್ಲಿ ಆ ಸಮಯದಲ್ಲಿ ಆಹಾರಧಾನ್ಯಗಳ ಕೊರತೆ ತೀವ್ರವಾಗಿ ಕಾಡಿತು. ಈ ಸಂದರ್ಭವನ್ನು ರಾಜಕೀಯವಾಗಿ ಬಂಡವಾಳ ಮಾಡಿಕೊಳ್ಳಲು ವಿರೋಧಪಕ್ಷಗಳು ಉಪಾವಾಸ ಜಾಥಾಗಳನ್ನು ಆಯೋಜಿಸಲಾಯಿತು(69:p141). ಈ ಅಪೂರ್ಣತೆಯನ್ನು ಪರಿಹರಿಸಲು, ಕ್ಷಾಮದ ಮಾಸಗಳಲ್ಲಿ ಆಹಾರಧಾನ್ಯವನ್ನು ಒದಗಿಸಲು ಸರ್ಕಾರವು ಅನೇಕ ಮಾರ್ಗಗಳನ್ನು ಅರಸಿತು(37:p137). 1957ರ ಜುಲೈ ಮಾಸದಲ್ಲಿ ಮದ್ರಾಸ್, ಆಂಧ್ರ, ಕೇರಳ ಮುಂತಾದ 'ದಕ್ಷಿಣ ಅಕ್ಕಿವಲಯ'ವನ್ನಾಗಿ ಸಂಘಟಿಸಲಾಯಿತು. ಆಂಧ್ರದ ಹೆಚ್ಚುವರಿ ಧಾನ್ಯವನ್ನು ಕೇರಳದ ಮಾರುಕಟ್ಟೆಗಳಿಗೆ ತಲುಪುತ್ತದೆಯೆಂದು ನಿರೀಕ್ಷಿಸಲಾಯಿತು. ಈ ವಲಯಗಳಿಂದ ಇತರ ರಾಜ್ಯಗಳಿಗೆ ಅಕ್ಕಿ ರಫ್ತು ಮಾಡುವುದನ್ನು ನಿಷೇಧಿಸಲಾಗಿತ್ತು. ಅದರ ಫಲವಾಗಿ, ಕೇರಳದ ತಿಂಗಳ ಹಂಚಿಕೆಯಾಗಿದ್ದ 25000 ಟನ್‌ನಿಂದ, 10000 ಟನ್ ಅಕ್ಕಿಯನ್ನು ಕೇಂದ್ರವು ಕಡಿಮೆ ಮಾಡಿತು(84:16.02.58). ಅದರಿಂದಾಗಿ, ಮದ್ರಾಸಿನ ಟಿ. ಶ್ರೀರಾಮುಲು ಮತ್ತು ಪಿ. ಸೂರ್ಯನಾರಾಯಣರ ಕಂಪನಿಯೊಂದಿಗೆ ಅಕ್ಕಿಯನ್ನು ದೊಡ್ಡ ಪ್ರಮಾಣದಲ್ಲಿ ಖರೀದಿಸಲು ಸರ್ಕಾರ ಒಪ್ಪಂದ ಮಾಡಿಕೊಂಡಿತು. ರಾಜ್ಯದಲ್ಲಿ ಆಹಾರದ ಕೊರತೆಯನ್ನು ನೀಗಿಸಲು, ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವುದಕ್ಕಾಗಿ ಈ ಯೋಜನೆಯನ್ನು ಹಮ್ಮಿಕೊಳ್ಳಲಾಗಿತ್ತು(178:p1). ಈ ಅಕ್ಕಿ ಒಪ್ಪಂದದ ಮೂಲಕ ಸಿಪಿಐ ಹಣಸಂಗ್ರಹ ಮಾಡುವುದು ಸರ್ಕಾರದ ಉದ್ದೇಶವಾಗಿತ್ತು, ಎಂದು ವಿರೋಧ ಪಕ್ಷಗಳು ಆರೋಪಿಸಿದವು. ಈ ಪ್ರಕರಣದಲ್ಲಿ, 16.5 ಲಕ್ಷ ರೂಪಾಯಿಗಳನ್ನು ಸರ್ಕಾರ ಅಪಹರಿಸಿದೆ ಎಂದು ಆರೋಪಿಸಿದರು (178:p1;84:28.02.58).

ವಿರೋಧಪಕ್ಷಗಳ ಕೋರಿಕೆಯ ಮೇರೆಗೆ ಸರ್ಕಾರವು ಮೇ 12, 1958ರಂದು ನ್ಯಾಯಮೂರ್ತಿ ಪಿ.ಟಿ. ರಾಮನ್ ನಾಯರ್ ಅವರನ್ನು ಏಕ ಸದಸ್ಯ ಆಯೋಗವಾಗಿ ನೇಮಿಸಲಾಯಿತು(178:p1;84:28.02.58,14.05.58). ಮಾರ್ಚ್ 10, 1959 ರಂದು ಆಯೋಗವು ತನ್ನ ವರದಿಯನ್ನು ಸಲ್ಲಿಸಿತು.

ಅಕ್ಕಿಯನ್ನು ಆಮದು ಮಾಡಿಕೊಳ್ಳಬೇಕಾದ ಅಗತ್ಯವಿದೆಯೆಂದು ಶಾಸನಸಭೆಯಲ್ಲಿ ಎಲ್ಲಾ ಪಕ್ಷಗಳೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದವು. ನಿಗದಿತ ದರದಲ್ಲಿ ಅಕ್ಕಿ ವಿತರಣೆ ಮಾಡಬೇಕೆನ್ನುವ ರಾಜ್ಯದ ಬೇಡಿಕೆಯನ್ನು ಕೇಂದ್ರ ಸರ್ಕಾರ ಎರಡು ಬಾರಿ ತಿರಸ್ಕರಿಸಿತ್ತು. ನಿಗದಿತ ಕಮಿಷನ್‌ನಲ್ಲಿ ಆಂಧ್ರಪ್ರದೇಶದಿಂದ ಅಕ್ಕಿ ತರಲು ಕೇರಳದ ವ್ಯಾಪಾರಿಗಳು ನಿರಾಕರಿಸಿದ್ದರು. ಈ ಮೂರು ವಿಷಯಗಳೇ ಆಯೋಗದ ವರದಿಯಲ್ಲಿ ಒಳಗೊಂಡಿದ್ದು. ಸುಮಾರು ಹದಿನೈದು ವರ್ಷಗಳ ಕಾಲ ಕಮ್ಯುನಿಸ್ಟ್ ಆಗಿದ್ದ ಮದ್ರಾಸ್ ಕಂಪನಿಯ ಮ್ಯಾನೇಜರ್ ಎಲ್ಲಾ ಷರತ್ತುಗಳನ್ನು ಒಪ್ಪಿಕೊಂಡರು. ಆದಾಗ್ಯೂ ಒಪ್ಪಂದದ ಸಂಭಾಷಣೆಯ ಸಮಯದಲ್ಲಿ ತನ್ನ ಕಂಪನಿಗೆ ಅನುಕೂಲಕರವಾಗಿ ನಿಬಂಧನೆಗಳಲ್ಲಿ ಕೆಲವು ತಿದ್ದುಪಡಿಗಳನ್ನು ಅವರು ಮಾಡಿದ್ದರ ಬಗ್ಗೆ ಆಯೋಗದ ಅವಲೋಕನ ಹೀಗಿದೆ:

ಕೇರಳ ಸರ್ಕಾರ 1957ರ ಆಗಸ್ಟ್-ಸೆಪ್ಟೆಂಬರ್ ತಿಂಗಳ ಅವಧಿಯಲ್ಲಿ 5000 ಟನ್‌ಗಳ ಅಕ್ಕಿ ಖರೀದಿಯನ್ನು ಸಮರ್ಥಿಸಿಕೊಳ್ಳಲಾಯಿತು. ಆದರೆ ಪ್ರಸ್ತುತ ಒಪ್ಪಂದದ ನಿಯಮಗಳಿಗನುಸಾರವಾಗಿ, ಅಕ್ಕಿ ಖರೀದಿಯು ಆಹಾರದ ಕ್ಷಾಮದ ಬಗ್ಗೆ ಯಾವುದೇ ತಿಳುವಳಿಕೆಯನ್ನು ಹೊಂದಿರಲಿಲ್ಲ ಎಂದು ಸೂಚಿಸುತ್ತದೆ. ಪರಿಣಾಮವಾಗಿ, ರಾಜ್ಯವು ತಪ್ಪಿಸಬಹುದಾದ ನಷ್ಟವನ್ನು ಅನುಭವಿಸಬೇಕಾಯಿತು" (178:p63).

'ತಪ್ಪಿಸಬಹುದಾದ ನಷ್ಟ ಉಂಟಾಗಿದೆ' ಎನ್ನುವ ತೀರ್ಮಾನಕ್ಕೆ ಆಯೋಗವು ಬಂದಿತು. ಆದರೆ ಉತ್ತಮ ನಂಬಿಕೆಯಿಂದ ಗಮನಿಸಿದಾಗ, ಸರ್ಕಾರಿ ವ್ಯವಹಾರಗಳ ನಡವಳಿಕೆಗಳಲ್ಲಿ ನಷ್ಟಸಾಧ್ಯತೆಗಳು ಅಂತರ್ಗತವಾಗಿರುತ್ತವೆ. ಇದಲ್ಲದೆ, ನಂತರದ ವಹಿವಾಟುಗಳಲ್ಲಿ, ಕಂಪನಿಗೆ ಪ್ರತಿಕೂಲ ಪರಿಣಾಮ ಬೀರುವುದರ ವ್ಯವಸ್ಥೆಗಳ ಆಧಾರದ ಮೇಲೆ, ಟೆಂಡರ್‌ಗಳನ್ನು ಆಹ್ವಾನಿಸಿದ ನಂತರವೂ ಮದ್ರಾಸ್ ಕಂಪನಿಯು ಒಪ್ಪಂದದ ಪ್ರಕಾರ 4500 ಟನ್ ಅಕ್ಕಿಯನ್ನು ಪೂರೈಸಿದೆ(178:p63).

ವಾಸ್ತವವಾಗಿ, ಆಂಧ್ರದ ಅಕ್ಕಿ ವ್ಯವಹಾರಕ್ಕೆ ಸಂಬಂಧಿಸಿದ ಆರೋಪವು. ಸಂಪೂರ್ಣವಾಗಿ ಆಧಾರರಹಿತವಾಗಿತ್ತು. ಸರ್ಕಾರದ ಆಹಾರ ಇಲಾಖಾ ಕಾರ್ಯದರ್ಶಿ ಮತ್ತು ಆಂಧ್ರ ಅಕ್ಕಿ ವ್ಯವಹಾರದ ಮೇಲ್ವಿಚಾರಣಾ ಅಧಿಕಾರಿಯಾದ ಸಿ.ಥಾಮಸ್ (ಐಎಎಸ್) ಪ್ರಕಾರ,

"ಆಂಧ್ರಪ್ರದೇಶದಿಂದ ಅಕ್ಕಿ ಖರೀದಿಗೆ ಸಂಬಂಧಿಸಿದಂತೆ ಒಂದು ಪೈಸೆಯಷ್ಟೂ ಭ್ರಷ್ಟಾಚಾರ ನಡೆದಿರುವುದಿಲ್ಲ(179:18.09.2011p26). ಕೇರಳದಲ್ಲಿ ಅಕ್ಕಿಯ ತೀವ್ರ

ಕೊರತೆಯನ್ನು ನೀಗಿಸುವ ಸಲುವಾಗಿಯೇ ಟೆಂಡರ್ ರದ್ದುಗೊಳಿಸಲಾಗಿದ್ದು. ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಹಾಗೂ ಆಹಾರ ಸಚಿವ ಕೆ.ಸಿ.ಜಾರ್ಜ್‌ರವರೇ ಪ್ರಮುಖ ಆರೋಪಿಗಳಾಗಿದ್ದವರು. ತ್ವರಿತ ವಹಿವಾಟಿಗೆ ಪ್ರಾಥಮಿಕವಾಗಿ ನಾನು ಜವಾಬ್ದಾರನಾಗಿದ್ದೆ. ಟೆಂಡರ್ ಇಲ್ಲದೆ ಅಕ್ಕಿ ಖರೀದಿಸುವ ತುರ್ತು ಪರಿಸ್ಥಿತಿಯ ಬಗ್ಗೆ ನಾಗರಿಕ ಸಮಾಜಕ್ಕೆ ಮನವರಿಕೆ ಮಾಡಿಕೊಡುವ ಜವಾಬ್ದಾರಿ ನನ್ನದಾಗಿರುತ್ತದೆ. ಅದು ನನ್ನಿಂದ ಆದಂಥ ತಪ್ಪಿಸಲಾಗದ ತಪ್ಪು(179:). ನನ್ನ ಅನನುಭವವೇ ಅದಕ್ಕೆ ಮುಖ್ಯ ಕಾರಣ. ನನ್ನನ್ನು ವೈಯಕ್ತಿಕವಾಗಿ ಯಾರೂ ದೂಷಿಸದಿದ್ದರೂ, ನನ್ನ ತಪ್ಪಿನ ಕಾರಣ, ಇಎಂಎಸ್ ಸರ್ಕಾರವನ್ನು, ಶಾಸಕಾಂಗದ ಒಳಗೆ ಮತ್ತು ಹೊರಗೆ ಕಟುವಾಗಿ ಟೀಕಿಸಲಾಯಿತು. ಆ ಸಮಯದಲ್ಲಿ ನನ್ನ ಕಾನೂನಿನ ಅರಿವಿಗೆ ಕೊರತೆ ಭಾದಿಸಿತ್ತು. ಅಕ್ಕಿ ವ್ಯವಹಾರಕ್ಕೆ ಸಂಬಂಧಿಸಿದಂತೆ ಅಡ್ವೋಕೇಟ್ ಜನರಲ್ ಪರಿಣಾಮಕಾರಿಯಾಗಿ ನಿಭಾಯಿಸುತ್ತಾರೆ ಎಂದು ನಾನು ಭಾವಿಸಿದೆ. ಅಕ್ಕಿ ವಹಿವಾಟಿನ ಎಲ್ಲಾ ವಿವರಗಳನ್ನು ಅಡ್ವೋಕೇಟ್ ಜನರಲ್ ಅವರಿಗೆ ಮನವರಿಕೆ ಮಾಡಿಕೊಡಲು ನಾನು ವಿಫಲನಾಗಿದ್ದೇನೆ. ನ್ಯಾಯಮೂರ್ತಿ ರಾಮನ್ ನಾಯರ್‌ರವರ ತನಿಖಾ ಆಯೋಗವು ತನ್ನ ಅಂತಿಮ ವರದಿಯಲ್ಲಿ ಇದನ್ನು 'ಅಪ್ರಾಮಾಣಿಕ'ವಾದ ವಹಿವಾಟು ಆಗಿದೆ ಎಂದು ಸೂಚಿಸಿತು. ವಿಧಾನಸಭೆಯಲ್ಲಿ ಒಂದು ಹೇಳಿಕೆಯನ್ನು ಮಂಡಿಸಲಾಯಿತು(178:). ತನಿಖಾ ಆಯೋಗದ ವರದಿಯನ್ನು ತಿರಸ್ಕರಿಸುವ ನಿರ್ಣಯವನ್ನು ವಿಧಾನಸಭೆಯಲ್ಲಿ ಅಂಗೀಕರಿಸಲಾಯಿತು. ಆದರೆ ಇದ್ಯಾವುದೂ ಸಾರ್ವಜನಿಕರನ್ನು ತೃಪ್ತಿಗೊಳಿಸಲಿಲ್ಲ. ಇಎಂಎಸ್ ಸರ್ಕಾರ ಮತ್ತು ಕಮ್ಯುನಿಸ್ಟ್ ಪಕ್ಷವು ಆಂಧ್ರ ಅಕ್ಕಿ ಹಗರಣ ಮತ್ತು ಭ್ರಷ್ಟಾಚಾರಗಳ ಮೂಲಕ ಗಣನೀಯವಾದ ಲಾಭ ಮಾಡಿಕೊಂಡಿದೆ ಎಂದು ಪ್ರತಿಪಕ್ಷಗಳು ಮತ್ತು ಮಾಧ್ಯಮಗಳು ವ್ಯಾಪಕ ಪ್ರಚಾರದಲ್ಲಿ ತೊಡಗಿಕೊಂಡವು. ಅಕ್ಕಿ ಗುತ್ತಿಗೆಯಲ್ಲಿ ಯಾವುದೇ ಅಕ್ರಮ ನಡೆದಿಲ್ಲವಾದರೂ, ಆಹಾರ ಕಾರ್ಯದರ್ಶಿಯಾಗಿ ನನ್ನ ಅಸಾಮರ್ಥ್ಯತೆ ಸಾರ್ವಜನಿಕ ದೂರುಗಳಿಗೆ ಕಾರಣವಾಯಿತು. ನನ್ನ ಅಧಿಕೃತ ಜೀವನದಲ್ಲಿ ಇದು ತುಂಬಾ ಗಂಭೀರವಾದ ಹಿನ್ನಡೆಯಾಗಿದೆ." (179:18.09.2011p26)

ಆಂಧ್ರ ಅಕ್ಕಿ ವ್ಯವಹಾರ ಪ್ರಕರಣದ ತನಿಖಾ ಆಯೋಗವು ತನ್ನ ವರದಿಯನ್ನು ಪ್ರಕಟಿಸಿದಾಗ, ನಾಯರ್ ಮತ್ತು ಕ್ರಿಶ್ಚಿಯನ್ ಸಮುದಾಯದ ಗುಂಪುಗಳ ನೇತೃತ್ವದಲ್ಲಿ ನಡೆಯುತ್ತಿದ್ದ ಆಂದೋಲನದಿಂದಾಗಿ, ರಾಜ್ಯದಲ್ಲಿ ರಾಜಕೀಯ ಪರಿಸ್ಥಿತಿ ತುಂಬಾ ಉದ್ವಿಗ್ನಗೊಂಡಿತ್ತು. ಅಕ್ಕಿ ಗುತ್ತಿಗೆ ತನಿಖಾ ಆಯೋಗದ ವಿಚಾರಣಾ ಫಲಿತಗಳಿಗೆ ಸರ್ಕಾರದ ಕಾರ್ಯವಿಧಾನದ ವಿರುದ್ಧ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪಿಎಸ್‌ಪಿ ಮತ್ತು ಮುಸ್ಲಿಂ ಲೀಗ್ ನಾಯಕರು ಬಹಿರಂಗ ಹೋರಾಟವನ್ನು ಆಯೋಜಿಸಲು, ವರದಿ ಪ್ರಕಟವಾದ ಕೆಲ ದಿನಗಳಲ್ಲೇ ಸಭೆ ಸೇರಿತ್ತು. ಕೆಲವು ಪತ್ರಿಕೆಗಳು ತಮ್ಮ ಸಂಪಾದಕೀಯಗಳಲ್ಲಿ ಆಂಧ್ರ ಅಕ್ಕಿ ಒಪ್ಪಂದ ಮತ್ತು ತನಿಖಾ ಆಯೋಗದ ವರದಿಯನ್ನು ನಿಂದಿಸಿದವು (7:13.12.58,13,18.03.59;104:18.12.58,18.03.58;180:21.03.58; 181:

25.12.58;67:21.09.59;182:19.03.59;129:11.03.59). ಸಮುದಾಯ ಸಂಘಟನೆಗಳು ಮತ್ತು ವಿರೋಧ ಪಕ್ಷಗಳು, ಪತ್ರಿಕಾ ಬೆಂಬಲದೊಂದಿಗೆ ಆಯೋಗದ ವರದಿಯನ್ನು ರಾಜಕೀಯ ಅಸ್ತ್ರವಾಗಿ ಬಳಸಿದವು. ಅವರು ತಕ್ಷಣವೇ ರಾಜೀನಾಮೆ ನೀಡುವಂತೆ ಸರ್ಕಾರವನ್ನು ಒತ್ತಾಯಿಸಿದರು*(102:Part1V2No15p1236.42;32:p134.39). ಸರಕಾರಕ್ಕೆ ಅಧಿಕಾರದಲ್ಲಿ ಉಳಿಯುವ ಯಾವ ಹಕ್ಕು ಇರುವುದಿಲ್ಲ. 'ರಾಜ್ಯ ಈ ಐತಿಹಾಸಿಕ ಮತ್ತು ಅಪಾಯಕಾರಿಯಾದ ಸಂದರ್ಭದಲ್ಲಿ ಸರ್ಕಾರವನ್ನು ರಾಜಿನಾಮೆ ನೀಡುವಂತೆ ಒತ್ತಾಯಿಸಲು ಜನಪ್ರಿಯ ದಂಗೆಗೆ ತಯಾರಿ ನಡೆಸಲು ಪಟ್ಟಂ ತಾನು ಪಿಳ್ಳ ಜನರಿಗೆ ಕರೆ ನೀಡಿದರು(84:17.03.58). ಏಪ್ರಿಲ್ 5, 1959, ಕಮ್ಯುನಿಸ್ಟ್ ಸರ್ಕಾರದ ಅಧಿಕಾರಕ್ಕೆ ಬಂದ ಎರಡನೇ ವಾರ್ಷಿಕೋತ್ಸವವನ್ನು ಮತ್ತು ಅಕ್ಕಿ ಹಗರಣವನ್ನು ವಿರೋಧಿಸಿ ಪ್ರತಿಭಟನಾದಿನ ಆಚರಿಸುವುದಾಗಿ ಘೋಷಿಸಿದರು(143:06.04.59). ಈ ಒಪ್ಪಂದವು, ಪ್ರತಿಪಕ್ಷಗಳು ಮತ್ತು ಸಮುದಾಯ ಗುಂಪುಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಒಂದು ಸಾರ್ವಜನಿಕರಂಗ ರೂಪಿಸಲು ಕಾರಣವಾಯಿತು.

### ಕಟ್ಟಂಪಲ್ಲಿ ಭೂಕಬಳಿಕೆ ಆಂದೋಲನ

ಕಣ್ಣೂರು ಜಿಲ್ಲೆಯ ಕಟ್ಟಂಪಲ್ಲಿ ಸರ್ಕಾರಿ ಸ್ವಾಮ್ಯದ 7.5 ಎಕರೆ ಜಮೀನು, ಸರ್ಕಾರ ಮತ್ತು ಪ್ರತಿಪಕ್ಷಗಳ ನಡುವಿನ, ಆರಂಭಿಕ ಮುಖಾಮುಖಿ ರಂಗವಾಗಿ ಬದಲಾಯಿತು (113:p33). ಕಟ್ಟಂಪಲ್ಲಿ ಜೈಲಿನ ಸಮೀಪವಿರುವ ಈ ಜಮೀನು 50 ವರ್ಷಗಳ ಕಾಲ ಮದ್ರಾಸ್ ಸರ್ಕಾರದ ಒಡೆತನದಲ್ಲಿತ್ತು. ಸಾಮಾನ್ಯವಾಗಿ ಬಂಜರು ಭೂಮಿಯಾಗಿದ್ದ ಇದನ್ನು ಅಪರೂಪದ ಸಂದರ್ಭಗಳಲ್ಲಿ ಮಾತ್ರ ಕೃಷಿ ಮಾಡಲಾಗುತ್ತಿತ್ತು(84:15.11.57). ಜುಲೈ 1957ರಂದು, ಅಂದಿನ ಕಂದಾಯ ಸಚಿವೆ ಕೆ.ಆರ್. ಗೌರಿ ಅಲ್ಲಿ ಒಂದು ಹರಿಜನ ಕಾಲೋನಿ ಸ್ಥಾಪಿಸುವ ಯೋಜನೆಯನ್ನು ಘೋಷಿಸಿದರು(84:15.11.57). ಸರ್ಕಾರವು ಭೂರಹಿತರಿಗೆ ಭೂಮಿಯನ್ನು ವಿತರಿಸುವ ಸಂದರ್ಭದಲ್ಲಿ ಅದರಲ್ಲಿ ಶೇ25ರಷ್ಟು ಹರಿಜನರಿಗೆ ಮೀಸಲಿಡುವ ಬಗ್ಗೆ ಘೋಷಿಸಿತ್ತು(130:p9). ಈ ಘೋಷಣೆಯಾದ ಕೂಡಲೇ ಕಾಂಗ್ರೆಸ್, ಪಿಎಸ್‌ಪಿ ಮುಂತಾದವು ಅಂಗವಿಕಲ ಲೀಗ್‌ನ್ನು ರಚಿಸಿದ್ದಲ್ಲದೆ, ಆ ಇಡೀ ಪ್ರದೇಶವನ್ನು ಹರಿಜನರಿಗೆ ನೀಡಬೇಕು ಎಂದು ಆಗ್ರಹಿಸಿ ಬಹಿರಂಗ ಹೋರಾಟ ಆರಂಭಿಸಿತು(184:). ಪೋಲೀಸರ ಉಪಸ್ಥಿತಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಅನೇಕ ಕಾಂಗ್ರೆಸ್ಸಿಗರು, ಪಿಎಸ್‌ಪಿ ಸ್ವಯಂಸೇವಕರು, ರಾತ್ರಿಯ ಸಮಯದಲ್ಲಿ ಆ ಪ್ರದೇಶಕ್ಕೆ ಅತಿಕ್ರಮಣ ನಡೆಸಿ, ಅಲ್ಲಿ ಭೂಮಿಯನ್ನು ಅತಿಕ್ರಮಿಸಿದರು(169:p7). ಆಕ್ರಮಣಕಾರರನ್ನು ಒಂದು ಕಡೆಯಿಂದ ಸ್ಥಳಾಂತರಿಸುವಾಗ,

---

* ಮಾರ್ಚ್ 19, 1959 ರಂದು ವಿಧಾನಸಭೆಯಲ್ಲಿ ಶ್ರೀ ಪಿಟಿ ಚಾಕೊ ಮತ್ತು ಶ್ರೀ ಪಟ್ಟಂ ತಾನುಪಿಳ್ಳ ಭಾಷಣಗಳನ್ನು ಮಾಡಿದರು.

ಮತ್ತೊಂದು ಕಡೆಯಿಂದ, ಕಾಂಗ್ರೆಸ್ ಮತ್ತು ಪಿಎಸ್‌ಪಿ ಸ್ವಯಂಸೇವಕರು ಸರ್ಕಾರಿ ಸ್ವಾಮ್ಯದ ವಿವಾದಿತ ಭೂಮಿಯನ್ನು ಅತಿಕ್ರಮಿಸುತ್ತಿದ್ದರು. ಹೀಗೆ ಕಾನೂನು ಉಲ್ಲಂಘಿಸಿ ಭೂಮಿ ಒತ್ತುವರಿ ಮಾಡುವ ಅಭಿಯಾನ ರಾಜಕೀಯ ಆಯಾಮ ಪಡೆದುಕೊಂಡಿತು(169:p7). ಸೌಹಾರ್ದಯುತವಾಗಿ ಸಮಸ್ಯೆ ಬಗೆಹರಿಯುವ ಸಲುವಾಗಿ ಸರ್ಕಾರ ಅತಿಕ್ರಮಣದಾರರನ್ನು ತೆರವು ಮಾಡಲು ಎರಡು ತಿಂಗಳ ಕಾಲದ ಅವಕಾಶ ನೀಡಲಾಯಿತು. ಆದರೆ ವಿರೋಧ ಪಕ್ಷಗಳು ಅಲ್ಲಿಯೇ ಉಳಿಯುವಂತೆ ಪ್ರೇರೇಪಿಸಿದರು. ಕೊನೆಗೆ, ಕಂದಾಯ ಖಾತೆಯ ಹಿರಿಯ ಅಧಿಕಾರಿಗಳು ಒತ್ತುವರಿ ತೆರವು ಮಾಡಲು ಆಗಮಿಸಿದಾಗ, ಕಾಂಗ್ರೆಸ್ ಮತ್ತು ಪಿಎಸ್‌ಪಿ ಮುಖಂಡರು ತೀವ್ರ ವಾಗ್ದಾಳಿ ನಡೆಸಿ ಪ್ರತಿಭಟಿಸಿದರು. ಸಂಪೂರ್ಣವಾಗಿ ತೆರವುಗೊಳಿಸಿದ ನಂತರ, ಅವರು ಹೊರಗಿನ ಸ್ವಯಂಸೇವಕರ ಸಹಾಯದಿಂದ ಆಂದೋಲನವನ್ನು ಪ್ರಾರಂಭಿಸಿದರು(84:15.11.57). ಆ ಭಾಗದ ಬಹುತೇಕ ಹರಿಜನ ಕುಟುಂಬಗಳು ಭೂಕಬಳಿಕೆಯ ಹೋರಾಟವನ್ನು ಖಂಡಿಸುವ ಜ್ಞಾಪಕ ಪತ್ರವನ್ನು ಆಗಿನ ಕಾನೂನು ಸಚಿವ ವಿ.ಆರ್. ಕೃಷ್ಣಯ್ಯರ್‌ರವರಿಗೆ ಸಮರ್ಪಿಸಲಾಯಿತು(84:15.11.57).

ಸತ್ಯಾಗ್ರಹ ಎಂದು ಹೇಳಿಕೊಂಡು, ಸರ್ಕಾರದ ಭೂಮಿಯನ್ನು ಬಲವಂತವಾಗಿ ನಡೆದ ಆತಿಕ್ರಮಿಸುವಿಕೆಯಲ್ಲಿ, ನೇರ ಹೋರಾಟತಂತ್ರ ವಿಧಾನವನ್ನು ನಾವು ನೋಡೋಣ. ಈ ತಂತ್ರವು 'ವಿಮೋಚನಾ ಹೋರಾಟ'ದ ನಾಯಕರಿಗೆ, 1959ರ ಜೂನ್-ಜುಲೈ ತಿಂಗಳುಗಳಲ್ಲಿ, ದೊಡ್ಡ ಲಾಭವನ್ನು ತಂದುಕೊಟ್ಟಿತು(113:p33). ನವೆಂಬರ್ 1957ರಲ್ಲಿ ಸರ್ಕಾರವು ಹೊರಡಿಸಿದ ಟಿಪ್ಪಣಿಯೊಂದರಲ್ಲಿ, ಹೀಗೆ ಒಂದು ವೀಕ್ಷಣೆಯನ್ನು ಕಾಣಬಹುದು:

> ಎರಡು ಪಕ್ಷಗಳ (ಕಾಂಗ್ರೆಸ್ ಮತ್ತು ಪಿಎಸ್‌ಪಿ) ಪ್ರಸ್ತುತ ಸಾಹಸಿಕ ಪ್ರವೃತ್ತಿಯ ಉದ್ದೇಶ ಸ್ಪಷ್ಟವಾಗಿದೆ. ಅದೇನೆಂದರೆ, ಕಾನೂನು ಉಲ್ಲಂಘನೆ ಮಾಡುವ ಮೂಲಕ ರಾಜ್ಯ ಸರ್ಕಾರದ ಘನತೆಗೆ ಧಕ್ಕೆ ತರುವಂಥದ್ದು. ಅದಕ್ಕಿಂತಲೂ ಮುಖ್ಯವಾದದ್ದು ಯಾವುದೆಂದರೆ, ವಾಸ್ತವವಾಗಿ, ಇದೀಗ ನಡೆಯುತ್ತಿರುವುದು ಕಡಿವಾಣವಿಲ್ಲದ ಗೂಂಡಾಗಿರಿ ಮತ್ತು ಮರೆಯಿಲ್ಲದ ಆಭಾಸ"(113:p33).

ಆ ದಿನಗಳಲ್ಲಿ ಅಸೆಂಬ್ಲಿಯಲ್ಲಿ ಹೇಳಿದಂತೆ, ಸಣ್ಣ ಮುಷ್ಕರದಲ್ಲು ಸಹ, ಅನೇಕ ಕ್ರಿಸ್ಟೋಫರ್‌ಗಳನ್ನು ಅಖಾಡಕ್ಕಿಳಿಸಿ, ಬಹಳಷ್ಟು ಹಣವನ್ನೂ ಖರ್ಚು ಮಾಡುವಂತೆ, ನೋಡಿಕೊಳ್ಳಲಾಯಿತು (102:21.12.57).

### ಆಡಳಿತ ಸುಧಾರಣಾ ಸಮಿತಿಯ ವರದಿ ಮತ್ತು ಮೀಸಲಾತಿ ಸಮಸ್ಯೆ

ಕಮ್ಯುನಿಸ್ಟ್ ಸರ್ಕಾರಕ್ಕೆ ಸಂಬಂಧಿಸಿದಂತೆ, ರಾಜ್ಯ ಸೇವೆಗಳ ಸಂಯೋಜನೆ ಅಥವಾ ಏಕೀಕರಣ ಮತ್ತು ಆಡಳಿತ ವ್ಯವಸ್ಥೆಯ ಮರುಸಂಘಟನೆ ಇವುಗಳು

ಬಹಳ ಮುಖ್ಯವಾಗಿತ್ತು. ಹೊಸ ಸರ್ಕಾರದ ನೀತಿಗಳು ಮತ್ತು ಕಾರ್ಯಕ್ರಮಗಳು ವಿಳಂಬವಾಗದಂತೆ ಅನುಷ್ಠಾನಗೊಳಿಸುವುದಕ್ಕಾಗಿ ಆಡಳಿತ ಯಂತ್ರಗಳನ್ನು ಸಂಪೂರ್ಣವಾಗಿ ಸಜ್ಜುಗೊಳಿಸಬೇಕಾಗಿತ್ತು. ಆಗಸ್ಟ್ 15, 1957ರಂದು, ಮುಖ್ಯಮಂತ್ರಿಯ ಅಧ್ಯಕ್ಷತೆಯಲ್ಲಿ ಏಳು ಸದಸ್ಯರ ಆಡಳಿತ ಸುಧಾರಣಾ ಸಮಿತಿಯೊಂದನ್ನು ರೂಪುಗೊಳಿಸಲಾಯಿತು(48:p162). ಅಸ್ತಿತ್ವದಲ್ಲಿರುವ ಆಡಳಿತ ವ್ಯವಸ್ಥೆಯನ್ನು ಪರಿಶೀಲಿಸಿಕೊಂಡು, ಅದರ ಅಸಮರ್ಪಕತೆಯನ್ನು ನಿರ್ಣಯಿಸುತ್ತಾ, ಅದರ ದಕ್ಷತೆಯನ್ನು ಸುಧಾರಿಸಲು ಅಗತ್ಯವಿರುವ ಕ್ರಮಗಳನ್ನು ಸೂಚಿಸುವುದು, ಈ ಸಮಿತಿಯ ಉದ್ದೇಶಗಳು(40:18.08.57p6).

ಒಂಬತ್ತು ತಿಂಗಳ ಕಾಲದ ಆಳವಾದ ಅಧ್ಯಯನದ ನಂತರ, ಸಮಿತಿಯು ಅದರ ವರದಿಯನ್ನು ಸರಕಾರಕ್ಕೆ ಸಲ್ಲಿಸಿತು. ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಅದರ ಪ್ರಮುಖ ಶಿಫಾರಸ್ಸಾಗಿತ್ತು. ಆಡಳಿತ ಸುಧಾರಣಾ ಸಮಿತಿಯ ನೀಡಿದ ಹಲವು ಶಿಫಾರಸುಗಳಲ್ಲೊಂದು, ಈ ಕೆಳಗಿನಂತಿದೆ.

> "ಸರ್ಕಾರಿ ಸೇವೆಯ ನೇಮಕಾತಿಯಲ್ಲಿ,ರಾಜ್ಯವುಸಂರಕ್ಷಣೆಯನ್ನು ಕೊಡುವುದರ ಒಂದು ಸೂಚಕವಾಗಿ, ಆರ್ಥಿಕ ಹಿಂದುಳಿದಿರುವಿಕೆಯನ್ನು ಪರಿಗಣಿಸಬೇಕು. ಮಾತ್ರವಲ್ಲ, ನಿರ್ದಿಷ್ಟ ಹಣಕಾಸಿನ ಮಟ್ಟಕ್ಕಿಂತ ಕೆಳಗಿರುವವರಿಗೆ ಮಾತ್ರ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಸೌಲಭ್ಯ ನೀಡಬೇಕು(185:1958p90-91;1959p6-7). ಮೀಸಲಾತಿಯ ಶಿಫಾರಸು ಸೇರಿದಂತೆ ಸಮಿತಿಯ ಸಂಪೂರ್ಣ ವರದಿಯನ್ನು ಸರಕಾರ ಅಂಗೀಕರಿಸಿತು(186:).

ಸರ್ಕಾರಿ ಸೇವೆಯ ನೇಮಕಾತಿಗಳಲ್ಲಿ, ವೃತ್ತಿಪರ ಶಿಕ್ಷಣ ಸಂಸ್ಥೆಗಳ ಪ್ರವೇಶನದಲ್ಲಿ ಹಿಂದುಳಿದ ಸಮುದಾಯಗಳಿಗೆ ನೀಡಿರುವ ಮೀಸಲಾತಿ ವ್ಯವಸ್ಥೆಗೆ, ಕೇರಳದಲ್ಲಿ ಸಾಮಾಜಿಕ–ರಾಜಕೀಯ ವ್ಯವಸ್ಥೆಗಳೊಂದಿಗೆ ಹೆಣೆದುಕೊಂಡಿರುವ ಸುದೀರ್ಘ ಇತಿಹಾಸವಿದೆ. ಕೇರಳ ರಾಜ್ಯವು ಕಠೋರವಾದ ಜಾತಿಭೇದಗಳಿಗೆ ಕುಖ್ಯಾತಿ ಪಡೆದಿತ್ತು. ಇದರಿಂದಾಗಿ ಶತಮಾನಗಳ ಕಾಲದಿಂದ ಇಲ್ಲಿಯ ಅವರ್ಣ ಹಿಂದೂಗಳು ಸಾಮಾಜಿಕವಾಗಿ ತುಳಿತಕ್ಕೊಳಗಾಗಿದ್ದರು ಮತ್ತು ಆರ್ಥಿಕವಾಗಿ ಹಿಂದುಳಿದಿದ್ದರು.* ಕ್ರಿಶ್ಚಿಯನ್ನರ ಒಂದು ವಿಭಾಗಕ್ಕೆ ಸರ್ಕಾರಿ ಸೇವೆಗಳಲ್ಲಿ ಅವರಿಗೆ ಅರ್ಹವಾದ ಭಾಗವಹಿಸುವಿಕೆ ಪಡೆಯಲಾಗಿರಲಿಲ್ಲ. ಇತ್ತೀಚಿನವರೆಗೂ ಇದು ಮೇಲ್ಜಾತಿ ಹಿಂದೂಗಳ

---

* 1891ರಲ್ಲಿ ತಿರುವಾಂಕೂರಿನಲ್ಲಿ 'ಮಲಯಾಳಿ ಸ್ಮಾರಕ', ಇದು ಸರ್ಕಾರಿ ಸೇವೆಯಲ್ಲಿ ತಮಿಳು ಬ್ರಾಹ್ಮಣರಿಗಿದ್ದ ಏಕಸ್ವಾಮ್ಯದ ವಿರುದ್ಧದ ಮೊದಲ ಪ್ರಮುಖ ಪ್ರಯತ್ನವಾಗಿತ್ತು. ಈಳವ ಸಮುದಾಯ ಮತ್ತು ಇತರೆ ಹಿಂದುಳಿದ ಸಮುದಾಯಗಳು ಹಕ್ಕುಗಳಿಗಾಗಿ ಮುಖ್ಯವಾಗಿ 1896ರ 'ಈಳವ ಸ್ಮಾರಕ' ಗುರಿಪಡಿಸಲಾಗಿತ್ತು. ಮೇಲ್ಜಾತಿ ಹಿಂದೂಗಳು ಸರ್ಕಾರಿ ಸೇವೆಯಲ್ಲಿದ್ದ ನಿರಂಕುಶಾಧಿಕಾರದ ವಿರುದ್ಧದ ಆರಂಭಿಕ ಪ್ರತಿಭಟನೆಗಳಲ್ಲಿ ಪ್ರಮುಖ ಘಟನೆಗಳಾಗಿದ್ದವು ಪ್ರಸ್ತುತ ಸ್ಮರಣೆಗಳು.

ಏಕಸ್ವಾಮ್ಯವಾಗಿತ್ತು.*

ಕೇರಳದ ಬಹುಪಾಲು ಹಿಂದುಳಿದ ಸಮುದಾಯಗಳ ಜನರನ್ನು ಒಳಗೊಂಡಿದ್ದ ಈ ವರದಿಗೆ, ಸರ್ಕಾರ ಅನುಮೋದನೆ ನೀಡಿರುವುದನ್ನು ವಿರೋಧಿಸಿ ಪ್ರತಿಭಟನೆಯ ಬಿರುಗಾಳಿಯೆದ್ದಿತು. ಕಮ್ಯುನಿಸ್ಟ್ ಪಕ್ಷದ ಪ್ರಮುಖ ಬಣವಾದ ಹಿಂದುಳಿದ ಸಾಮುದಾಯಗಳು, ಕಮ್ಯುನಿಸ್ಟ್ ಸರ್ಕಾರದ ಈ ಕ್ರಮಗಳನ್ನು ಬಲವಾಗಿ ವಿರೋಧಿಸಿತು(67:23.09.58).

ಕೇರಳ ಕೌಮುದಿ ದಿನಪತ್ರಿಕೆಯ ಪ್ರಧಾನ ಸಂಪಾದಕರಾದ(ಸಂಪಾದಕ ಸುಕುಮಾರನ್ ಎಂದು ಜನಪ್ರಿಯವಾಗಿ ಕರೆಯುತ್ತಿದ್ದರು.) ಕೆ. ಸುಕುಮಾರನ್ ಸಮುದಾಯ ಮೀಸಲಾತಿ ಸಮಿತಿಯ ಶಿಫಾರಸುಗಳನ್ನು ಕಟುವಾಗಿ ಟೀಕಿಸಿದರು. (129:) ಆದಾಗ್ಯೂ ಹಿಂದುಳಿದ ಸಮುದಾಯಗಳ ಮನೋಭಾವನೆಯನ್ನು ಪರಿಗಣಿಸಿದ, ಕಮ್ಯುನಿಸ್ಟ್ ಪಕ್ಷವು, ಆಡಳಿತ ಸುಧಾರಣಾ ಸಮಿತಿ ವರದಿಯನ್ನು ಅವಗಣಿಸಿ, ಈಗಿರುವ ಮೀಸಲಾತಿಯನ್ನು ತೆಗೆದುಹಾಕುವ ಯಾವುದೇ ಯೋಜನೆ ಸರ್ಕಾರದ ಮುಂದಿಲ್ಲ ಎಂದು ಭರವಸೆ ನೀಡಿದರು(33:03.10.58).

ಅಧಿಕಾರದಲ್ಲಿರುವ ಸರ್ಕಾರವು 'ಈಳವ/ಈಡಿಗ-ಪರ' ಮತ್ತು 'ನಾಯರ್ ವಿರುದ್ಧ'ವಾದ ಕಾರ್ಯವಿಧಾನವನ್ನು ಪೋಷಿಸಿಕೊಂಡು ಬರುತ್ತಿದೆ ಎನ್ನುವ ಮೂಲಕ, ನಾಯರ್ ಸರ್ವಿಸ್ ಸೊಸೈಟಿಯ ಮುಖ್ಯಸ್ಥ ಮನ್ನತ್ ಪದ್ಮನಾಭನ್ ಜಾತಿವಾದಿ/ ಕೋಮುವಾದಿ ಭಾವನೆಯನ್ನು ಜನರಲ್ಲಿ ಉಂಟುಮಾಡಲು ಶತಪ್ರಯತ್ನ ನಡೆಸಿದರು. ರಾಜ್ಯದ ಜನರನ್ನು ಜನಾಂಗೀಯವಾಗಿ ವಿಭಜಿಸಿ, ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಪ್ರಬಲ ವರ್ಗದ ಕೋಪವನ್ನು ಬೇರೆಡೆಗೆ ತಿರುಗಿಸಿಬಿಡಲು ಅವರಿಗೆ ಸಾಧ್ಯವಾಗಿಸಿತು(161:p153).

ಸರ್ಕಾರಿ ಹುದ್ದೆಗಳಿಗೆ ನೇಮಕಾತಿಗಳಲ್ಲಿ ಮತ್ತು ವೃತ್ತಿಪರ ಕಾಲೇಜುಗಳ ಪ್ರವೇಶನಗಳಲ್ಲಿ ಪಾಲಿಸಬೇಕಾದ ಸಮುದಾಯ ಮೀಸಲಾತಿ ವ್ಯವಸ್ಥೆಯನ್ನು ಎತ್ತಿ ಹಿಡಿಯುವ ಮೂಲಕ ಕೋಮುಭಾವನೆಯನ್ನು ಹೊತ್ತಿ ಉರಿಸುವುದಕ್ಕೆ ಮನ್ನತ್ ಪದ್ಮನಾಭನ್ ಮುಂದಾದರು. ನಾಯರ್‌ಗಳ ಹಿತಾಸಕ್ತಿಗಳನ್ನು ಹಾಳುಮಾಡಲು ಈಳವ/ ಈಡಿಗ-ಪರ ಸರ್ಕಾರದ ಉದ್ದೇಶಪೂರ್ವಕ ಕ್ರಮವನ್ನಾಗಿ ಮೀಸಲಾತಿ ವ್ಯವಸ್ಥೆಯನ್ನು ಬಿಂಬಿಸಲಾಯಿತು. 'ನಾಯರುಗಳ ಹಿತಾಸಕ್ತಿ ಅಪಾಯದಲ್ಲಿದೆ' ಎಂಬ ಕೂಗನ್ನು ಎಬ್ಬಿಸಿ ಸಮಾಜದಲ್ಲಿ ಉದ್ವಿಗ್ನ ವಾತಾವರಣ ಸೃಷ್ಟಿಸಲು ಯತ್ನಿಸಿದರು(143:30.05.58).

---

* 1930ರ ದಶಕದಲ್ಲಿ ತಿರುವಾಂಕೂರಿನಲ್ಲಿ 'ನಿವರ್ತನಪ್ರಸ್ತಾನಂ' ಎನ್ನುವುದು, ಈಳವರ, ಮುಸ್ಲಿಮರ ಮತ್ತು ಕ್ರಿಶ್ಚಿಯನ್ನರ ಒಂದು ವಿಭಾಗದಿಂದ ಆಯೋಜಿಸಲಾದ ಪ್ರತಿಭಟನಾ ಚಳುವಳಿಯಾಗಿತ್ತು. ಈ ಸಮುದಾಯಗಳ ಜನಸಂಖ್ಯೆಗಳಿಗೆ ಅನುಗುಣವಾಗಿ ಶಾಸನಸಭೆಗಳಲ್ಲಿ ಮತ್ತು ಸರ್ಕಾರಿ ಸೇವೆಗಳಲ್ಲಿ ಅವರಿಗೆ ಪ್ರಾತಿನಿಧ್ಯ ನೀಡಬೇಕೆನ್ನುವುದು ಈ ಚಳವಳಿ ಮುಂದಿಟ್ಟಿರುವ ಪ್ರಮುಖ ಬೇಡಿಕೆ.

ಸಂಕ್ಷಿಪ್ತವಾಗಿ ಹೇಳುವುದಾದರೆ, ಆಡಳಿತ ಸುಧಾರಣಾ ಸಮಿತಿಯ ವರದಿಯು ಈಳವ/ಈಡಿಗ ಸಮುದಾಯದಲ್ಲಿ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಅಸಮಾಧಾನ ಮತ್ತು ಪ್ರತಿಭಟನೆಯನ್ನು ಸೃಷ್ಟಿಸಿತು. ವರದಿಗೆ ಸಂಬಂಧಿಸಿದಂತೆ ಸರ್ಕಾರದ ಕಾರ್ಯವಿಧಾನವು, ನಾಯರ್ ಸರ್ವೀಸ್ ಸೊಸೈಟಿಯ ವಿರೋಧವನ್ನು ತಾನಾಗಿ ಆಹ್ವಾನಿಸಿಕೊಂಡಂತಾಯಿತು. ಆಡಳಿತ ಸುಧಾರಣಾ ಸಮಿತಿಯ ವರದಿಯ ಕಾರಣದಿಂದಾಗಿ, ಎರಡೂ ಸಮುದಾಯಗಳು ಸರ್ಕಾರದ ವಿರುದ್ಧ ತಿರುಗಿಬಿದ್ದವು.

## ಕೃಷಿ ಸುಧಾರಣೆಗಳ ವಿರುದ್ಧ ಆಂದೋಲನ

ಕಮ್ಯುನಿಸ್ಟ್ ಸರ್ಕಾರದ ಕೃಷಿ ಸುಧಾರಣಾ ಕ್ರಮಗಳು, ಕೇರಳದ ಸಾಂಪ್ರದಾಯಿಕ ವರ್ಗರಚನೆಯಲ್ಲಿ ಗಮನಾರ್ಹ ಬದಲಾವಣೆಗಳನ್ನು ಉಂಟುಮಾಡಿತು. ಆದಾಗ್ಯೂ, ಈ ಸಮಸ್ಯೆ ಅಥವಾ ಈ ವಿಚಾರ, ಸಮುದಾಯಿಕ ಒತ್ತಡ ಗುಂಪುಗಳು ಮತ್ತು ವಿರೋಧಪಕ್ಷಗಳ ಪಟ್ಟಭದ್ರ ಹಿತಾಸಕ್ತಿ ಗುಂಪುಗಳ ತೀವ್ರ ಪ್ರತಿಭಟನೆಗೆ ಕಾರಣವಾಯಿತು. ಸರ್ಕಾರದ ಭೂಸುಧಾರಣಾ ಕ್ರಮಗಳು, ಕಮ್ಯುನಿಸ್ಟ್ ಸರ್ಕಾರದ ವಿರುದ್ಧ, ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಮೈತ್ರಿ ಮತ್ತು ಸಾಮೂಹಿಕ ಆಂದೋಲನಕ್ಕೆ ನಾಂದಿ ಹಾಡಿತು.

ಮೇ 8, 1957ರಂದು ಅಂಗೀಕರಿಸಲಾದ ಒಕ್ಕಲೆಬ್ಬಿಸುವಿಕೆನಿಷೇಧ ಕಾಯಿದೆಯು ಪಟ್ಟಭದ್ರ ಹಿತಾಸಕ್ತಿಗಳ ಸಂಘಗಳನ್ನು ಆಕ್ರೋಶಕ್ಕೆ ಗುರಿಮಾಡಿತು(108:;69:p208). ಡಿಸೆಂಬರ್ 18, 1957ರ ಕೇರಳ ಕೃಷಿ ಸಂಬಂಧ ಮಸೂದೆಯಲ್ಲಿ ಇದನ್ನು ಪ್ರಕಟಿಸಿದಾಗ, ಅದಕ್ಕೆ ಬೆಂಬಲಿಸಿಯೂ ವಿರೋಧಿಸಿಯೂ ಪ್ರಬಲ ಜನವಿಭಾಗಗಳು ಸಾಲುಗಟ್ಟಿ ನಿಂತವು. ಮಸೂದೆಯನ್ನು ಬೆಂಬಲಿಸಿದವರಲ್ಲಿ 'ಕೇರಳ ರೈತಸಂಘ'ದವರೂ ಇದ್ದದ್ದು ಅತ್ಯಂತ ಗಮನಾರ್ಹವಾದ ಸಂಗತಿಯಾಗಿತ್ತು(188:p1). ಭೂಮಿ ಮತ್ತು ನ್ಯಾಯಯುತ ಗೇಣಿಗೆ ಸಂಬಂಧಿಸಿದ ನಿಬಂಧನೆಗಳು ಕ್ರಿಶ್ಚಿಯನ್ ತೋಟದ/ಎಸ್ಟೇಟ್ ಮಾಲೀಕರ ಮತ್ತು ನಾಯರ್ ಸಮುದಾಯದವರ ಮೇಲೆ ಪ್ರತಿಕೂಲ ಪರಿಣಾಮ ಬೀರುವುದರಿಂದಾಗಿ ಅವರಲ್ಲಿ ಹೆಚ್ಚಿನವರು ಮಸೂದೆಯನ್ನು ವಿರೋಧಿಸಿದರು(117:p131). ತಮ್ಮ ಹಿತಾಸಕ್ತಿಗೆ ಧಕ್ಕೆ ತರುತ್ತದೆ ಎನ್ನುವ ಕಾರಣಕ್ಕಾಗಿ ಎನ್‌ಎಸ್‌ಎಸ್ ನವರು ಮಸೂದೆಯ ಬಗ್ಗೆ ವಿರೋಧಿ ನಿಲುವು ತಳೆದಿದ್ದರು. ನಾಯರ್‌ಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುವ 'ಮಲಯಾಳಂ ರಾಜ್ಯ'ವು ತನ್ನ ಸಂಪಾದಕೀಯದಲ್ಲಿ ಮಸೂದೆಯನ್ನು ಕಿತ್ತೆಸೆಯಲು ಕರೆ ನೀಡಿತು(143:01.01.58). ಏಕೆಂದರೆ, ಅದು ಬಹುಸಂಖ್ಯಾತ ನಾಯರ್ ಸಮುದಾಯದ ಭೂಮಾಲೀಕರ ಜಮೀನುಗಳನ್ನು ಕಬಳಿಸುವ ಉದ್ದೇಶ ಇಟ್ಟುಕೊಂಡಿತ್ತು. ಎನ್‌ಎಸ್‌ಎಸ್ ಆ ನಂತರ, ಮಸೂದೆಯನ್ನು ವಿರೋಧಿಸುವುದರ ಬಗ್ಗೆ ಅನೇಕ ಸಭೆಗಳನ್ನು ಕರೆಯಲಾಯಿತು. ಮಸೂದೆಯನ್ನು ವಿರೋಧಿಸುವವರ ಒಗ್ಗಟ್ಟನ್ನು ಬಲಪಡಿಸಲು ಸಂಘಟನೆಯು ಕರೆ ನೀಡಿತು. ಎನ್‌ಎಸ್‌ಎಸ್‌ನ

ಭೂನೀತಿ(143:10.06.57) ಸಮಿತಿ ಫೆಬ್ರವರಿ 1958, 28ರಂದು ಮನ್ನತ್ ಪದ್ಮನಾಭನ್ ನೇತೃತ್ವದಲ್ಲಿ, ಮುಖ್ಯಮಂತ್ರಿಯನ್ನು ಭೇಟಿಮಾಡಿ,ಮಸೂದೆಗೆ ಯಾವ ರೀತಿ ತಿದ್ದುಪಡಿ ತರಬೇಕು ಎಂಬ ಪ್ರಸ್ತಾವನೆಯನ್ನು ಸಲ್ಲಿಸಿದರು(143:04.03.58). ಒಂದುವೇಳೆ ಸರ್ಕಾರ ತಿದ್ದುಪಡಿಯನ್ನು ಪಾಲಿಸದಿದ್ದರೆ, ಪ್ರಬಲವಾದ ಆಂದೋಲನವನ್ನು ನಡೆಸಲಾಗುವುದು ಎಂದು ನಿಯೋಗ ಮುಖ್ಯಮಂತ್ರಿಗಳಿಗೆ ಎಚ್ಚರಿಕೆ ನೀಡಿತು(143:4.03.58).

ಎನ್‌ಎಸ್‌ಎಸ್ ಕಮ್ಯುನಿಸ್ಟ್ ಪಕ್ಷದಲ್ಲಿರುವ ನಾಯರ್ ಸಮುದಾಯಕ್ಕೆ ಸೇರಿದ ನಾಯಕರ ಮೇಲೆ ಪ್ರಭಾವ ಬೀರಲು ಯತ್ನಿಸಿತು(117:p133). ನಾಯರ್‌ಗಳ ಹಿತಾಸಕ್ತಿ ಕಾಪಾಡುವ ಸಲುವಾಗಿ, ಎನ್‌ಎಸ್‌ಎಸ್ ನಾಯಕರು, ಚುನಾಯಿತ ಸಮಿತಿ, ಸರ್ಕಾರ ಮತ್ತು ಕಮ್ಯುನಿಸ್ಟ್ ಪಕ್ಷಮುಂತಾದವುಗಳ ಮೇಲೆ ತೀವ್ರ ಒತ್ತಡವನ್ನು ಹೇರಲು ತೀವ್ರ ಪ್ರಯತ್ನ ನಡೆಸುತ್ತಲೇ ಇತ್ತು. ಇದರ ಭಾಗವಾಗಿ ಅವರು ಅನೇಕ ಸಾರ್ವಜನಿಕ ಸ್ಥಳಗಳನ್ನು ಮತ್ತು ಪತ್ರಿಕಾ ಮಾಧ್ಯಮಗಳನ್ನು ಸಮರ್ಥವಾಗಿ ಬಳಸಿಕೊಂಡರು. ಅವರು ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿದನಾಯರ್ ಸಮುದಾಯದ ಶಾಸಕಾಂಗದ ಸದಸ್ಯರನ್ನು ತಮ್ಮ ರೀತಿಯಲ್ಲಿ ಆಲೋಚಿಸುವಂತೆ ಒತ್ತಾಯಿಸಿದರು. ಮನ್ನತ್ ಪದ್ಮನಾಭನ್ ಅವರು ಸಿಪಿಐನ ನಾಯರ್ ಶಾಸಕರಿಗೆ ನೇರವಾಗಿ ಮಾತನಾಡಿ ವಿವರಣೆ ನೀಡಿದರು(189:p34). ಅನೇಕ ಮಾರ್ಗಗಳ ಪ್ರಯತ್ನಗಳ ಹೊರತಾಗಿಯೂ ಮಲಬಾರ್‌ನಲ್ಲಿ ಎನ್‌ಎಸ್‌ಎಸ್‌ಗೆ ಪ್ರಖರ ಕಮ್ಯುನಿಸ್ಟರನ್ನು, ವಿಶೇಷವಾಗಿ ಮಲಬಾರ್‌ನಿಂದ ಬಂದವರನ್ನು ತಮ್ಮ ಕಡೆಗೆ ಸೆಳೆದುಕೊಳ್ಳಲು ಸಾಧ್ಯವಾಗಲಿಲ್ಲ(117:p133). ಇತರ ಸಮಸ್ಯೆಗಳಲ್ಲು ಸಹ ಅದೇ ರೀತಿ ಎನ್‌ಎಸ್‌ಎಸ್, ಕಮ್ಯುನಿಸ್ಟ್ ಸರ್ಕಾರದೊಂದಿಗೆ ಘರ್ಷಣೆ ಮಾಡಿಕೊಂಡಿತು.* ಎನ್‌ಎಸ್‌ಎಸ್‌ನ ದೂರಿಗೆ ಪ್ರಮುಖ ಕಾರಣವೆಂದರೆ ಅದು ಕಮ್ಯುನಿಸ್ಟ್ ನೀತಿಗಳ ಮೇಲೆ ಸ್ವಲ್ಪವೂ ಪ್ರಭಾವ ಬೀರಲು ಸಾಧ್ಯವಾಗಿರಲಿಲ್ಲ(190:p176). ಜಾತಿ ಆಧಾರಿತ ಸಂಘಟನೆಗಳೊಂದಿಗೆ ರಾಜಿ ಮಾಡಿಕೊಳ್ಳದೆ ಶಾಸಕಾಂಗ ಮತ್ತು ಆಡಳಿತ ಸುಧಾರಣೆಗಳನ್ನು ಮುಂದಕ್ಕೆ ಕೊಂಡೊಯ್ಯಲು ಕಮ್ಯುನಿಸ್ಟರು ನಿರ್ಧರಿಸಿದರು. ಈ ಸಂದರ್ಭದಲ್ಲಿ ಶಿಕ್ಷಣ ಮಸೂದೆಯ ವಿಚಾರದ ಬಗ್ಗೆ ಕಮ್ಯುನಿಸ್ಟ್ ಸರ್ಕಾರದೊಂದಿಗೆ ಯುದ್ಧ ಮಾಡುತ್ತಿದ್ದ ಕ್ರಿಶ್ಚಿಯನ್ನರೊಂದಿಗೆ ಕೆಲಸ ಮಾಡಲು ಎನ್‌ಎಸ್‌ಎಸ್ ನಿರ್ಧರಿಸಿತು. ಶಿಕ್ಷಣ ಮಸೂದೆಯ ವಿರುದ್ಧ ನಡೆದ ಎಲ್ಲಾ ಸಾರ್ವಜನಿಕ ಸಭೆಗಳನ್ನು, ನಾಯರ್ ಸಮುದಾಯದ ನಾಯಕರು, ಕೃಷಿ ಸಂಬಂಧಗಳ ಮಸೂದೆಯನ್ನು ಟೀಕಿಸಲು ಬಳಸಿಕೊಂಡರು. ಸರ್ಕಾರಿ ಉದ್ಯೋಗಗಳಲ್ಲಿ ಹಿಂದುಳಿದ ಸಮುದಾಯಗಳಿಗೆ ಮೀಸಲಾತಿ ಪ್ರಯೋಜನಗಳ ಬಗ್ಗೆ ಅವರ ವಿರೋಧವನ್ನು ಅವರು ಕೃಷಿ ವಿರೋಧಿ ಮಸೂದೆ ಅಭಿಯಾನದೊಂದಿಗೆ ಬೆಸೆದರು. ನಾಯರ್ ವಿರೋಧಿ ಸರ್ಕಾರ ಎಂದು ಆರೋಪಿಸುವ ಮೂಲಕ, ಪ್ರಸ್ತುತ ಸರ್ಕಾರದ ವಿರುದ್ಧ ಸಮುದಾಯದ ಕೋಪವನ್ನು

* ಪಾಲಕ್ಕಾಡ್‌ನಲ್ಲಿ ಇಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸಲು ಎನ್‌ಎಸ್‌ಎಸ್ ನ ಮನವಿಯನ್ನು ಸರ್ಕಾರ ತಿರಸ್ಕರಿಸಿತು. ಸರ್ಕಾರದ ಮೀಸಲಾತಿ ನೀತಿಗಳಿಗೆ ಎನ್‌ಎಸ್‌ಎಸ್ ವಿರುದ್ಧವಾಗಿತ್ತು

ಕೆರಳಿಸಲು ಎನ್‌ಎಸ್‌ಎಸ್ ಪ್ರಯತ್ನಿಸಿತು(45:p163).

ಚರ್ಚ್ ಅಧಿಕಾರಶ್ರೇಣಿಯವರಿಂದ ನಿಯಂತ್ರಿಸಲ್ಪಡುವ ಕೇರಳದ ಕ್ರಿಶ್ಚಿಯನ್ನರು, ಭೂಮಿಯಲ್ಲಿ ವ್ಯಾಪಕ ಆಸಕ್ತಿ ಹೊಂದಿದವರಾಗಿದ್ದರು. ಕೃಷಿ ಸಂಬಂಧಗಳ ಈ ಮಸೂದೆಯ ಬಗ್ಗೆ ದೀಪಿಕಾ ಪತ್ರಿಕೆ ಹೀಗೆ ಬರೆಯುತ್ತದೆ:

> "1958ರಲ್ಲಿ ಕೇರಳ ಎದುರಿಸುತ್ತಿರುವ ದೊಡ್ಡ ಸಮಸ್ಯೆಯೆನ್ನುವುದು, ಕಮ್ಯುನಿಸ್ಟ್ ಪಕ್ಷದ ಭೂಸುಧಾರಣಾ ಕಾನೂನು"(108:1.01.38).

ಯೋಜಿತ ಆರ್ಥಿಕತೆಗಾಗಿ ಕೇರಳದಲ್ಲಿ ಪ್ರಜಾಪ್ರಭುತ್ವವನ್ನು ಬಲಿಕೊಡಲು ಹೊರಟಿದೆಯೇ ಎಂಬ ಅನುಮಾನದೊಂದಿಗೆ ಸಂಪಾದಕೀಯ ಕೊನೆಗೊಳ್ಳುತ್ತದೆ(108:1.01.38).

ಪ್ರಸ್ತುತ ಮಸೂದೆಯನ್ನು ವಿಧಾನಸಭೆಯಲ್ಲಿ ಮಂಡಿಸಿದಾಗ, ಡಿಸೆಂಬರ್ 28, 1957ರಂದು ಮನೋರಮ ಪತ್ರಿಕೆ, 'ರಾಜಕೀಯ ಪ್ರೇರಿತ ಮಸೂದೆ' ಎಂದು ಕರೆದು, ಖಂಡಿಸಿತು. ಭೂಮಿಯಲ್ಲಿ ಸರ್ವಸ್ವವನ್ನೂ ಹೂಡಿಕೆ ಮಾಡಿ ಜೀವನೋಪಾಯ ನಡೆಸುವ ಭೂಮಾಲೀಕರ ಹಿತಾಸಕ್ತಿಗೆ ಈ ಮಸೂದೆಯು ಧಕ್ಕೆ ತಂದಿದೆ, ಎಂದು ಮನೋರಮಾ ಪತ್ರಿಕೆ ಆರೋಪಿಸಿತು(32:28.12.56).

ಫಾದರ್ ವಡಕ್ಕನ್ ಬರೆಯುತ್ತಾರೆ:

> "ಕೃಷಿ ಸಂಬಂಧಗಳ ಮಸೂದೆಯನ್ನು ಅಂಗೀಕರಿಸಿದ ತಕ್ಷಣ ಮನ್ನತ್ ಪದ್ಮನಾಭನ್ ಮೊದಲಾದವರು ಕಮ್ಯುನಿಸ್ಟರನ್ನು ವಿರೋಧಿಸಿದರು. ಮಧ್ಯ ತಿರುವಾಂಕೂರಿನಿಂದ ನಾಯರ್ ಮತ್ತು ಕ್ರೈಸ್ತರ ಸಂಯುಕ್ತರಂಗದ ಕಹಳೆಯು ಮೊಳಗಿ, ಅದು ಕೇರಳದಾದ್ಯಂತ ಪ್ರತಿಧ್ವನಿಸಿತು. ಇದು ಪ್ರತಿಗಾಮಿಗಳ ಶಕ್ತಿಗಳ ಮೈತ್ರಿ ಎಂದು ನನಗೆ ಮನವರಿಕೆಯಾಗಿದೆ. ಕೃಷಿ ಸಂಬಂಧಗಳ ಮಸೂದೆಯು ಮನ್ನತ್ ಪದ್ಮನಾಭನ್ ಮತ್ತಿತರ ದಾಳಿಯ ಗುರಿಯಾಗಿತ್ತು.

ಭೂಮಾಲೀಕರ ನಿಲುವು ಹೀಗಿತ್ತು,

> "ಚರ್ಚ್ ತನ್ನ ಶಾಲೆಗಳನ್ನು ರಕ್ಷಿಸಲು ಬಯಸಿದರೆ, ಚರ್ಚ್ ನಮ್ಮ ಭೂಮಿಯನ್ನು ಸಹ ರಕ್ಷಿಸಬೇಕು"(46:p121).

ನಾಯರ್‌ಗಳಂತೆ ಕ್ರೈಸ್ತರು ಹಲವಾರು ಪ್ರತಿಭಟನಾ ಸಭೆಗಳನ್ನು ನಡೆಸಿ, ಕೃಷಿ ಸಂಬಂಧಗಳ ಮಸೂದೆಯ ಬಗ್ಗೆ ನಿರ್ದಯವಾಗಿ ಟೀಕೆಗೆ ಗುರಿಯಾಗಿಸಿದರು. ಚರ್ಚ್ ಮತ್ತು ಕ್ರಿಶ್ಚಿಯನ್ ಭೂಮಾಲೀಕರ ನಾಲಿಗೆ/ಮೌತ್ ಪೀಸ್ ಆಗಿದ್ದ ದೀಪಿಕಾ ಮತ್ತು ಮಲಯಾಳ ಮನೋರಮಾ ಪತ್ರಿಕೆಗಳು, ಕೃಷಿ ಸಂಬಂಧ ಮಸೂದೆಗೆ, ಎನ್‌ಎಸ್‌ಎಸ್ ಪ್ರಸ್ತಾಪಿಸಿದ ತಿದ್ದುಪಡಿಗಳಿಗೆ ವ್ಯಾಪಕ ಪ್ರಚಾರ ನೀಡಿದವು. ಕಮ್ಯುನಿಸ್ಟ್ ಪಕ್ಷ ಮತ್ತು ಅದರ ಸರ್ಕಾರದ ವಿರುದ್ಧದ ಹೋರಾಟದಲ್ಲಿ ಎಲ್ಲ ಕೋಮುವಾದಿ ಶಕ್ತಿಗಳನ್ನು ಸಜ್ಜುಗೊಳಿಸುವುದು ಅವರ ಪ್ರಯತ್ನವಾಗಿತ್ತು. ಪ್ರಸ್ತಾವಿತ ಮಸೂದೆಯಲ್ಲಿ

ತಿದ್ದುಪಡಿಗಳನ್ನು ತರುವ ಬಗ್ಗೆ ಪ್ರಸ್ತಾಪಿಸಿ, ಆಲ್ ಕೇರಳ ಕ್ಯಾಥೋಲಿಕ್ ಕಾಂಗ್ರೆಸ್ ಸರ್ಕಾರಕ್ಕೆ ಜ್ಞಾಪಕಪತ್ರ ಸಲ್ಲಿಸಿತು(102:). ಇದು ಭೂಮಾಲೀಕರು ಮತ್ತು ತೋಟದ/ ಎಸ್ಟೇಟ್ ಮಾಲೀಕರ ಹಿತಾಸಕ್ತಿಗಳನ್ನು ರಕ್ಷಿಸುವ ಉದ್ದೇಶವಿಟ್ಟುಕೊಂಡಿದ್ದು ಸ್ಪಷ್ಟವಾಗಿತ್ತು. ದೀಪಿಕಾ ಪತ್ರಿಕೆಯ ವಿಮರ್ಶೆ ಹೀಗಿತ್ತು:

> "ವಾಸಿಸುವ ಸ್ಥಳವನ್ನು ಹೊರತುಪಡಿಸಿ, ಪ್ರತಿ ವ್ಯಕ್ತಿಯು ಕೃಷಿಮಾಡಲು ಭೂಮಿ ಹೊಂದಿರಬೇಕೆಂದು ಅಂದುಕೊಳ್ಳುವುದು, ಯಾವ ರೀತಿಯ ಭೂ ಹಂಚಿಕೆಗೂ ಅಪ್ರಸ್ತುತವೆನಿಸುತ್ತದೆ"(108:6.02.58).

ರಾಜ್ಯದ ತೋಟದ/ಎಸ್ಟೇಟ್ ಮಾಲೀಕರು ಮತ್ತು ಹಿನ್ನೀರಿನ ರೈತರ ಪೈಕಿ, ಹೆಚ್ಚಿನವರು ಕ್ರಿಶ್ಚಿಯನ್ನಾಗಿದ್ದರು. ಅವರು ಮಸೂದೆಯನ್ನು ತೀವ್ರವಾಗಿ ವಿರೋಧಿಸಿದರು. ಕ್ರಿಶ್ಚಿಯನ್ ಸಮುದಾಯಕ್ಕೆ ಸೇರಿದ ಗುಡಿಸಲು ನಿವಾಸಿಗಳ ಕುಂದುಕೊರತೆಗಳನ್ನು ಸಹ ಚರ್ಚ್ ಅಧಿಕಾರಶ್ರೇಣಿಯು ಪರಿಗಣಿಸಿತ್ತು.

ಫಾದರ್ ವಡಕ್ಕನ್ ಹೀಗೆ ಬರೆಯುತ್ತಾರೆ:

> "ತ್ರಿಶೂರ್ ಡಯಾಸಿಸ್ ಎನ್ನುವುದು, ದೇಶದಲ್ಲೇ ಅತಿದೊಡ್ಡ ಕ್ಯಾಥೋಲಿಕ್ ಡಯಾಸಿಸ್. ಧರ್ಮಪ್ರಾಂತ್ಯದ ಅತಿದೊಡ್ಡ ಪ್ಯಾರಿಷ್, ಒಲ್ಲೂರು. ಇದನ್ನು ಕೇರಳದ ಅತಿದೊಡ್ಡ ಭೂಮಾಲೀಕತನವಿರುವ ಪ್ಯಾರಿಷ್ ಎಂದು ಹೇಳಲಾಗುವುದು. ಇಲ್ಲಿಯ ಚರ್ಚ್ ಜಮೀನಿನಲ್ಲಿ 50ಕ್ಕೂ ಹೆಚ್ಚು ಗುಡಿಸಲು ನಿವಾಸಿಗಳಿದ್ದರು. ಈ ಕೊಳೆಗೇರಿ ನಿವಾಸಿಗಳಿಗೆ, ಅವರ ಹಕ್ಕುಗಳನ್ನುಮಾನ್ಯ ಮಾಡಲು ಚರ್ಚ್ ಅಧಿಕಾರಿಗಳು ಸಿದ್ಧರಿಲಿಲ್ಲ(46:p263).

ಕ್ರಿಶ್ಚಿಯನ್ನರಲ್ಲಿ ಹೆಚ್ಚಿನವರು ಹಿಡುವಳಿದಾರರು ಮತ್ತು ಸಣ್ಣ ಭೂಮಾಲೀಕರಾಗಿದ್ದರು. ಅವರು ಪ್ರಸ್ತಾವಿತ ಮಸೂದೆಯ ನಿಬಂಧನೆಗಳ ಫಲಾನುಭವಿಗಳಾಗಿದ್ದರು. ಆದರೆ ಶಿಕ್ಷಣ ಮಸೂದೆಯ ವಿರುದ್ಧದ ಅಪಪ್ರಚಾರದ ಮಹಾಪೂರದಲ್ಲಿ ಅವರೆಲ್ಲ ಕೊಚ್ಚಿಹೋಗಿದ್ದರು. ಕ್ಯಾಥೋಲಿಕ್ ಸಮುದಾಯದ ವಕ್ತಾರರು, ಮಸೂದೆಯನ್ನು ವಿರೋಧಿಸುತ್ತಾ, ಭೂಮಾಲೀಕರ ಹಿತಾಸಕ್ತಿಗಳಿಗನುಗುಣವಾಗಿ ಅದನ್ನು ಸಮಗ್ರವಾಗಿ ಪರಿಷ್ಕರಿಸಬೇಕು ಎಂದು ಹಠದಿಂದ ಒತ್ತಾಯಿಸಿದರು(108:08.03.58). ಕಮ್ಯುನಿಸ್ಟ್ ಸರ್ಕಾರ ಕೃಷಿ ಮಸೂದೆಯನ್ನು ತರುವಾಗ, ಸರ್ಕಾರದ ವಿರುದ್ಧದ ಹೋರಾಟದಲಿ ತಮ್ಮೊಂದಿಗೆ ಸೇರಿಕೊಳ್ಳದಿರಲು ನಾಯರ್‌ರವರಿಗೆ ಸಾಧ್ಯವಾಗುವುದಿಲ್ಲ ಎಂದು ಕ್ಯಾಥೋಲಿಕರು ಮೊದಲೇ ತಿಳಿದುಕೊಂಡಿದ್ದರು. ಆದ್ದರಿಂದ ಅವರು ಚರ್ಚ್ ಅಧಿಕಾರಶ್ರೇಣಿಗಳ ಮತ್ತು ಭೂಮಾಲೀಕರ ಹಿತಾಸಕ್ತಿಗಳನ್ನು ರಕ್ಷಿಸಲು ಸಿದ್ಧರಾಗಿದ್ದಲ್ಲದೆ, ಸರ್ಕಾರವನ್ನು ಉರುಳಿಸಲು ಎನ್‌ಎಸ್‌ಎಸ್‌ನೊಂದಿಗೆ ಮೈತ್ರಿಯನ್ನೂ ಮಾಡಿಕೊಂಡರು.

ಕೃಷಿ ಸಂಬಂಧಗಳ ಮಸೂದೆಯ ಮೇಲಿನ ಚರ್ಚ್‌ನ ದಾಳಿಯೆನ್ನುವುದು, ಪ್ರತ್ಯಕ್ಷವಾಗಿ ಅದು ಕಮ್ಯುನಿಸ್ಟ್ ಪಕ್ಷ ಮತ್ತು ಸರ್ಕಾರದ ಮೇಲಿನ ರಾಜಕೀಯ ದಾಳಿಯ

ಭಾಗವಾಗಿತ್ತು. ಕಮ್ಯುನಿಸ್ಟ್ ಪಕ್ಷದ ನ್ಯಾಯ ಮತ್ತು ನೈತಿಕತೆಯ ಬಗ್ಗೆ ಟೀಕಿಸಿದ ಅವರು, ಕಮ್ಯುನಿಸ್ಟ್ ಪಕ್ಷದ ಬಾಣಕ್ಕೆ ಗುರಿಯಾದವರನ್ನು ಪಕ್ಷದ ವಿರುದ್ಧ ಸಂಘಟಿಸಿ ಹೋರಾಡುವಂತೆ ಪ್ರೇರೇಪಿಸಿದರು(108:05.02.58).

ಚರ್ಚ್ ಸಾಧ್ಯವಿರುವ ಎಲ್ಲ ವಿಧಾನಗಳ ಮೂಲಕ, ಕೃಷಿ ಸಂಬಂಧಗಳ ಮಸೂದೆಯ ವಿರುದ್ಧ ಮತ್ತು ಸರ್ಕಾರ ಹಾಗೂ ಕಮ್ಯುನಿಸ್ಟ್ ಪಕ್ಷದ ವಿರುದ್ಧ ಅಭಿಯಾನವನ್ನು ಶಕ್ತಗೊಳಿಸಿದರು(93:p43). ಈ ಅಭಿಯಾನವು ಸರ್ಕಾರದ ವಿರುದ್ಧ ಹಿಂಸಾತ್ಮಕ ಆಂದೋಲನಕ್ಕೆ ಕಾರಣವಾಯಿತು. ಕಾರ್ಯಸಾಧ್ಯತೆಯ ಸಲುವಾಗಿ ಅವರು, ಕುಖ್ಯಾತರಾದ ಕ್ರಿಸ್ಟೋಫರ್ ಸ್ವಯಂಸೇವಕರ ವಿಧ್ವಂಸಕ ಕೃತ್ಯಗಳನ್ನು ಅಳವಡಿಸಿಕೊಂಡರು.

ಕೃಷಿ ಸಂಬಂಧ ಮಸೂದೆಯನ್ನು ಬಲವಾಗಿ ಪ್ರತಿಭಟಿಸಿದ ಮತ್ತೊಂದು ಸಂಘಟಿತ ಪಟ್ಟಭದ್ರ ಹಿತಾಸಕ್ತಿಯ ಸಂಘವೆನ್ನುವುದು, ಖಾಸಗಿ ದೇವಸ್ವಂ ಬೋರ್ಡ್‌ಗಳು (ಖಾಸಗಿ ದೇವಸ್ಥಾನಗಳನ್ನು ಆಳುವ ಆಡಳಿತ ಮಂಡಳಿಗಳು). ಕಮ್ಯುನಿಸ್ಟ್ ಸರ್ಕಾರದ ಪ್ರಗತಿಪರವಾದ ಭೂ ನೀತಿಗಳು ತಮ್ಮ ಮೇಲೆ ಪ್ರತಿಕೂಲಕರವಾಗಿ ಪರಿಣಾಮ ಬೀರುತ್ತವೆ ಎಂದು ಅವರು ಸಹ ಭಯಪಟ್ಟರು. ಗೇಣಿ/ಹಿಡುವಳಿದಾರರ ಒಕ್ಕಲೆಬ್ಬಿಸುವಿಕೆಯನ್ನು ತಡೆಯುವ ಮೊದಲ ಸುಗ್ರೀವಾಜ್ಞೆ 1957ರಲ್ಲಿ ಸರಕಾರ ಹೊರಡಿಸಿದ ಕೂಡಲೇ ಅವರು ರಾಜ್ಯಾದ್ಯಂತ ಸಂಘಟಿತರಾದರು(99:No3411.04.57). ಈ ಸಂಸ್ಥೆಯನ್ನು ಕೇರಳ 'ಉರಾಣ್ಮದೇವಸ್ವಂ ಬೋರ್ಡ್' ಎಂದು ಕರೆಯಲಾಗುತ್ತಿತ್ತು. ಖಾಸಗಿ ದೇವಸ್ಥಾನಗಳ ಹಿತಾಸಕ್ತಿ ಕಾಪಾಡಲು ಊರಣ್ಮ ದೇವಸ್ವಂ ಬೋರ್ಡ್ ಅಥವಾ ಮಂಡಳಿ ಎಲ್ಲಾ ಮಾರ್ಗಗಳ ಮೂಲಕ ಕಮ್ಯುನಿಸ್ಟ್ ಸರ್ಕಾರದ ಮೇಲೆ ಒತ್ತಡ ಹೇರಿತು. ಆದರೂ ಅವರು ಸರ್ಕಾರವನ್ನು ಮಣಿಸುವಲ್ಲಿ ವಿಫಲರಾದರು. ಎನ್‌ಎಸ್‌ಎಸ್, ತಿರುವಾಂಕೂರು ದೇವಸ್ವಂ ಬೋರ್ಡ್, ಕೇರಳ ಭೂಮಾಲೀಕರ ಸಂಘ, ಸಣ್ಣ ಹಿಡುವಳಿದಾರರ ಸಂಘ, ಎಸ್‌ಎನ್‌ಡಿಪಿ ಮುಂತಾದ ಇತರ ಏಳು ಸಂಸ್ಥೆಗಳೊಂದಿಗೆ ಊರಣ್ಮ ದೇವಸ್ವಂ ಮಂಡಳಿ ಸಹ ಕೈಜೋಡಿಸಿದ್ದಲ್ಲದೆ, ತಮಗಾಗಿ ನ್ಯಾಯ ದೊರಕಿಸಿಕೊಳ್ಳಲು ಹೋರಾಡುವುದಕ್ಕೆ, ಅವರು ಸಾಮಾನ್ಯ ಸಮನ್ವಯ ಸಮಿತಿಯೊಂದನ್ನು ರಚಿಸಿಕೊಂಡಿತು(143:17.11.58;188:p19). ಈ ಸಮನ್ವಯ ಸಮಿತಿಯು ತನ್ನ ಚಟುವಟಿಕೆಗಳನ್ನು ಸುಲಭಗೊಳಿಸಲು, ವಿವಿಧ ವಿಭಾಗಗಳಲ್ಲಿ ಕೆಲಸ ಮಾಡಿತು. ಅವರ ಪ್ರೇರಣೆ ಮತ್ತು ಒತ್ತಡ ಕಮ್ಯುನಿಸ್ಟ್ ಸರ್ಕಾರದ ಮುಂದೆ ಏನೂ ನಡೆಯಲಿಲ್ಲ. ಅವರೂ ಕೂಡ ಬೇರೆ ಪರ್ಯಾಯವಿಲ್ಲದೆ ಕಮ್ಯುನಿಸ್ಟ್ ವಿರೋಧಿ ಹೋರಾಟದಲ್ಲಿ ಸೇರಿಕೊಂಡರು.

ಕೇರಳ ಕೃಷಿ ಸಂಬಂಧ ಮಸೂದೆಗೆ ವಿರೋಧ ಪಕ್ಷಗಳ ಕಾರ್ಯವಿಧಾನವು ಸಂಕೀರ್ಣವಾಗಿತ್ತು. ಡಿಸೆಂಬರ್ 1959ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಳವಡಿಸಿಕೊಂಡ ಭೂಸುಧಾರಣಾ ನೀತಿಗೆ ಅನುಗುಣವಾದ ಭೂಸುಧಾರಣೆಗಳನ್ನು

ಜಾರಿಗೆ ತರಲು ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುವಂತೆ ಎಐಸಿಸಿ 1958, ಡಿಸೆಂಬರ್ 14ರಂದು ಕಾಂಗ್ರೆಸ್ ಆಡಳಿತವಿರುವ ರಾಜ್ಯಗಳಿಗೆ ನಿರ್ದೇಶಿಸಿತು(33:17.12.58). ಆದರೆ ಕೇರಳದ ಪಟ್ಟಭದ್ರ ಹಿತಾಸಕ್ತಿ ಗುಂಪುಗಳ ಒತ್ತಡದಿಂದಾಗಿ ಕೆಪಿಸಿಸಿ, ಕೇರಳ ಕೃಷಿ ಸಂಬಂಧ ಮಸೂದೆಯನ್ನು ವಿರೋಧಿಸಿತು. 1958 ಫೆಬ್ರವರಿ 19–20ರ ದಿನಾಂಕಗಳಲ್ಲಿ ಕೆಪಿಸಿಸಿ ಮತ್ತು ಕಾಂಗ್ರೆಸ್ ಶಾಸಕಾಂಗ ಪಕ್ಷದ ಜಂಟಿ ಅಧಿವೇಶನ 'ಆಲುವಾ'ದಲ್ಲಿ ಸೇರಿ, ಎನ್‌ಎಸ್‌ಎಸ್, ಭೂಮಾಲೀಕರು ಮತ್ತು ಕ್ರಿಶ್ಚಿಯನ್ನರು ನಿರ್ದೇಶಿಸಿದ ತಿದ್ದುಪಡಿಗಳನ್ನು ಮಸೂದೆಗೆ ತರಬೇಕೆಂದು ಅವರು ಒತ್ತಾಯಿಸಿದರು(32:22.02.58). ಚುನಾಯಿತ ಸಮಿತಿಯ ಪಕ್ಷದ ಸದಸ್ಯರು ತಮ್ಮ ಅಸಮ್ಮತಿ ಟಿಪ್ಪಣಿಯಲ್ಲಿ ಮಸೂದೆಯ ಬಗ್ಗೆಸಮಾನವಾದ ತಿದ್ದುಪಡಿಗಳನ್ನು ಸೂಚಿಸಿದ್ದರು(125:p13-16).

ವಿಧೇಯಕದ ಎರಡನೇ ವಾಚನದ ವೇಳೆಯಲ್ಲಿ ಶಾಸಕಾಂಗದ ಕಾಂಗ್ರೆಸ್ ಸದಸ್ಯರು ಮಾಡಿದ ಭಾಷಣಗಳು ಮತ್ತು ತಿದ್ದುಪಡಿಗಳು ಜಮೀನುದಾರರ ಹಿತಾಸಕ್ತಿಗಳಿಗೆ ಪೂರಕವಾಗಿ ಕೇಂದ್ರೀಕರಿಸಿದ್ದವು. ಮಸೂದೆಯನ್ನು ಅಂಗೀಕರಿಸುವಲ್ಲಿ ವಿಳಂಬವನ್ನುಂಟು ಮಾಡಲು ಅವರು ಮಸೂದೆಯ ಆರು ಸೆಕ್ಷನ್‌ಗಳ ವಿಭಜನೆಗಾಗಿ ಒತ್ತಾಯಿಸಿದರು. ಈ ಹಂತದಲ್ಲಿ ಪಕ್ಷದ ಪ್ರತಿಭಟನೆಯನ್ನು ಪ್ರದರ್ಶಿಸುವ ಒಂದು ಮಾರ್ಗವಾಗಿ, ಶಾಸಕರಾದ ಮಾಲೆತ್ ಗೋಪಿನಾಥ ಪಿಳ್ಳ ವಿಧಾನಸಭೆಯಿಂದ ನಿರ್ಗಮಿಸಿದರು. ಕೇರಳದಲ್ಲಿ ಈ ಮಸೂದೆಯನ್ನು ಜಾರಿಗೆ ತರಲು ಸಾಧ್ಯವಿಲ್ಲವೆಂದೂ ಪ್ರತಿಪಕ್ಷಗಳು ಸರ್ಕಾರವನ್ನು ಕೆಳಗಿಳಿಸಲು ಆಂದೋಲನ ನಡೆಸಲಿದ್ದೇವೆ ಎಂದೂ' ನಿರ್ಗಮಿಸುವಾಗ ಅವರ ಹೇಳಿದರು(102:06.06.59p5601).

ಎನ್‌ಎಸ್‌ಎಸ್, ಕ್ರಿಶ್ಚಿಯನ್ ಚರ್ಚ್ ಮತ್ತು ಇತರರು ವಿಧಾನಸಭೆಯ ಹೊರಗೆ ನಡೆಸುತ್ತಿದ್ದ ಪ್ರತಿಭಟನೆಗೆ ಕಾಂಗ್ರೆಸ್ ಕಾರ್ಯಕರ್ತರು ಬೆಂಬಲ ಸೂಚಿಸುತ್ತಿದ್ದರು. ಕೊನೆಗೆ ಮಸೂದೆಯು ಸದನದಲ್ಲಿ ಜಾರಿಯಾಗುವಾಗ ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರು, ಪಿ.ಎಸ್.ಪಿ.,ಮುಸ್ಲಿಂ ಲೀಗ್ ನಾಯಕರು ಮಸೂದೆ ವಿರುದ್ಧದ ಪ್ರತಿಭಟನೆಯ ಭಾಗವಾಗಿ ವಿಧಾನಸಭೆಯಲ್ಲಿ ಹಾಜರಿರಲಿಲ್ಲ. ಕಾಂಗ್ರೆಸ್ ಸದಸ್ಯರಲ್ಲಿ ಒಬ್ಬರಾದ ಕೆ. ಕೊಚ್ಚು ಕುಟ್ಟನ್ ಈ ಸಂದರ್ಭದಲ್ಲಿ, ಸಭೆಯ ಕಲಾಪಕ್ಕೆ ಅಡ್ಡಿಪಡಿಸುವ ರೀತಿಯಲ್ಲಿ ಮಾತನಾಡಿದಾಗ, ಸ್ಪೀಕರ್ ಮಧ್ಯ ಪ್ರವೇಶಿಸಿ ತಡೆದರು(102:10.06.59p5291). ಮಸೂದೆ ಅಂಗೀಕಾರವಾದರೆ ರಾಜ್ಯದ ಶಾಂತಿ, ನೆಮ್ಮದಿಗೆ ಧಕ್ಕೆಯಾಗುತ್ತದೆ ಎಂದು ಪಕ್ಷದ ಮತ್ತೊಬ್ಬ ಸದಸ್ಯರಾದ ಕೆ.ಎಂ. ಜಾರ್ಜ್ ಆರೋಪಿಸಿದರು. ಮುಸ್ಲಿಂ ಲೀಗ್ ಮಸೂದೆಯನ್ನು ಸಂಪೂರ್ಣವಾಗಿ ವಿರೋಧಿಸಿರಲಿಲ್ಲ. ಕೃಷಿ ಸಂಬಂಧಗಳ ಮಸೂದೆಯ ಸಂದರ್ಭದಲ್ಲಿ, ಪಿಎಸ್ಪಿಗೆ ಸರ್ವಾನುಮತದ ಅಭಿಪ್ರಾಯವನ್ನು ರೂಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಏಕೆಂದರೆ ಕೆಲವು ಪ್ರಮುಖ ಪಕ್ಷದ ನಾಯಕರು ಸ್ವತಃ ಭೂಮಾಲೀಕರು ಅಥವಾ ಜಮೀನುದಾರರಾಗಿದ್ದರು. ಪಕ್ಷದ ಹಿರಿಯ ನಾಯಕ ಜಮೀನುದಾರರಿಗೆ ಅನುಕೂಲವಾಗುವ ನಿಲುವನ್ನು ತಳೆದರು(126:p4).

ಮಸೂದೆಯ ಎರಡನೇ ಓದುವ ಸಮಯದಲ್ಲಿ, ಪಿಎಸ್‌ಪಿಯ ಶಾಸಕ ಮತ್ತು ಕ್ಯಾಥೋಲಿಕ ಚರ್ಚ್‌ನ ನಾಯಕ ಜೋಸೆಫ್ ಚಾಳಿಕಾಡನ್, ಈ ಮಸೂದೆಯ ಅಗತ್ಯವನ್ನು ಪ್ರಶ್ನಿಸಿದ್ದಲ್ಲದೆ, ಅಂತಹ ಮಸೂದೆಯನ್ನು ಮಂಡಿಸುವ ಸರ್ಕಾರದ ನೈತಿಕ ಹಕ್ಕನ್ನು ಸಹ ಪ್ರಶ್ನಿಸಿ, ಉದ್ದೇಶಿತ ಮಸೂದೆಯನ್ನು ಹಿಂಪಡೆಯಬೇಕು ಎಂದು ಒತ್ತಾಯಿಸಲಾಯಿತು(102:17.04.59p2853-65). ಮಸೂದೆಯ ಅಂತಿಮ ಹಂತದಲ್ಲಿ, ಪಿಎಸ್‌ಪಿಯ ಕ್ಯಾಥೋಲಿಕ್ ಸದಸ್ಯರು ಶಾಸಕಾಂಗದ ಕಲಾಪಕ್ಕೆ ಅಡ್ಡಿಪಡಿಸುವ ರೀತಿ ಸುದೀರ್ಘವಾಗಿ ಮಾತನಾಡಿದರು(102:30.05.59p6138-42). ಜೋಸೆಫ್ ಚಳಿಕಾಡನ್ ಮೂಲಕ ಮಸೂದೆಯ ವಿರುದ್ಧ ಕ್ಯಾಥೋಲಿಕ್ ಚರ್ಚ್, ಪಿಎಸ್‌ಪಿಯ ಬೆಂಬಲವನ್ನು ಕೋರಿದರು. ಮಸೂದೆಯ ಎರಡನೇ ಮತ್ತು ಮೂರನೇ ವಾಚನದ ಸಮಯದಲ್ಲಿ, ತಿರುವಾಂಕೂರ್‌ನ ನಾಯರ್‌ಗಳಾದ ಕೆಲವು ಕಾಂಗ್ರೆಸ್ ಪಕ್ಷದ ಸದಸ್ಯರು ಮಸೂದೆಯನ್ನು ಕಟುವಾಗಿ ಟೀಕಿಸಿದರು(192:). ಸಚಿವ ಸಂಪುಟದ ಸನ್ನಿಹಿತ ಪತನದ ಬಗ್ಗೆ ಕಾಂಗ್ರೆಸ್ ಎಚ್ಚರಿಸಿತು. ಈ ಸಮಯದಲ್ಲಿ ರಾಜ್ಯದಲ್ಲಿ ಸರ್ಕಾರದ ವಿರುದ್ಧದ ಅಪಪ್ರಚಾರ ಜೋರಾಗಿಯೇ ಇತ್ತು. ಕೃಷಿ ಸಂಬಂಧ ಮಸೂದೆ ಅಂಗೀಕಾರವಾದ ಎರಡೇ ದಿನಗಳಲ್ಲಿ 'ವಿಮೋಚನಾ ಹೋರಾಟ' ಎಂದು ಕರೆಯಲ್ಪಡುವ ಆಂದೋಲನ ಔಪಚಾರಿಕವಾಗಿ ಆರಂಭವಾಯಿತು. ಎಲ್ಲಾ ವಿರೋಧ ಪಕ್ಷಗಳು ತಕ್ಷಣವೇ ಹಿಂಸಾಚಾರವನ್ನು ಪ್ರಾರಂಭಿಸಿ, ಕಮ್ಯುನಿಸ್ಟ್ ವಿರೋಧಿ ಹೋರಾಟದಲ್ಲಿ ಭಾಗವಹಿಸಿದರು.

**ದೇವಿಕುಳಂ ಉಪಚುನಾವಣೆ**

ಕೇರಳದಲ್ಲಿ ಕಮ್ಯುನಿಸ್ಟ್ ಆಳ್ವಿಕೆಗೆ ಜನಬೆಂಬಲವಿದೆಯೇ ಎಂದು ನೋಡಲು ದೇವಿಕುಳಂ ಉಪಚುನಾವಣೆ ಒಂದು ಅಗ್ನಿಪರೀಕ್ಷೆಯಾಗಿತ್ತು. ಚುನಾವಣಾ ಫಲಿತಾಂಶ ಇದನ್ನು ಸಾಬೀತುಪಡಿಸುವಂತಿತ್ತು.

ಸಮೃದ್ಧ ಕೇರಳದ ಸೃಷ್ಟಿಗೆ ಅನುಕೂಲಕರವಾದ ಶಾಸನ ಕ್ರಮಗಳು ಮತ್ತು ಆಡಳಿತ ಸುಧಾರಣಾ ಕ್ರಮಗಳನ್ನು ಅಳವಡಿಸಿಕೊಂಡ ನಂತರ ರಾಜ್ಯದಲ್ಲಿ ಕಮ್ಯುನಿಸ್ಟ್ ಪಕ್ಷ ಮತ್ತು ಸರ್ಕಾರವು, ಪಟ್ಟಭದ್ರ ಹಿತಾಸಕ್ತಿ ಹೊಂದಿದ ಗುಂಪುಗಳಿಂದ ತೀವ್ರ ವಿರೋಧವನ್ನು ಎದುರಿಸುತ್ತಿತ್ತು. ಇವರಲ್ಲಿ ಕ್ರೈಸ್ತರು ಮತ್ತು ನಾಯರ್‌ಗಳು ವಿಶೇಷ ಉಲ್ಲೇಖಾರ್ಹರು. ಏಕೆಂದರೆ ಅವರು ಸರ್ಕಾರವನ್ನು ಉರುಳಿಸಲು ತಮ್ಮ ಅನುಯಾಯಿಗಳನ್ನು ಒಟ್ಟಿಗೆ ಸೇರಿಸಿಟ್ಟುಕೊಂಡಿದ್ದರು. ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರವನ್ನು ಪ್ರತಿಪಕ್ಷಗಳು ಸಾಧ್ಯವಿರುವ ಎಲ್ಲ ರೀತಿಗಳಲ್ಲೂ ಅಪಖ್ಯಾತಿಗೊಳಿಸಲು ಪ್ರಯತ್ನಿಸುತ್ತಲೇ ಇದ್ದವು(84:21.05.58). ಕಮ್ಯುನಿಸ್ಟ್ ಆಡಳಿತದ ಅವಧಿಯ ಆಡಳಿತ ವಿರೋಧಿ ಭಾವನೆ ಬಲಗೊಳ್ಳುತ್ತಿರುವ ಆ ಸಂದರ್ಭದಲ್ಲೇ, ರಾಜ್ಯವು ಮೊದಲ ಉಪಚುನಾವಣೆಗೆ ಸಾಕ್ಷಿಯಾಗಿದ್ದು. 1957ರ ಚುನಾವಣಾ ಫಲಿತಾಂಶವನ್ನು ಚುನಾವಣಾ ನ್ಯಾಯಮಂಡಳಿ ರದ್ದು ಮಾಡಿದ ನಂತರ, ಮೇ 1958ರಲ್ಲಿ ದೇವಿಕುಳಂ

ಅಸೆಂಬ್ಲಿ ಕ್ಷೇತ್ರದಲ್ಲಿ ಉಪಚುನಾವಣೆ ಅನಿವಾರ್ಯವಾಯಿತು(107:17.05.58).

ದೇವಿಕುಳಂ ಉಪಚುನಾವಣೆಗೆ ಕೆಲವು ವಾರಗಳ ಮೊದಲು ಕಣ್ಣೂರಿನಲ್ಲಿ ನಡೆದ ಕಾಂಗ್ರೆಸ್ ಪಕ್ಷದ ಸಮಾವೇಶದಲ್ಲಿ ಜನಸಾಗರವನ್ನು ನೋಡಿ ಹರ್ಷಗೊಂಡ ರಕ್ಷಣಾ ಸಚಿವ ವಿ.ಕೆ. ಕೃಷ್ಣ ಮೆನನ್, ಹೀಗೆ ಹೇಳಿದರು:

> "ಪಾಶ್ಚಾತ್ಯ ಅರ್ಥದಲ್ಲಿ ಕಾಂಗ್ರೆಸ್ ಕೇವಲ ರಾಜಕೀಯ ಪಕ್ಷ ಮಾತ್ರವಲ್ಲ; ಬದಲಿಗೆ ಅದು ರಾಷ್ಟ್ರೀಯ ಚಳುವಳಿಯಾಗಿತ್ತು. ಆಗ ಕೇರಳದಲ್ಲಿ ಮಾತ್ರವೇ ಅದು ಚುನಾವಣಾ ಸೋಲನ್ನುಂಡ ಏಕೈಕ ಪಕ್ಷವಾಗಿತ್ತು. ಕಾಂಗ್ರೆಸಿಗರು ಶ್ರಮವಹಿಸಿ ಕೆಲಸ ಮಾಡಿ, ಜನರ ನೈತಿಕ ಮತ್ತು ಭಾವನಾತ್ಮಕ ಅನುಕಂಪವನ್ನು ಗೆಲ್ಲಬೇಕು"

ಎಂದು ಕರೆ ನೀಡಿದರು. ಹೀಗಾಗಿ, ದೇವಿಕುಳಂ ಉಪಚುನಾವಣೆಯಲ್ಲಿ, ರಾಜ್ಯವು ರಾಷ್ಟ್ರೀಯ ಮುಖ್ಯವಾಹಿನಿಗೆ ಮರಳಿತು ಎಂದು ತೋರಿಸಲೂಬಹುದು. ಉಪಚುನಾವಣೆಯಲ್ಲಿ ಕಾಂಗ್ರೆಸ್‌ನದು ಸಣ್ಣ ಗೆಲುವು ಮಾತ್ರವಾಗಿರಬಾರದು, ಅದಕ್ಕಿಂತ ಹೆಚ್ಚಾಗಿ ಕಳೆದ ಚುನಾವಣೆಯಲ್ಲಿ ಅನುಭವಿಸಿದ ಸೋಲಿಗೆ ಪ್ರಾಯಶ್ಚಿತ್ತವಾಗುವ ರೀತಿಯಲ್ಲಿ ಅದೊಂದು ಅಮೋಘ ವಿಜಯವಾಗಿ ಮಾರ್ಪಡಿಸಬೇಕಾಗಿತ್ತು (28:28.07.58).

ಕಾಂಗ್ರೆಸ್ ಅಭ್ಯರ್ಥಿ ಬಿ.ಕೆ. ನಾಯರ್ ಮತ್ತು ಸಿಪಿಐ. ನಾಮಿನಿ ರೋಸಮ್ಮ ಪುಆಸ್‌ರ ನಡುವೆ ನೇರ ಹಣಾಹಣಿಯಲ್ಲಿ ರೋಸಮ್ಮ ಅವರು 7089 ಮತಗಳ ಬಹುಮತದೊಂದಿಗೆ ಚುನಾವಣೆಯಲ್ಲಿ ಜಯಗಳಿಸಿದರು*(84:19.05.58).

ದೇವಿಕುಲಂ ಉಪಚುನಾವಣೆಯ ಬಗ್ಗೆ ಪ್ರತಿಕ್ರಿಯಿಸಿದ ಇಂಡಿಯನ್ ಎಕ್ಸ್‌ಪ್ರೆಸ್ ಸಂಪಾದಕೀಯವು ಹೀಗೆ ಹೇಳಿದೆ:

> "ಕೇರಳದ ಕಮ್ಯುನಿಸ್ಟರು ದೇವಿಕುಲಂ ಉಪಚುನಾವಣೆಯಲ್ಲಿ ಸೋಲುವುದಾದರೆ, ಸಕಾರಾತ್ಮಕ ಬೆಳವಣಿಗೆಗಳ ಬೀಜಗಳು ಭಾರತಕ್ಕೆ ಮಾತ್ರವಲ್ಲದೆ ಇಡೀ ಜಗತ್ತಿಗೆ ಸುರಕ್ಷಿತವಾಗಿರುತ್ತವೆ... ದೇವಿಕುಳಂನಲ್ಲಿ ಕಮ್ಯುನಿಸಂನ ಪ್ರೇತಬಾಧೆ ನೀಗಿಸುವುದರ ಉತ್ತಮ ಆರಂಭವನ್ನು ನಿರೀಕ್ಷಿಸಬಹುದೆಂದು, ಭಾರತದಲ್ಲಿ ಮಾತ್ರವಲ್ಲದೆ ಪ್ರಪಂಚದಾದ್ಯಂತದ ಪ್ರಜಾಪ್ರಭುತ್ವವಾದಿಗಳು ನಿರೀಕ್ಷಿಸಿದ್ದರು"(50:28.04.58).

ದೇವಿಕುಲಂನಲ್ಲಿ ಕಾಂಗ್ರೆಸ್‌ಗೆ ದಕ್ಕಿದ ಸೋಲು ಕಮ್ಯುನಿಸ್ಟ್ ವಿರೋಧಿಗಳಿಗಳು ಪ್ರತಿಪಕ್ಷಗಳು ನಡೆಸಿದ ಒಂದು ವರ್ಷದ ದ್ವೇಷಪೂರಿತ ಅಭಿಯಾನಕ್ಕೆ ಭಾರೀ ಆಘಾತವನ್ನುಂಟುಮಾಡಿತು. ಕೇರಳದಲ್ಲಿ ಕಮ್ಯುನಿಸ್ಟ್ ಆಡಳಿತದ ವಿರುದ್ಧದ ಅಭಿಯಾನದಲ್ಲಿ ಕಾಂಗ್ರೆಸ್ ಪಕ್ಷವು ಕಮ್ಯುನಿಸ್ಟ್ ವಿರೋಧಿ ಚಳುವಳಿಯ ಅವಿಭಾಜ್ಯ

---

* ರೋಸಮ್ಮ ಪುಆಸ್ 55819 ಮತಗಳನ್ನು ಪಡೆದರು. ಎ.ಕೆ.ನಾಯರ್ 48730 ಮತಗಳು, ಆರ್ ಎಸ್ಪಿ ಅಭ್ಯರ್ಥಿ ಕೆ.ಎಸ್. ಸುಬ್ರಹ್ಮಣ್ಯಂ 7890 ಮತಗಳನ್ನು ಪಡೆದಿದ್ದರು.

ಅಂಗವಾಯಿತು. ದೇವಿಕುಲಂನಲ್ಲಿ ಅಭ್ಯರ್ಥಿ ರೋಸಮ್ಮ ಪುಆಸ್‌ನ ವಿರುದ್ಧ ವಿರೋಧಪಕ್ಷವು ಎಲ್ಲಾ ಸಂಪನ್ಮೂಲಗಳನ್ನು ಒಟ್ಟುಗೂಡಿಸಿದರೂ ದೇವಿಕುಳಂನ ಕಾರ್ಮಿಕರು ಮತ್ತು ರೈತರು ಸರ್ಕಾರದ ಮೇಲೆ ಅಚಲ ನಂಬಿಕೆಯನ್ನು ವ್ಯಕ್ತಪಡಿಸಿದ್ದರು. ಹೀಗೆ ಭಾರತದ ರಾಜ್ಯಗಳ ಪೈಕಿ ಒಂದರಲ್ಲಿ ಮಾತ್ರ ಅಧಿಕಾರಕ್ಕೆ ಬಂದ ಮೊದಲ ಕಮ್ಯುನಿಸ್ಟ್ ಸರ್ಕಾರವು ವಿಶ್ವಾಸ ಮತವನ್ನೂ ಪಡೆಯಿತು(48:p165).

ಕಮ್ಯುನಿಸ್ಟರು ಮತ್ತು ಅವರನ್ನು ಬೆಂಬಲಿಸಿದ ಪ್ರಜಾಸತ್ತಾತ್ಮಕ ಘಟಕಗಳು ಒಂದೆಡೆಯಾದರೆ, ಕೋಮುವಾದಿ ಬಂಡವಾಳಶಾಹಿ ಮೈತ್ರಿ ಮತ್ತು ಕಮ್ಯುನಿಸ್ಟ್ ವಿರೋಧಿಗಳದ್ದು ಮತ್ತೊಂದೆಡೆಯಾಗಿ, ನಡೆಸಿದ ಸಾಂಕೇತಿಕ ಹೋರಾಟವಾಗಿತ್ತು ಈ ಉಪಚುನಾವಣೆ, ಎಂದು ಒಂದು ವಿಧದಲ್ಲಿ ಹೇಳಬಹುದು(40:25.05.58p2). ದೇವಿಕುಳಂನ ಮತದಾರರು, ಸಾಂಕೇತಿಕವಾಗಿ ಕೇರಳದ ಇಡೀ ಜನರ ಪರವಾಗಿ ಸ್ಪಷ್ಟವಾದ ತೀರ್ಪನ್ನು ನೀಡಿದ್ದಾರೆಂದು ಕಮ್ಯುನಿಸ್ಟ್ ಪಕ್ಷ ಹೇಳಿಕೊಂಡಿತು. ಸಾಮಾನ್ಯವಾಗಿ ದುರ್ಗಮವಾದ ಭೂಪ್ರದೇಶದ ಹೊರತಾಗಿಯೂ, ಕ್ಷೇತ್ರದಲ್ಲಿ ಶೇಕಡವಾರು ಹೆಚ್ಚಿನ ಮತದಾನ ನಡೆದಿದ್ದು, ಕಮ್ಯುನಿಸ್ಟ್ ಅಭ್ಯರ್ಥಿಯು ತನ್ನ ಕಾಂಗ್ರೆಸ್ ಪ್ರತಿಸ್ಪರ್ಧಿ ವಿರುದ್ಧ ಭರ್ಜರಿ ಜಯ ಸಾಧಿಸಿದ್ದು, ಮೇಲಿನವುಗಳನ್ನು ಸಮರ್ಥಿಸಿಕೊಳ್ಳಲು ಸಿಗುವಂಥ ಪುರಾವೆಗಳಾಗುತ್ತವೆ (40:25.05.58p2).

ದೇವಿಕುಳಂ ಚುನಾವಣೆಯ ಸೋಲು ದೆಹಲಿಯ ಕಾಂಗ್ರೆಸ್ ಹೈಕಮಾಂಡ್‌ನ್ನು ಬೆಚ್ಚಿಬೀಳಿಸಿತ್ತು. ಇಂಡಿಯನ್ ಎಕ್ಸ್‌ಪ್ರೆಸ್ ವಿಶೇಷ ಲೇಖಕರು ಹೀಗೆ ವರದಿ ಮಾಡಿದ್ದಾರೆ.

> "ಕೇರಳದ ದೇವಿಕುಳಂ ಉಪಚುನಾವಣೆಯಲ್ಲಿ ಕಾಂಗ್ರೆಸ್ ಸೋಲು ಕಾಂಗ್ರೆಸ್ ಹೈಕಮಾಂಡ್‌ಗೆ ದೊಡ್ಡ ಆಘಾತವನ್ನು ನೀಡಿದೆ. ಕಮ್ಯುನಿಸ್ಟರಿಗೆ ಇಷ್ಟೊಂದು ದೊಡ್ಡ ಬಹುಮತ ಸಿಗುತ್ತದೆ ಎಂದು ಹೈಕಮಾಂಡ್ ಒಮ್ಮೆಯೂ ಅಂದುಕೊಂಡಿರಲಿಲ್ಲ. ಕಾಂಗ್ರೆಸ್‌ಗೆ, ವಿಶೇಷವಾಗಿ ಅದರ ಕೇರಳ ಘಟಕಕ್ಕೆ, ಈ ಸೋಲು ಭಾರೀ ಹೊಡೆತವೆಂದೇ ಅದು ಪರಿಗಣಿಸಿದ್ದು. ಅಧಿಕಾರ ಬಿಟ್ಟುಕೊಟ್ಟ ನಂತರ ಪಕ್ಷವನ್ನು ಪುನರುಜ್ಜೀವನಗೊಳಿಸಲು ನಡೆಸಿದ ಪ್ರಯತ್ನಗಳ್ಯಾವುವು ಅದರ ಸ್ಥಿತಿಯನ್ನು ಉತ್ತಮಗೊಳಿಸಲು ಸಾಧ್ಯವಾಗಲಿಲ್ಲ, ಎನ್ನುವುದನ್ನು ಇದು ಸ್ಪಷ್ಟಪಡಿಸುತ್ತದೆ"(50:21.05.58).

ಕಾಂಗ್ರೆಸ್ ಪಕ್ಷದ ಕೇಂದ್ರ ನಾಯಕತ್ವವೇ ಬೆಚ್ಚಿಬಿದ್ದಿರುವಾಗ, ರಾಜ್ಯ ಕಾಂಗ್ರೆಸ್ ನಾಯಕರ ಝುಂಗಾಬಲವೆ ಉಡುಗಿ ಹೋಗಿತ್ತು. 'ಟೈಮ್ಸ್ ಆಫ್ ಇಂಡಿಯಾ' ಹೀಗೆ ವರದಿಮಾಡಿತು:

> "ದೇವಿಕುಲಂನ ಸೋಲು ಕೇರಳದ ಎಲ್ಲಾ ವಿರೋಧ ಪಕ್ಷಗಳ ನೈತಿಕ ಸ್ಥೈರ್ಯವನ್ನು ಛಿದ್ರಗೊಳಿಸಿದೆ. ಕಾಂಗ್ರೆಸ್ ಪಕ್ಷಕ್ಕೆ ಮಾತ್ರ ಹಾನಿಯಾಗಲಿಲ್ಲ. ಪಿಎಸ್‌ಪಿ, ಮುಸ್ಲಿಂ ಲೀಗ್ ಮತ್ತು ಕ್ರಾಂತಿಕಾರಿ ಸಮಾಜವಾದಿ ಪಕ್ಷ ಮುಂತಾದವು

ಭಾರೀ ಹೊಡೆತವನ್ನು ಪಡೆಯಬೇಕಾಯಿತು"(26:26-05-1958).

ಸೋಲಿನ ಆಘಾತದಿಂದ ಕಾಂಗ್ರೆಸ್‌ಗೆ ತಕ್ಷಣವೇ ವಿವರಣೆ ನೀಡಲು ಸಾಧ್ಯವಾಗಲಿಲ್ಲ. ಚುನಾವಣಾ ಫಲಿತಾಂಶಗಳು ಪ್ರಕಟವಾದಾಗ ಕೆಪಿಸಿಸಿ ಅಧ್ಯಕ್ಷ ಕೆ.ಎ. ದಾಮೋದರನ್ ಮೆನನ್‌ರವರಿಗೆ ಹೇಳಲಿಕ್ಕಿದ್ದದ್ದು ಇಷ್ಟೇ:

> "ದೇವಿಕುಲಂ ಉಪಚುನಾವಣೆಯಲ್ಲಿ ಕಾಂಗ್ರೆಸ್‌ಗೆ ದೊರಕಿದ ಸೋಲು ಸಂಪೂರ್ಣವಾಗಿ ಅನಿರೀಕ್ಷಿತವಾಗಿತ್ತು. ಕಮ್ಯುನಿಸಂ ವಿರುದ್ಧದ ಹೋರಾಟ ಹೆಚ್ಚು ದೃಢಸಂಕಲ್ಪದಿಂದ ನಡೆಸಬೇಕಾಗುತ್ತದೆ ಎನ್ನುವುದನ್ನು ಈ ಸೋಲು ನಮ್ಮನ್ನು ನೆನಪಿಸುತ್ತದೆ"(50:21-05-1958)

ಎಂದೂ ಅವರು ಹೇಳಿದರು.

ಅಲ್ಲಿಯವರೆಗೂ ಪಾಲಿಸಿಕೊಂಡು ಬಂದಿದ್ದ ಕ್ರಿಯಾ ಯೋಜನೆಗಳಿಗೆ, ಇದೀಗ ಕೇರಳದ ಇಡೀ ಜನರು ಸಿಪಿಐಗೆ ಮುಂದುವರೆಯಲು ನೀಡಿದ ಹೊಸ ಅಧಿಕಾರಪತ್ರವಾಗಿದೆಯೆಂದು, ಜೂನ್ 3, 1958ರಂದು ಕೊಯಮತ್ತೂರಿನಲ್ಲಿ ನಡೆದ ಭಾಷಣದಲ್ಲಿ ಮುಖ್ಯಮಂತ್ರಿಗಳು ಕಮ್ಯುನಿಸ್ಟ್ ಅಭ್ಯರ್ಥಿಯ ಗೆಲುವನ್ನು ವ್ಯಾಖ್ಯಾನಿಸಿದರು.

> "ಪ್ರತಿಪಕ್ಷಗಳು ಋಣಾತ್ಮಕವಾಗಿ ವರ್ತಿಸುವುದನ್ನು ಹೀಗೆಯೇ ಮುಂದುವರೆಸುವುದಾದರೆ, ಜನರು ವಿಭಜನೆಗೊಳ್ಳುವುದಲ್ಲದೆ, ಅದು ಚೀನಾದಲ್ಲಿ ನಡೆದಂತೆ ಅಂತರ್ಯುದ್ಧಕ್ಕೆ ಕಾರಣವಾಗುತ್ತದೆ. ಹಾಗೆ ಆಗುವುದಾದರೆ, ಆಗ ಕಾಂಗ್ರೆಸ್‌ಗೆ ಚಿಯಾಂಗ್ ಕೈ-ಶೇಕ್‌ನ ಅವಸ್ಥೆ ಖಂಡಿತಾ ದೊರಯಲಿದೆ."
> (84:10-06-1958;105:p59).

ಕಮ್ಯುನಿಸ್ಟ್ ಸರ್ಕಾರಕ್ಕೆ ವಿಶೇಷವಾಗಿ, ದೇವಿಕುಳಂ ಉಪಚುನಾವಣೆಯಲ್ಲಿ ಕಮ್ಯುನಿಸ್ಟರ ವಿಜಯದ ನಂತರ, ವಿರೋಧಪಕ್ಷಗಳು ತೀವ್ರ ಅಸಹಿಷ್ಣುತೆ ವ್ಯಕ್ತಪಡಿಸಿದವು. ಅವರು ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಕೋಮುವಾದಿ ಶಕ್ತಿಗಳೊಂದಿಗೆ ಸೇರಿ ಹೊಸ ತಂತ್ರಗಳನ್ನು ಹೆಣೆದರು. ದಿ ಎಕನಾಮಿಕ್ ವೀಕ್ಲಿ ಈ ರೀತಿ ಸೂಚಿಸಿತು:

> "ಕಾಂಗ್ರೆಸಿಗರು ಮತ್ತು ಪ್ರತಿಗಾಮಿಗಳು ಪ್ರಸ್ತುತ ಸರಕಾರವನ್ನು (ಕಮ್ಯುನಿಸ್ಟ್ ಪಕ್ಷದ ಬೆನ್ನೆಲುಬಾಗಿ ವರ್ತಿಸುವ) ಉರುಳಿಸಲು ನಿರ್ಧರಿಸಿ ದೃಢಪಡಿಕೊಂಡಿದ್ದಾರೆನ್ನುವ ಜನರ ನಂಬಿಕೆಯನ್ನು ಬಲಪಡಿಸಲು ಮಾತ್ರ ಇದು ಸಹಾಯ ಮಾಡಿತು. ನಂಬೂದಿರಿಪಾಡ್ ಕೊಯಮತ್ತೂರಿನಲ್ಲಿ ಮಾಡಿದ ಭಾಷಣವನ್ನು ಈ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ಕಮ್ಯುನಿಸ್ಟರನ್ನು ಉಚ್ಚಾಟಿಸಲು ಮತ್ತು ಅವಮಾನಿತರಾದ ಕಾಂಗ್ರೆಸ್ಸಿಗರನ್ನು ಅಧಿಕಾರಕ್ಕೆ ತರಲು ತಂತ್ರಗಳನ್ನು ರೂಪಿಸುವುದೆಂದರೆ, ಚಿಯಾಂಗ್ ಕೈ-ಶೇಕ್ ಮತ್ತು ಸಿಂಗ್‌ಮನ್ ರೀಸ್‌ನನ್ನು ಭಾರತದ ನೆಲದಲ್ಲಿ ಕಿತ್ತುನೆಡುವುದಕ್ಕೆ ಸಮಾನವಾದ ಮೂರ್ಖತನದ್ದಾಗಿರುತ್ತದೆ(86:16.08.58 p1075).

ಆದರೆ, ಮುಖ್ಯಮಂತ್ರಿಗಳ ಭಾಷಣದಲ್ಲಿ ಒಂದು ಯುದ್ಧ ಘೋಷಣೆಯ ಪ್ರಸ್ತಾಪವನ್ನು ವೀಕ್ಷಿಸಲು ವಿರೋಧಪಕ್ಷಗಳು ನಿರ್ಧರಿಸಿದವು. ಪಕ್ಷದ ನಿಜವಾದ ಗುರಿಗಳನ್ನು ಬಹಿರಂಗಗೊಳಿಸಲು ಮತ್ತು ಅಮೃತಸರ ಸಮ್ಮೇಳನದಲ್ಲಿ ಸೃಷ್ಟಿಸಿದ ಭ್ರಮೆಯನ್ನು ಜನರ ಮನಸ್ಸಿನಿಂದ ಹೊರಹಾಕಲು ನಂಬೂದಿರಿಪಾಡ್ ತೋರಿಸಿದ ಔಚಿತ್ಯದಲ್ಲಿ ವಿರೋಧಪಕ್ಷಗಳು ಸಂತೃಪ್ತಿಗೊಂಡವು(194:07.06.58p1). ಕೊಯಮತ್ತೂರು ಭಾಷಣವನ್ನು ವ್ಯಾಪಕವಾಗಿ ತಪ್ಪಾಗಿ ಅರ್ಥೈಸಲಾಯಿತು. ನಂತರದ ದಿನಗಳಲ್ಲಿ ಕೇರಳದ ರಾಜಕೀಯ ಚರ್ಚೆಗಳಲ್ಲಿ ಅದು ದೊಡ್ಡ ವಿವಾದವನ್ನು ಸೃಷ್ಟಿಸಿತು. ಮುಖ್ಯಮಂತ್ರಿಯನ್ನು ಟೀಕಿಸುವ ಹಲವಾರು ಪತ್ರಿಕೆಗಳು ಸಂಪಾದಕೀಯ ಲೇಖನಗಳನ್ನು ಬರೆದವು (7:11,20.07.58143:07.07.58). ಮುಖ್ಯಮಂತ್ರಿಯವರ 'ಅಂತರ್ಯುದ್ಧ ಭಾಷಣ' 1958 ಜುಲೈ 4ರ ರಾಜ್ಯ ವಿಧಾನಮಂಡಲದಲ್ಲಿ ಬಿಸಿಬಿಸಿ ಚರ್ಚೆಗೆ ಗ್ರಾಸವಾಯಿತು(102:04.07.58). ಇತ್ತೀಚಿನ ನನ್ನ ಭಾಷಣಗಳು ಮತ್ತು ಹೇಳಿಕೆಗಳು ಕಮ್ಯುನಿಸ್ಟ್ ಪಕ್ಷವು ರಾಜ್ಯದಲ್ಲಿ ಅಂತರ್ಯುದ್ಧದಂತಹ ವಾತಾವರಣವನ್ನು ಸೃಷ್ಟಿಸುತ್ತದೆ ಎನ್ನುವ ಅರ್ಥವನ್ನು ಕೊಡುವುದಿಲ್ಲ, ಎಂದು ಮುಖ್ಯಮಂತ್ರಿ ಇಎಂಎಸ್ ವಿಧಾನಸಭೆಯಲ್ಲಿ ಒತ್ತಿ ಹೇಳಿದರು. ಇದಕ್ಕೆ ವಿರುದ್ಧವಾಗಿ, ರಾಜ್ಯದಲ್ಲಿ ಅಂತಹ ಪರಿಸ್ಥಿತಿ ವಿಕೋಪಕ್ಕೆ ಹೋಗದಂತೆ ತಡೆಯಲು ಪಕ್ಷ ತನ್ನ ಗರಿಷ್ಠ ಪ್ರಯತ್ನ ಮಾಡುತ್ತದೆ(84:05.07.58).

ದಿ ಹಿಂದೂ ಪತ್ರಿಕೆ ಹೀಗೆ ವರದಿ ಮಾಡಿತು:

"ಕೊಯಮತ್ತೂರಿನಲ್ಲಿಯೂ ನಂತರ ಕೂನೂರಿನಲ್ಲೂ ಅದಕ್ಕೂ ಮೊದಲು ಕೊಟ್ಟಾಯಂ ಮತ್ತು ತಿರುವನಂತಪುರಂನಲ್ಲಿ ನಡೆಸಿದ ನನ್ನ ಭಾಷಣಗಳಲ್ಲೂ ನಾನು ಹೇಳಿದ್ದೇನೆಂದರೆ, ಕೇರಳದಲ್ಲಿ ವಿರೋಧ ಪಕ್ಷವು ಅದರ ಪ್ರಸ್ತುತ ಕಮ್ಯುನಿಸ್ಟ್ ವಿರೋಧಿ ಧೋರಣೆಯನ್ನು ಮುಂದುವರಿಸಿದ್ದೇ ಆದರೆ, ಚೀನಾದ ಪರಿಸ್ಥಿತಿ ಇಲ್ಲಿಯೂ ಉದ್ಭವವಾಗುತ್ತದೆ, ಎನ್ನುವುದಾಗಿತ್ತು. ಅವರ ಭಾಷಣಗಳಲ್ಲಿ ಮತ್ತು ಹೇಳಿಕೆಗಳಲ್ಲಿ 'ಚೀನಾ ಮಾರ್ಗ'ದ ಕುರಿತು ಪರಾಮರ್ಶೆ ನಡೆಸಿದ್ದರ ಬಗ್ಗೆ ಅವರು ನಿರಾಕರಿಸಿದರು. ನಾನೊಬ್ಬ ಕಮ್ಯುನಿಸ್ಟ್‌ನಾಗಿದ್ದೇನೆಂದೂ ಮತ್ತು ಚೀನಾ ಆಕಸ್ಮಿಕವಾಗಿ ಕಮ್ಯುನಿಸ್ಟ್ ದೇಶವಾಯಿತು ಎಂದೂ ಅವರು ಹೇಳಿದರು. ಭಾರತಕ್ಕೆ ಇಂದಿನ ಪರಿಸ್ಥಿತಿಯಲ್ಲಿ ಬೇಕಿರುವುದು ಜಾತಿ, ಧರ್ಮ, ರಾಜಕೀಯ ಭೇದವಿಲ್ಲದ ಏಕತೆಯೆಂದೂ ಅವರು ಹೇಳಿದರು. ಯಾರೂ ಯಾರನ್ನೂ ಟೀಕಿಸುವುದು ಬೇಡವೆನ್ನುವುದಾಗಲೀ ಸರ್ಕಾರವನ್ನು ನಿಯಂತ್ರಿಸುವ ಪಕ್ಷದ ವಿರುದ್ಧ ಐಕ್ಯರಂಗ ರಚಿಸಬಾರದೆನ್ನುವುದಾಗಲೀ ನನ್ನ ಉದ್ದೇಶವಾಗಿರಲಿಲ್ಲ. ಆದರೆ ಇಷ್ಟೆಲ್ಲ ಮಾಡುವಾಗ ಅತ್ಯವಶ್ಯಕವಾಗಿ ತಿಳಿದುಕೊಳ್ಳಬೇಕಾದ ಒಂದು ವಿಚಾರವೇನೆಂದರೆ, ಕೆಲವು ವಿಷಯಗಳು ಸಾಮಾನ್ಯವಾಗಿ ಎಲ್ಲರಿಗೂ ಅನ್ವಯಿಸುವಂತೆ ತಮಗೂ ಅನ್ವಯವಾಗುತ್ತದೆ, ಎಂದು ಅವರು ಅರ್ಥಮಾಡಿಕೊಳ್ಳಬೇಕು, ಎನ್ನುವುದು(84:05.07.58).

ಪ್ರಧಾನಿ ಜವಾಹರಲಾಲ್ ನೆಹರೂ ಅವರು ತಮ್ಮ ವಿವಾದಾತ್ಮಕ 'ಅಂತರ್ಯುದ್ಧ ಭಾಷಣ' ಕುರಿತು ಮುಖ್ಯಮಂತ್ರಿಯಿಂದ ಸ್ಪಷ್ಟನೆ ಕೇಳಿದರು.

> 'ವಿರೋಧಿಸಬಾರದು ಎಂದು ಭಾರತದ ಇತರ ಭಾಗಗಳಲ್ಲಿನ ಕಮ್ಯುನಿಸ್ಟರಿಗೆ, ನಂಬೂದಿರಿಪಾಡ್ ಕೇಳುವರೇ? ಚುನಾವಣೆಯಲ್ಲಿ ಸೋತರೂ ಕೇರಳದಲ್ಲಿ ಕಮ್ಯುನಿಸ್ಟರು ಅಧಿಕಾರದಲ್ಲಿ ಮುಂದುವರಿಯುತ್ತಾರಾ? ಚಿಯಾಂಗ್ ಕೈ-ಶೇಕ್ ಅಡಿಯಲ್ಲಿ ಭಾರತವನ್ನು ಚೀನಾದೊಂದಿಗೆ ಹೋಲಿಸಲಿಕ್ಕಿರುವ ಸಮರ್ಥನೆಯಾದರೂ ಏನು?'

...ಈ ರೀತಿಯಲ್ಲಿದ್ದವು ಅವರ ಪ್ರಶ್ನೆಗಳು(105:p59). ಆದರೆ ಈ ರೀತಿಯ ಶಿಸ್ತಿನ ರೀತಿಯ ಮಾತುಗಳಿಗೆ ನಂಬೂದಿರಿಪಾಡ್ ಅವರ ಪ್ರತಿಕ್ರಿಯೆ ತುಂಬಾ ಸೌಮ್ಯವಾಗಿತ್ತು.

> ಕೇರಳದಲ್ಲಿ ತನ್ನ ಭಾಷಣಗಳು ರಾಷ್ಟ್ರೀಯ ಏಕತೆಯ ಮೇಲೆಯೇ ಕೇಂದ್ರೀಕೃತವಾಗಿದ್ದವು ಎಂದು ಅವರು ಪ್ರಧಾನಿಗೆ ತಿಳಿಸಿದರು. 1936ರಲ್ಲಿ ಬ್ರಿಟಿಷರ ವಿರುದ್ಧ ಐಕ್ಯ ಹೋರಾಟಕ್ಕೆ ನೆಹರೂ ಕರೆ ನೀಡಿದ್ದನ್ನೂ ತಾವು ತಮ್ಮ ಭಾಷಣದ ವೇಳೆ ನೆನಪಿಸಿಕೊಂಡಿದ್ದಾಗಿ ತಿಳಿಸಿದರು. ಈಗ ಪರಿಗಣನೆಯಲ್ಲಿರುವ ಸಮಾಜವಾದಿ ಶೈಲಿಯ ರಾಷ್ಟ್ರ ನಿರ್ಮಾಣ ಯೋಜನೆಯನ್ನು ಕಮ್ಯುನಿಸ್ಟ್ ಪಕ್ಷವು ಸರ್ವಾನುಮತದಿಂದ ಅಂಗೀಕರಿಸಿರುತ್ತದೆ, ಆದರೆ ಒಂದು ರಾಷ್ಟ್ರದಂತೆ ನಡೆದುಕೊಳ್ಳುವ ಕಾಂಗ್ರೆಸ್ ಧೋರಣೆಯು, ಇಂಥ ಜಂಟಿ ಪ್ರಯತ್ನಗಳಿಗೆ ಅಡ್ಡಿಯಾಗುತ್ತಿರುವಂತೆ ತೋರುತ್ತಿದೆ. ವಿಭಜನಾ ನೀತಿಯಲ್ಲಿ ಅಂತರ್ಗತವಾಗಿರುವ ಅಪಾಯಗಳೇ ಆ ರೀತಿ ಮಾತನಾಡಲು ತನ್ನನ್ನು ಪ್ರೇರೇಪಿಸಿದ್ದು. ಈ ನೀತಿಯನ್ನು ನಿಯಂತ್ರಿಸದೆ ಬಿಟ್ಟರೆ ಅದು ದೇಶ ಛಿದ್ರವಾಗಲೂ ಕೆಲವೊಮ್ಮೆ ಅಂತರ್ಯುದ್ಧಕ್ಕೂ ಕಾರಣವಾಗಬಹುದು. ಭಾರತದಲ್ಲಿಯ ಸದ್ಯದ ಪರಿಸ್ಥಿತಿಗಳನ್ನು ಚಿಯಾಂಗ್ ಕೈ-ಶೇಕ್‌ನ ಅಡಿಯಲ್ಲಿರುವ ಚೈನಾದಲ್ಲಿರುವುದರ ಬಗ್ಗೆ ತಾನು ತಾರತಮ್ಯತೆ ಮಾಡಿಲ್ಲ, ಎಂದವರು ಸ್ಪಷ್ಟಪಡಿಸಿದರು(105:p60).

ಜುಲೈ 9, 1958ರಲ್ಲಿ ಪಿಎಸ್‌ಪಿಯು ಮುಖ್ಯಮಂತ್ರಿಯವರ ಭಾಷಣದ ಕುರಿತು ಜನರಿಗೆ ಎಚ್ಚರಿಕೆ ನೀಡುತ್ತಾ, ಕಮ್ಯುನಿಸ್ಟರು ಸೃಷ್ಟಿಸುವ ಅಂತರ್ಯುದ್ಧಕ್ಕೆ ಸಿದ್ಧರಾಗುವಂತೆ ಸೂಚನೆ ನೀಡಿತು(143:11.07.58;84:11.07.58). ಕೊಯಮತ್ತೂರಿನಲ್ಲಿ ಮುಖ್ಯಮಂತ್ರಿ ಎತ್ತಿದ ಸವಾಲನ್ನು ಸ್ವೀಕರಿಸಲು ತಯಾರಾಗಿರುವುದಾಗಿ ಜುಲೈ 18, 1958ರಂದು ವಿರೋಧ ಪಕ್ಷದ ನಾಯಕ ಪಿ.ಟಿ. ಚಾಕೋ ಘೋಷಿಸಿದರು.

> "ಪ್ರಜಾಸತ್ತಾತ್ಮಕ ವಿಧಾನಗಳ ಮೂಲಕ ತತ್ವರಹಿತ ಪಕ್ಷವಾದ ಸಿಪಿಐಯನ್ನು ಒಂಟಿಯಾಗಿಸಲು ಮತ್ತು ನಿರ್ಮೂಲನೆ ಮಾಡಲು ನಾವು ನಿರ್ಧರಿಸಿದ್ದೇವೆ"

ಎಂದು ಅವರು ಹೇಳಿದರು(50:19.07.58).

ಆದರೆ, ಮುಖ್ಯಮಂತ್ರಿಗಳ ಭಾಷಣ, ಅದು ಸೃಷ್ಟಿಸಿದ ಪ್ರತಿಕ್ರಿಯೆಗಳ ಆಧಾರದ ಮೇಲೆ ಮೌಲ್ಯಮಾಪನ ಮಾಡಿದಾಗ, ಅದು ಆ ಕೂಡಲೇ ನಿರ್ಧರಿಸಿಕೊಂಡು

ಹೇಳಿದ ಮಾತುಗಳಾಗದೆ, ಆ ಸಂದರ್ಭದಲ್ಲಷ್ಟೆ ಮನದಲ್ಲಿ ಮೂಡಿಬಂದ ಒಂದು ಸಂಗತಿಯಾಗಿತ್ತು. ಬಹುಶಃ ಕಮ್ಯುನಿಸ್ಟರು ಮತ್ತು ಅವರ ಬೆಂಬಲಿಗರಲ್ಲಿ ರೋಚಕತೆ ಮೂಡಿಸುವ ಉದ್ದೇಶದಿಂದ ಆ ರೀತಿ ಭಾಷಣ ಮಾಡಿದ್ದಾಗಿರಬಹುದು. ಆದರೆ ವಾಸ್ತವವಾಗಿ ಇದು, ಎಲ್ಲಾ ವಿರೋಧಪಕ್ಷಗಳನ್ನು ಸರ್ಕಾರದ ವಿರುದ್ಧ ಒಗ್ಗೂಡಿಸಲು ಪ್ರೇರೇಪಿಸಿತು.

ಉಪಚುನಾವಣೆಯ ನಂತರದ ಅವಧಿ ಜೂನ್ 1958ರಿಂದ ಆಗಸ್ಟ್‌ವರೆಗೆ ರಾಜ್ಯವು ವ್ಯಾಪಕ ಅಶಾಂತಿಗೆ ಸಾಕ್ಷಿಯಾಗಿತ್ತು. ಸೀತಾರಾಮ್ ಮಿಲ್ ಆಂದೋಲನ, ಒಂದಾಣೆ ದೋಣಿ ಕೂಲಿಗೆ ಸಂಬಂಧಿಸಿದಂತೆ ಜಲ ಸಾರಿಗೆ ಇಲಾಖೆಯ ವಿರುದ್ಧ ಮಧ್ಯಮವರ್ಗದ ಯುವಕರು ನಡೆಸಿದ ಮುಷ್ಕರ ಮುಂತಾದವು ಈ ಸಂದರ್ಭದಲ್ಲಿ ವಿಶೇಷ ಉಲ್ಲೇಖಾರ್ಹವಾಗಿದೆ.

## ಸೀತಾರಾಮ್ ಮಿಲ್ ಆಂದೋಲನ

ಕಾಂಗ್ರೆಸ್ ನೇತೃತ್ವದ ಐಎನ್‌ಟಿಯುಸಿ ಯು ತ್ರಿಶೂರ್‌ನಲ್ಲಿ ಸೀತಾರಾಮ್ ಮಿಲ್ ಕಾರ್ಮಿಕ ಮುಷ್ಕರವನ್ನು ಆಯೋಜಿಸಿತ್ತು. ತಿರುವಾಂಕೂರು-ಕೊಚ್ಚಿನ್ ಪ್ರದೇಶದ ಮಾಜಿ ಮುಖ್ಯಮಂತ್ರಿ ಪಣಂಪಳ್ಳಿ ಗೋವಿಂದಮೆನನ್ ಅವರ ನಿಯಂತ್ರಣದಲ್ಲಿತ್ತು ಆ ಯೂನಿಯನ್. ಹಿಂಸಾಚಾರದ ಮೂಲಕ ಸರ್ಕಾರವನ್ನು ಉರುಳಿಸುವ ಪ್ರಯತ್ನಕ್ಕೆ ಇದು ಉತ್ತಮ ಉದಾಹರಣೆಯಾಗಿತ್ತು(113:p34). ಈ ಕಾರ್ಮಿಕ ಆಂದೋಲನವು ರಕ್ತಸಿಕ್ತ ಘರ್ಷಣೆಯಲ್ಲಿ ಕೊನೆಗೊಂಡಿತ್ತು. ಆದರೆ ಈ ಆಂದೋಲನದ ಅತ್ಯಂತ ಗಮನಾರ್ಹ ಅಂಶವೆಂದರೆ, ಕಾರ್ಮಿಕ ಸಂಘದ ಅಧ್ಯಕ್ಷರು, ಕಾಂಗ್ರೆಸ್ ನಾಯಕರು ಆದ ಪಣಂಪಳ್ಳಿ ಗೋವಿಂದಮೇನನ್ ಈ ಆಂದೋಲನವನ್ನು ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ 'ವಿಮೋಚನಾ ಹೋರಾಟ' ಎಂದು ಭಾಷಣಗಳ ಮೂಲಕ ಬಿಂಬಿಸಿದರು (84:06.07.58). ಹೀಗೆ ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಹಿಂಸಾತ್ಮಕ ದಂಗೆಯನ್ನು 'ವಿಮೋಚನಾ ಹೋರಾಟ' ಎಂದು ವ್ಯಾಖ್ಯಾನಿಸಿದ್ದರ ಗೌರವ ಪನಂಪಳ್ಳಿ ಗೋವಿಂದ ಮೆನನ್‌ರಿಗೆ ಸಲ್ಲುತ್ತದೆ(195:p50).

ಸೀತಾರಾಮ್ ಮಿಲ್‌ಗಳನ್ನು ಅಡಮಾನದ ಕಾರಣಗಳಿಂದಾಗಿ ಕೇರಳ ಸರ್ಕಾರವು ನಿರ್ವಹಿಸುತ್ತಿತ್ತು. ಜೂನ್ 1958ರಲ್ಲಿ ಇಲ್ಲಿ ಉತ್ಪಾದನೆಯ ವೇಗವನ್ನು ಹೆಚ್ಚಿಸುವ ಒಂದು ಉಪಕ್ರಮ ಜಾರಿಯಾಯಿತು. ಹೆಚ್ಚಿನ ಕಾರ್ಮಿಕರು ಉಪಕ್ರಮವನ್ನು ಬೆಂಬಲಿಸಿದರೆಂದೂ ಹೇಳಲಾಗುತ್ತದೆ. ಸಮಯ ಬಂಧಿತವಾಗಿ ರೀಲು ತೆಗೆಯುವ ನೂಲುಗಳು ಹೇರಳವಾದ ಕಾರಣ, 12 ಕಾರ್ಮಿಕರನ್ನು 'ವೈಂಡಿಂಗ್' ವಿಭಾಗದಿಂದ 'ರೀಲಿಂಗ್' ವಿಭಾಗಕ್ಕೆ ಬದಲಾಯಿಸಲು ಮೇನೆಜ್‌ಮೆಂಟ್ ನಿರ್ಧರಿಸಿತು. 12ರಲ್ಲಿ ಏಳು ಮಂದಿ ಈ ವ್ಯವಸ್ಥೆಯನ್ನು ಸ್ವೀಕರಿಸಿದರು(40:10.08.58). ಆದರೆ ಐಎನ್‌ಟಿಯುಸಿಗೆ

ಸೇರಿದ ಐವರು ಹೊಸ ವಿಭಾಗದಲ್ಲಿ ಕೆಲಸ ಮಾಡಲು ಸಿದ್ಧರಾಗಲಿಲ್ಲ(84:03.06.58). ಈ ಬದಲಾವಣೆಯು ತಾತ್ಕಾಲಿಕವೆಂದೂ ಅವರ ಸಂಭಾವನೆಯನ್ನೇನು ಕಡಿಮೆ ಮಾಡುವುದಿಲ್ಲವೆಂದೂ ಮೆನೇಜ್‌ಮೆಂಟ್ ಖಚಿತವಾಗಿ ತಿಳಿಸಿತು(84:03.06.58). ಈ ವ್ಯವಸ್ಥೆಯನ್ನು ರದ್ದುಗೊಳಿಸಬೇಕೆಂದು ಪಣಂಪಳ್ಳಿ ಗೋವಿಂದ ಮೇನನ್ ಆಗ್ರಹಿಸಿದರು(84:06.06.58). ಉತ್ಪಾದನಾ ವಿಧಾನಗಳನ್ನು ಸುಧಾರಿಸಲು ಮೆನೇಜ್‌ಮೆಂಟ್‌ನ ಹಕ್ಕುಗಳನ್ನು ನಿಷೇಧಿಸಲಾಗುತ್ತಿದೆ ಎಂದು ಅಧಿಕಾರಿಗಳು ಇದನ್ನು ಭಾವಿಸಿದರು. ನಂತರ ನಡೆದ ಮುಷ್ಕರದಲ್ಲಿ ಒಟ್ಟು 2117 ಕಾರ್ಮಿಕರ ಪೈಕಿ 182 ಕಾರ್ಮಿಕರು ಮಾತ್ರಭಾಗವಹಿಸಿದ್ದರು. ಸಮಾಲೋಚನೆಯ ಮೂಲಕ ಇತ್ಯರ್ಥಕ್ಕೆ ಬರಲು ಆಡಳಿತ ಬಯಸಿತು. ಆದರೆ ಐ.ಎನ್.ಟಿ.ಯು.ಸಿ ಮುಖಂಡರ ಕಪಿಮುಷ್ಠಿ ತರಹದ ಹಠದಿಂದಾಗಿ ಮಾತುಕತೆ ವಿಫಲವಾಯಿತು. ಕೆ.ಐ. ವೇಲಾಯುಧನ್ ಮತ್ತು ಕೊಚ್ಚುಕುಟ್ಟನ್‌ರ ನೇತೃತ್ವದಲ್ಲಿ ಗುಂಪು ಪಿಕೆಟಿಂಗ್ ನಡೆಯಿತು. ಈ ಮುಖಂಡರನ್ನು ಕಲೆಕ್ಟರೇಟ್ ಮುಂದೆ ಪಿಕೆಟಿಂಗ್ ಮಾಡಿದ್ದಕ್ಕಾಗಿ ಬಂಧಿಸಲಾಯಿತು. ನಂತರ ಸರ್ಕಾರ ಪ್ರಕರಣವನ್ನು ನ್ಯಾಯಾಲಯದ ವಿಚಾರಣೆಗೆ ಬಿಡಲಾಯಿತು. ಆದರೆ, ಈ ಎರಡು ಐಎನ್‌ಟಿಯುಸಿ ಕಾರ್ಮಿಕರು ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು(84:06.06.58).

ಜುಲೈ 27, 1958ರಂದು ಸರ್ಕಾರ ಮತ್ತು ಕಾರ್ಮಿಕ ಕಾಂಗ್ರೆಸ್ ನಾಯಕರ ನಡುವೆ ಒಂದು ರಾಜಿಸೂತ್ರ ಏರ್ಪಟ್ಟಿತು. ಈ ರಾಜಿಗೆ ಅನುಗುಣವಾಗಿ 'ವೈಂಡಿಂಗ್' ವಿಭಾಗದಿಂದ 'ರೀಲಿಂಗ್' ವಿಭಾಗಕ್ಕೆ ವರ್ಗಾವಣೆಗೊಂಡ ಕಾರ್ಮಿಕರು, ಆಗಸ್ಟ್ 15ರವರೆಗೆ ಮಾತ್ರ ಹೊಸ ವಿಭಾಗದಲ್ಲಿ ಕೆಲಸ ಮಾಡಬೇಕಾಗುತ್ತದೆ. ಜೈಲಿನಿಂದ ಬಿಡುಗಡೆಗೊಂಡ ಕಾರ್ಮಿಕರನ್ನು ಮುಷ್ಕರದಲ್ಲಿ ಭಾಗವಹಿಸಿದ್ದಕ್ಕಾಗಿ ಪ್ರತೀಕಾರ ತೀರಿಸಲಾಗುವುದಿಲ್ಲವೆಂದೂ ಕಾರ್ಮಿಕ ವಿವಾದದಿಂದ ಅವರು ಮರು ಉದ್ಯೋಗ ಪಡೆಯುತ್ತಾರೆಂದೂ ಎಲ್ಲಾ ಸಂಬಂಧಿತ ಕ್ರಿಮಿನಲ್ ಮೊಕದ್ದಮೆಗಳನ್ನು ಹಿಂಪಡೆಯಲಾಗುವುದು ಎಂದೂ ಶಿಕ್ಷೆಯಿಂದ ರಿಯಾಯಿತಿ ನೀಡುವುದಾಗಿಯೂ ರಾಜಿ ಸಂಧಾನದ ಭಾಗವಾಗಿ ಸರ್ಕಾರ ಪರಿಹಾರ ನೀಡುವುದಾಗಿಯೂ ಭರವಸೆ ನೀಡಿತು(40:10.08.58). ಉತ್ಪಾದನೆಗೆ ಸಮಂಜಸವಾದ ರೀತಿಯಲ್ಲಿ ಕೆಲಸಗಾರರನ್ನು ನಿಯೋಜಿಸಲು ಮೆನೇಜ್‌ಮೆಂಟ್‌ನ ಹಕ್ಕನ್ನು ಐಎನ್‌ಟಿಯುಸಿ ಅಂಗೀಕರಿಸಿತು(107:28.07.58).

ಒಂದು ಕಾರ್ಮಿಕ ವಿವಾದಕ್ಕೆ ಬದಲು, ಸೀತಾರಾಮ್ ಮಿಲ್ ವಿಚಾರವನ್ನು ರಾಜಕೀಯ ಪ್ರೇರಿತವಾದ ಹೋರಾಟವನ್ನಾಗಿ ಮಾಡಲಾಗಿತ್ತು. ಕಮ್ಯುನಿಸ್ಟ್ ಸರ್ಕಾರದ ಅಡಿಯಲ್ಲಿ ಆಡಳಿತ ಮತ್ತು ಕಾರ್ಮಿಕ ಕಾಂಗ್ರೆಸ್ ಕಾರ್ಯಕರ್ತರ ನಡುವಿನ ಘರ್ಷಣೆಯನ್ನಾಗಿ ಅದನ್ನು ಪರಿವರ್ತಿಸುವ ಸಲುವಾಗಿ, ಪ್ರತಿಭಟನಾಕಾರರು, ಸತ್ಯಾಗ್ರಹ, ಪ್ರತಿಭಟನೆಗಳು, ಹರತಾಳಗಳು, ಪ್ರದರ್ಶನ ಮುಂತಾದವುಗಳಲ್ಲದೆ

ಹಿಂಸಾತ್ಮಕ ಕೃತ್ಯಗಳನ್ನೂ ಅವರು ಕೈಗೊಳ್ಳುತ್ತಿದ್ದರು(33:03.07.58; 143:08.07.58). ಐಎನ್‌ಟಿಯುಸಿ ಯನ್ನು ಅಳಿಸಿಹಾಕುವುದೇ ಸರ್ಕಾರದ ಉದ್ದೇಶ ಎಂದು ಕಾಂಗ್ರೆಸ್ ಭಾವಿಸಿತು. ಆದರೆ ಕಮ್ಯುನಿಸ್ಟರು ಸರ್ಕಾರವನ್ನು ಉರುಳಿಸಲು ಹೂಡಿದ ಸಂಚು ಎಂದು, ಇದನ್ನು ಕಮ್ಯುನಿಸ್ಟರು ವೀಕ್ಷಿಸಿದರು.

ತ್ರಿಶೂರ್ ಜಿಲ್ಲೆಯಾದ್ಯಂತ ಸೀತಾರಾಮ್ ಮಿಲ್ ಆಂದೋಲನದ ಅಲೆಗಳು ಹರಡಿತು. ನಾಯಕರು ಪ್ರಸ್ತಾಪಿಸಿದಂತೆ, ವಿರೋಧ ಪಕ್ಷಗಳು ಮತ್ತು ಜಿಲ್ಲೆಯ ಕಮ್ಯುನಿಸ್ಟ್ ವಿರೋಧಿಗಳು, ಇದನ್ನು ಕಮ್ಯುನಿಸ್ಟ್ ವಿರೋಧಿ ಶಕ್ತಿಗಳ ಸಮನ್ವಯಕ್ಕೆ ಸುವರ್ಣಾವಕಾಶ ಎಂದು ಕಂಡುಕೊಂಡರು. ಹಾಗೆ, ಸರ್ಕಾರದ ವಿರುದ್ಧ ಅವರ ಹೋರಾಟವನ್ನು ತೀವ್ರಗೊಳಿಸುವುದೇ ಅವರ ಪ್ರಮುಖ ಗುರಿಯಾಗಿತ್ತು(195:p50). ಈ ಸಂದರ್ಭದಲ್ಲಿ, ಫಾದರ್ ವಡಕ್ಕನ್ ಮತ್ತು ಇತರರು ಸರ್ಕಾರದ ವಿರುದ್ಧ ಸ್ವಯಂಸೇವಕಸೇನೆಯನ್ನು ಸಜ್ಜುಗೊಳಿಸಿದರು(84:29.08.58).

ಸೀತಾರಾಮ್ ಮಿಲ್ ವಿವಾದವು ಕೆಲವು ಪ್ರಶ್ನೆಗಳನ್ನು ಹುಟ್ಟುಹಾಕಿರುತ್ತವೆ. ಮೇನೆಜ್ಮೆಂಟಿನವರಿಗೆ ಕಾರ್ಮಿಕರನ್ನು ಒಂದು ವಿಭಾಗದಿಂದ ಇನ್ನೊಂದಕ್ಕೆ ವರ್ಗಾಯಿಸುವುದಕ್ಕೆ ಸಾಧ್ಯವೇ? ಇದರಲ್ಲಿ ಅನ್ಯಾಯದ ಸಂಗತಿಗಳೇನಾದರೂ ಇದ್ದಿದ್ದರೆ,ಐಎನ್‌ಟಿಯುಸಿಗೆ ಯಾತಕ್ಕಾಗಿ ಮುಷ್ಕರವನ್ನು ಆಯೋಜಿಸಲು ಸಾಧ್ಯವಾಗಲಿಲ್ಲ..? (86:16.08.58p1075) ಐಎನ್‌ಟಿಯುಸಿಗೆ ಅಲ್ಲಿ ಕೆಲವೇ ಕೆಲವು ಅನುಯಾಯಿಗಳಿದ್ದರು ಎಂಬುದು ಸ್ಪಷ್ಟವಾಗಿದೆ. ಅಲ್ಲದಿದ್ದರೆ, ಅವರು ಗಿರಣಿ ಮತ್ತು ಕಲೆಕ್ಟರೇಟ್ ಗೇಟ್‌ಗಳಲ್ಲಿ ಪಿಕೆಟಿಂಗ್ ಮಾಡುವುದಕ್ಕಾಗಿ ಕಾರ್ಮಿಕರಲ್ಲದವರನ್ನು ಕರೆತರುತ್ತಿರಲಿಲ್ಲ(86:16.08.58 p1075). ಎರಡು ತಿಂಗಳ ಅನಗತ್ಯವಾದ ಗೊಂದಲಗಳ ನಂತರ, ಕಾರ್ಮಿಕರನ್ನು ಒಂದು ಇಲಾಖೆಯಿಂದ ಇನ್ನೊಂದು ವಿಭಾಗಕ್ಕೆ ವರ್ಗಾಯಿಸುವ ಆಡಳಿತದ ಹಕ್ಕನ್ನು ಐಎನ್‌ಟಿಯುಸಿ ಅಂಗೀಕರಿಸಿತು. ಸರಕಾರ ವಜಾಗೊಳಿಸಿದ್ದ ಕಾರ್ಮಿಕರನ್ನು ಮತ್ತೆ ಕೆಲಸ ನೀಡುವುದಕ್ಕೂ ಸಿದ್ಧವಾಯಿತು(86:16.08.58p1075). ಆದರೆ ಈ ಅನಾವಶ್ಯಕ 'ಹೋರಾಟ' ಕೆಲವರ ಮನದಲ್ಲಿ ಮನಸ್ತಾಪವನ್ನು ಹುಟ್ಟುಹಾಕಿದ್ದಲ್ಲದೆ, ವರಂತರಪಿಳ್ಳಿಯ ಅಮಾನುಷ ಹತ್ಯೆಯಲ್ಲಿ ಅಂತ್ಯಗೊಳ್ಳುವಂತೆ ಮಾಡಲಾಯಿತು.

### ವರಂತರಪಿಳ್ಳಿ ಘಟನೆ

ಜುಲೈ 24, 1958ರಂದು ಕರುಪ್ಪನ್ ಎನ್ನುವ ಒಬ್ಬ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತನ ಮೇಲೆ ವರಂತರಪಿಳ್ಳಿಯ ಕಾಂಗ್ರೆಸ್ ಪಕ್ಷದ ಸದಸ್ಯರು ಗುಂಪುಗೂಡಿ ಹಲ್ಲೆ ನಡೆಸಿದರು(99:p206). ತ್ರಿಶೂರ್ ಜಿಲ್ಲೆಯ ಅಂಬಲೂರಿನ ಪೂರ್ವ ಭಾಗದ ಗುಡ್ಡಗಾಡು ಪ್ರದೇಶದಲ್ಲಿದೆ ಈ ವರಂತರಪಿಳ್ಳಿ ಎನ್ನುವ ಗ್ರಾಮ. ತ್ರಿಶೂರ್ ಪ್ರದೇಶದಲ್ಲಿ ರಾಜಕೀಯ ಹಿಂಸಾಚಾರವಾಗಿ ಕರುಪ್ಪನ್‌ನ ಮೇಲೆ ಹಲ್ಲೆ ನಡೆಸಲಾಯಿತು.

ವರಂತಪಿಳ್ಳಿಯಲ್ಲಿ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರು ಸ್ಥಳೀಯ ಮುಖಂಡರಾದ ಟಿ.ಕೆ. ಉಬೈದ್, ಕೆ.ಪಿ. ಉಣ್ಣೀನ್‌ಕುಟ್ಟಿ ನೇತೃತ್ವದಲ್ಲಿ ಜುಲೈ 26ರಂದು ಪ್ರದರ್ಶನ ಆಯೋಜಿಸಲಾಯಿತು. ವರಂತರಪಿಳ್ಳಿಯಲ್ಲಿರುವ ಕಾಂಗ್ರೆಸ್ ಕಚೇರಿಯನ್ನು ಕೇಂದ್ರೀಕರಿಸಿ ಪ್ರತಿಭಟನೆಯ ನೇರಕ್ಕೆ ಕಲ್ಲುತೂರಾಟ ಮತ್ತು ಹಲ್ಲೆ ನಡೆದವು* ಎರಡೂ ಕಡೆಗಳಲ್ಲಿ ಹಿಂಸಾಚಾರ ಮತ್ತು ಕಲ್ಲುತೂರಾಟ ವ್ಯಾಪಕವಾಗಿ ನಡೆದವು. ಈ ಗಲಭೆಗಳ ಪರಿಣಾಮವಾಗಿ, ಪ್ರತಿಭಟನಾಕಾರರು ಕಮ್ಯುನಿಸ್ಟ್ ವಿರೋಧಿ ದಾಳಿಕೋರರೊಂದಿಗೆ ಘರ್ಷಣೆಗಿಳಿದರು(196:p123). ಈ ಸಂಘರ್ಷದಲ್ಲಿ, ಆರು ಕಮ್ಯುನಿಸ್ಟ್ ವಿರೋಧಿಗಳು ಕೊಲ್ಲಲ್ಪಟ್ಟರು ಮತ್ತು ಎರಡೂ ಕಡೆಯ ಅನೇಕರು ಗಾಯಗೊಂಡರು(197:p117; 69:p136). ತ್ರಿಶೂರ್ ಪ್ರದೇಶದಲ್ಲಿ ಕಮ್ಯುನಿಸ್ಟ್ ವಿರೋಧಿ ಆಂದೋಲನದ ಪ್ರಮುಖ ನಾಯಕ ಫಾದರ್ ವಡಕ್ಕನ್ ಈ ಬಗ್ಗೆ ಹೀಗೆ ನುಡಿಯುತ್ತಾರೆ:

> "ವಾಸ್ತವವಾಗಿ, ವರಂತರಪಿಳ್ಳಿ ಘಟನೆಗೆ ಕಮ್ಯುನಿಸ್ಟರು ಹೊಣೆಗಾರರಾಗಿರಲಿಲ್ಲ. ವಿಮೋಚನಾ ಹೋರಾಟದಲ್ಲಿ ಕೆಲವು ಸಮಾಜ ವಿರೋಧಿಶಕ್ತಿಗಳು ಮದ್ಯದ ಅಮಲಿನಲ್ಲಿ ಕಮ್ಯುನಿಸ್ಟ್ ಪ್ರದರ್ಶನಕಾರರ ಮೇಲೆ ದಾಳಿ ನಡೆಸಿದ್ದರು. ಕಮ್ಯುನಿಸ್ಟರು ಆತ್ಮರಕ್ಷಣೆಗಾಗಿ ಆಯುಧಗಳನ್ನು ಬಳಸಿದರು. ಆರೇಳು ಮಂದಿ ಸಾವನ್ನಪ್ಪಿದರು"(46:p124).

ಕಮ್ಯುನಿಸ್ಟ್ ವಿರೋಧಿ ಪತ್ರಿಕೆಗಳು ವರಂತರಪಿಳ್ಳಿ ಘಟನೆಯ ಬಗ್ಗೆ ಸರ್ಕಾರವನ್ನು ಕಟುವಾಗಿ ಟೀಕಿಸಿದವು(69:p136). ಆಗಸ್ಟ್ 11ರಂದು ಕೇರಳದಲ್ಲಿ ಹದಗೆಟ್ಟಿರುವ ಸುರಕ್ಷತಾವಸ್ಥೆಯ ಬಗ್ಗೆ ಸಂಸದರಾದ ಡಾ. ಕೆ.ಬಿ. ಮೇನನ್ ಲೋಕಸಭೆಯಲ್ಲಿ ನಿರ್ಣಯ ಮಂಡಿಸಿದರು(84:12.08.58). ನಂತರ, ಮತ್ತೊಬ್ಬ ಪಿಎಸ್‌ಪಿ ನಾಯಕ ಅಶೋಕ್ ಮೆಹ್ತಾ ಕೂಡ ಇದೇ ಸಮಸ್ಯೆಯ ಬಗ್ಗೆ ಸಂಸತ್ತಿನಲ್ಲಿ ಪ್ರಸ್ತಾಪ ಮಾಡಿದರು (84:05.09.58;69:p136). ಸೆಪ್ಟೆಂಬರ್ 18, 1958ರಂದು ಕೇರಳದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಟ್ಟಿರುವ ಬಗ್ಗೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ನಿರ್ಣಯವನ್ನೂ ಅಂಗೀಕರಿಸಿತು(84:09.09.58; 69:p136).

## ಆಡಳಿತ ಆಂದೋಲನ

ಆಡಳಿತ ಆಂದೋಲನ ಅಥವಾ ಕುಟ್ಟನಾಡ್ ಬೋಟ್ ಕೂಲಿ ಆಂದೋಲನವು ವಿದ್ಯಾರ್ಥಿಗಳ ಪ್ರತಿಭಟ್ನನೆಯ ರೂಪದಲ್ಲಿ ಪ್ರಾರಂಭವಾಯಿತು. ಇದನ್ನು ಆಲಪ್ಪುಳದ ಮಧ್ಯಮ ವರ್ಗದ (ಪೆಟ್ಟಿ ಬೂರ್ಜ್ವಾ) ಯುವಕರ ನೇತೃತ್ವದಲ್ಲಿ ಆರಂಭಿಸಲಾಗಿತ್ತು. ಅವರಿಗೆ ಜಾತಿ-ಸಮುದಾಯ ಶಕ್ತಿಗಳ, ಪಟ್ಟಭದ್ರ ಹಿತಾಸಕ್ತಿಗಳ ಮತ್ತು ವಿರೋಧ

---

* ವರಂತರಪಳ್ಳಿ ಘಟನೆಯ ಪ್ರತ್ಯಕ್ಷದರ್ಶಿಗಳಾದ ರಾಮಕೃಷ್ಣನ್ ಕಣಿಯಾರಂಬನ್, ಇಲ್ಲಿಕಲ್ ಲೋನಾಪಿ, ಅವರ ವಾಸಸ್ಥಳವಾದ ಕ್ರಮವಾಗಿ ವರಂತರಪಳ್ಳಿ, ಅಂಬಲೂರ್ ಮುಂತಾದ ಸ್ಥಳಗಳಲ್ಲಿ, 27.12.2009ರಂದು ಸಂದರ್ಶನ ನಡೆಸಲಾಯಿತು.

ಪಕ್ಷಗಳ ಬೆಂಬಲವೂ ದೊರೆತವು. ಜುಲೈ 1958ರ ಮೊದಲ ವಾರದಲ್ಲಿ ಈ ವಿದ್ಯಾರ್ಥಿ ಚಳುವಳಿ ಪ್ರಾರಂಭವಾಯಿತು. ವಿದ್ಯಾರ್ಥಿಗಳಿಗೆ ಕುಟ್ಟನಾಡಿನ ಕೆಲವು ಭಾಗಗಳಿಗೆ ಪ್ರಯಾಣಿಸಲು ಅನುಮತಿಸಿದ್ದ ಒಂದಾಣೆಯ ಅನುಕೂಲವನ್ನು ಉಳಿಸಿಕೊಳ್ಳಲು ಈ ಮುಷ್ಕರ ಕೈಗೊಳ್ಳಲಾಗಿತ್ತು(86:28.11.58p1597). ಇದು ಶೀಘ್ರದಲ್ಲೇ ಕಮ್ಯುನಿಸ್ಟೇತರ ವಿದ್ಯಾರ್ಥಿ ಸಂಘಟನೆಗಳ ದೀರ್ಘ ಕಾಲದ ಮತ್ತು ಹಿಂಸಾತ್ಮಕ ಆಂದೋಲನವಾಗಿ ಬದಲಾಯಿತು. ಕೇರಳದಲ್ಲಿ ಇದು ರಾಜಕೀಯ ಪರಿಸ್ಥಿತಿ ಹದಗೆಡಲು ಮತ್ತು ರಾಜ್ಯ ಸರ್ಕಾರದ ವಿರುದ್ಧ ನೇರ ಹೋರಾಟಕ್ಕೆ ದಾರಿಮಾಡಿಕೊಟ್ಟಿತು. ಕೇರಳ ಸರ್ಕಾರ ಸಾರಿಗೆ ನಿಗಮದ ರಚನೆಗಿಂತಲೂ ಮೊದಲು, ಸೇಂಟ್ ಜೋಸೆಫ್ ಮತ್ತು ಲಿಟಲ್ ಫ್ಲವರ್ ಕ್ಯಾಥೋಲಿಕ್ ಚರ್ಚ್ ಶಾಲೆಗಳು ಅಲಪ್ಪುಳ ಜಿಲ್ಲೆಯ ಕುಟ್ಟನಾಡ್ ಪ್ರದೇಶದಲ್ಲಿ ನೆಲೆಗೊಂಡಿದ್ದು, ವಾಸ್ತವವಾಗಿ ಅಲ್ಲಿಯ ಶಾಲಾ ವಿದ್ಯಾರ್ಥಿಗಳು ಬೋಟ್ ಪ್ರಯಾಣದಲ್ಲಿ 50% ರಿಯಾಯಿತಿ ಪಡೆಯುತ್ತಿದ್ದರು(33:07.07.58). ಚರ್ಚ್ ನಡೆಸುತ್ತಿದ್ದ ಶಾಲೆಗೆ ಸೇರಿಕೊಳ್ಳಲು ವಿದ್ಯಾರ್ಥಿಗಳಿಗೆ ಪ್ರೋತ್ಸಾಹದಾಯಕವಾಗಿ ಈ ರಿಯಾಯಿತಿ ನೀಡಲಾಗಿತ್ತು.* ಖಾಸಗಿ ಒಡೆತನದ ದೋಣಿಗಳಲ್ಲಿ ಪ್ರಯಾಣಿಸಲು ಮಾತ್ರ ಈ ಅನುಕೂಲತೆ ಅನ್ವಯಿಸುತ್ತದೆ. ಜಲ ಸಾರಿಗೆ ಕಾರ್ಪೊರೇಷನ್ ಬೋಟ್‌ಗಳನ್ನು ಸ್ವಾಧೀನಪಡಿಸಿಕೊಂಡ ನಂತರದ ಏಕರೀತಿಯ ಕಾನೂನನ್ನು ರೂಪಿಸಬೇಕಿತ್ತು. ಕೆಲವು ವಿದ್ಯಾರ್ಥಿಗಳಿಗೆ ಮಾತ್ರ ರಿಯಾಯಿತಿ ನೀಡುವ ಬದಲು ಎಲ್ಲಾ ವಿದ್ಯಾರ್ಥಿಗಳಿಗೆ ರಿಯಾಯಿತಿ ನೀಡಲು ನಿಗಮವು ತನ್ನ ದೋಣಿಗಳಲ್ಲಿ ಪ್ರಯಾಣಿಸುವ ಎಲ್ಲಾ ವಿದ್ಯಾರ್ಥಿಗಳಿಗೆ ಶೇಕಡ 50ರಷ್ಟು ರಿಯಾಯಿತಿಯನ್ನು ಅನುಮತಿಸಿತು(84:15.07.58). ಸ್ವತಂತ್ರ ವಿದ್ಯಾರ್ಥಿಗಳ ಸಂಸ್ಥೆ (Independent Student Orgnisation/ISO), ಕೇರಳ ವಿದ್ಯಾರ್ಥಿ ಸಂಘ** ಹಾಗೂ ಒಕ್ಕೂಟ ಈ ವ್ಯವಸ್ಥೆಗೆ ತೀವ್ರ ವಿರೋಧ ವ್ಯಕ್ತಪಡಿಸಿದವು. ಪೂರ್ಣ ರಿಯಾಯಿತಿ ನೀಡಬೇಕೆನ್ನುವುದು ಮಾತ್ರವಲ್ಲ, ನಿಗಮದ ವ್ಯಾಪ್ತಿಯಲ್ಲಿರುವ ಎಲ್ಲಾ ಜಲಮಾರ್ಗಗಳಿಗೂ ಇದನ್ನು ಅನುಮತಿಸಬೇಕು ಎಂದು ಅವರು ಒತ್ತಾಯಿಸಿದರು(198:p223).

ವಿದ್ಯಾರ್ಥಿ ಪ್ರತಿನಿಧಿಗಳು ಮತ್ತು ಸರ್ಕಾರಿ ಅಧಿಕಾರಿಗಳ ನಡುವಿನ ಮೊದಲ ಸುತ್ತಿನ ಮಾತುಕತೆ ವಿಫಲವಾಯಿತು. ವಿದ್ಯಾರ್ಥಿಗಳ ಒಂದು ವಿಭಾಗವು

---

* ಕ್ರಿಶ್ಚಿಯನ್ ಚರ್ಚ್ ಅಡಿಯಲ್ಲಿ ಶಾಲೆಗಳಲ್ಲಿ ದಾಖಲಾದ ಮಕ್ಕಳ ಸಂಖ್ಯೆಯನ್ನು ಹೆಚ್ಚಿಸಲು ಮಾತ್ರ ಪೂರ್ಣ ರಿಯಾಯಿತಿ ನೀಡಲಾಗಿತ್ತು. ಈ ಪ್ರದೇಶದಲ್ಲಿ ಎಲ್ಲಾ ದೋಣಿ ಸೇವೆಗಳಲ್ಲಿ ಈ ಪೂರ್ಣ ರಿಯಾಯಿತಿ ಅನುಮತಿಸಿರಲಿಲ್ಲ. ಕ್ರಿಶ್ಚಿಯನ್ ಚರ್ಚ್ ಸದಸ್ಯರು ಮತ್ತು ಶಾಲಾ ಸಮಿತಿಗಳು ನಡೆಸಿದ ದೋಣಿ ಸೇವೆಗಳಲ್ಲಿ ಈ ಪ್ರಯೋಜನವು ವಿದ್ಯಾರ್ಥಿಗಳಿಗೆ ಮಾತ್ರ ಲಭ್ಯವಾಗುತ್ತಿತ್ತು.

** ಕೆಎಸ್‌ಯು–ಕೇರಳದ ಕಾಂಗ್ರೆಸ್ ಪಕ್ಷದ ವಿದ್ಯಾರ್ಥಿ ಸಂಘಟನೆ ಮತ್ತು ಐಎಸ್‌ಒ– ಪ್ರಜಾ ಸಮಾಜವಾದಿ ಪಕ್ಷದ ವಿದ್ಯಾರ್ಥಿ ಸಂಘಟನೆ ಈ ಎರಡೂ ಸಂಘಟನೆಗಳು ಒರಣ ಆಂದೋಲನ ಮತ್ತು ವಿಮೋಚನಾ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದುಕೊಂಡು ಕಾರ್ಯನಿರ್ವಹಿಸಿದ್ದವು.

ಆಂದೋಲನವನ್ನು ಮುಂದುವರಿಸಲು ನಿರ್ಧರಿಸಿತು. ಆದರೆ ಈ ವಿದ್ಯಾರ್ಥಿಗಳಿಗೆ ಪ್ರೇರಕ ಅಂಶ ಆರ್ಥಿಕವಾಗಿರದೆ, ರಾಜಕೀಯವಾಗಿತ್ತು. ವಿದ್ಯಾರ್ಥಿ ಚಳುವಳಿಯು ತಮ್ಮ ನಿಗೂಢ ಗುರಿಯನ್ನು ಸಾಧಿಸಲು ಉಪಯೋಗಕ್ಕೆ ಬರುತ್ತದೆ ಎಂದು ಕಂಡುಕೊಂಡ 'ಕೆಲವು ಇತರ ಶಕ್ತಿಗಳು' ವಿದ್ಯಾರ್ಥಿಗಳ ಮೇಲೆ ಅಗೋಚರ ಪ್ರಭಾವ ಬೀರುವಲ್ಲಿ ಯಶಸ್ವಿಯಾದವು (84:18.07.58).

ಕುಟ್ಟನಾಡ್, ಪುಳಿಂಕುನ್ನು ಮತ್ತು ಆಲಪ್ಪುಳದಲ್ಲಿ ವಿದ್ಯಾರ್ಥಿಗಳು ತಮ್ಮ ಬೇಡಿಕೆಗಳನ್ನು ಜಾರಿಗೊಳಿಸಲು ಶಾಲಾ–ಕಾಲೇಜುಗಳನ್ನು ಬಹಿಷ್ಕರಿಸಿದರು. ಸರ್ಕಾರಿ ಕಚೇರಿಗಳ ಎದುರು ಪಿಕೆಟಿಂಗ್, ದೋಣಿ ಸೇವೆಗೆ ಅಡ್ಡಿಪಡಿಸುವುದು ಮತ್ತು ಸಾರಿಗೆ ಬಸ್‌ಗಳ ಮೇಲೆ ದಾಳಿ ಮಾಡುವುದು ಮುಂತಾದವುಗಳಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡರು. ಜುಲೈ 14, 1958ರಂದು ಬಹಿರಂಗ ಹೋರಾಟ ಪ್ರಾರಂಭವಾಯಿತು(84:15.07.58). ಮುಷ್ಕರ ತೀವ್ರಗೊಳ್ಳುತ್ತಿದ್ದಂತೆ, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಮತ್ತು ಶಿಕ್ಷಣ ಸಂಸ್ಥೆಗಳ ಸಾಮಾನ್ಯ ಕಾರ್ಯನಿರ್ವಹಣೆಯನ್ನು ಖಚಿತಪಡಿಸಿಕೊಳ್ಳಲು ಸರ್ಕಾರವು ಅಗತ್ಯ ಕ್ರಮಗಳನ್ನು ತೆಗೆದುಕೊಂಡಿತು(84:18.07.58). ಪರಿಸ್ಥಿತಿ ಗಂಭೀರವಾದಾಗ ಸರ್ಕಾರಿ ಕಾಯಿದೆಯ ಸೆಕ್ಷನ್ 144 ಪ್ರಕಾರ, ಅಲಪ್ಪುಳದಲ್ಲಿ ನಿಷೇದಾಜ್ಞೆಯನ್ನು ಜಾರಿ ಮಾಡಿತು. ಕಾನೂನು ಉಲ್ಲಂಘಿಸುವವರ ಮೇಲೆ ಲಾಠಿಚಾರ್ಜ್ ಮಾಡುವಂತೆಯೂ ಸರ್ಕಾರ ಸೂಚಿಸಿತು. ಈ ಪ್ರಕರಣದ ಕುರಿತು ಸಾರ್ವಜನಿಕ ತನಿಖೆಯ ಅಗತ್ಯವೂ ಉದ್ಭವಿಸಿತು(108:24.07.58). ವಿರೋಧ ಪಕ್ಷಗಳು ಮತ್ತು ಅವರ ಅಂಗಸಂಸ್ಥೆಗಳು ಜುಲೈ 1958ರಂದು ರಿಯಾಯಿತಿಗಳನ್ನು ಹಿಂತೆಗೆದುಕೊಳ್ಳುವುದನ್ನು ಖಂಡಿಸಿ, ಜುಲೈ 1958,19ರಂದು ಜಂಟಿ ಹೇಳಿಕೆ ನೀಡಿದವು. ಸಮಸ್ಯೆಯನ್ನು ಸೌಹಾರ್ದಯುತವಾಗಿ ಪರಿಹರಿಸದಿದ್ದರೆ ಸರ್ಕಾರವು ಗಂಭೀರ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂದು ಅವರು ಎಚ್ಚರಿಸಿದರು(143:25.07.58).

ವಿದ್ಯಾರ್ಥಿಗಳ ಆಂದೋಲನ ಕ್ರಮೇಣ ಹೆಚ್ಚು ಹೆಚ್ಚು ವಿನಾಶಕಾರಿಯಾಗಿ ರೂಪುಗೊಳ್ಳತೊಡಗಿತು. ಶಿಕ್ಷಕರನ್ನು ಮತ್ತು ಮುಷ್ಕರೇತರ ವಿದ್ಯಾರ್ಥಿಗಳನ್ನು ಪಿಕೆಟಿಂಗ್‌ನ ನೆಪದಲ್ಲಿ ಪ್ರತಿಭಟನಾಕಾರರು ಥಳಿಸಿದರು. ಮುಷ್ಕರದ ಸಮಯದಲ್ಲಿ, ಸಾರಿಗೆ ಬಸ್ಸುಗಳನ್ನು ಧ್ವಂಸಗೊಳಿಸಲಾಯಿತು ಮತ್ತು ದೋಣಿಗಳನ್ನು ತಡೆದು ನಿಲ್ಲಿಸಲಾಯಿತು. ಅವರು ಅಶ್ಲೀಲವಾದ ಮತ್ತು ಪ್ರಚೋದನಕಾರಿ ಘೋಷಣೆಗಳನ್ನು ಕೂಗುತ್ತಾ ಬೀದಿಗಳಲ್ಲಿ ಪ್ರತಿಭಟನಾ ಮೆರವಣಿಗೆಯಲ್ಲಿ ಸಾಗಿ, ವಾಹನ ಸಂಚಾರಗಳಿಗೆ ಅಡ್ಡಿಪಡಿಸಿದರು(33:02.08.58;110:;69:p270-72). ಈ ವಿಶೇಷ ಸನ್ನಿವೇಶದಲ್ಲಿ ಆಲಪ್ಪುಳ ಜಿಲ್ಲೆಯಲ್ಲಿ ಸರ್ಕಾರವು 144ನ್ನು ಘೋಷಿಸಿತು.ವಿದ್ಯಾರ್ಥಿ ಪ್ರತಿಭಟನಾಕಾರರು ನಿಷೇದಾಜ್ಞೆಯ ಆದೇಶವನ್ನು ಉಲ್ಲಂಘಿಸುತ್ತಾ, ತಮ್ಮ ಹಿಂಸಾತ್ಮಕ ಪ್ರತಿಭಟನೆಯನ್ನು ಇತರೆ ಜಿಲ್ಲೆಗಳಿಗೂ ವಿಸ್ತರಿಸುವಂತೆ ಮಾಡಲಾಯಿತು(84:21.07.58).

ಶಿಕ್ಷಣ ಮಸೂದೆಗೆ ಸಂಬಂಧಿಸಿದಂತೆ ಸರ್ಕಾರದ ವಿರುದ್ಧದ ಹೋರಾಟದಲ್ಲಿ ವಿವಾದಕ್ಕೆ ಸಿಲುಕಿಕೊಂಡಿದ್ದ ಕ್ಯಾಥೋಲಿಕ್ ಚರ್ಚ್, ಈ ಹಿಂಸಾತ್ಮಕ ಪ್ರತಿಭಟನೆಯನ್ನು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ವಿದ್ಯಾರ್ಥಿಗಳನ್ನು ತಿರುಗಿಸಲು ಸಿಕ್ಕ ಒಂದು ಸುವರ್ಣಾವಕಾಶವೆಂದು ಭಾವಿಸಿತು.. ಇದಲ್ಲದೆ, ವಿದ್ಯಾರ್ಥಿ ಪ್ರತಿಭಟನಾಕಾರರಿಗೆ ವಿರೋಧಪಕ್ಷಗಳಪೂರ್ಣ ಬೆಂಬಲವೂ ದೊರಕಿತು. ಕಾರ್ಮಿಕರ ಹೆಸರಿನಲ್ಲಿ ತ್ರಿಶೂರ್ (ಸೀತಾರಾಮ್ ಮಿಲ್ ಮುಷ್ಕರ), ಅಲಪ್ಪುಳ ಮತ್ತು ಫೋರ್ಟ್ ಕೊಚ್ಚಿಯಲ್ಲಿ ನಡೆದ ಘರ್ಷಣೆಗಳಿಗೆ ಉದ್ದೇಶಿತ ಯಶಸ್ಸು ಸಿಗದಿದ್ದಾಗ, ವಿರೋಧಪಕ್ಷದ ನಾಯಕರು ವಿದ್ಯಾರ್ಥಿ ಚಳವಳಿಯು ಒಂದು ಒಳ್ಳೆಯ ಅವಕಾಶ ಎಂದಂದುಕೊಂಡರು(110:p15). ಜುಲೈ 21, 1958ರಂದು ಕಾಂಗ್ರೆಸ್, ಪಿಎಸ್‌ಪಿ, ಆರ್‌ಎಸ್‌ಪಿ ಮುಂತಾದ ಪಕ್ಷದ ಮುಖಂಡರು ವಿದ್ಯಾರ್ಥಿ ಪ್ರತಿಭಟನೆಯ ಮುಂದಾಳತ್ವವನ್ನು ವಹಿಸಿಕೊಂಡಿದ್ದಲ್ಲದೆ, ಅದು ರಾಜ್ಯವ್ಯಾಪಿ ಚಳುವಳಿಯನ್ನಾಗಿ ಪರಿವರ್ತಿಸುವ ಸಾಹಸಕ್ಕೆ ಕೈಹಾಕಿದವು(110:p15). ಎಲ್ಲಾ ವಿರೋಧಪಕ್ಷಗಳ ನಾಯಕರು ಒಟ್ಟುಗೂಡಿಕೊಂಡು ಅಲಪ್ಪುಳದ ವಿದ್ಯಾರ್ಥಿಗಳ ಪ್ರತಿಭಟನೆಯನ್ನು ಬೆಂಬಲಿಸಿ ಸಭೆಗಳನ್ನು ಮತ್ತು ಪ್ರದರ್ಶನಗಳನ್ನು ನಡೆಸಿದರು(110:p18).

1958ರ ಜುಲೈ 24ರಂದು ಕೆ.ಪಿ.ಸಿ.ಸಿ ಎರ್ನಾಕುಲಂನಲ್ಲಿ ಸಭೆ ಸೇರಿ, ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳಲು ನಿರ್ಧರಿಸಿತು. ಜೊತೆಗೆ ಸಮಾಲೋಚನೆಗಳ ಮೂಲಕ ವಿದ್ಯಾರ್ಥಿಗಳ ಪ್ರತಿಭಟನೆಯನ್ನು ಕೊನೆಗೊಳಿಸಲು ಕೆಪಿಸಿಸಿಯು ಸರ್ಕಾರವನ್ನು ಕೇಳಿತು.

> "ಈ ತಿಂಗಳ ಅಂತ್ಯದ ಮೊದಲು ಸರ್ಕಾರ ಈ ಬಗ್ಗೆ ಸಿದ್ಧವಾಗದಿದ್ದರೆ, ಕಾಂಗ್ರೆಸ್ ಮಧ್ಯಪ್ರವೇಶಿಸಿ, ಪರಿಸ್ಥಿತಿಯನ್ನು ನಿಯಂತ್ರಿಸಲು ಮತ್ತು ಇದರ ಜವಾಬ್ದಾರಿ ವಹಿಸಿಕೊಳ್ಳಲು ನಿರ್ಬಂಧಿತರಾಗಬೇಕಾಗುತ್ತದೆ",

ಎಂದು ಎಚ್ಚರಿಕೆ ನೀಡಿತು(110:p18). ಕಮ್ಯುನಿಸ್ಟ್ ಪಕ್ಷವು ರಾಜ್ಯ ಸರ್ಕಾರದ ಬೆಂಬಲದೊಂದಿಗೆ 'ಅಂತರ್ಯುದ್ಧ'ವನ್ನು ಪ್ರಾರಂಭಿಸಿದೆಯೆಂದು ಕೆಪಿಸಿಸಿ ಜನರಿಗೆ ಎಚ್ಚರಿಕೆ ನೀಡಲಾಯಿತು. ಜುಲೈ 29ರಂದು ಕೆಪಿಸಿಸಿ 'ದಮನ ವಿರೋಧಿ ದಿನ'ವನ್ನಾಗಿ ಆಚರಿಸಿತು(99:p167). ವಿರೋಧ ಪಕ್ಷದ ನಾಯಕರು, ಈ ಪರಿಸ್ಥಿತಿಯನ್ನು ಎದುರಿಸಲು ಕ್ರಿಯಾ ಮಂಡಳಿಯನ್ನು ರಚಿಸಿಕೊಂಡರು(84:25.07.58). ಜುಲೈ 29ರಂದು ಪಿಎಸ್‌ಪಿ ರಾಜ್ಯಾದ್ಯಂತ ಪ್ರತಿಭಟನೆ ಮತ್ತು 30ರಿಂದ ಸಂಪೂರ್ಣ ಆಂದೋಲನವನ್ನು ಹಮ್ಮಿಕೊಳ್ಳಲು ಕರೆ ನೀಡಿತು. ಆರ್‌ಎಸ್‌ಪಿ ಮತ್ತು ಕಾಂಗ್ರೆಸ್ ಪಕ್ಷಗಳು ಈ ಪ್ರಚಾರದಲ್ಲಿ ಪಾಲ್ಗೊಂಡಿದ್ದವು. ವಾಸ್ತವವಾಗಿ ಏನು ನಡೆಯಿತೆಂದರೆ, ಕೆಲವು ಮ್ಯಾನೇಜ್‌ಮೆಂಟ್‌ಗಳು ತಮ್ಮ ಶಿಕ್ಷಣಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸುವಂತೆಯೂ ಆಸುಪಾಸುಗಳಲ್ಲಿ ಅಲೆದಾಡಿಕೊಂಡಿರುವಂತೆಯೂ ಪ್ರೇರೇಪಿಸಿದವು(40:31.08.58). ಕೆಲವು ಸಂಸ್ಥೆಗಳು, ವಿಶೇಷವಾಗಿ ಕ್ಯಾಥೋಲಿಕರ ನಿಯಂತ್ರಣದಲ್ಲಿರುವವು,

ವಿದ್ಯಾರ್ಥಿಗಳು ತರಗತಿಗಳಿಂದ ಹೊರಗುಳಿಯುವಂತೆ ಪ್ರೋತ್ಸಾಹಿಸಿದವು

ಒಟ್ಟಿನಲ್ಲಿ ಪ್ರತಿಭಟನೆಗಳ ವೇಳೆ ಪೊಲೀಸ್ ತುಂಬಾ ಜಾಗ್ರತೆಯನ್ನು ವಹಿಸಿದ್ದಲ್ಲದೆ, ಮಿತವಾದಕ್ರಮಗಳನ್ನು ಮಾತ್ರ ಕೈಗೊಳ್ಳಲು ಮುಂದಾದವು(40:31.08.58p10). ಪ್ರತಿಭಟನೆಯಲ್ಲಿ ಭಾಗವಹಿಸಿದ್ದ ಪ್ರಮುಖವಾಗಿ, ವಿದ್ಯಾರ್ಥಿಗಳನ್ನು ಎದುರಿಸಲು ಪೊಲೀಸರಿಗೆ ತುಂಬಾ ಕ್ಲಿಷ್ಟಕರವಾದ ಕೆಲಸವಾಗಿತ್ತು. ವಿದ್ಯಾರ್ಥಿಗಳನ್ನು ಪ್ರತಿಭಟನೆಯ ಮುಂಚೂಣಿಯಲ್ಲಿ ನಿಲ್ಲಿಸಲಾಗಿತ್ತು. ಆದಾಗ್ಯೂ, ಹಿಂಸಾತ್ಮಕವಾಗಿ ನಡೆದುಕೊಳ್ಳುತ್ತಿದ್ದ ವಿದ್ಯಾರ್ಥಿ ಪ್ರತಿಭಟನಾಕಾರರನ್ನು, ಹೆಚ್ಚಿನ ಸಂಖ್ಯೆಯಲ್ಲಿ ಬಂಧಿಸಿ ಲಾಠಿಚಾರ್ಜ್‌ಗಳಿಗೆ ಒಳಪಡಿಸಲಾಯಿತು(110:p15) ಪಿ.ಎಂ. ಮುಹಮ್ಮದಾಲಿ, ಪಿ.ಕೆ. ಕುರಿಯಾಕೋಸ್ ಮತ್ತು ಹಬೀಬ್ ರೆಹಮಾನ್ ಇವರುಗಳೇ ಚಳವಳಿಯ ಪ್ರಮುಖ ವಿದ್ಯಾರ್ಥಿ ನಾಯಕರಾಗಿದ್ದವರು. ಬಿ. ವೆಲ್ಲಿಂಗ್ಟನ್, ಮ್ಯಾಥ್ಯೂ ಮಂಜುರಾನ್, ಅನ್ನೆ ತಯ್ಯಿಲ್, ಪಿ.ಝಡ್. ಜೋಸೆಫ್‌ರಂಥ ಕಮ್ಯುನಿಸ್ಟ್ ವಿರೋಧಿ ರಾಜಕೀಯ ನಾಯಕರು, ರಾಜ್ಯದ ವಿವಿಧ ಪ್ರದೇಶಗಳಲ್ಲಿ ಪ್ರತಿಭಟನೆಗಳ ನೇತೃತ್ವ ವಹಿಸಿಕೊಂಡಿದ್ದರು(198:p223). ಆರ್‌ಎಸ್‌ಪಿ ಮುಖಂಡ ಎನ್. ಶ್ರೀಕಂಠನ್ ನಾಯರ್, ಪಿಎಸ್‌ಪಿ ಶಾಸಕ ಸಿ.ಜಿ. ಜನಾರ್ದನನ್, INTU ಮುಖಂಡರಾದ ಬಿ.ಕೆ. ನಾಯರ್ ಮುಂತಾದವರು, ವಿದ್ಯಾರ್ಥಿಗಳ ಪ್ರತಿಭಟನೆಗಳಿಗೆ ಸಾರ್ವಜನಿಕವಾಗಿ ಬೆಂಬಲವನ್ನು ಘೋಷಿಸುತ್ತಾ, ನಿಷೇಧದಾಜ್ಞೆಗಳನ್ನು ಉಲ್ಲಂಘಿಸುವ ಕೃತ್ಯಗಳಲ್ಲಿ ತೊಡಗಿಕೊಂಡರು(110:p229;40:).

ದಾಳಿಕೋರರಿಂದ ನೂರಾರು ಬಸ್‌ಗಳಿಗೆ ಹಾನಿಯಾದವು. ಸುಮಾರು ಒಂದು ಲಕ್ಷ ರೂಪಾಯಿ ಮೌಲ್ಯದ ನಷ್ಟಗಳನ್ನುಂಟುಮಾಡಿದರು(40:31.08.58p10). ವಿದ್ಯಾರ್ಥಿ ಪ್ರತಿಭಟನಾಕಾರರು ತೀವ್ರ ಹಿಂಸಾಚಾರ ಮತ್ತು ಕಿಡಿಗೇಡಿತನದಲ್ಲಿ ತೊಡಗಿಕೊಂಡಿದ್ದರು(84:26.07.58).

ಈ ಆಕ್ರಮಣಗಳ ಬಗ್ಗೆ ಪ್ರತಿಪಕ್ಷಗಳು ಒಂದು ವಾಕ್ಯವನ್ನೂ ಉಚ್ಚರಿಸದೆ, ವಿಧ್ವಂಸಕ ಕೃತ್ಯಗಳನ್ನು ಅವರು ಸಾರ್ವಜನಿಕವಾಗಿ ಪ್ರೋತ್ಸಾಹಿಸಿದರು(110:p20) ಎಂದು ಸರ್ಕಾರಿ ಮೂಲಗಳು ಉಲ್ಲೇಖಿಸುತ್ತವೆ. ವಿದ್ಯಾರ್ಥಿಗಳ ಈ ಹಿಂಸಾತ್ಮಕ ಕೃತ್ಯಗಳ ಬಗ್ಗೆ ಕೆಲವು ಪ್ರಬುದ್ಧ ಮತ್ತು ಗೌರವಾನ್ವಿತ ನಾಯಕರ ಆಕ್ರಂದನ ಹೃದಯವಿದ್ರಾವಕವಾಗಿತ್ತು. ಅವಿವೇಕತನದಿಂದ ಕೂಡಿದ ಪ್ರತಿಭಟನಾ ವಿಧಾನವನ್ನು ಆಯ್ಕೆಮಾಡಿಕೊಂಡ ವಿದ್ಯಾರ್ಥಿಗಳ ಬಗ್ಗೆಯ ಈ ವಿವಾದದಲ್ಲಿ ಮಧ್ಯಸ್ಥಿಕೆ ವಹಿಸಲು ಸಿದ್ಧ ಎಂದು ಅವರು ಅಧಿಕಾರಿಗಳಿಗೆ ತಿಳಿಸಿದರು. ಇಂತಹ ಸಮಾಜಘಾತುಕ ಚಟುವಟಿಕೆಗಳನ್ನು ಖಂಡಿಸಿದವರಲ್ಲಿ ಕೆ. ಕೇಳಪ್ಪನ್ ಮೊದಲಿಗರಾಗಿದ್ದರು. ಅವರು ಹೇಳಿದರು:

ವಿದ್ಯಾರ್ಥಿಗಳ ಈ ಪ್ರತಿಭಟನೆ ಸಂಪೂರ್ಣವಾಗಿ ರಾಜಕೀಯ ಹೋರಾಟವಾಗಿದೆ. ರಾಜಕೀಯದ ಜೂಜಾಟದಲ್ಲಿ ವಿದ್ಯಾರ್ಥಿಗಳನ್ನು ಪಣಕ್ಕಿಡುವುದು ಅಪಾಯಕಾರಿ

ಎಂದು ಈ ಹಿಂಸಾತ್ಮಕ ಪ್ರತಿಭಟನೆಗಳ ಹಿಂದಿರುವ ರಾಜಕೀಯ ಪಕ್ಷಗಳಿಗೆ ನಾನು ನೆನಪಿಸ ಬಯಸುತ್ತೇನೆ. ಇಂದಿನ ಈ ತೀವ್ರವಾದ ರಾಜಕೀಯ ಸಂಘರ್ಷಗಳು ಅವರ ಕಣ್ಣುಗಳನ್ನು ಕುರುಡಾಗಿಸಿವೆ. ಆದರೆ ಈ ದುಷ್ಕೃತ್ಯಗಳನ್ನು ಗಮನಿಸುತ್ತಿರುವವರಲ್ಲಿ, ಬಹಳಷ್ಟು ನಿಷ್ಪಕ್ಷಪಾತಿಗಳು ಇದ್ದಾರೆನ್ನುವ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು, ಕ್ಯಾಥೋಲಿಕ್ ಸಂಸ್ಥೆಗಳು ಸಾಮಾನ್ಯವಾಗಿ ಇಂತಹ ಹೋರಾಟಗಳಿಂದ ದೂರ ಸರಿಯುತ್ತವೆ ಎಂಬುದು ನಮ್ಮ ಅನುಭವವಾಗಿತ್ತು. ಆದರೆ, ಇಂದು ಈ ಹೋರಾಟಗಳಲ್ಲಿ ಅವರೇ ಮುಂಚೂಣಿಯಲ್ಲಿರುವುದು ಅಚ್ಚರಿಯ ಸಂಗತಿಯಾಗಿ ನಮಗೆ ಕಾಣುತ್ತಿದೆ. ರಾಜಕೀಯ ಘೋಷಣೆಗಳನ್ನು ಕೂಗುವುದಕ್ಕೆ ಮತ್ತು ವಿದ್ಯಾರ್ಥಿಗಳು ಸರ್ಕಾರಿ ಕಚೇರಿಗಳ ಮುಂದೆ ಧರಣಿ ನಡೆಸಲು ಮನವೊಲಿಸುವುದಕ್ಕೆ ಪ್ರೇರೇರಿಪಿಸುವುದು ಘೋರ ಅಪರಾಧವಾಗುತ್ತದೆ. ಈ ಅಪರಾಧಕ್ಕೆ ಪ್ರಾಯಶ್ಚಿತ್ತವಿಲ್ಲ. ಈ ಕೊಳೆತ ಮತ್ತು ಭಯಾನಕ ತಂತ್ರಗಳನ್ನು ಕೊನೆಗೊಳಿಸಲು ನಾನು ಎಲ್ಲಾ ರಾಜಕೀಯ ಪಕ್ಷಗಳಿಗೆ ಮನವಿಮಾಡುತ್ತೇನೆ."

(107:27.07.58)

ವಿದ್ಯಾರ್ಥಿಗಳ ಈ ಕಡಿವಾಣವಿಲ್ಲದ ಅಸಭ್ಯತೆಗೆ ಕೇಳಪ್ಪನ್ ವಿಷಾದ ವ್ಯಕ್ತಪಡಿಸಿದರು(199:p16). ವಿದ್ಯಾರ್ಥಿಗಳ ಆಂದೋಲನವನ್ನು ವಿರೋಧಿಸಿದ್ದು, ಇನ್ನೊಬ್ಬ ಪ್ರಮುಖ ವ್ಯಕ್ತಿ ಬಿಷಪ್ ಮಾಥೋರ್ಮಾರವರು. ಜುಲೈ 26ರಂದು ನೀಡಿದ ಹೇಳಿಕೆಯಲ್ಲಿ ಅವರು ಹೀಗೆ ಹೇಳಿದರು:

"ಕಾಂಗ್ರೆಸ್‌ನಂತಹ ರಾಜಕೀಯ ಪಕ್ಷಗಳ ನಾಯಕರು, ಈ ಹೋರಾಟದ ಹಿಂದೆ ಇಲ್ಲ ಎಂದು ಸ್ಪಷ್ಟಪಡಿಸುವುದು ಅತ್ಯಗತ್ಯ. ಯಾವೆಲ್ಲ ಗುಂಪುಗಳು ಅಥವಾ ಸಂಘಟನೆಗಳು ಈ ವಿದ್ಯಾರ್ಥಿ ಸಮುದಾಯವನ್ನು ತಮ್ಮ ಜೂಜಾಟದ ಕಾಯಿಗಳನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾರೋ ಅವರ ಅವನತಿಯನ್ನು ಅವರು ತಾವಾಗಿಯೇ ಆಹ್ವಾನಿಸಿಕೊಳ್ಳುತ್ತಿದ್ದಾರೆ(110:p23).

ಹಿಂಸಾತ್ಮಕವಾದ ಪ್ರತಿಭಟನಾ ಮಾರ್ಗವನ್ನು ಕೈಬಿಡಲು, ಸಂಸದ ಹಾಗೂ ಮಾಜಿ ಕಾಂಗ್ರೆಸ್ ಸಚಿವ ಕೆ.ಎಸ್.ಮಾಧವನ್ ವಿದ್ಯಾರ್ಥಿಗಳಿಗೆ ಮನವಿ ಮಾಡಿದರು.

ಈ ಯಾವುದೇ ಮನವಿಗಳಿಗೆ ವಿರೋಧಪಕ್ಷಗಳು ಕಿವಿಗೊಡಲಿಲ್ಲ. ಜುಲೈ 29ರಂದು ರಾಜ್ಯಾದ್ಯಂತ 'ಪ್ರತಿಭಟನಾ ದಿನ'ವನ್ನಾಗಿ ಆಚರಿಸಲು ಅವರೆಲ್ಲರೂ ಕೈಜೋಡಿಸಿದರು(84:30.07.58). ಆದರೆ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಮತ್ತು ಕಾರ್ಮಿಕರು ಪ್ರತಿಭಟನೆಯಿಂದ ದೂರ ಉಳಿದರು. ಸರ್ಕಾರದ ಅಧಿಕಾರವನ್ನು ಪ್ರಶ್ನಿಸಿದಾಗ, ಕೊಲ್ಲಂ ಮತ್ತು ತ್ರಿಶೂರ್ ಜಿಲ್ಲೆಗಳ ಎರಡು ತಾಲ್ಲೂಕುಗಳಲ್ಲಿ ಸೆಕ್ಷನ್ 144ನ್ನು ಜಾರಿಗೆ ತರಲಾಯಿತು. ನಾಗರಿಕ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗಬಾರದೆನ್ನುವ ಸರ್ಕಾರದ ಘೋಷಿತ ನೀತಿಗೆ ಅನುಗುಣವಾಗಿ ಪೊಲೀಸರು ಪರಿಸ್ಥಿತಿಯನ್ನು

ನಿಯಂತ್ರಿಸಿದರು*(45:p133).

ಈ ಹಂತದಲ್ಲಿ ಕಾಂಗ್ರೆಸ್ ಅಧ್ಯಕ್ಷರ ಹಾಗೂ ಕೆ. ಕೇಳಪ್ಪನ್‌ರವರ ಮನವಿಗೆ ಸ್ಪಂದಿಸಿ, ಸರ್ವಪಕ್ಷ ಸಭೆ ಕರೆಯಲು ಮುಖ್ಯಮಂತ್ರಿ ಒಪ್ಪಿಗೆ ಸೂಚಿಸಿದರು. ಸ್ಟೂಡೆಂಟ್ ಆಕ್ಷನ್ ಕೌನ್ಸಿಲ್ ನಾಯಕರನ್ನು ಸಹ ಈ ಸಭೆಗೆ ಹಾಜರಾಗಲು ಆಹ್ವಾನಿಸಲಾಯಿತು. ಎಲ್ಲಾ ಪಕ್ಷಗಳ ಪ್ರತಿನಿಧಿಗಳು ಸಭೆಯಲ್ಲಿಭಾಗವಹಿಸಿದ್ದರು. ಕೇಳಪ್ಪನ್‌ರಂಥ ಕೆಲ ಪಕ್ಷೇತರರೂ ಹಾಜರಿದ್ದರು.

ಸರ್ವಪಕ್ಷಗಳ ಸಭೆ ಯಾವುದೇ ತೀರ್ಮಾನಕ್ಕೆ ಅಥವಾ ಒಪ್ಪಂದಕ್ಕೆ ಬಾರದೆ ಕೊನೆಗೊಂಡಿತು. ಆದರೆ ಸಭೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳ ಬಗ್ಗೆ ಸಚಿವ ಸಂಪುಟಪರಿಗಣಿಸುವುದಾಗಿಯೂ ತೆಗೆದುಕೊಂಡ ನಿರ್ಧಾರಗಳ ಬಗ್ಗೆ ಇಲ್ಲಿ ಭಾಗವಹಿಸಿದವರಿಗೆ ನಂತರ ತಿಳಿಸುವುದಾಗಿಯೂ ಸಭೆಯ ಸಮಾರೋಪದಲ್ಲಿ ಮುಖ್ಯಮಂತ್ರಿಗಳು ತಿಳಿಸಿದರು. ಅದರಂತೆ, ಅದೇ ರಾತ್ರಿ ವಿಚಾರಗಳ ಬಗ್ಗೆ ತುರ್ತು ಸಭೆ ನಡೆಯಿತು**(45:p24). ಏತನ್ಮಧ್ಯೆ, ಸರ್ವಪಕ್ಷ ಸಭೆ ವಿಫಲವಾಯಿತು ಎಂದು ವಿರೋಧಪಕ್ಷದ ನಾಯಕರು ಪತ್ರಿಕಾ ಪ್ರಕಟಣೆ ಹೊರಡಿಸಿದರು(143:03.08.58). ಸರ್ಕಾರ ಸಹ ತಡಮಾಡದೆ ತಮ್ಮ ನಿರ್ಧಾರವನ್ನು ಪತ್ರಿಕಾ ಪ್ರಕಟಣೆಯಾಗಿ ಪ್ರಕಟಿಸಲಾಯಿತು. ಅದರ ಮುಖ್ಯಾಂಶಗಳು ಹೀಗಿವೆ:

1) ಕುಟ್ಟನಾಡ್ ಪ್ರದೇಶದಲ್ಲಿ ವಿದ್ಯಾರ್ಥಿಗಳು ಯಾವುದಾದರೂ ಸಾಮಾನ್ಯ ಪ್ರಯೋಜನಗಳನ್ನು ಅಥವಾ ರಿಯಾಯಿತಿಗಳನ್ನು ಅನುಭವಿಸುತ್ತಿದ್ದಾರೆಯೇ ಎಂಬುದರ ಕುರಿತು ತನಿಖೆ ಮಾಡಿ, ವರದಿ ಮಾಡಲು ನ್ಯಾಯಾಂಗ ಅಧಿಕಾರಿಯನ್ನು ನೇಮಿಸುವುದು. ಜಲಸಾರಿಗೆ ನಿಗಮದ ವಿದ್ಯಾರ್ಥಿಗಳಿಗೆ ನೀಡಲಾದ ಶೇ.50ರಷ್ಟು ರಿಯಾಯಿತಿ ಕಡಿಮೆ ಆಯಿತು ಎನ್ನುವುದಾದರೆ, ವಿದ್ಯಾರ್ಥಿಗಳ ಅಗತ್ಯಗಳನ್ನು ಪೂರೈಸಲು ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಳ್ಳಬೇಕು.
2) ತನಿಖೆಯ ಅಂತ್ಯದವರೆಗೆ ಕುಟ್ಟನಾಡ್ ಪ್ರದೇಶದ ವಿದ್ಯಾರ್ಥಿಗಳಿಗೆ ಜಲಸಾರಿಗೆ ನಿಗಮದ ದೋಣಿಯಲ್ಲಿ ಉಚಿತ ಪ್ರಯಾಣಕ್ಕೆ ಅವಕಾಶ ನೀಡುವುದು.
3) ಮುಷ್ಕರಕ್ಕೆ ಸಂಬಂಧಿಸಿದ ಪ್ರಕರಣದಲ್ಲಿ ಭಾಗಿಯಾಗಿರುವ ವಿದ್ಯಾರ್ಥಿಗಳಿಗೆ ಕ್ಷಮಾದಾನ ಘೋಷಿಸುವುದು.
4) ವಿದ್ಯಾರ್ಥಿ ಚಳವಳಿಯ ಬಗ್ಗೆ ಸಮಗ್ರ ನ್ಯಾಯಾಂಗ ತನಿಖೆ ನಡೆಸುವುದು. ಅದರ ಮೂಲ, ಕಾರ್ಯಸೂಚಿ, ಬೆಳವಣಿಗೆ, ಜವಾಬ್ದಾರಿಯುತ ಚಟುವಟಿಕೆಗಳು,

---

* ಸರ್ಕಾರವು ಪ್ರಾರಂಭದಲ್ಲಿ ತನ್ನ 'ಹೊಸ ಪೊಲೀಸ್ ನೀತಿ'ಯನ್ನು ಘೋಷಿಸಿತು. ಅದಕ್ಕನುಗುಣವಾಗಿ ಕೇರಳ ಪೋಲೀಸರ ಹಳೇ ಶೈಲಿಯಲ್ಲಿ ಗಮನಾರ್ಹ ಬದಲಾವಣೆಯೂ ಕಂಡುಬಂದಿದೆ.

** ಪರಿಸ್ಥಿತಿಯ ನಿಜವಾದ ಚಿತ್ರ

ಪರಿಸ್ಥಿತಿಯನ್ನು ನಿಭಾಯಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳು ಇತ್ಯಾದಿ ಸಂಬಂಧಿತ ವಿಷಯಗಳನ್ನು ವಿಚಾರಣೆಯ ವ್ಯಾಪ್ತಿಗೆ ಸೇರಿಸಬೇಕು(84:04.08.58; 40:10.08.58;10:p25).

ಆಗಸ್ಟ್ 3, 1958ರಂದು, ವಿದ್ಯಾರ್ಥಿ ಪ್ರತಿನಿಧಿಗಳು ಮುಖ್ಯಮಂತ್ರಿಯನ್ನು ಕೇಳಪ್ಪನ್‌ರವರ ಸಮ್ಮುಖದಲ್ಲಿ ಭೇಟಿಯಾದದ್ದಲ್ಲದೆ, ಪತ್ರಿಕಾ ಪ್ರಕಟಣೆಯ ಆಧಾರದ ಮೇಲೆ ಪ್ರತಿಭಟನೆಯನ್ನು ಹಿಂಪಡೆಯಬಹುದು ಎಂದು ಅವರು ಸಮ್ಮತಿಯನ್ನೂ ನೀಡಿದರು. ಪ್ರತಿಭಟನೆಯಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳ ವಿರುದ್ಧದ ಎಲ್ಲಾ ಕಾನೂನು ಕ್ರಮಗಳನ್ನು ಹಿಂಪಡೆಯುವ, ಇದಕ್ಕೆ ಸಂಬಂಧಿಸಿದ ಎಲ್ಲಾ ಕೈದಿಗಳನ್ನು ಬಿಡುಗಡೆ ಮಾಡುವ, ಶಿಕ್ಷಣ ಸಂಸ್ಥೆಗಳು ಕೈಗೊಂಡಂಥ ಶಿಸ್ತು ಕ್ರಮವನ್ನು ರದ್ದುಪಡಿಸುವ, ಹಾಜರಾತಿ ನಷ್ಟವನ್ನು ಪರಿಗಣಿಸದಿರುವ, ಇವೇ ಮುಂತಾದ ವಿಚಾರಗಳನ್ನು ಸಾರ್ವಜನಿಕ ಕ್ಷಮಾದಾನದ ಭಾಗವಾಗಿರುವುದಾಗಿ ಮುಖ್ಯಮಂತ್ರಿಗಳು ಭರವಸೆ ನೀಡಿದರು(84:04.08.58; 40:10.08.58;10:p25).

ಒಂದಾಣೆ ದೋಣಿ ಕೂಲಿ ಮುಷ್ಕರವು ವಿದ್ಯಾರ್ಥಿಗಳ ಪ್ರತಿಭಟನೆಯಾಗಿದ್ದರೂ, ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ವಿರೋಧ ಪಕ್ಷಗಳು ಮತ್ತು ಕಮ್ಯುನಿಸ್ಟ್ ವಿರೋಧಿ ಗುಂಪುಗಳು ಆಯೋಜಿಸಿದ ರಾಜಕೀಯ ಪ್ರತಿಭಟನೆಗಳ ಪರಂಪರೆಯ ಪ್ರಮುಖ ಭಾಗವಾಗಿತ್ತು.

### ಕಾರ್ಮಿಕ ಹೋರಾಟಗಳು ಮತ್ತು ಪೋಲಿಸ್ ಫೈರಿಂಗ್

ಕೊಲ್ಲಂ ಜಿಲ್ಲೆಯ ಚಂದನತೋಪ್ಪುನಲ್ಲಿರುವ ಹಿಂದೂಸ್ತಾನ್ ಗೋಡಂಬಿ ಕಾರ್ಖಾನೆಯಲ್ಲಿ ಕಾರ್ಮಿಕ ವಿವಾದಗಳು ಪಿಕೆಟಿಂಗ್ ಅಥವಾ ದಾರಿಗಟ್ಟುವುದರ ಮತ್ತು ಲಾಕೌಟ್ಟಿನಲ್ಲಿ ಮಾತ್ರವಾಗಿ ಅದು ಕೊನೆಗೊಳ್ಳಲಿಲ್ಲ, ಆಗ ಪೋಲೀಸ್ ಫೈರಿಂಗ್ ಸಹ ನಡೆಯಿತು. ಬೋನಸ್, ಹೆರಿಗೆ ಅನುಕೂಲತೆಗಳು, ಹಾಜರಾತಿ ಕಾರ್ಡ್ ಇತ್ಯಾದಿಗಳಿಗೆ ಸಂಬಂಧಿಸಿದ ಕಾರ್ಮಿಕ ವಿವಾದ ಲೇಬರ್ ಕಚೇರಿಯ ಪರಿಶೀಲನೆಯಲ್ಲಿತ್ತು. ರಾಜಿ ಮಾತುಕತೆಗಳು ವಿಫಲವಾದವು. RSPಯ ಟ್ರೇಡ್ ಯೂನಿಯನ್ ಸಂಘಟನೆಯಾದ ಯುಟಿಯುಸಿಯ ನೇತೃತ್ವದಲ್ಲಿ ಕಾರ್ಖಾನೆಯ ಗೇಟ್ ಎದುರು ಸತ್ಯಾಗ್ರಹ ಆರಂಭವಾಯಿತು.* ಇದರಿಂದ ಕೋಪಗೊಂಡ ಕಾರ್ಖಾನೆ ಮಾಲೀಕರು ಕಾರ್ಖಾನೆಯನ್ನು ಮುಚ್ಚಿಸಿಬಿಟ್ಟರು. ಮುಚ್ಚಿದ ಕಾರ್ಖಾನೆಯಿಂದ ಸಂಸ್ಕರಿಸಿದ ಗೋಡಂಬಿ ಸಾಗಣೆ ಮಾಡುವಾಗ, ಕಾರ್ಮಿಕರು ಅಡ್ಡಿಪಡಿಸಿದರು**.ಕೂಡಲೇ

---

* 4 ಮೇ 2010ರಂದು, ಶ್ರೀ. ಟಿ.ಎಂ. ಪ್ರಭಾ ಜೊತೆ ಕೊಲ್ಲಂ ಆಶ್ರಮ ಎಂಬ ಸ್ಥಳದಲ್ಲಿ ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು. ಯುಟಿಯುಸಿ ಸಂಘಟನೆಯ ನಾಯಕರಾಗಿದ್ದ ಅವರು ಪೊಲೀಸರ ಬಂಧನಕ್ಕೊಳಗಾಗಿ ಥಳಿಸಲ್ಪಟ್ಟಿದ್ದರು.

** ಮೇ 3, 2010 ರಂದು ಅವರು ಚಂದನತೋಪ್‌ನಲ್ಲಿ ಶ್ರೀ ಕುಂದರ ಪರಮೇಶ್ವರನ್

ಮಾಲೀಕರು ಪೊಲೀಸರಿಗೆ ಮಾಹಿತಿ ನೀಡಿ ಸಹಾಯ ಕೋರಿದರು. ಪಿಕೆಟಿಂಗ್ ನಡೆಸುತ್ತಿದ್ದ ಕಾರ್ಮಿಕರನ್ನು ಚದುರಿಸಲು ಪೊಲೀಸರು ಯತ್ನಿಸಿದಾಗ, ಅವಿಧೇಯ ಪ್ರತಿಭಟನಾಕಾರರ ವಿರುದ್ಧ ಯಾವುದೇ ಮುನ್ಸೂಚನೆ ನೀಡದೆ ಪೊಲೀಸರು ಗುಂಡು ಹಾರಿಸಿದರು. ರಾಮನ್ ಮತ್ತು ಸುಲೈಮಾನ್ ಎನ್ನುವ ಇಬ್ಬರು ಕಾರ್ಮಿಕರು ಪೊಲೀಸರ ಗುಂಡಿನ ದಾಳಿಗೆ ಸ್ಥಳದಲ್ಲೇ ಸಾವನ್ನಪ್ಪಿದರು*(180:29.07.58) ಮತ್ತು ಕ್ರೂರವಾದ ಲಾಠಿಚಾರ್ಜ್‌ನಲ್ಲಿ ಹಲವರು ಗಾಯಗೊಂಡರು. ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ನಿಯಮ 144ರ ಅಡಿಯಲ್ಲಿ ಕೊಲ್ಲಂ ಮತ್ತು ಕರುನಾಗಪಳ್ಳಿ ತಾಲೂಕುಗಳಲ್ಲಿ ನಿಷೇಧಾಜ್ಞೆ ಜಾರಿಗೆ ಬಂದಿತು(143:28.07.58). ಆತ್ಮರಕ್ಷಣೆಗಾಗಿ ಪೊಲೀಸರು ಗುಂಡು ಹಾರಿಸಿದ್ದಾರೆ ಎಂದು ಸರ್ಕಾರ ಪತ್ರಿಕಾ ಪ್ರಕಟಣೆ ಹೊರಡಿಸಿತು.

ಪೊಲೀಸ್ ಗೋಲಿಬಾರ್ ವಿರುದ್ಧ ಪ್ರತಿಭಟಿಸಿ ಆರ್‌ಎಸ್‌ಪಿಯು, ಉದ್ಯೋಗ ಸಚಿವ ಟಿ.ವಿ. ಥಾಮಸ್ ಅವರ ಅಧಿಕೃತ ನಿವಾಸಕ್ಕೆ ಕಾರ್ಮಿಕರ ಜಾಥಾವನ್ನು ಸಂಘಟಿಸಲಾಯಿತು. ಎಲ್ಲಾ ವಿರೋಧಪಕ್ಷಗಳು ಮತ್ತು ಹೆಚ್ಚಿನ ಪತ್ರಿಕೆಗಳು ಪೋಲೀಸರ ಗುಂಡಿನ ದಾಳಿಯನ್ನು ಖಂಡಿಸಿದ್ದಲ್ಲದೆ, ಸರ್ಕಾರವನ್ನು ನಿರ್ದಯವಾಗಿ ಟೀಕಿಸಿದವು. ಸರಕಾರ ನ್ಯಾಯಾಂಗ ತನಿಖೆಗೆ ಆದೇಶಿಸಿತು. ಚಂದನತೋಪಿನಲ್ಲಿ ನಡೆದ ಪೋಲೀಸರ ಗುಂಡಿನ ದಾಳಿಗೆ ಕಾರಣವಾದ ಸಂದರ್ಭಗಳ ಕುರಿತು ತನಿಖೆ ನಡಸಲು, ಕಾಯಿದೆಯ ಸೆಕ್ಷನ್ 3ರ ಅಡಿಯಲ್ಲಿ ಆಯೋಗವನ್ನು ನೇಮಿಸಿ, ಕೇರಳ ಹೈಕೋರ್ಟ್‌ನ ಹಾಲಿ ನ್ಯಾಯಾಧೀಶ ನ್ಯಾಯಮೂರ್ತಿ ಶಂಕರನ್ ಅವರನ್ನು ಸರ್ಕಾರ ಆಯೋಗದ ಮುಖ್ಯಸ್ಥರನ್ನಾಗಿ ನೇಮಿಸಿತು(84:23.08.58). ವಿಚಾರಣೆ ನಡೆಸಿದ ಆಯೋಗವು ಅದರ ಪೊಲೀಸ್ ಕ್ರಮವನ್ನು ಸಮರ್ಥಿಸಿಕೊಂಡಿತು. ಆದರೆ ರಾಜ್ಯದಲ್ಲಿ ಹದಗೆಡುತ್ತಿರುವ ಅಭದ್ರತೆಯ ವಾತಾವರಣದ ಕುರಿತು, ಕ್ಷಮಾದಾನ, ಶಿಕ್ಷೆಗಳಲ್ಲಿ ರಿಯಾಯಿತಿ, ಮುಂತಾದ ಸರಕಾರದ ಕ್ರಮಗಳ ಬಗ್ಗೆ ನ್ಯಾಯಾಂಗ ಆಯೋಗದ ಅವಲೋಕನಗಳು ಸರ್ಕಾರಕ್ಕೆ ಪ್ರತಿಕೂಲವಾಗಿದ್ದವು. ಆಯೋಗದ ವಿಚಾರಣಾ ಫಲಿತದಲ್ಲಿ/ಫೈಂಡಿಗ್ಸ್‌ನಲ್ಲಿ ಆಕ್ಷೇಪಣಾ ಧ್ವನಿಯನ್ನು ಗಮನಿಸಬಹುದಾಗಿತ್ತು.

ಹೈರೇಂಜ್ ಪ್ರದೇಶದಲ್ಲಿ ತೋಟದ/ಎಸ್ಟೇಟ್ ಕಾರ್ಮಿಕರು ತೀವ್ರ ಶೋಷಣೆಗೆ ಒಳಗಾಗಿದ್ದರು. ತೋಟ/ಎಸ್ಟೇಟ್ ಮಾಲೀಕರು ಕಾರ್ಮಿಕರಿಗೆ ಕನಿಷ್ಠ ವೇತನ ಅಥವಾ ಇತರ ಸೌಲಭ್ಯಗಳನ್ನು ನೀಡುತ್ತಿರಲಿಲ್ಲ(84:30.01.58). ತಮ್ಮ ಹಕ್ಕುಗಳ ರಕ್ಷಣೆಗಾಗಿ ಎಐಟಿಯುಸಿ ಬ್ಯಾನರ್ ಅಡಿಯಲ್ಲಿ ಮುಷ್ಕರ ಆರಂಭಿಸಿದರು. ಮುಷ್ಕರವನ್ನು ಹತ್ತಿಕ್ಕಲು ತೋಟದ ಮಾಲೀಕರು, ಪೊಲೀಸರ ಮತ್ತು ಕ್ರಿಸ್ಟೋಫರ್ ಗೂಂಡಾಗಳ ಸೇವೆಯನ್ನು

---

ಪಿಳ್ಳೆರವರೊಂದಿಗೆ ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು. ಹೋರಾಟದಲ್ಲಿ ಭಾಗಿಗಳಾಗಿದ್ದ ಅವರು ಪೊಲೀಸರ ಬಂಧನಕ್ಕೊಳಗಾಗಿ ಥಳಿಸಲ್ಪಟ್ಟಿದ್ದರು.

* ಆರ್‌ಎಸ್‌ಪಿ ಪರ ದೈನಿಕವಾಗಿದ್ದ ಕೌಮುದಿ ಸರಕಾರವನ್ನು ಕಟುವಾಗಿ ಟೀಕಿಸುತ್ತಿದ್ದು, 'ರಕ್ತ ಮೆತ್ತಿದ ಕೈಗಳು'! ಎನ್ನುವ ಶೀರ್ಷಿಕೆಯ ಮೇಲೆ ಸಂಪಾದಕೀಯ ಬರೆದಿತ್ತು..

ಬಳಸಿಕೊಂಡರು. ಅಕ್ಟೋಬರ್ 15ರಂದು ನೆಟಿಕುಡಿ ಎಸ್ಟೇಟ್‌ನಲ್ಲಿ ಮುಷ್ಕರ ನಡೆಸುತ್ತಿದ್ದ ಪ್ರತಿಭಟನಾಕಾರರ ಮೇಲೆ ಪೊಲೀಸರು ಗುಂಡು ಹಾರಿಸಿದರು(107:16.10.58). ಮತ್ತು ಗುಡ್ರೆಯಲ್ಲಿನ ಎಸ್ಟೇಟ್ನನಲ್ಲೂ ತಲಯಾರ್ ಎಸ್ಟೇಟ್‌ನಲ್ಲೂ ಅಕ್ಟೋಬರ್ 20ರಂದು ಪೊಲೀಸರು ನಡೆಸಿದ ಫೈರಿಂಗ್‌ನಲ್ಲಿ ಹಲವಾರು ಕಾರ್ಮಿಕರು ಸತ್ತರು. ಮುನ್ನಾರ್ ತೋಟದ/ಎಸ್ಟೇಟ್ ಪ್ರದೇಶಗಳಲ್ಲಿ ಪೊಲೀಸ್ ಹಿಂಸಾಚಾರದ ವಿರುದ್ಧ ವ್ಯಾಪಕ ಪ್ರತಿಭಟನೆಗಳು ನಡೆದವು(84:12.10.58). ಈ ಪ್ರಕರಣದಲ್ಲೂ ನ್ಯಾಯಾಂಗ ವಿಚಾರಣೆಯ ಫಲಿತಗಳಲ್ಲಿ ಪೊಲೀಸ್ ಕ್ರಮವನ್ನು ಮಾನ್ಯ ಮಾಡಲಾಗಿತ್ತು.

## ಪೊಲೀಸ್ ಪಡೆಯ ಮೇಲೆ ಪ್ರಭಾವ

ಕಮ್ಯುನಿಸ್ಟ್ ಸರ್ಕಾರವು ತಟಸ್ಥ ಪೊಲೀಸ್ ನೀತಿಯನ್ನು ಅನುಸರಿಸುತ್ತಿದ್ದರೂ, ಬಂಡವಾಳಶಾಹಿಗಳು, ನಿವೃತ್ತ ಪೊಲೀಸ್ ಅಧಿಕಾರಿಗಳು, ವಿರೋಧಪಕ್ಷದ ನಾಯಕರು ಕೇಂದ್ರ ಗುಪ್ತಚರ ಸಂಸ್ಥೆಗಳಂತಹ ಕೆಲವು ಹೊರಗಿನ ಶಕ್ತಿಗಳು, ಆಗಾಗ ಪೊಲೀಸರ ಮೇಲೆ ಪ್ರಭಾವ ಬೀರುತ್ತಿದ್ದವು. ಕಮ್ಯುನಿಸ್ಟ್ ಸರ್ಕಾರ ರೂಪುಗೊಂಡ ನಂತರ, ಕೇಂದ್ರ ಸರ್ಕಾರದ ಗುಪ್ತಚರ ಇಲಾಖೆ ಕೇರಳದಲ್ಲಿ ತನ್ನ ಘಟಕವನ್ನು ಮರುಸ್ಥಾಪಿಸಿತು(33:17.04.57). ಈ ವ್ಯವಸ್ಥೆಯಿಂದಾಗಿ ಸೆಂಟ್ರಲ್ ಇಂಟೆಲಿಜೆನ್ಸ್ ಬ್ಯೂರೋದ ಕೇರಳ ಘಟಕದ ಸದಸ್ಯತ್ವ ಮತ್ತು ದಕ್ಷತೆಯಲ್ಲಿ ನಾಲ್ಕು ಪಟ್ಟು ಹೆಚ್ಚಳಕ್ಕೆ ಕಾರಣವಾಯಿತು.* ಅದು ಕೇರಳಪೋಲಿಸ್‌ನ ಉನ್ನತ ಅಧಿಕಾರಿಗಳೊಂದಿಗೆ ಬಲವಾದ ಸಂಬಂಧವನ್ನು ನೆಲೆಗೊಳಿಸಿಕೊಂಡಿತು. ಅಮೇರಿಕಾದ ಕೇಂದ್ರ ಗುಪ್ತಚರ ಸಂಸ್ಥೆಗೂ (ಸಿಐಎ) ಕೇರಳ ಪೊಲೀಸರ ಮೇಲೆ ಪ್ರಭಾವ ಬೀರಲು ಸಾಧ್ಯವಾಗಿತ್ತು ಎಂಬುದಕ್ಕೆ ಸಾಕ್ಷಿಗಳು ಸ್ಪಷ್ಟವಾಗಿದ್ದವು(200:p248-259). ತಿರುವಾಂಕೂರು–ಕೊಚ್ಚಿ ಪ್ರದೇಶದ ಮಾಜಿ ಮುಂಖ್ಯಮಂತ್ರಿ ಮತ್ತು ಕಾಂಗ್ರೆಸ್ ನಾಯಕರಾಗಿದ್ದ ಪನಂಪಿಳ್ಳಿ ಗೋವಿಂದ ಮೇನನ್ ಸರ್ಕಾರದ ಆದೇಶಗಳನ್ನು ಉಲ್ಲಂಘಿಸಲು ನಾಗರಿಕ ಸೇವಾ ಸದಸ್ಯರಲ್ಲಿ ಬಹಿರಂಗವಾಗಿ ವಿನಂತಿಸಿದ್ದರು(110:p5).

> "ಸರ್ಕಾರದ ಸೂಚನೆಗಳಿಗೆ ವಿರುದ್ಧವಾಗಿದ್ದರೂ ಸ್ವಂತ ಆತ್ಮಸಾಕ್ಷಿಗೆ ತಕ್ಕಂತೆ ನಡೆದುಕೊಳ್ಳಲು" ಅಧಿಕಾರಿಗಳಲ್ಲಿ ಅಪೇಕ್ಷಿಸಿದರು(110:p5). ಮೇ 2, 1958ರಂದು ತ್ರಿಶೂರ್‌ನಲ್ಲಿ ಸೇರಿದ ಸಭೆಯಲ್ಲಿ ಅವರು ಹೀಗೆ ಹೇಳಿದ್ದರು: "ಕಮ್ಯುನಿಸ್ಟರಿಂದ

---

* 33:17.04.57... 'ಕೇಂದ್ರ ಗುಪ್ತಚರ ತನಿಖಾ ವಿಭಾಗದ ದಕ್ಷಿಣ ವಲಯದ ಪ್ರಧಾಣ ಕೇಂದ್ರ ಮದ್ರಾಸ್ ಆಗಿತ್ತು ... ಮತ್ತು ಕೇರಳವು ಅದರ ವ್ಯಾಪ್ತಿಯಲ್ಲಿ ಬರುತ್ತಿತ್ತು...ಈ ಹೊಸ ಗುಪ್ತಚರ ಸಂಸ್ಥೆಯ ಸಂರಚನೆಯೆನ್ನುವುದು –ಪ್ರತಿ ತಾಲೂಕಿಗೆ ಒಬ್ಬ ಇನ್‌ಸ್ಪೆಕ್ಟರ್.. ಮತ್ತು ಕೆಲವು ತಾಲೂಕುಗಳಿಗೆ ಒಬ್ಬ ಸರ್ಕಲ್ ಇನ್ಸ್ ಪೆಕ್ಟರ್... ಪ್ರತಿ ಜಿಲ್ಲೆಗೆ ಒಬ್ಬ ಜಿಲ್ಲಾ ಅಧಿಕಾರಿ, ಕೇರಳಕ್ಕೆ ಮಾತ್ರವಾಗಿ ಒಂದು ಪ್ರಧಾನ ಕಛೇರಿ....ಹೀಗಿತ್ತು. ಈ ಗುಪ್ತಚರ ಜಾಲವನ್ನು ಮದ್ರಾಸ್ ಮೂಲದ ದಕ್ಷಿಣ ವಲಯ ಕೇಂದ್ರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿತ್ತು.. ಪ್ರಾದೇಶಿಕ ಕೇಂದ್ರ ಕಛೇರಿಯು ಕೇರಳದತ್ತ ಹೆಚ್ಚು ಗಮನ ಹರಿಸುತಿತ್ತು. ಪ್ರದೇಶದ ಒಟ್ಟಾರೆ ಕಾರ್ಯನಿರ್ವಹಣೆಯನ್ನು ಮತ್ತಷ್ಟು ಬಲಪಡಿಸಲಾಗಿತ್ತು."

ಕೇರಳವನ್ನು ವಿಮೋಚನೆಗೊಳಿಸುವ ಹೋರಾಟಕ್ಕೆ ಪೊಲೀಸರು, ಸೇನೆಯೂ ಸೇರಿದಂತೆ ಎಲ್ಲ ವರ್ಗದ ಜನರು ಮುಂದಾಗಬೇಕು"(67:06.06.58).

ಇನ್ನೊಂದು ಸಂದರ್ಭದಲ್ಲಿ ಅವರು ಹೇಳಿದ್ದು ಹೀಗೆ:

"ಐಎಎಸ್, ಐಪಿಎಸ್, ಅಧಿಕಾರಿಗಳು ಒಂದು ವಿಷಯವನ್ನು ಅರಿತುಕೊಳ್ಳಬೇಕು. ಕಮ್ಯುನಿಸ್ಟರ ಆದೇಶದಂತೆ ನೀವೊಂದು ವೇಳೆ ಕೆಟ್ಟದ್ದನ್ನೇನಾದರೂ ಮಾಡಿದರೆ, ನೀವು ಮುಂದೆ ಅವುಗಳಿಗೆಲ್ಲ ಸಮಂಜಸವಾಗಿ ಉತ್ತರಿಸಬೇಕಾಗುತ್ತದೆ. ನಾನು ನನ್ನ ವೈಯಕ್ತಿಕ ಹೆಸರಿನಲ್ಲಿ ಮತ್ತು ಜಂಟಿ ಕ್ರಿಯಾ ಕೌನ್ಸಿಲಿನ ಹೆಸರಿನಲ್ಲಿ ಈ ಎಚ್ಚರಿಕೆ ನೀಡುತ್ತಿದ್ದೇನೆ"(108:15.–.59).

ಪಣಂಪಳ್ಳಿಯವರ ಮಾತುಗಳು ಅಧಿಕಾರಿಗಳಲ್ಲಿ ಅಭದ್ರತೆಯ ಭಾವವನ್ನು ಮೂಡಿಸಿದ್ದಲ್ಲದೆ, ಅವರ ನೈತಿಕ ಸ್ಥೈರ್ಯವನ್ನೂ ಕುಗ್ಗಿಸಿತು. ಐಎಎಸ್, ಐಪಿಎಸ್ ಅಧಿಕಾರಿಗಳು ಸೇರಿದಂತೆ ಗಣನೀಯವಾದ ವಿಭಾಗವೊಂದು ಕಮ್ಯುನಿಸ್ಟ್ ವಿರೋಧಿಗಳ ಮತ್ತು ವಿರೋಧಪಕ್ಷಗಳ ಚಟುವಟಿಕೆಗಳಿಗೆ ಒಲವು ತೋರಿಸುತ್ತಿತ್ತು. ಉಳಿದವರು ನಿಷ್ಕ್ರಿಯರಾಗುವ ಪರಿಸ್ಥಿತಿ ಉಂಟಾಯಿತು. ಈ ಬೆಳವಣಿಗೆಗಳೊಂದಿಗೆ ಉಳಿದ ಕೆಲವು ವಿಚಾರಗಳೂ ಬೆಸೆತುಕೊಂಡಾಗ, EMS ಸರ್ಕಾರವನ್ನು ಕಿತ್ತೊಗೆಯಲಾಗುವುದೆಂದೂ ಕಾಂಗ್ರೆಸ್ ಸರ್ಕಾರ ಪುನರ್‌ಸ್ಥಾಪನೆಗೊಳ್ಳಲಿದೆಯೆಂದೂ ಸಾಮಾನ್ಯ ಜನರು ಭಾವಿಸತೊಡಗಿದರು.

**ಬಹಿರಂಗ ಹೋರಾಟಕ್ಕೆ ಸಿದ್ಧತೆಗಳು:**

**ಕ್ಯಾಥೋಲಿಕ್ ಚರ್ಚ್ ಮತ್ತು ಮನ್ನತ್**

ವಿವಿಧ ಹಂತದ ಪರಿಶೋಧನೆ ಮತ್ತು ಕ್ರಮಗಳಿಗೆ ಒಳಗೊಳಿಸಿದ ನಂತರ, ಶಾಸಕಾಂಗ ಆಯ್ಕೆ ಸಮಿತಿಯು ಶಿಫಾರಸು ಮಾಡಿದ ಕೇರಳ ಶಿಕ್ಷಣ ಮಸೂದೆಯನ್ನು ರಾಜ್ಯ ವಿಧಾನಸಭೆಯಲ್ಲಿ ಅಂಗೀಕರಿಸಿದ್ದಲ್ಲದೆ, ಭಾರತ ಸರ್ಕಾರದ ಸೂಕ್ಷ್ಮ ಪರಿಶೀಲನೆಯ ನಂತರ, ಅದನ್ನು ಸುಪ್ರೀಂ ಕೋರ್ಟ್‌ನ ಪರಿಗಣನೆಗೆ ಬಿಡಲಾಯಿತು. ಸುಪ್ರೀಂ ಕೋರ್ಟ್‌ನ ಅವಲೋಕನಗಳಿಗೆ ಅನುಗುಣವಾಗಿ ಮಸೂದೆಯನ್ನು ಸುಧಾರಣೆಗೆ ಒಳಪಡಿಸಿ, 19 ಫೆಬ್ರುವರಿ 1959ರಂದು ರಾಷ್ಟ್ರಪತಿಗಳ ಅನುಮೋದನೆ ಪಡೆದುಕೊಂಡಿತು.

ಫೆಬ್ರವರಿ 21, 1959ರಂದು, ಕೇರಳ ಕೌಮುದಿ ತನ್ನ ಸಂಪಾದಕೀಯದಲ್ಲಿ ಹೀಗೆ ಬರೆದಿದೆ:

"ಕೇರಳ ಶಿಕ್ಷಣ ಮಸೂದೆಗೆ ರಾಷ್ಟ್ರಪತಿಗಳು ಅನುಮೋದನೆ ನೀಡಿರುವುದು ಒಂದು ಅಲ್ಪಸಂಖ್ಯಾತ ಸಮುದಾಯದವರಲ್ಲಿ ಅತೃಪ್ತಿಯನ್ನುಂಟುಮಾಡಿದ್ದರೂ ಹೆಚ್ಚಿನ ಕೇರಳೀಯರು ಈ ಅನುಮೋದನೆಯನ್ನು ಸ್ವಾಗತಿಸುವುದರಲ್ಲಿ

ಯಾವುದೇ ಸಂದೇಹವಿಲ್ಲ. ಆರಂಭದ ಘಟ್ಟದಲ್ಲಿ, ಕ್ಯಾಥೋಲಿಕ್ ಕ್ರಿಶ್ಚಿಯನ್ನರು ಮಸೂದೆಯನ್ನು ವಿರೋಧಿಸಿದ್ದರು. ಅವರ ಪ್ರತಿಭಟನೆ ಸಹಜವಾದದ್ದು. ಈಗ ವಿರೋಧದ ಕೇಂದ್ರಬಿಂದು ಕ್ಯಾಥೋಲಿಕ್ ಚರ್ಚ್‌ನಿಂದ ಮನ್ನತ್ ಪದ್ಮನಾಭನ್ ನೇತೃತ್ವದ ಎನ್‌ಎಸ್‌ಎಸ್‌ಗೆ ಬದಲಾವಣೆಗೊಂಡಿದೆ. ಮನ್ನತ್ ಪದ್ಮನಾಭನ್ ಮತ್ತು ಎನ್‌ಎಸ್‌ಎಸ್‌ನ ಪ್ರಧಾನ ಕಾರ್ಯದರ್ಶಿ, ಮಕ್ಕಪುಳ ವಾಸುದೇವನ್ ಪಿಳ್ಳರವರ ಪ್ರತಿಭಟನೆಯ ಪ್ರಮುಖ ಕಾರಣ, ಮಸೂದೆಯ ಸೆಕ್ಷನ್ 11 ಎನ್ನುವುದು ಸ್ಪಷ್ಟ. ಮಸೂದೆಯ 11ನೇ ಸೆಕ್ಷನ್‌ನಲ್ಲಿ ಇರುವುದು ಶಿಕ್ಷಕರ ನೇಮಕಾತಿಗಳಲ್ಲಿ ಮೀಸಲಾತಿಯ ಕಾನೂನು. ಮಸೂದೆಯ ಆರಂಭದಿಂದಲೂ ಕ್ಯಾಥೋಲಿಕ್ ಕ್ರೈಸ್ತರು ಇದರ ವಿರುದ್ಧವಿದ್ದರು. ಮತ್ತೊಂದೆಡೆ, ನಾಯರ್ ಸರ್ವೀಸ್ ಸೊಸೈಟಿಯವರು ಮತ್ತು ಮನ್ನತ್ ಪದ್ಮನಾಭನ್ ಈ ಮಸೂದೆಯನ್ನು ಸ್ವಾಗತಿಸಿದ್ದರು. ವಾಸ್ತವವಾಗಿ ಪರಿಷ್ಕೃತ ಮಸೂದೆಯಲ್ಲಿ ನಿರ್ದಿಷ್ಟ ಸೆಕ್ಷನ್‌ನಲ್ಲಿ ಯಾವುದೇ ಬದಲಾವಣೆಯನ್ನು ತಂದಿರುವುದಿಲ್ಲ. ಸೆಕ್ಷನ್ 11*, ನಾಯರ್ ಸಮುದಾಯಕ್ಕೆ ಹಾನಿಕರವೆಂದಾಗಲೀ ಸಚಿವ ಮುಂಡಸ್ಸೆರಿ ನಾಯರ್ ಸಮುದಾಯದವರನ್ನು ನಾಶಮಾಡಲು ಉದ್ದೇಶಪೂರ್ವಕವಾಗಿ ಈ ಸೆಕ್ಷನ್ ಸೇರಿಸಲಾಗಿದೆಯೆಂದಾಗಲೀ ಯಾವುದೇ ದೂರನ್ನು ಮನ್ನತ್‌ರವರಾಗಲೀ ಮಕ್ಕಪುಳಿಯವರಾಗಲೀ ಎತ್ತಿರಲಿಲ್ಲ. ಹಾಗಾದರೆ ಯಾಕೆ ಈ ಹಿಮ್ಮುಖ/ಪ್ರತಿಗಾಮಿ ನಡೆ...? ಸ್ವತಃ ಮನ್ನತ್ ಅವರೇ ಸ್ಪಷ್ಟಪಡಿಸಬೇಕು(129:21.02.59).

ಇದಕ್ಕೆ ಪ್ರತಿಕ್ರಿಯೆಯಾಗಿ, ಪಿ.ಎಸ್. ವಾಸುದೇವನ್ ಪಿಳ್ಳ, 'ಎನ್‌ಎಸ್‌ಎಸ್ ಶಿಕ್ಷಣ ಮಸೂದೆಯನ್ನು ಏಕೆ ವಿರೋಧಿಸುತ್ತದೆ'(143:27.02.59) ಎನ್ನುವ ಶೀರ್ಷಿಕೆಯಡಿ ಕರಪತ್ರ ಪ್ರಕಟಿಸಿದರು. ಅದರಂತೆ, ಪ್ರತಿಭಟನೆಗೆ ಆಧಾರವಾದ ಕಾರಣಗಳು ಈ ಕೆಳಗಿನಂತಿವೆ:

1. ನಾಯರುಗಳ ಹಿತಾಸಕ್ತಿಗಳನ್ನು ಗರಿಷ್ಠ ಮಟ್ಟದಲ್ಲಿ ನಿರಾಕರಿಸುತ್ತದೆ.
2. ತಿದ್ದುಪಡಿಯಾದ ಮಸೂದೆಯ ಸೆಕ್ಷನ್ 14 ಮತ್ತು 15, ಕ್ರಿಶ್ಚಿಯನ್ ಮತ್ತು

---

* Section 11 of the Act to which objection was then taken reads: 'Appointment of teachers in Government and aided Schools.' The Public Service Commission shall, as empowered by this Act, select candidates for appointment as teachers in aided schools. Before the 31st May of each year, the Public Service Commission shall select candidates with due regard to the probable number of vacancies of teachers that may arise in the course of the year. The candidates shall be selected for each district separately and the list of candidates so selected shall be published in the Gazette. Teachers of aided schools shall be appointed by the manager only from the candidates so selected for the district in which the school is located, provided that the manager may, for sufficient reason, with the permission of the Public Service Commission, appoint teachers selected for any other district. Appointment of teachers in government schools shall also be made from the list of candidates so published.In selecting candidates under Sub -section (1) the Public Service Commission shall have regard to the provision made by the government under clause (4) of article 16 of the Constitution.'

ಮುಸ್ಲಿಂ ಶಾಲೆಗಳ ಮೇಲೆ ಪರಿಣಾಮ ಬೀರುವುದಿಲ್ಲ. ಅವುಗಳು ಅಪಾಯ ತಂದೊಡ್ಡುತ್ತಿರುವುದು ಸುಮಾರು 4000ದಷ್ಟಿರುವ ಹಿಂದೂ ಶಾಲೆಗಳಿಗೆ.

3. ಮೀಸಲಾತಿಯ ಹೆಸರಿನಲ್ಲಿ ನಡೆಯುತ್ತಿರುವ ಕ್ರೂರವಾದ ತಾರತಮ್ಯತೆ ಇನ್ನೂ ನಿಂತಿಲ್ಲ.

4. ಪ್ರಸ್ತುತ ಮೀಸಲಾತಿ ವಿಭಾಗದಲ್ಲಿ ಸೇರದ ವಲಯಗಳಿಗೂ ಮೀಸಲಾತಿಯನ್ನು ವಿಸ್ತರಿಸುವ ಪ್ರಯತ್ನಗಳು.

5. ನಮ್ಮ ವಿರೋಧವೆನ್ನುವುದು, ಸಮುದಾಯದ ನೈಜ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವ ಸಲುವಾಗಿ; ಭವಿಷ್ಯದ ಪೀಳಿಗೆಯನ್ನು ಹತಾಶೆ ಮತ್ತು ನಿರುದ್ಯೋಗರಹಿತ್ವದಿಂದ ಉಳಿಸುವ ಸಲುವಾಗಿ; ಸಂಘದ ಅಸ್ತಿತ್ವವನ್ನು ಖಚಿತ ಪಡಿಸಿಕೊಳ್ಳಬೇಕಾಗಿದೆ.261(201:p156)

ಆದರೆ ಕಾಲಡಿ, ಮುವಾಟ್ಟುಪುಳ ಮುಂತಾದ ಕಡೆ ಎನ್‌ಎಸ್‌ಎಸ್ ಸಮ್ಮೇಳನಗಳ (ಕರ ಯೋಗಗಳು) ಹಲವು ಸದಸ್ಯರು, ಮನ್ನತ್ ಪದ್ಮನಾಭನ್ ಅವರ ಮಾತುಗಳನ್ನೂ ಶಿಕ್ಷಣ ಮಸೂದೆಯನ್ನು ವಿರೋಧಿಸುವ ಧೋರಣೆಯನ್ನೂ ಒಪ್ಪಲಿಲ್ಲ(33:11.02.59). ಎನ್‌ಎಸ್‌ಎಸ್ ಮತ್ತು ಕ್ಯಾಥೋಲಿಕ್ ಚರ್ಚ್ ಎನ್ನುವ ಈ ಎರಡು ಸಮುದಾಯದ ಗುಂಪುಗಳ ಮುಖಂಡರು, ಶಿಕ್ಷಣ ಕಾಯಿದೆ ವಿರುದ್ಧವಾಗಿಯೂ ಈ ಕಾನೂನನ್ನು ಸುಧಾರಣೆಗೊಳಿಸಿ ಜಾರಿಗೊಳಿಸಲು ಜವಾಬ್ದಾರರಾದ ಸರ್ಕಾರದ ವಿರುದ್ಧವಾಗಿಯೂ ಜಂಟಿ ಧರ್ಮಯುದ್ಧವನ್ನು ಪ್ರಾರಂಭಿಸಲಾಯಿತು. ಈ ಆಂದೋಲನದ ಅತ್ಯಂತ ದುರದೃಷ್ಟಕರ ಸಂಗತಿಯೆಂದರೆ, ಇದು ಫಲವತ್ತಾದ ಮಣ್ಣಿನಲ್ಲಿ ಕೋಮುದ್ವೇಷದ ಬೀಜಗಳನ್ನು ಬಿತ್ತಿ ಕೋಮುವಾದ ನೀತಿಯನ್ನು ಬೆಳೆಸಿತು. ಕೋಮು ಭಾವನೆಗಳನ್ನು ಕೆರಳಿಸುವಂಥ ಕರೆಗಳನ್ನು ಕೊಟ್ಟರು. ಅಗತ್ಯ ಬಿದ್ದರೆ ಪ್ರಾಣ ತ್ಯಾಗಕ್ಕೂ ಸಿದ್ಧ ಎಂದು ಮನ್ನತ್ ಪದ್ಮನಾಭನ್ ಚಂಗನಾಶ್ಶೇರಿಯಲ್ಲಿ ನಡೆದ ಸಭೆಯಲ್ಲಿ ನಾಯರ್‌ಗಳಿಗೆ ಹೇಳಿದರು. 'ಯಾಕೆಂದರೆ ಸಮುದಾಯವು ಬೆಂಕಿಯಿಂದ ಆವೃತವಾಗಿದೆ' (202:10.03.59;186:p7). ತಿರು–ಕೊಚ್ಚಿ ವಿಧಾನಸಭೆಯ ಮಾಜಿ ಸ್ಪೀಕರ್ ಗಂಗಾಧರನ್ ನಾಯರ್‌ರವರು ನಾಯರ್ ಸಮುದಾಯದವರನ್ನು ಕೆರಳಿಸುವ ಪ್ರಯತ್ನವನ್ನು ಸಂಪೂರ್ಣವಾಗಿ ಖಂಡಿಸಿದರು(203:04.04.59;186:p7).

ಮನ್ನತ್ ಪದ್ಮನಾಭನ್ ಅವರು ಮಾರ್ಚ್ 25, 1959ರಂದು ಕೇರಳದ ಮುಖ್ಯಮಂತ್ರಿಗೆ ಬರೆದ ಬಹಿರಂಗ ಪತ್ರದಲ್ಲಿ ಹೀಗೆ ಹೇಳಿದ್ದಾರೆ.

> "ನಾನು ಇತರ ಮ್ಯಾನೇಜ್‌ಮೆಂಟ್‌ಗಳ ಆಶಯಕ್ಕೆ ಅನುಗುಣವಾಗಿಯೇ ಈ ಅವಶ್ಯಕತೆಯನ್ನು (ಶಿಕ್ಷಣ ಕಾನೂನಿನ ಬದಲಿಗೆ ಹೊಸ ಶಾಸನದ ನಿರ್ಮಾಣ) ಎತ್ತಿ ಹಿಡಿದದ್ದು. ನಾನು ನಿಮಗೆ ಹೇಳಬಯಸುವುದೇನೆಂದರೆ, ನೀವು ಅದನ್ನು ಹಿಂಪಡೆಯಲು ಸಾಧ್ಯವಾಗದಿದ್ದರೆ, ಬಹಿರಂಗ ಹೋರಾಟ ಆರಂಭಿಸುತ್ತೇವೆ" (143:29.03.59).

ಏಪ್ರಿಲ್ ಮಧ್ಯಭಾಗದ ವೇಳೆಗೆ, ಮನ್ನತ್ ಅವರ ಬಹಿರಂಗ ಹೋರಾಟದ ಪರಿಕಲ್ಪನೆಯು ವಿಭಿನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಿತ್ತು. ಶಿಕ್ಷಣದ ಮಸೂದೆಯ ಬಗ್ಗೆಯಾಗಲೀ ಕೃಷಿಗೆ ಸಂಬಂಧಿಸಿದ ಮಸೂದೆಯ ಬಗ್ಗೆಯಾಗಲೀ ತಿದ್ದುಪಡಿ ತರಬೇಕೆನ್ನುವುದಕ್ಕಾಗಿಯಾಗಲೀ ಆಗಿರಲಿಲ್ಲ ಪ್ರಸ್ತುತ ಹೋರಾಟ. ಬದಲಿಗೆ, ಕಮ್ಯುನಿಸ್ಟ್ ಸರ್ಕಾರವನ್ನು ಬುಡಮೇಲು ಮಾಡುವುದಕ್ಕಾಗಿ ಮಾತ್ರವೇ ಆಗಿತ್ತು(160:p175). ರಾಜಕೀಯ ಗುರಿಯನ್ನು ಪೂರೈಸಿಕೊಳ್ಳುವುದಕ್ಕಾಗಿ, ಕೋಮು ಭಾವನೆಗಳನ್ನು ಕೆರಳಿಸಲಾಯಿತು. ಏಪ್ರಿಲ್ 12, 1959ರಂದು ತಿರುವಲ್ಲಾದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ, ಮನ್ನಂ ಅವರು ಈ ಕೆಳಗಿನಂತೆ ಕೃತಜ್ಞತೆಯನ್ನು ಸಲ್ಲಿಸಿದರು:

> "ನಾಯರುಗಳೇ, ಕಮ್ಯುನಿಸ್ಟರಿಂದ ಆಡಳಿತವನ್ನು ವಹಿಸಿಕೊಳ್ಳಲು ಹೋಗುತ್ತಿದ್ದೇವೆ. ಕಮ್ಯುನಿಸ್ಟರನ್ನು ಹೊರಹಾಕಿದರೆ ಯಾರು ಆಡಳಿತ ನಡೆಸುತ್ತಾರೆ ಎಂಬ ಪ್ರಶ್ನೆಗೆ ಸರಳ ಉತ್ತರ 'ನಾಯರ್'(203:14.04.59;186:p7).

ಮನ್ನಂ ವಿಮೋಚನಾ ಹೋರಾಟದ ಸಮಯದಲ್ಲಿ ಇಂತಹ ತೀವ್ರವಾದ ಕೋಮು ಪ್ರಚಾರವನ್ನು ನಡೆಸಿದರು. ತಿರುವನಂತಪುರಂನಲ್ಲಿ ನಡೆದ ಸಭೆಯಲ್ಲಿ ಮನ್ನಂ ಮಾತನಾಡಿ,

> "ಕೇರಳದಿಂದ ಕಮ್ಯುನಿಸ್ಟರನ್ನು ಗಂಟುಮೂಟೆ ಕಟ್ಟಿ ಕಳಿಸಿಕೊಟ್ಟರೆ ಮಾತ್ರ ಸಾಕಾಗುವುದಿಲ್ಲ. ಅವರನ್ನು ಭಾರತದಿಂದ ಅವರ ಪಿತೃಭೂಮಿಯಾದ ರಷ್ಯಾಕ್ಕೆ ಕಳುಹಿಸಿದ ನಂತರವೇ ನನ್ನ ಮನಸ್ಸು ಸಂಪೂರ್ಣವಾಗಿ ವಿಶ್ರಾಂತಿ ಪಡೆಯುವುದು (202:24.04.59;186:p7).

ಕ್ಯಾಥೋಲಿಕರು ಕೇರಳದಲ್ಲಿ ಪ್ರಬಲವಾದ ಸಮುದಾಯ ಸಂಘಟನೆಯನ್ನು ಹೊಂದಿದ್ದರು. ಕಮ್ಯುನಿಸ್ಟರ ಬದ್ಧವೈರಿಯಾದ ಕ್ಯಾಥೋಲಿಕರು ಕೇರಳದಲ್ಲಿ ಕಾಂಗ್ರೆಸ್ ಪಕ್ಷವನ್ನು ತಮ್ಮ ಪ್ರಾಬಲ್ಯಕ್ಕೆ ಪಡೆದುಕೊಂಡು ಬಹುಕಾಲದಿಂದಲೂ ರಾಜಕೀಯ ಜೀವನವನ್ನು ನಿಯಂತ್ರಿಸುತ್ತಿದ್ದರು. ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಅವಿರತ ಪ್ರಚಾರ ನಡೆಸುವವನೊಬ್ಬ ಕೇರಳದ ಕ್ರೈಸ್ತಅಧಿಕಾರಶ್ರೇಣಿ ಮನ್ನತ್‌ನಲ್ಲೂ ಕಾಣಿಸಿಕೊಂಡಿತು. ಹೊಂಚುದಾಳಿ ನಡೆಸುವ ಕುದುರೆಯಂತೆ, ಅವರನ್ನು ಬಳಸಲು ದೈವದತ್ತವಾದ ಒಂದು ಅವಕಾಶವಾಗಿ ಬಿಷಪ್‌ಗಳು ಇದನ್ನು ಕಂಡರು. ಅವರನ್ನು ಕರೆದು ಗೌರವಿಸುವ ಸಭೆಯ ಬಗ್ಗೆ ಕ್ಯಾಥೋಲಿಕ್ ಪತ್ರಿಕೆಗಳು ವ್ಯಾಪಕವಾದ ಪ್ರಚಾರ ನೀಡಿದವು. ಅವರ ಪ್ರೇಕ್ಷಕ ಬಳಗದಲ್ಲಿ ಬಹಳಷ್ಟು ಕ್ಯಾಥೋಲಿಕ್ಕರು ಇರುತ್ತಿದ್ದರು. ಇಂಥ ಸಭೆಗಳಲ್ಲಿ ಕ್ಯಾಥೋಲಿಕ್ ಧರ್ಮ ಪ್ರಚಾರಕರೂ ಇರುತ್ತಿದ್ದರು. ಆರ್ಭಟಗಳಿಗೆ ಅಗತ್ಯವಾದ ದೇಣಿಗೆಗಳನ್ನು ರಾಶಿ ರಾಶಿಯಾಗಿ ಸಂಗ್ರಹಿಸಲಾಗುತ್ತಿದ್ದವು(40:29.04.59). ಅವರು ಸಾಮಾನ್ಯ ಆಂದೋಲನಾ ತಂತ್ರವನ್ನು ರೂಪಿಸಿಕೊಂಡು, ಜಂಟಿ ಕ್ರಿಯಾ ಮಂಡಳಿಯನ್ನೂ ರಚಿಸಿಕೊಂಡಿದ್ದರು.

ಶಿಕ್ಷಣ ಕಾಯಿದೆಯ ವಿರುದ್ಧ ಮಾರ್ಚ್ 25, 1959ರಂದು ಮನ್ನತ್ ಪದ್ಮನಾಭನ್

ಬಹಿರಂಗ ಸವಾಲು ಎಸೆಯುತ್ತಿದ್ದಂತೆ, ಆಂದೋಲನವು ಕಮ್ಯುನಿಸ್ಟ್ ಮತ್ತು ಸರ್ಕಾರದ ವಿರೋಧಿ ಹೋರಾಟದ ಕಡೆಗೆ ಜಾರಿ ಬದಲಾಗಿ ಬಿಟ್ಟಿತು(33:29.03.59). ಒಂದರ್ಥದಲ್ಲಿ ಇದು ಜಾರುವಿಕೆಯಾಗಿರಲಿಲ್ಲ. ಬದಲಿಗೆ, ಇದು ರಾಜಕೀಯ ಗುರಿ ಸಾಧಿಸುವ ಉದ್ದೇಶಪೂರ್ವಕವಾದ ನಿರ್ದೇಶನ ನೀಡುತ್ತಿರುವಂತಿತ್ತು. ಬಿಷಪ್‌ಗಳು ಮತ್ತು ಎನ್‌ಎಸ್‌ಎಸ್ ನಾಯಕರು, ಈ ಸಮುದಾಯಕ್ಕೆ ಸೇರಿದ ಕಾಂಗ್ರೆಸ್ ನಾಯಕರೊಂದಿಗೆ ಹಂತ ಹಂತವಾಗಿ ಚಳುವಳಿಗೆ ಸ್ಪಷ್ಟವಾದ ರಾಜಕೀಯ ರೂಪವನ್ನೂ ಉದ್ದೇಶವನ್ನೂ ನೀಡಿದರು. ಶಿಕ್ಷಣ ಕಾಯಿದೆ ವಿರುದ್ಧದ ಆಂದೋಲನ ಅಂತ್ಯಗೊಳ್ಳುವುದರೊಂದಿಗೆ ಈ ಹೋರಾಟವು ಕೊನೆಗೊಳ್ಳುವುದಿಲ್ಲವೆಂದು ಮೇ 4ರಂದು ಸೇರಿದ ಈ ಸಮುದಾಯದ ಗುಂಪುಗಳ ಜಂಟಿ ಸಮ್ಮೇಳನದಲ್ಲಿ ಅಂಗೀಕರಿಸಿದ ನಿರ್ಣಯಲ್ಲಿ ಅವರು ಗಟ್ಟಿಯಾಗಿ ಘೋಷಿಸಿದರು. ಮನ್ನತ್ ಅವರ ಮಾತುಗಳಲ್ಲಿ:

> "ಶಿಕ್ಷಣ ಕಾಯಿದೆ ಅಥವಾ ಭೂಮಸೂದೆಯಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡುವ ಮೂಲಕ ಅವರಿಗೆ (ಕಮ್ಯುನಿಸ್ಟ್ ಮಂತ್ರಿಗಳಿಗೆ) ತಾವಾಗಿ ಇವುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ನಮ್ಮ ಗುರಿ, ಕಮ್ಯುನಿಸ್ಟ್ ಸರ್ಕಾರವನ್ನು ಅಧಿಕಾರದಿಂದ ತೆಗೆದುಹಾಕುವುದೇ ಆಗಿದೆ(160:p176).

ಚರ್ಚ್ ಮತ್ತು ಎನ್‌ಎಸ್‌ಎಸ್ ಆಶ್ರಯದಲ್ಲಿರುವ ಶಾಲೆಗಳನ್ನು ಮುಚ್ಚುವುದು ಮಾತ್ರವಲ್ಲ, ರಾಜ್ಯದ ಉಳಿದ ಶಾಲೆಗಳು, ಈ ಹಿಮ್ಮೆಟ್ಟುವಿಕೆಯ ನಂತರ ತೆರೆಯುವುದನ್ನು ತಡೆಯುವುದು ಕೂಡ ಯೋಜನೆಯ ಭಾಗವಾಗಿದೆ, ಎಂದು ಘೋಷಿಸಲಾಯಿತು. ನಿಶ್ಚಿತ ಸಮಸ್ಯೆಗಳನ್ನು ಪರಿಹರಿಸುವುದು ಮುಖ್ಯ ಉದ್ದೇಶವಲ್ಲ, ಬದಲಿಗೆ ಕಮ್ಯುನಿಸ್ಟ್ ಮಂತ್ರಿಮಂಡಲವನ್ನು ಉರುಳಿಸುವುದೇ ಪ್ರಮುಖ ಉದ್ದೇಶ. ಮನ್ನತ್ 'ರಕ್ಷಕನ' (ಮೆಸ್ಸಿಹಾ ತರಹ) ವೇಷ ಧರಿಸಿದರು. ಛತ್ರಛಾಮರ, ವಿಜಯಾಶ್ವ, ಆನೆಗಳು, ಸೇವಕವೃಂದ ಮುಂತಾದವುಗಳೊಂದಿಗೆ ಎರಡನೇ ವಿಧದ ವಿಗ್ರಹವನ್ನು ಮಯೂರ ಸಿಂಹಾಸದಲ್ಲಿ ಪ್ರತಿಷ್ಠಾಪಿಸಿ, ರಣರಂಗಕ್ಕೆ ರಥದಲ್ಲಿ ಮುನ್ನಡೆಯುವುದಕ್ಕೆ ಸಮಾನವಾಗಿ ಮನ್ನತ್‌ರನ್ನು ಕೇಂದ್ರೀಕರಿಸಿ ಮೆರವಣಿಗೆಗಳನ್ನು ವ್ಯವಸ್ಥೆ ಮಾಡಲಾದವು(40:14.06.59).




ಮನ್ನತ್ ಪದ್ಮನಾಭನ್ ರಿಗೆ ತೃಶೂರಿನಲ್ಲ ಸ್ವಾಗತ ಕೋರಿ ಗೌರವಿಸಿದಾಗ...(ಮೇ 31, 1959)

ಮಧ್ಯಕಾಲೀನ ವೇಷಭೂಷಣಗಳನ್ನು ಅಳವಡಿಸಿಕೊಳ್ಳುವ ಮೂಲಕ ಚಳುವಳಿ ಹೇಗೆ ಅದು ತನ್ನ ಊಳಿಗಮಾನ್ಯ ಪ್ರತಿಗಾಮಿ ಸಿದ್ಧಾಂತವನ್ನು ಪ್ರತಿಬಿಂಬಿಸುತ್ತದೆ ಎಂದು ಮೇ 15, 1959ರ ನಾಯರ್ ಪರ ದಿನಪತ್ರಿಕೆಯಾದ ದೇಶಬಂಧುವಿನಲ್ಲಿ ವಿವರಿಸಲಾಗಿದೆ.

> "ಕರಿಮಣ್ಣೂರಿನಿಂದ ಬಂದ ಜಾಥಾದ ಮುಂದೆ ಒಂದು ರಣಾಶ್ವವಿತ್ತು. ಈ ಕುದುರೆಯ ಎರಡೂ ಬದಿಗಳಲ್ಲಿ ಸ್ವಯಂಸೇವಕರು ಹೊರೆಯಿಂದ ಖಡ್ಗ ತೆಗೆದು ಅದನ್ನು ಕೈಯಿಂದ ಎತ್ತಿ ಹಿಡಿದ ಭಂಗಿಯಲ್ಲಿ ಸೈನಿಕರಂತೆ ಶಿಸ್ತಿನಿಂದ ಕವಾಯಿತು ಮಾಡಿದರು. ಖಾಕಿ ಚೆಡ್ಡಿ, ನೀಲಿ ಶರ್ಟ್ ಮತ್ತು ಬಿಳಿ ಟೋಪಿಗಳನ್ನು ಧರಿಸಿ ಕ್ರಿಸ್ಟೋಫರ್ಸ್‌ರವರು ಯುದ್ಧಭೂಮಿಯತ್ತ ಮುನ್ನಡೆಯುತ್ತಿರುವಂತೆ ಪ್ರಸ್ತುತ ರಣಾಶ್ವವನ್ನು ಬೆಂಗಾವಲು ಪಡೆ ಸೇವೆ ಮಾಡುತ್ತಿತ್ತು. ವಾದ್ಯ ಸಂಘದವರು ಯುದ್ಧದ ಹಾಡಿನಲ್ಲಿ, ಯುದ್ಧದ ಸಿದ್ಧತೆಗಳು ನಡೆಯುತ್ತಿವೆಯೇನೋ ಎಂದು ಅನಿಸುವಂಥ ಪರಿಣಾಮ ಉಂಟುಮಾಡುತ್ತಿತ್ತು (203:25.05.59;169:p24).

ಮನ್ನತ್ ಪದ್ಮನಾಭನ್ ತಮ್ಮ ದೈನಂದಿನ ಸಭೆಗಳಲ್ಲಿ 1959 ಜೂನ್ 1ರಂದು 'ವಿಮೋಚನಾ ದಿನ' ಎಂದು ಘೋಷಿಸಲಾಯಿತು.

> "ಕೇರಳ ಮಾತ್ರವಲ್ಲ, ಭಾರತವನ್ನೂ, ಕೆಂಪುಜನರಿಂದ (ಕಮ್ಯುನಿಸ್ಟರಿಂದ) ವಿಮೋಚನೆಗೊಳಿಸುವುದಲ್ಲದೆ, ಮನ್ನಂ ತಮ್ಮ ರಣಾಶ್ವವನ್ನು ಸಿಎಂ ಚೇಂಬರ್‌ನಲ್ಲಿ ಕಟ್ಟಿಹಾಕುವುದನ್ನೂ ಮಾಡಲಾಗುವುದು"(143:02.06.59).

ಈ ಹೋರಾಟವನ್ನು ಅಶ್ವಮೇಧಯಾಗದೊಂದಿಗೆ ಹೋಲಿಸಿದ ಅವರು, ಹೀಗೆ ಹೇಳಿದರು:

> "ಇದರಲ್ಲಿ ಯಾವುದೇ ಅನುಮಾನಕ್ಕೆ ಆಸ್ಪದವಿಲ್ಲ. ಈ ಮನ್ನಂ ನೇರವಾಗಿ ಸೆಕ್ರೆಟರಿಯೇಟ್ ಕಟ್ಟಡಕ್ಕೆ ಯಾಗಾಶ್ವವನ್ನು ಕೊಂಡುಹೋಗಿ, ಮುಖ್ಯಮಂತ್ರಿನಂಬೂದಿರಿಪಾಡ್ ಅವರ ಕಚೇರಿ ಕೊಠಡಿಯಲ್ಲಿ ಇದನ್ನು ಕಟ್ಟಿಹಾಕುವ ಕೆಲಸವನ್ನು ಮಾಡಿಯೇ ತೀರುತ್ತೇನೆ"(143:28.04.59).

ಪುರಾಣದ ಆರಾಧನಾ ಮೂರ್ತಿಯಂತೆ, ಸಿಂಹಾಸನಾರೂಢನಾದ ಮನ್ನತ್‌ರನ್ನು, ಮಧ್ಯಕಾಲೀನ ಮೆರವಣಿಗೆಯನ್ನು ನೆನಪಿಸುವ ರೀತಿಯಲ್ಲಿ ಆಗಮಿಸುವಂತೆ ಮಾಡಿದ್ದು, ಅವರು ಪ್ರತಿಪಾದಿಸುವ ಕೋಮುವಾದಿ ಪ್ರತಿಗಾಮಿ ಹಿತಾಸಕ್ತಿಗಳಿಗೆ ಅನುಗುಣವಾಗಿಯೇ ಬಿಂಬಿಸಲಾಗಿತ್ತು. ತಮ್ಮ ಅಭಿಯಾನದ ಆರಂಭದ ಘಟ್ಟದಲ್ಲಿ ಮನ್ನತ್ ಪದ್ಮನಾಭನ್ ಮೂರು ವಿಷಯಗಳಿಗೆ ಒಪ್ಪಿಗೆ ಸೂಚಿಸಿದ್ದರು. ಮೊದಲನೆಯದು ಶಿಕ್ಷಣ ಕಾನೂನಿಗೆ ಸಂಬಂಧಿಸಿದ್ದು. ಮುಖ್ಯಮಂತ್ರಿಗಳಿಗೆ ಬರೆದ ಬಹಿರಂಗ ಪತ್ರದಲ್ಲಿ ಅವರು ನೀಡಿದ ಎಚ್ಚರಿಕೆಯ ವಿಷಯ ಅಡಗಿತ್ತು(143:29.03.59). ಎರಡನೆಯದಾಗಿ, ಅವರು ಕೋಪೋದ್ರಿಕ್ತರಾಗಿ ಭೂಕಾನೂನನ್ನು ವಿರೋಧಿಸಿದರು. ಉದಾಹರಣೆಗೆ ಪನ್ಮನ

ಭಾಷಣದಲ್ಲಿ ಅವರು ಹೀಗೆ ಹೇಳಿರುವುದಾಗಿ ವರದಿ ಮಾಡಿತ್ತು:

> "ಅಂಗೀಕರಿಸಲಾದ ಮುಂಡಸ್ಸೆರಿ ಕಾಯಿದೆ (ಕೇರಳ ಶಿಕ್ಷಣ ಕಾಯಿದೆ) ಕಸದ ಬುಟ್ಟಿಗೆ ಎಸೆಯುವ ಸಾಮರ್ಥ್ಯ ನಾಯರುಗಳಿಗೆ ಇದೆ. ಅಂಗೀಕರಿಸಲಿರುವ ಗೌರಿಯ (ಕೆ.ಆರ್. ಗೌರಿಯಮ್ಮ, ಕೃಷಿ ಮಂತ್ರಿ) ಕಾನೂನಿಗೂ (ಕೇರಳ ಕೃಷಿ ಸಂಬಂಧಗಳ ಮಸೂದೆ) ಇದೇ ಗತಿ ಆಗುತ್ತದೆ. ಅಗತ್ಯಬಿದ್ದರೆ, ಕಾನೂನು ಉಲ್ಲಂಘನೆಯ ಕಾರ್ಯಕ್ರವನ್ನೂ ಆಯೋಜಿಸಲು ನಾವು ನಿರ್ಧರಿಸಿದ್ದೇವೆ." (202:25.04.59;204:p12).

ಅವರು ತಿರುವಲ್ಲಾದಲ್ಲಿ ತಮ್ಮ ಭಾಷಣದ ನಡುವೆ ಈ ರೀತಿ ಹೇಳಿದ್ದಾಗಿ ವರದಿಯಾಗಿದೆ:

> "ಹೆಚ್ಚುವರಿ ಭೂಮಿ ಸ್ವಾಧೀನಪಡಿಸಿಕೊಳ್ಳಬೇಕು ಎಂದು ಹೇಳಿಕೊಂಡು ಬರುವವರನ್ನು ಜೀವಂತವಾಗಿ ವಾಪಸ್ ಕಳುಹಿಸಲು ಸಾಧ್ಯವಿಲ್ಲ. ಆ ಬಗ್ಗೆ ನನಗೆ ವಿಷಾಧವಿದೆ. ಕಮ್ಯುನಿಸ್ಟ್ ಮಂತ್ರಿಗಳು ಸೇರಿದಂತೆ ಎಲ್ಲರೂ ಜೀವಂತವಾಗಿರಬೇಕೆಂದು ನಾನು ಬಯಸುತ್ತೇನೆ"(203:14.04.59p12).

ಸಂವಿಧಾನದ 16(4)ನೇ ವಿಧಿಯ ಅಡಿಯಲ್ಲಿ ಮಂಜೂರಾದ ಸಮುದಾಯ/ ಜಾತಿ ಮೀಸಲಾತಿಯ ತತ್ವದ ಆಧಾರದ ಮೇಲೆ ನಾಯರ್ ಯುವಕರನ್ನು ಪ್ರಚೋದಿಸುವುದಕ್ಕಾಗಿ ಮನ್ನತ್ತು ಪದ್ಮನಾಭನ್ ಮೂರನೆಯ ವಿಷಯವಾಗಿ, ಕೇರಳ ಸರಕಾರವು ಜಾತಿ/ ಸಮುದಾಯ ಆಧಾರಿತ ಮೀಸಲಾತಿಯನ್ನು ಕೈಬಿಡಬೇಕು ಎಂದು ಅವರು ಆಗ್ರಹಿಸುವತ್ತ ಅವರು ಗಮನ ಹರಿಸಿದರು. ಈಳವ/ಈಡಿಗರನ್ನು ಟೀಕಿಸಲು ಅವರು ಬಳಸಿದ ಅಶ್ಲೀಲ ಭಾಷೆ ಒಂದು ಹಂತದಲ್ಲಿ ಸ್ಫೋಟಕ ಪರಿಸ್ಥಿತಿಯನ್ನು ನಿರ್ಮಾಣಮಾಡಿತ್ತು. ಇದು ನಾಯರ್ ಮತ್ತು ಈಳವ/ಈಡಿಗ ಸಮುದಾಯಗಳ ನಡುವೆ ತೀವ್ರ ಭಿನ್ನಾಭಿಪ್ರಾಯ ಮೂಡಿಸಿತು.

**ಕ್ರಿಯಾ ಸಮಿತಿ**

ಕಾರ್ಯತಂತ್ರ ಕ್ರಮದ ಭಾಗವಾಗಿ, ಚರ್ಚ್, ಎನ್‌ಎಸ್‌ಎಸ್ ಮುಖ್ಯಸ್ಥ ಮನ್ನತ್ ಪದ್ಮನಾಭನ್ ಜೊತೆ ಸೇರಿ ಸರ್ಕಾರದ ವಿರುದ್ಧದ ಪ್ರಚಾರವನ್ನು ತೀವ್ರಗೊಳಿಸಲಾಯಿತು. ಭಾರತದ ಕ್ಯಾಥೋಲಿಕ್ ಬಿಷಪ್‌ಗಳ ಸಮ್ಮೇಳನವು ಡಿಸೆಂಬರ್ 4, 1958ರಂದು ಬೆಂಗಳೂರಿನಲ್ಲಿ ಸಮಾವೇಶಗೊಂಡಿತು. ಭಾರತದ ವ್ಯಾಟಿಕನ್ ರಾಯಭಾರಿಯಾದ ರೆವ: ಜೇಮ್ಸ್ ರಾಬರ್ಟ್ ನಾಕ್ಸ್ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಈ ಸಮ್ಮೇಳನದಲ್ಲಿ ಭೌತಿಕ ಮತ್ತು ಆಧ್ಯಾತ್ಮಿಕ ವಿಧಾನಗಳನ್ನು ಗಂಭೀರವಾಗಿ ಪರಿಗಣಿಸಲಾಯಿತು(93:p46).

ಡಿಸೆಂಬರ್ 5ರಂದು ಇಂಡಿಯನ್ ಎಕ್ಸ್‌ಪ್ರೆಸ್ ಹೀಗೆ ವರದಿ ಮಾಡಿತ್ತು:

> "ಐವತ್ತು ಗಂಟೆಗಳ ತೀವ್ರ ಚರ್ಚೆಗಳ ನಡುವೆ, ಭಾರತದಲ್ಲಿ ಕಮ್ಯುನಿಸ್ಟ್ ಬೆದರಿಕೆಯ ಬಗ್ಗೆ, ವಿಶೇಷವಾಗಿ ಕೇರಳದಲ್ಲಿ ಕಮ್ಯುನಿಸ್ಟ್ ಬೆದರಿಕೆಯ ಬಗ್ಗೆಯ

ವರದಿಗಳನ್ನು ಚರ್ಚೆಮಾಡಲು ಸಮ್ಮೇಳನವು ತನ್ನ ಹೆಚ್ಚಿನ ಸಮಯವನ್ನು ಇದಕ್ಕಾಗಿಯೇ ಮೀಸಲಿಟ್ಟಿತು. ಈ ನಿಟ್ಟಿನಲ್ಲಿ ಕೇರಳದ ಶಿಕ್ಷಣ ಮಸೂದೆಯನ್ನು ವಿಮರ್ಶೆಗೊಳಪಡಿಸಿ, ಟೀಕಿಸಿದ ಸಮ್ಮೇಳನವು, ಆ ಬಗ್ಗೆ ತನ್ನ ಆತಂಕವನ್ನು ವ್ಯಕ್ತಪಡಿಸಿತು(50:05.12.58). ಅದೇ ತಿಂಗಳು ಕನ್ಯಾಕುಮಾರಿಯಲ್ಲಿ ನಡೆದ ಕ್ಯಾಥೋಲಿಕ್ ಕಾಂಗ್ರೆಸ್, ಕಮ್ಯುನಿಸಂ ವಿರುದ್ಧ ಧರ್ಮವನ್ನು ರಕ್ಷಿಸಲು ಅನುಯಾಯಿಗಳಿಗೆ ಕರೆ ನೀಡಲಾಯಿತು. ಧರ್ಮಕ್ಕಾಗಿ ತಮ್ಮ ಪ್ರಾಣವನ್ನು ತ್ಯಾಗ ಮಾಡುವಂತೆಯೂ ಅವರು ತಾಕೀತು ಮಾಡಿದರು(93:p46). ಮಾರ್ಚ್ 1959ರಲ್ಲಿ ಎರ್ನಾಕುಲಂನಲ್ಲಿ ನಡೆದ ಕೇರಳದ ಬಿಷಪ್‌ಗಳ ಸಮ್ಮೇಳನವು ಸರ್ಕಾರದ ವಿರುದ್ಧ ಮುಷ್ಕರ ನಡೆಸುವ ಯೋಜನೆಯನ್ನು ರೂಪಿಸಿತು. ಪ್ರಸ್ತುತ ಪರಿಸ್ಥಿತಿಯಲ್ಲಿ ಇತರ ಸಮುದಾಯಗಳೊಂದಿಗೆ ಹೋರಾಟಕ್ಕಾಗಿ ಜನರು ಸಿದ್ಧರಾಗಿರಬೇಕೆಂದು ಕರೆ ನೀಡಿದರು(108:20.03.59). ಈ ನಿರ್ಧಾರದ ಪ್ರಕಾರ, ನಾಯರ್ ಮತ್ತು ಕ್ರಿಶ್ಚಿಯನ್ ನಾಯಕರ ಸಮಾವೇಶವನ್ನು ತಕ್ಷಣವೇ ಪೆರುನ್ನಾದಲ್ಲಿ ಕರೆಯಬೇಕಾಯಿತು. ಮನ್ನತ್ ಪದ್ಮನಾಭನ್‌ರವರು ಅಧ್ಯಕ್ಷರಾಗಿರುವ ಹಾಗೂ ವಿ.ಒ. ಅಬ್ರಹಾಂರವರು ಕೋಶಾಧಿಕಾರಿಯಾಗಿರುವ ಕಾರ್ಯಕಾರಿ ಸಮಿತಿಯನ್ನು ರಚಿಸಲಾಯಿತು(169:p27). ಶಾಲೆಗಳನ್ನು ರಕ್ಷಿಸಲು ಸ್ವಯಂಸೇವಕರ ಗುಂಪುಗಳನ್ನು ರಚಿಸಲು ಸಹ ಸಭೆಯಲ್ಲಿ ನಿರ್ಧರಿಸಲಾಯಿತು.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪಿಎಸ್ಪಿ ಮತ್ತು ಮುಸ್ಲಿಂ ಲೀಗ್ ಸೇರಿದಂತೆ ವಿರೋಧ ಪಕ್ಷದ ನಾಯಕರು ಎರ್ನಾಕುಲಂನಲ್ಲಿ ಏಪ್ರಿಲ್ 25, 1959ರಂದು ಜಂಟಿ ಚುನಾವಣಾರಂಗವನ್ನು ರಚಿಸಲು ಸಭೆ ನಡೆಸಿ, ಕ್ರಮಗಳನ್ನು ರೂಪಿಸಲು ಸ್ಥಾಯಿ ಸಮಿತಿಯನ್ನು ರಚಿಸುವ ಬಗ್ಗೆ ನಿರ್ಧರಿಸಲಾಯಿತು. ಕಮ್ಯುನಿಸ್ಟ್ ಆಡಳಿತದಲ್ಲಿ ಪ್ರಜಾಸತ್ತಾತ್ಮಕ ಹಕ್ಕುಗಳ ರಕ್ಷಣೆಗಾಗಿ ಆಂದೋಲನವನ್ನು ಮುಂದುವರಿಸಲು ಮೇಲಿನ ಸಭೆಯಲ್ಲಿ ನಿರ್ಧರಿಸಲಾಯಿತು(84:07.05.59). ಏಪ್ರಿಲ್ 26ರಂದು ಕೇರಳದಲ್ಲಿ ಕ್ಯಾಥೋಲಿಕ್ ಬಿಷಪ್‌ಗಳು ಹೊರಡಿಸಿದ ಅಧಿಸೂಚನೆಯ ಮೂಲಕ ಕ್ಯಾಥೋಲಿಕರು ಶಿಕ್ಷಣ ಕಾನೂನಿನ ವಿರುದ್ಧ ಆಂದೋಲನವನ್ನು ಮುಂದುವರೆಸುವಂತೆ ಕೇಳಿಕೊಂಡರು. ಈ ಕಾಯಿದೆಯನ್ನು ಸುಪ್ರೀಂ ಕೋರ್ಟ್, ಭಾರತದ ರಾಷ್ಟ್ರಪತಿಗಳು ಮತ್ತು ಕೇರಳ ವಿಧಾನಸಭೆಯು ಅಂಗೀಕರಿಸಿರುವುದರಿಂದ, ಬಿಷಪ್‌ಗಳ ಕರೆ ಅಸಂವಿಧಾನಿಕ ಎಂದು ವ್ಯಾಖ್ಯಾನಿಸಲಾಯಿತು. ಈ ನಿರ್ಣಾಯಕ ಘಟ್ಟದಲ್ಲಿ ಕ್ಯಾಥೋಲಿಕರ ನಾಲಿಗೆಯಾದ/ ಮೌತ್‌ಪೀಸ್ ದೀಪಿಕಾ ಪತ್ರಿಕೆಯು ಕಾನೂನನ್ನು ಮುರಿಯುವಂತೆ ಬಹಿರಂಗವಾಗಿ ಕರೆ ನೀಡಿತು. ಏಪ್ರಿಲ್ 28ರ ಸಂಪಾದಕೀಯವು ಹೀಗೆ ಹೇಳಿದೆ:

> "ಸಂವಿಧಾನ, ಕೇಂದ್ರ ಸರ್ಕಾರ ಮತ್ತು ನೆಲದ ಕಾನೂನುಗಳು ತಮಗೆ ಅನ್ವಯಿಸುತ್ತದೆ, ಎನ್ನುವ ವಿಚಾರ, ತನ್ನ ವಿರೋಧಿಗಳೊಂದಿಗೆ ವ್ಯವಹರಿಸುವಾಗ ಕೇರಳದ ಕಮ್ಯುನಿಸ್ಟ್ ಸರ್ಕಾರದ ನೆನಪಿನಲ್ಲಿರಬೇಕಾಗುತ್ತದೆ. ಆದರೆ ಸರ್ಕಾರವನ್ನು ವಿರೋಧಿಸುವ ಜನರಿಗೆ ಅಂತಹ ಯಾವುದೇ ಜವಾಬ್ದಾರಿ

ಇರುವುದಿಲ್ಲ(108:28.04.59).

ಏಪ್ರಿಲ್ 29ರದೀಪಿಕಾ ಸಂಪಾದಕೀಯವು ಹೀಗೆ ಹೇಳಿದೆ:

ಅಂದರೆ ಈಗ ಇರುವಂಥ ಪರಿಸ್ಥಿತಿಯಲ್ಲಿ, ಶಾಲೆಗಳನ್ನು ನಡೆಸಬೇಕೆನ್ನುವುದು, ಧರ್ಮದ, ಸಮುದಾಯದ ಮತ್ತು ದೇಶದ ವಿರುದ್ಧದ ಕೃತ್ಯವಾಗಿಬಿಡುತ್ತದೆ. ಅನ್ಯಾಯವಾದ ಕಾನೂನಿನ ಬಗ್ಗೆ ನಮಗೆ ಸ್ವಲ್ಪವೂ ಗೌರವ ಇರಬೇಕೆಂದಿಲ್ಲ.

ಮಾರ್ಚ್ ಮತ್ತು ಏಪ್ರಿಲ್‌ನಲ್ಲಿ ಮನ್ನತ್ ಪದ್ಮನಾಭನ್ ನಾಯರ್‌ಗಳನ್ನು ಸಂಘಟಿಸಲು ರಾಜ್ಯಾದ್ಯಂತ ಪ್ರವಾಸ ಮಾಡಿದರು. ಕ್ರಿಶ್ಚಿಯನ್, ಮುಸ್ಲಿಂ, ನಾಯರ್ ಸಮುದಾಯದ ನಾಯಕರ ಸಭೆಯನ್ನು ಮೇ 1ರಿಂದ 3ರವರೆಗೆ ಚಂಗನಾಶ್ಶೇರಿಯಲ್ಲಿ ಕರೆದರು. ರಾಜ್ಯವನ್ನು ಕಮ್ಯುನಿಸ್ಟ್ ಬೆದರಿಕೆಯಿಂದ ರಕ್ಷಿಸಲು ಪ್ರಬಲವಾದ ಜನಾಂದೋಲನ ಆರಂಭಿಸಲು ಈ ಸಭೆಯಲ್ಲಿ ನಿರ್ಧರಿಸಲಾಯಿತು. ಅವರು ಶಿಕ್ಷಣದ ಕಾನೂನನ್ನು ಸೋಲಿಸಲು ಮಾತ್ರವಲ್ಲ, ಕಮ್ಯುನಿಸ್ಟ್ ಆಡಳಿತವನ್ನು ಕೊನೆಗೊಳಿಸುವುದಕ್ಕಾಗಿಯೂ ಉದ್ದೇಶಿತ ಆಂದೋಲನ, ಎಂದು ಗಟ್ಟಿಯಾಗಿ ಘೋಷಿಸಲಾಯಿತು. ಕಮ್ಯುನಿಸ್ಟ್ ಸರ್ಕಾರವು ಮಾನವೀಯ ಮೌಲ್ಯ ಮತ್ತು ನೈತಿಕತೆಯನ್ನು ಅಗೌರವಿಸುತ್ತಿದೆ, ಕಮ್ಯುನಿಸ್ಟೇತರರ ಅಸ್ತಿತ್ವದ ಹಕ್ಕನ್ನು ನಿರಾಕರಿಸುತ್ತಿದೆ, ಸಾರ್ವಜನಿಕ ಹಣವನ್ನು ಲೂಟಿ ಮಾಡುತ್ತಿದೆ, ಕೋಮು ದ್ವೇಷವನ್ನು ಪ್ರಚೋದಿಸಲು ಸಂಚಿನ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ(194:23 .05.59p12). ಇಂಥ ಕಾರಣಗಳಿಂದಾಗಿಯೇ ಆಂದೋಲನ ಅನಿವಾರ್ಯವಾಗಿರುವುದು. ಈ ಸಮ್ಮೇಳನದ ಅಧ್ಯಕ್ಷರಾಗಿ ಮನ್ನತ್ ಪದ್ಮನಾಭನ್‌ರವರನ್ನು ಸರ್ವಾನುಮತದಿಂದ ಆಯ್ಕೆ ಮಾಡಿದ್ದು, ಮಾಜಿ ಸಚಿವ ಕೆ. ವೇಲಾಯುಧನ್ ನಾಯರ್, ಕಾಂಗ್ರೆಸ್ ಮುಖಂಡರಾದ ಕೆ.ಎಂ. ಚಾಂಡಿ, ಚೆರಿಯನ್ ಕಾಪ್ಪನ್ ಮುಂತಾದವರನ್ನು ಜಂಟಿ ಕಾರ್ಯಕಾರಿ ಸಮಿತಿಯ (ವಿಮೋಚನಾ ಹೋರಾಟ ಸಮಿತಿ) ಪದಾಧಿಕಾರಿಗಳಾಗಿ ಸೇರ್ಪಡೆಗೊಳಿಸಿದರು(204:p10). ಕೇರಳ ಶಿಕ್ಷಣ ಕಾಯಿದೆ, 1959ರ ನಿಬಂಧನೆಗಳನ್ನು ರದ್ದುಗೊಳಿಸುವವರೆಗೆ ಅವರು ತಮ್ಮ ಶಾಲೆಗಳನ್ನು ತೆರೆಯದಿರಲು ನಿರ್ಧರಿಸಿದ್ದಾಗಿ, ವಿಮೋಚನಾ ಹೋರಾಟ ಸಮಿತಿಯ (ವಿಎಸ್‌ಎಸ್) ರಚನೆಯ ಮೊದಲು, ಕ್ಯಾಥೋಲಿಕರು, ಎನ್‌ಎಸ್‌ಎಸ್, ಕೆಎಸ್‌ಎಂಎ ಮುಂತಾದವರು ಪ್ರತ್ಯೇಕ ಪ್ರತ್ಯೇಕವಾಗಿ ಸರ್ಕಾರಕ್ಕೆ ನಿರ್ದಿಷ್ಟವಾಗಿ ತಿಳಿಸಲಾಗಿತ್ತು. ವಿಎಸ್‌ಎಸ್ ಈ ನಿರ್ಧಾರವನ್ನು ದೃಢೀಕರಿಸಿತು(143:03.05.59). ದೀಪಿಕಾ ದೈನಿಕವೂ ಸರ್ಕಾರಕ್ಕೆ ಎಚ್ಚರಿಕೆ ನೀಡಿತು:

ರಾಜ್ಯದಾದ್ಯಂತವಿರುವ ವಿವಿಧ ಸಮುದಾಯಗಳ ಪ್ರತಿನಿಧಿಗಳು (ಎನ್‌ಎಸ್‌ಎಸ್ ಕೇಂದ್ರ ಕಚೇರಿ) ಪೆರುನ್ನಾದಲ್ಲಿ ಸೇರಿದ ಸಭೆಯಲ್ಲಿ ಸರ್ಕಾರದ ವಿರುದ್ಧ ನೇರ ಹೋರಾಟವನ್ನು ಸಂಘಟಿಸಲು ನಿರ್ಧರಿಸಲಾಗಿತ್ತು. ತಾವು ವಿರೋಧಿಸುವ ವಿಚಾರಗಳನ್ನು ಮಾಡದೇ ಇರುವುದಕ್ಕೆ, ಸರ್ಕಾರವನ್ನು ತಡೆಯಲು ಜನರಿಂದ ಸಾಧ್ಯವಾಗದಿದ್ದರೆ, ಸರ್ಕಾರ ಮಾಡುವ ಕೆಲಸಗಳಿಗೆ ಖಂಡಿತವಾಗಿಯೂ ಅಡ್ಡಿಪಡಿಸಲು ಅವರಿಗೆ ಸಾಧ್ಯವಾಗುತ್ತದೆ. ಜನರು ಮರ್ಯಾದೆಯಿಂದ

ಬದುಕಲು ಸರ್ಕಾರ ಅವಕಾಶ ನೀಡದಿದ್ದರೆ, ಅವರು ನ್ಯಾಯವಾಗಿಯೂ ನಾಗರಿಕ ಕಾನೂನು ಉಲ್ಲಂಘನೆಯ ಕೃತ್ಯಗಳಲ್ಲಿ ತೊಡಗಿಕೊಂಡು, ಸರ್ಕಾರ ಶರಣಾಗುವಂತೆ ಮಾಡಲಾಗುತ್ತದೆ(108:03.05.59).

ಮೇ 4, 1959ರಂದು ಕೊಟ್ಟಾಯಂನಲ್ಲಿ ಕ್ಯಾಥೋಲಿಕರು ಆಯೋಜಿಸಿದ್ದ ಸನ್ಮಾನ ಸಮಾರಂಭದಲ್ಲಿ ಮನ್ನತ್ ಪದ್ಮನಾಭನ್ ಅವರು ಕಮ್ಯುನಿಸ್ಟ್ ಆಡಳಿತವನ್ನು ಕಿತ್ತುಹಾಕಿ, ದೇಶದಿಂದ ಬೇರು ಸಮೇತ ಕಮ್ಯುನಿಸಂನ್ನು ನಿರ್ಮೂಲನೆ ಮಾಡುವ ತಮ್ಮ ಉದ್ದೇಶವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದರು(143:03.05.59). ಮುಚ್ಚಿದ ಶಾಲೆಗಳನ್ನು ತೆರೆಯದಿರಲು, ಮತ್ತು ಸರ್ಕಾರವು ಶರಣಾಗುವವರೆಗೂ ಅದರ ವಿರುದ್ಧ ಹೋರಾಡಲು ಸಾವಿರಾರು ಸ್ವಯಂಸೇವಕರನ್ನು ಅಣಿಗೊಳಿಸಲಾಯಿತು(143:03.05.59). ಸ್ವಯಂ ಸರ್ವಸೇನಾ ಕಮಾಂಡರ್ ಹುದ್ದೆಯನ್ನು ವಹಿಸಿಕೊಂಡು, ಯುದ್ಧಭೂಮಿಯಲ್ಲೆನ್ನುವಂತೆ ಮುನ್ನಡೆಯಲು, ಮನ್ನತ್ ಪದ್ಮನಾಭನ್ ಜನರನ್ನು ಒತ್ತಾಯಿಸಿದರು. ಯಾಗಾಶ್ವವನ್ನು ಸೆಕ್ರೆಟರಿಯೇಟ್‌ನಲ್ಲಿ ಕಟ್ಟಲಾಗುವುದೆಂದು ಅವರು ಶಪಥ ಮಾಡಿದರು(143:03.05.59). ವಿರೋಧಪಕ್ಷಗಳ ನಾಯಕರು, ವಿಶೇಷವಾಗಿ ಕಾಂಗ್ರೆಸ್ ಮುಖಂಡರು ತಮಗಾಗುವ ವಿಧದಲ್ಲಿ ವಿಮೋಚನಾ ಹೋರಾಟ ಸಮಿತಿಗೆ ಕೈಲಾದಷ್ಟು ಬೆಂಬಲ ನೀಡಿದರು. ಪದ್ಮನಾಭನ್ ಅವರಿಗೆ 23 ಮೇ 1959ರಂದು ರಾನ್ನಿಯಲ್ಲಿ ಸ್ವಾಗತ ಕೋರುತ್ತಾ, ಅಂದಿನ ಕೆ.ಪಿ.ಸಿ.ಸಿ ಕೋಶಾಧಿಕಾರಿಯಾದ ಪಿ.ಎಸ್. ಜಾರ್ಜ್ ಹೀಗೆ ಹೇಳಿದರು:

> "ನಾವು ಅಸಾಮಾನ್ಯ ಹೋರಾಟಕ್ಕೆ ಸಿದ್ಧರಾಗುತ್ತಿದ್ದೇವೆ. ಕಮ್ಯುನಿಸ್ಟ್ ಸರ್ಕಾರವು ರಾಜಿನಾಮೆ ನೀಡಲು ನಿರ್ಬಂಧಿತರಾಗುವಂತೆ ಮಾಡುವುದೇ ನಮ್ಮ ಗುರಿಯಾಗಿದೆ. ನಾವು ಖಂಡಿತವಾಗಿಯೂ ಈ ಗುರಿಯನ್ನು ಸಾಧಿಸಿಯೇ ತೀರುತ್ತೇವೆ. ಮತಪೆಟ್ಟಿಗೆಗೆ ಹೋಗದೆ ಸರ್ಕಾರವನ್ನು ಉರುಳಿಸುವ ಒಂದು ಸಂಪ್ರದಾಯವನ್ನು ಕೇರಳವು ಸೃಷ್ಟಿಸಲು ಹೊರಟಿದೆ(32:24.05.59).

ಸರ್ಕಾರದ ವಿರುದ್ಧ ಪ್ರತಿ ತಾಲೂಕುಗಳಲ್ಲಿ ಅವಿಶ್ವಾಸ ನಿರ್ಣಯ ಮಂಡಿಸಿ, ಅದನ್ನು ಅಂಗೀಕರಿಸಿಕೊಂಡು, ನಿರ್ದಿಷ್ಟ ಆಂದೋಲನವನ್ನು ಮೇ 9, 1959ರಂದು ಕೊಲ್ಲಂನಲ್ಲಿ ಪ್ರಾರಂಭಿಸಲಾಗುವುದೆಂದು ಪದ್ಮನಾಭನ್ ಘೋಷಿಸಿದರು. ಸರ್ಕಾರವು ರಾಜೀನಾಮೆ ನೀಡಲು ನಿರಾಕರಿಸಿದಲ್ಲಿ, ಎಲ್ಲಾ ಮಂತ್ರಿಗಳನ್ನು ಜನರೆಲ್ಲರೂ ಸೇರಿ ಜನತಾ ಜೈಲಿಗೆ ಹಾಕುತ್ತಾರೆ(143:12.05.59).

ಮೇ 3, 1959ರಂದು ಚಂಗನಾಶ್ಶೇರಿಯಲ್ಲಿ ಸಮುದಾಯ ಸಂಸ್ಥೆಗಳು ಕರೆದ ಸಭೆಯಲ್ಲಿ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪಿಎಸ್‌ಪಿ ಮತ್ತು ಮುಸ್ಲಿಂ ಲೀಗ್‌ನ ನಾಯಕರು ಉಪಸ್ಥಿತರಿದ್ದರು. ಕೆಪಿಸಿಸಿ ಸದಸ್ಯರು, ಜಿಲ್ಲಾ ಕಾಂಗ್ರೆಸ್ ಸಮಿತಿಗಳು, ಮತ್ತು ಕಾಂಗ್ರೆಸ್ ಸಂಸದೀಯ ಪಕ್ಷದ, ಜಂಟಿ ಸಭೆಯು ಮೇ 5ರಂದು ಎರ್ನಾಕುಲಂನಲ್ಲಿ ನಡೆಯಿತು. ಸರ್ಕಾರದ ವಿರುದ್ಧ ಸಮಗ್ರವಾದ ಆರೋಪಪಟ್ಟಿಯನ್ನು ಸಿದ್ಧಪಡಿಸಲು ಮತ್ತು ಈ ಆರೋಪಗಳ ಆಧಾರದ ಮೇಲೆ ಸರ್ಕಾರವನ್ನು ಅಧಿಕಾರದಿಂದ ಉಚ್ಚಾಟನೆ

ಮಾಡಬೇಕೆಂಬ ಆಂದೋಲನವನ್ನು ಬಲಪಡಿಸಲು, ಈ ಸಭೆಯಲ್ಲಿ ನಿರ್ಣಯ ಕೈಗೊಳ್ಳಲಾಯಿತು.

1959ರ ಮೇ ತಿಂಗಳಿನಲ್ಲೇ ಜಂಟಿ ಕ್ರಿಯಾ ಸಮಿತಿಯು ರಾಜ್ಯದಲ್ಲಿ ಒಟ್ಟು 34 ತಾಲೂಕು ಸಭೆಗಳನ್ನು ಕರೆಯಿತು. ಮೊದಲ ತಾಲೂಕು ಸಭೆಯು ಮೇ 3, 1959ರಂದು ಕೊಟ್ಟಾಯಂನಲ್ಲಿ ಮತ್ತು ಕೊನೆಯದನ್ನು ಮೇ 30ರಂದು ಚಂಗನಾಸ್ಸೆರಿಯಲ್ಲಿ ನಡೆದವು. ರಾಜ್ಯಾದ್ಯಂತ ಪ್ರವಾಸ ಮಾಡಿದ ಮನ್ನತ್ ಪದ್ಮನಾಭನ್ ಸರ್ಕಾರದ ವಿರುದ್ಧ ಬೃಹತ್ ಪ್ರತಿಭಟನೆಯ ಜ್ವಾಲೆಗಳೇಳುವಂತೆ ಮಾಡಿದರು. ತಾಲೂಕು ಮಟ್ಟದ ಕ್ರಿಯಾ ಸಮಿತಿಗಳು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಸ್ವಯಂಸೇವಕ ಪಡೆಗಳನ್ನು ಸಜ್ಜುಗೊಳಿಸಿದವು. ಚಂಗನಾಶ್ಶೇರಿ ಧರ್ಮಪ್ರಾಂತ್ಯದ ಮೇಲ್ವಿಚಾರಣೆಯಲ್ಲಿ ರಚಿಸಲಾದ ಕಾರ್ಯಕಾರಿ ಸಮಿತಿಯನ್ನು ಮೇ 1959ರಲ್ಲಿ ರಚಿಸಲಾಗಿದ್ದು, ಮೇ 1959, 23ರಂದು ಹೀಗೆ ಪ್ರಸ್ತಾಪಿಸಿತು.

> "ಸ್ವಯಂಸೇವಕರನ್ನು ಸಕ್ರಿಯವಾಗಿಡಲು ಪ್ರತಿ ಪ್ಯಾರಿಷ್‌ನಲ್ಲಿ ಸಮಿತಿಗಳಿರಬೇಕು. ಪ್ರತಿ ಮನೆಯಿಂದ ಕನಿಷ್ಠ ಒಬ್ಬ ಯುವಕ ಸ್ವಯಂಸೇವಕ ಸೇನೆಗೆ ಸೇರಲು ಮನವೊಲಿಸಬೇಕು" (108:24.05.59).

ಕೊಟ್ಟಯಂನ ಮಾರ್ಥೋಮಾ ಶಿಕ್ಷಣ ಕ್ರಿಯಾ ಸಮಿತಿಯ ಮುದ್ರಣವು ಪ್ರಕಟಿಸಿದ ಕರಪತ್ರದಲ್ಲಿ ಏಳು ನಿರ್ದೇಶನಗಳು ಒಳಗೊಂಡಿದ್ದವು. ನಿರ್ಭೀತರಾದ ಯುವಕರಿಂದ ಸ್ವಯಂಸೇವಕರನ್ನು ಆಯ್ಕೆ ಮಾಡಬೇಕು ಎಂದು ಕರಪತ್ರದಲ್ಲಿ ತಿಳಿಸಲಾಗಿತ್ತು. ಸ್ವಯಂಸೇವಕರನ್ನು ಗುರ್ತಿಸುವ ಸಲುವಾಗಿ, ಗುರುತಿನ ಚೀಟಿಗಳನ್ನು ನೀಡಬೇಕು ಮತ್ತು ಅವರ ಸಂಪೂರ್ಣ ಪಟ್ಟಿಯನ್ನು ಜಾಗ್ರತೆಯಿಂದ ತೆಗೆದಿಟ್ಟುಕೊಳ್ಳಬೇಕು ಮತ್ತು ಖಾಸಗಿ ವೈದ್ಯರನ್ನು ಸಂಪರ್ಕಿಸಿ, ಪ್ರಥಮ ಚಿಕಿತ್ಸೆಗೆ ಅಗತ್ಯವಿರುವ ಸಾಮಗ್ರಿಗಳನ್ನು ತೆಗೆದಿಟ್ಟುಕೊಳ್ಳಬೇಕು ಎಂದು ಪರಿಹಾರ ಸಮಿತಿಗಳಲ್ಲಿ ಅಪೇಕ್ಷಿಸಿದರು.

ಪನಂಪಲ್ಲಿ ಗೋವಿಂದಮೇನನ್ ತ್ರಿಶೂರ್‌ನಲ್ಲಿ ಈ ರೀತಿ ಘೋಷಿಸಿದರು:

> "ಕೇರಳಕ್ಕೆ ಸಂಬಂಧಿಸಿದಂತೆ, ಒಂದು ಸ್ವಾತಂತ್ರ್ಯ ಹೋರಾಟಕ್ಕೆ ಸಮಯ ಬಂದಿದೆ. ನಾನು, ಕಮ್ಯುನಿಸ್ಟರಲ್ಲಿ ಹೇಳುವುದೇನೆಂದರೆ, ನಿಮ್ಮ ವಿರುದ್ಧ ವಿಮೋಚನಾ ಹೋರಾಟ ಈಗಾಗಲೇ ಆರಂಭಿಸಿಬಿಟ್ಟಿದೆ"(202:16.04.59;186:p10).

ಪಿಎಸ್‌ಪಿ ನಾಯಕ ಪಟ್ಟಂತಾನು ಪಿಳ್ಳ ಹೇಳಿದರು:

> "ನಿಮಗೆ ಪೌರುಷವಿದ್ದರೆ ಅವರನ್ನು (ಕಮ್ಯುನಿಸ್ಟರನ್ನು) ಸೆಕ್ರೆಟರಿಯೇಟ್‌ನಿಂದ ಹೊರಹಾಕಬೇಕು. ಸ್ವಾಭಿಮಾನಕ್ಕಿಂತ ಜೀವನ ದೊಡ್ಡದಲ್ಲ. ನೀವು ಪುರುಷತ್ವವನ್ನು ತೋರಿಸುವುದಾದರೆ, ಮೂರು ವರ್ಷಗಳ ವಿಷಯ. ಒತ್ತಟ್ಟಿಗಿರಲಿ, ಅವರು ಮೂರು ದಿನಗಳ ಕಾಲವೂ ಅಲ್ಲಿ ಉಳಿಯುವುದಿಲ್ಲ. ಇದನ್ನು ನಾನು, ಪಟ್ಟಂತಾನು ಪಿಳ್ಳ ಹೇಳ್ತಾ ಇರೋದು, ನೆನಪಿರಲಿ"(32:07.04.59).

ಮನ್ನತ್ ಪದ್ಮನಾಭನ್ ಅವರು ತಿರುವನಂತಪುರದಲ್ಲಿ ತಮ್ಮ ಭಾಷಣದ ನಡುವೆ ಹೀಗೆ ಹೇಳಿರುವುದಾಗಿ ವರದಿಯಾಗಿದೆ:

"ಅಶಾಂತಿಗೂ ರಕ್ತ ಚೆಲ್ಲುವಿಕೆಗೂ ಅವಕಾಶ ನೀಡದೆ, ಸ್ವಯಂಪ್ರೇರಿತವಾಗಿ ರಾಜೀನಾಮೆ ಕೊಟ್ಟು ಹೊರಹೋಗಲು ನಾನು, ಕಮ್ಯುನಿಸ್ಟ್ ಮಂತ್ರಿಗಳಲ್ಲಿ ಅಪೇಕ್ಷಿಸುತ್ತಿದ್ದೇನೆ. ನಾನು ನಿಮಗೆ ಎಚ್ಚರಿಕೆ ನೀಡುತ್ತಿದ್ದೇನೆ. ಅಂದರೆ, ನೀವು ಮಂತ್ರಿಕುರ್ಚಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕೂರುವುದಾದರೆ, ಅದರ ಪರಿಣಾಮಗಳು ಭೀಕರವಾಗಿರುತ್ತದೆ. ಜನರು ಬಲವಂತವಾಗಿ ಮಂತ್ರಿಗಳಿಂದ ಅಧಿಕಾರವನ್ನು ವಶಪಡಿಸಿಕೊಂಡು, ಅವರನ್ನು ವಿಚಾರಣೆಗೆ ಒಳಪಡಿಸುವಂತೆ ಮಾಡಿದರೆ, ಅವರ ಮೂಗು ಮತ್ತು ಕಿವಿಗಳನ್ನು ಕತ್ತರಿಸಿ, ಅವರನ್ನು ಬಹಿರಂಗವಾಗಿ ಚಾವಟಿಯಿಂದ ಥಳಿಸುವ ಕಾರ್ಯವನ್ನೂ ಮಾಡಲಾಗುವುದು" (143:28.04.59).

ಕೊಲ್ಲಂನಲ್ಲಿ ಮನ್ನಂರವರ ಭಾಷಣ ಹೀಗಿತ್ತು:

ಅವರಿಗೆ ಹೊಡೆಯುವ ಸಾಮರ್ಥ್ಯವಿದೆಯೇ ಎನ್ನುವ ಬಗ್ಗೆ ನನಗೆ ಅನುಮಾನವಿದೆ. ಸರ್ಕಾರ ಮಾತ್ರ ಹೊಡೆಯುವ ಕೆಲಸ ಮಾಡಬಹುದು ಎನ್ನುವುದು ಸರಿಯೇ...? ನಮಗೂ ಕೂಡ ಥಳಿಸಲು ಬರುತ್ತದೆ. ಅಧಿಕಾರವನ್ನು ತ್ಯಜಿಸಲು ನಾವು ಅವರನ್ನು (ಮಂತ್ರಿಗಳನ್ನು) ನಯವಾಗಿ ಮರ್ಯಾದೆಯಿಂದ ಕೇಳುತ್ತೇವೆ. ಅವರು ಅವರು ಸ್ವಯಂಪ್ರೇರಣೆಯಿಂದ ಇದನ್ನು ಮಾಡಲು ಸಿದ್ಧರಿಲ್ಲದಿದ್ದರೆ ನಾವು, ಆ ಹನ್ನೊಂದು ಮಂದಿಗಳನ್ನು ಜೈಲಿಗೆ ಕಳುಹಿಸುತ್ತೇವೆ (203:12.05.59p12).

ತಿರುವಲ್ಲಾದ ಬಿಷಪ್ ಮಾರ್ ಡಿಯೋನಿಶಿಯಸ್, ಆಂದೋಲನವನ್ನು 'ವಿಮೋಚನಾ ಹೋರಾಟ' ಎಂದು ಬಣ್ಣಿಸಿದರು. ಶಿಕ್ಷಣ ಕಾನೂನಿನ ವಿರುದ್ಧದ ಹೋರಾಟವು ವಾಸ್ತವವಾಗಿ ನೈತಿಕ ಮತ್ತು ಧಾರ್ಮಿಕತನದಿಂದ ಕೂಡಿದೆ ಎನ್ನುವುದನ್ನೂ ಅವರು ತಮ್ಮ ಮಾತುಗಳಲ್ಲಿ ಸೇರಿಸಿದರು(108:07.05.59).

ಈ ಅವಧಿಯಲ್ಲಿ ವಿವಿಧ ಹೆಸರುಗಳಲ್ಲಿ ಸ್ವಯಂಸೇವಾ ಗುಂಪುಗಳು ರೂಪುಗೊಂಡಿದ್ದವು. ಕ್ಯಾಥೋಲಿಕ್ ಚರ್ಚ್ ಆಯೋಜಿಸಿ, ತರಬೇತಿ ನೀಡಿದ ಅರೆಸೈನಿಕ ಗುಂಪಾಗಿತ್ತು, ಈ ಕ್ರಿಸ್ಟೋಫರ್ಸ್. ಎನ್‌ಎಸ್‌ಎಸ್ ತನ್ನದೇ ಆದ ಸ್ವಯಂಸೇವಕ ತಂಡವನ್ನು ರೂಪಿಸಿತ್ತು. ಮನ್ನತ್ ಪದ್ಮನಾಭನ್ ಸೇವೆಗೈಯಲು ಸ್ವಯಂಸೇವಕರನ್ನು ಸಜ್ಜುಗೊಳಿಸಿದ್ದರ ಜೊತೆಗೆ, ತಮ್ಮ ಬಹಿರಂಗ ಹೋರಾಟದ ಕಾರ್ಯಕ್ರಮಗಳು ಯಶಸ್ವಿಗೊಳಿಸಲು ಕ್ಯಾಥೋಲಿಕರು ಅವರಿಗೆ ಸಾಕಷ್ಟು ಆರ್ಥಿಕ ಬೆಂಬಲವನ್ನೂ ನೀಡಿದರು.

ತಮ್ಮ ಅಗತ್ಯಗಳನ್ನು ಸೌಹಾರ್ದಯುತವಾಗಿ ಪರಿಹರಿಸಿಕೊಳ್ಳಲು ಪಟ್ಟಭದ್ರ ಹಿತಾಸಕ್ತಿಗಳ ಗುಂಪುಗಳೊಂದಿಗೆ ಸಮಾಲೋಚನೆಗಳು ಮತ್ತು ಚರ್ಚೆಗಳಿಗಾಗಿ

ಸರ್ಕಾರ ಪ್ರಾಮಾಣಿಕವಾಗಿ ಸಿದ್ಧವಾಗಿತ್ತು. ವಾಸ್ತವವಾಗಿ, ಪ್ರತಿಭಟನಾಕಾರರ ನಿಜವಾದ ಉದ್ದೇಶ,ಅವರು ಸಾರ್ವಜನಿಕವಾಗಿ ವ್ಯಕ್ತಪಡಿಸಿದ ಅವಶ್ಯಕತೆಗಳಿಗೂ ಮೀರಿದವುಗಳಾಗಿದ್ದವು. ಸರ್ಕಾರವು ಕೇರಳ ಶಿಕ್ಷಣ ಕಾಯಿದೆಯನ್ನು ಅಂಗೀಕರಿಸಿದ್ದರೂ ಮೇನೆಜರೊಂದಿಗೆ, ನಿರ್ದಿಷ್ಟವಾಗಿ ಕ್ಯಾಥೋಲಿಕರೊಂದಿಗೆ, ಸಮಾಲೋಚನೆ ಮಾಡಿ ಒಮ್ಮತವನ್ನು ಸಾಧಿಸಲು ಬಹಳ ಪ್ರಯತ್ನ ನಡೆಸಿತ್ತು. ಮೇ 2, 1959ರಂದು ಮೆನೇಜ್ಮೆಂಟರಿಗೆ ಬರೆದ ಪತ್ರದಲ್ಲಿ ಮುಖ್ಯಮಂತ್ರಿಯವರು ಈ ರೀತಿ ಭರವಸೆ ನೀಡಿದ್ದರು:

> "ನಿಮಗೆ ಯಾವುದೇ ಸಮಸ್ಯೆ ಅಥವಾ ದೂರು ಇದ್ದರೆ, ಅವುಗಳನ್ನು ನಿಮ್ಮೊಂದಿಗೆ ಚರ್ಚಿಸಲು ಸಿದ್ಧವಾಗಿದ್ದೇವೆ. ಆದರೆ ಶಿಕ್ಷಣ ಕಾನೂನನ್ನು ಜಾರಿಮಾಡಬಾರದು ಎಂದು ಕೆಲವು ಮ್ಯಾನೇಜ್‌ಮೆಂಟ್‌ಗಳ ಬೇಡಿಕೆಯನ್ನು ಒಪ್ಪಿಕೊಳ್ಳುವ ಉದ್ದೇಶವನ್ನು ಸರ್ಕಾರ ಹೊಂದಿಲ್ಲ ಎಂದು ನಾನು ಸ್ಪಷ್ಟಪಡಿಸಲು ಬಯಸುತ್ತೇನೆ. ರಾಜ್ಯ ಸರ್ಕಾರ, ವಿಧಾನಸಭೆ, ಕೇಂದ್ರ ಸರ್ಕಾರ ಮತ್ತು ದೇಶದ ಸುಪ್ರೀಂ ಕೋರ್ಟ್ ಸಕ್ರಿಯವಾಗಿ ಭಾಗವಹಿಸಿದ, ಹಲವು ತಿಂಗಳ ಪರಿಶ್ರಮದ ಫಲವೇ ಈ ಕಾನೂನು ಎಂಬುದು ನಿಮಗೆ ಗೊತ್ತೇ ಇದೆ. ಈ ಕಾಯಿದೆಯಲ್ಲಿ ಸ್ಪಷ್ಟಪಡಿಸಲಾದ ಷರತ್ತುಗಳಿಂದ ಸರ್ಕಾರ ಹಿಂದೆ ಸರಿಯಲು ಸಾಧ್ಯವಾಗುವುದಿಲ್ಲ. ಆದರೆ ಅವುಗಳನ್ನು ಹೇಗೆ ಕಾರ್ಯಗತಗೊಳಿಸಬಹುದು ಎಂಬುದರ ಬಗ್ಗೆ ಮೂರ್ತವಾದ ವಿವರಗಳ ಬಗ್ಗೆ ಆಡಳಿತ ಮಂಡಳಿಯೊಂದಿಗೆ ಚರ್ಚಿಸಲು ಸರಕಾರ ಖಂಡಿತ ಸಿದ್ಧವಿದೆ(102:26.05.59p4878).

ತಿರುವನಂತಪುರದ ಬಿಷಪ್ ರೆವ: ವಿನ್ಸೆಂಟ್ ವಿ. ಪೆರೇರಾ ಮತ್ತು ಇತರ ಚರ್ಚ್ ಅಧಿಕಾರಿಗಳು ಹಠ ಹಿಡಿದು, ಆಕ್ರೋಶ ವ್ಯಕ್ತಪಡಿಸಿ ಸಮನ್ವಯದ ಮಾತುಕತೆಗಳಿಗಾಗಿ ಮುಖ್ಯಮಂತ್ರಿಯವರು ನೀಡಿದ ಕರೆಯನ್ನು ಸಂಪೂರ್ಣವಾಗಿ ತಿರಸ್ಕರಿಸಿದರು(102:26.05.59p4878).

ಆದಾಗ್ಯೂ, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ತಮ್ಮ ನೇರವಾದ ಹೋರಾಟದ ಕಾರ್ಯಕ್ರಮಗಳನ್ನು ಮುಂದುವರಿಸಲು ನಿರ್ಧರಿಸಿದವು. ಆದರೆ ಅವರ ಜತೆಗಿನ ಘರ್ಷಣೆಯನ್ನು ತಪ್ಪಿಸಲು ಮುಖ್ಯಮಂತ್ರಿಗಳ ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ದಿನಗಳನ್ನು ಎಣಿಸುತ್ತಿರುವ ರಾಜ್ಯ ಸರ್ಕಾರದ ಆದೇಶಗಳನ್ನು ದೀರ್ಘಕಾಲದವರೆಗೆ ಪಾಲಿಸುವ ಪೊಲೀಸರು ಮುಂದೆ ಭೀಕರ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂದು ಮನ್ನತ್ ಪದ್ಮನಾಭನ್ ಪೋಲಿಸರಿಗೆ ಬೆದರಿಕೆ ಹಾಕಿದರು(143:26.05.59). ಮೇ 30, 1959ರಂದು ಚಂಗನಾಶ್ಶೇರಿಯಲ್ಲಿ ಮನ್ನತ್ ಪದ್ಮನಾಭನ್ ಅವರು ಮಾಡಿದ ತಮ್ಮ ಭಾಷಣದಲ್ಲಿ, ಇಡೀ ಸರ್ಕಾರದ ಆಡಳಿತಯಂತ್ರವನ್ನು ಸ್ತಬ್ಧಗೊಳಿಸುವಂತೆ ಜನರಿಗೆ ಮನವಿ ಮಾಡಿದರು(143:03.06.59).

### ಕಾಂಗ್ರೆಸ್‌ನ ಹೋರಾಟದ ತಂತ್ರಗಳು

ಕಾಂಗ್ರೆಸ್ ಪಕ್ಷದ ರಾಜ್ಯ ಮತ್ತು ಕೇಂದ್ರ ನಾಯಕರು ಮೊದಲಿನಿಂದಲೂ ಕಮ್ಯುನಿಸ್ಟ್ ಸರ್ಕಾರದೊಂದಿಗೆ ಸಂಪೂರ್ಣ ಅಸಹಿಷ್ಣುತೆಯನ್ನು ಬೆಳೆಸಿಕೊಂಡೇ ಬರುತ್ತಿದ್ದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಮಾತ್ರವಲ್ಲದೆ, ಪಿಎಸ್‌ಪಿ ಸಹ ಸರ್ಕಾರವನ್ನು ಉರುಳಿಸುವ ಪ್ರಯತ್ನವನ್ನು ಮುಂದುವರಿಸಿಕೊಂಡೇ ಬರುತ್ತಿತ್ತು. ಕ್ರೈಸ್ತರ ವಿರೋಧವು ಸಹ ಅವರನ್ನು ಬಹಳ ಮಟ್ಟಿಗೆ ಬಲಗೊಳ್ಳುವಂತೆ ಮಾಡಿತು. ಕಾಂಗ್ರೆಸ್, ಪಿಎಸ್‌ಪಿ, ಐಯುಎಂಎಲ್ ಮುಂತಾದವುಗಳು ರಾಜಕೀಯವಾಗಿ ಪರಸ್ಪರ ಅವಲಂಬಿತವಾಗಿದ್ದರೂ, ಏಪ್ರಿಲ್ 26, 1959ರಂದು ಎರ್ನಾಕುಲಂನಲ್ಲಿ ನಡೆದ ಸಭೆಯಲ್ಲಿ ಈ ಪಕ್ಷಗಳು ಔಪಚಾರಿಕವಾಗಿ ಮೈತ್ರಿಯನ್ನು ರಚಿಸಿಕೊಂಡವು(143:27.04.59). ಮೇ 1ರಿಂದ 3ರವರೆಗೆ ಚಂಗನಾಶ್ಶೇರಿಯಲ್ಲಿ ಜಾತಿ/ಸಮುದಾಯ ಸಂಘಟನೆಗಳ, ವಿರೋಧ ಪಕ್ಷಗಳ ಮತ್ತು ಎಲ್ಲಾ ಮುಖಂಡರ ಜಂಟಿ ಸಭೆ ನಡೆಯಿತು. ಶಾಲೆ ಮುಚ್ಚುವ ಚಳುವಳಿಗೆ ಬೆಂಬಲ ಘೋಷಿಸುವ ಮೂಲಕ ಕೇರಳವನ್ನು ಕಮ್ಯುನಿಸಂನಿಂದ ಮುಕ್ತಗೊಳಿಸುವುದಕ್ಕೆ ಜನತೆಗೆ ಕರೆ ನೀಡಿ, ಸಭೆಯಲ್ಲಿ ಎರಡು ನಿರ್ಣಯಗಳನ್ನು ನಾಯಕರಾದ ಚಾಂಡಿ, ಕಳತ್ತಿಲ್ ವೇಲಾಯುಧನ್ ನಾಯರ್, ಚೆರಿಯನ್ ಕಪ್ಪನ್, ಪಿ.ಎಸ್. ಜಾರ್ಜ್ ಮಂಡಿಸಿ, ಅಂಗೀಕರಿಸುವಂತೆ ನೋಡಿಕೊಂಡರು(84:04.05.59). ಮೇ 5ರಂದು ಕೆಪಿಸಿಸಿ ಎರ್ನಾಕುಲಂನಲ್ಲಿ ಕೆಪಿಸಿಸಿ ಸದಸ್ಯರ, ಜಿಲ್ಲಾ ಕಾಂಗ್ರೆಸ್ ಸಮಿತಿಗಳ, ಕಾಂಗ್ರೆಸ್ ಸಂಸದೀಯ ಪಕ್ಷದ, ಜಂಟಿ ರಾತ್ರಿ ಸಮ್ಮೇಳನವು ನಡೆಯುವ ಸಮಯದಲ್ಲಿ, ಕ್ಯಾಥೋಲಿಕ್ ಬಿಷಪ್‌ಗಳು ಅದೇ ನಗರದಲ್ಲಿ ಸಭೆ ಸೇರಿ, ಶಾಲೆಗಳನ್ನು ಪುನಃ ತೆರೆಯುವ ಅವಶ್ಯಕತೆ ಇಲ್ಲ ಎನ್ನುವ ನಿರ್ಧಾರ ತೆಗೆದುಕೊಂಡರು. ಸಮಗ್ರವಾದ ಆರೋಪ ಪಟ್ಟಿಯನ್ನು ಸಿದ್ಧಪಡಿಸುವ ಮತ್ತು ಈ ಆರೋಪಗಳ ಆಧಾರದ ಮೇಲೆ ಸರ್ಕಾರವನ್ನು ಕಿತ್ತೊಗೆಯುವ ಆಂದೋಲನವನ್ನು ತೀವ್ರಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳಲಾಯಿತು(60:p134). ಬಹುಮತದ ಬೆಂಬಲದೊಂದಿಗೆ ನಿರ್ಣಯವನ್ನು ಅಂಗೀಕರಿಸುವ ವೇಳೆ, ಕೆ.ಪಿ.ಸಿ.ಸಿ ಕಾರ್ಯಕಾರಿ ಸಮಿತಿ, 1959 ಮೇ 6ರಂದು ಕೈಗೊಂಡ ನಿರ್ಧಾರ ಹೀಗಿದೆ.

> "ಮೂರು ವಿಷಯಗಳನ್ನು ಈ ಸಮಿತಿಯು ಪರಿಗಣಿಸುವುದು ಬಹಳ ಅಗತ್ಯವೆಂದು ಭಾವಿಸುತ್ತದೆ. ಕಮ್ಯುನಿಸ್ಟ್ ಸರ್ಕಾರದ ದುರಾಡಳಿತವನ್ನು ಕೊನೆಗಾಣಿಸುವ ಪ್ರಚಾರವನ್ನು ಶಕ್ತಗೊಳಿಸುವುದು, ರಾಜ್ಯಾದ್ಯಂತ ಅಶಾಂತಿ ಸೃಷ್ಟಿಸಿ ಶಿಕ್ಷಣ ಕಾಯಿದೆ ವಿರುದ್ಧ ಪ್ರತಿಭಟನೆ ನಡೆಸುವುದು, ಹಾಗೂ ಪ್ರಜಾಪ್ರಭುತ್ವದ ರಕ್ಷಣೆಯ ಭಾಗವಾಗಿ ಸರಕಾರದಿಂದ ಅಕ್ಕಿ ವಹಿವಾಟಿನ ತನಿಖಾ ವರದಿಯನ್ನು ಸರ್ಕಾರ ಅಂಗೀಕರಿಸುವಂತೆ ಮಾಡುವುದು"(67:07.05.59).

ಕೆಪಿಸಿಸಿ ಅಧ್ಯಕ್ಷ ಆರ್. ಶಂಕರ್, ಮೇ 1959, 23ರಂದು ದೆಹಲಿಯಲ್ಲಿ ನಡೆದ ಸುದ್ದಿಗೋಷ್ಠಿಯಲ್ಲಿ ಹೀಗೆ ತಿಳಿಸಿದರು:

ನಾವು ಕೇಂದ್ರ ಸಂಸದೀಯ ಮಂಡಳಿಗೆ ವಿಷಯಗಳನ್ನು ತಿಳಿಸಿದ್ದೇವೆ. ಆಂದೋಲನಕ್ಕೂ ಕಾಂಗ್ರೆಸ್‌ಗೂ ಯಾವುದೇ ಸಂಬಂಧ ಇಟ್ಟುಕೊಳ್ಳಬಾರದೆಂದು ಮಂಡಳಿಯು ನಿರ್ದೇಶನ ನೀಡಿರುವುದಿಲ್ಲ. ಕಾಂಗ್ರೆಸ್‌ನ ಕೇರಳ ಘಟಕವು ಈ ವಿಷಯದ ಬಗ್ಗೆ ಯಾವುದೇ ನಿರ್ಧಾರವನ್ನು ತೆಗೆದುಕೊಂಡಿರುವುದಿಲ್ಲ. ಆಂದೋಲನದ ಬಗ್ಗೆ ಕಾಂಗ್ರೆಸ್ ಸಹಾನುಭೂತಿ ಹೊಂದಿದೆ ಎಂದು ಪ್ರಕಟಪಡಿಸಿದೆ. ಜನರ ಮನಸ್ಸಿನಲ್ಲಿ ಆಡಳಿತ ವಿರೋಧಿ ಧೋರಣೆಯನ್ನು ಬೆಳೆಸುವುದಕ್ಕೂ ಆ ಮೂಲಕ ಕಮ್ಯುನಿಸ್ಟರನ್ನು ಅಧಿಕಾರದಿಂದ ಕಿತ್ತೊಗೆಯಲು ಅನುಕೂಲ ಮಾಡಿಕೊಡುವುದಕ್ಕೂ ಕಾಂಗ್ರೆಸ್ ಸಹಕರಿಸುತ್ತಿದೆ(7:24.05.59).

ಶಾಲೆ ಮುಚ್ಚುವ ಆಂದೋಲನವನ್ನು ಉಲ್ಲೇಖಿಸಿ, ಜವಾಹರಲಾಲ್ ನೆಹರೂ ಪತ್ರಿಕಾಗೋಷ್ಠಿಯಲ್ಲಿ ಹೀಗೆ ಹೇಳಿದರು:

"ಸಾಧ್ಯವಾದ ಮಟ್ಟಿಗೆ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾಂಗ್ರೆಸಿಗರಾದ ಶಾಲಾ ವ್ಯವಸ್ಥಾಪಕರಿಗೆ ಮಾರ್ಗತಡೆಯನ್ನು ಸೃಷ್ಟಿಸಲು ಪಕ್ಷಕ್ಕೆ ಸಾಧ್ಯವಾಗುವುದಿಲ್ಲ"(84:15.05.59).

ಎಐಸಿಸಿ ಸದಸ್ಯ ಪಣಂಪಳ್ಳಿ ಗೋವಿಂದ ಮೇನನ್ ಏಪ್ರಿಲ್ 13, 1959ರಂದು ತ್ರಿಶೂರಿನಲ್ಲಿ ನಡೆದ ಸಭೆಯಲ್ಲಿ, ಅವರು ಮುಂಬರುವ ಹೋರಾಟದ ಬಗ್ಗೆ ಮಾತನಾಡುತ್ತಾ ಹೀಗೆ ಹೇಳಿದರು:

"ನಮ್ಮ ನಾಡಿಗೆ ಸಂಬಂಧಿಸಿದಂತೆ ಇದೀಗ ಒಂದು ವಿಮೋಚನಾ ಹೋರಾಟಕ್ಕೆ ಸಮಯ ಕೂಡಿ ಬಂದಿದೆ. ನಾನು ಕಮ್ಯುನಿಸ್ಟರಿಗೆ ತಿಳಿಸುವುದೇನೆಂದರೆ, ನಿಮ್ಮ ವಿರುದ್ಧದ ಅಂತಿಮ ಹೋರಾಟ ಪ್ರಾರಂಭಿಸಲಾಗಿದೆ"(202:16.04.59;205:p19).

ಸರ್ಕಾರದ ವಿರುದ್ಧ ಜಾತಿ/ಸಮುದಾಯದ ಶಕ್ತಿಗಳನ್ನು ಒಟ್ಟುಗೂಡಿಸಿ ಸಜ್ಜುಗೊಳಿಸುವಿಕೆಗೆ ಮತ್ತು ಹಿಂಸಾಚಾರದ ಬಗ್ಗೆ ಹೆಚ್ಚು ಶಕ್ತವಾಗಿ ಮಾತನಾಡಲು ಪನಂಪಿಳ್ಳಿಯವರನ್ನು ಪ್ರೋತ್ಸಾಹಿಸಲಾಯಿತು. ಮೇ 5, 1959ರಂದು ತಿರುವನಂತಪುರದಲ್ಲಿ ನಡೆದ ಪ್ರತಿಭಟನಾ ಭಾಷಣದಲ್ಲಿ ಅವರು ಹೀಗೆ ಹೇಳಿದರು:

"ಕಮ್ಯುನಿಸ್ಟ್ ಥೋಟಾ ಸಂಗಾತಿಗಳು (ಕಾಮ್ರೇಡ್ಸ್) ಇಂದು ಚಿಕ್ಕ ರಾಜಕುಮಾರರಂತಿದ್ದಾರೆ. ಇಲ್ಲಿನ ಜನ ಕಮ್ಯುನಿಸ್ಟ್ ರಾಜಮನೆತನವನ್ನು ಖಂಡಿತ. ತುಳಿಯುತ್ತಾರೆ. ನಾವು ಸಹ ಅನ್ನ ತಿನ್ನುವವರು. ನಮ್ಮ ಕೈಯಲ್ಲಿಯೂ ಚಾಕು, ಚೂರಿಗಳು ಇವೆ. ನೀವು ಭಯದಿಂದ ಹಿಂದೆ ಸರಿದರೆ ಅಥವಾ ಅವರಿಗೆ ಶರಣಾದರೆ, ಅವರು ಇಲ್ಲಿ ತಮ್ಮ ವಿಜಯ ಗೋಪುರವನ್ನು ನಿರ್ಮಿಸುತ್ತಾರೆ"(108:07.05.59).

ಕಾಂಗ್ರೆಸ್ ಮುಖಂಡ ಹಾಗೂ ಕೆಪಿಸಿಸಿ ಕಾರ್ಯಕಾರಿ ಸದಸ್ಯರಾದ ಕಳತ್ತಿಲ್ ವೇಲಾಯುಧನ್ ನಾಯರ್, ಮೇ 7, 1959ರಂದು ತಮ್ಮ ಭಾಷಣದಲ್ಲಿ ಹೇಳಿದ್ದು ಹೀಗೆ:

"ಒಂದು ಸರಕಾರವು, ಪ್ರಜಾಪ್ರಭುತ್ವದ ಆಚರಣೆಗಳು ಮತ್ತು ಸಂಪ್ರದಾಯಗಳನ್ನು ಅಳವಡಿಸಿಕೊಳ್ಳಲು ನಿರಾಕರಿಸಿದಾಗ, ಆ ಸರ್ಕಾರವನ್ನು ಅಧಿಕಾರದಿಂದ ತೆಗೆದುಹಾಕುವುದಕ್ಕಾಗಿ ಪ್ರಜಾಪ್ರಭುತ್ವ ವಿರೋಧಿ ಮಾರ್ಗಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ" (143:07.05.59).

ಮತ್ತೊಬ್ಬ ಕಾಂಗ್ರೆಸ್ ನಾಯಕ ಕೆ.ಎಂ.ಚಾಂಡಿ ಕೊಟ್ಟಾಯಂನಲ್ಲಿ ನಡೆದ ಒಂದು ಸಭೆಯಲ್ಲಿ ಹೀಗೆ ಹೇಳಿದರು:

"ಕೆಲವು ಜನರು ಅಂತರ್ಯುದ್ಧಕ್ಕೆ ಸಿದ್ಧರಾಗಿರುವುದಾಗಿ, ಮುಖ್ಯಮಂತ್ರಿ ನಂಬೂದಿರಿಪಾಡ್ ಹೇಳಿದ್ದಾರೆಂದು ವರದಿಯಾಗಿದೆ. ಅವರು ಏನೇ ಹೇಳಿದರೂ ಅದು ನಮ್ಮ ಮೇಲೆ ಪರಿಣಾಮ ಬೀರುವುದಿಲ್ಲ. ಒಂದೊಮ್ಮೆ ಅಂತರ್ಯುದ್ಧವಾದರೂ ಸರಿಯೇ, ಸರ್ಕಾರವನ್ನು ಕಿತ್ತೊಗೆಯಲು ನಾವು ಅದನ್ನು ಅವಲಂಬಿಸಿಯೇ ತೀರುತ್ತೇವೆ(202:04.05.59;205:p20).

ಎಐಸಿಸಿ ಸದಸ್ಯರು ಕೊಲ್ಲಂ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರೂ ಆದ, ಸಿ.ಎಂ. ಸ್ಟೀಫನ್ ಕುಂದರಾದಲ್ಲಿ ನಡೆಸಿದ ಅವರ ಭಾಷಣದಲ್ಲಿ ಹೀಗೆ ಘೋಷಿಸಿದರು:

"ಇಂದು ಇಲ್ಲಿ ಒಂದೇ ಒಂದು ಘೋಷಣೆ ಮಾತ್ರ ಇರುವುದು. ಸರಕಾರ ಹೊರ ನಡೆಯಬೇಕು. ಶೈಕ್ಷಣಿಕ ಆಂದೋಲನ ಎನ್ನುವುದು ಇಂದಿನ ಸಮಸ್ಯೆಯೇ ಅಲ್ಲ. ಅದೊಂದು ದಾರಿ ಮಾತ್ರ..."(108:28.05.59).

ಶಾಲೆ ಮುಚ್ಚುವ ಚಳುವಳಿಗೆ ಬೆಂಬಲ ಪಡೆಯಲು ಮೇ 24ರಂದು, ತಿರುವನಂತಪುರಂನಲ್ಲಿರುವ ಪಾಳಯಂ ಚರ್ಚ್ ಮೈದಾನದಲ್ಲಿ ಕರೆಯಲ್ಪಟ್ಟ ಸಭೆಯನ್ನುದ್ದೇಶಿಸಿ ಮಾತನಾಡಿದ ರಾಜ್ಯ ವಿಧಾನಸಭೆಯ ಕಾಂಗ್ರೆಸ್ ವಿರೋಧ ಪಕ್ಷದ ನಾಯಕ ಪಿ.ಟಿ.ಚಾಕೊ ಹೀಗೆ ಹೇಳಿದರು:

"ಕ್ಯಾಥೋಲಿಕ್ಕರು ತ್ಯಾಗ ಮಾಡಲು ಸಿದ್ಧರಾಗಿರಬೇಕು. ಒಂದು ಅವಕಾಶ ಸಿಗುವುದಾದರೆ, ಜೂನ್ 1ರಿಂದ ಅವರ ಮಕ್ಕಳು ಸಹ ಕೇರಳದಲ್ಲಿ, ಕಮ್ಯುನಿಸಂ ವಿರುದ್ಧದ ಅಂತಿಮ ಹೋರಾಟ ಆರಂಭಿಸುತ್ತಾರೆ. ಆ ಹೋರಾಟದಲ್ಲಿ ಕ್ಯಾಥೋಲಿಕ್ಕರು ಅನುಭವಿಸಿದ ಪ್ರತಿಯೊಂದು ನಷ್ಟವನ್ನೂ ಭವಿಷ್ಯದ ಇತಿಹಾಸಕಾರರು ಸುವರ್ಣಾಕ್ಷರಗಳಲ್ಲಿ ಕೆತ್ತಿ ದಾಖಲಿಸುತ್ತಾರೆ"(40:07.06.59).

ಕಾಂಗ್ರೆಸ್ಸಿಗರು ವೈಯಕ್ತಿಕವಾಗಿ ಮಾತ್ರ, ಕೋಮುವಾದಿ ಮತ್ತು ಕಮ್ಯುನಿಸ್ಟ್ ವಿರೋಧಿ ಚಳವಳಿಯಲ್ಲಿ ನಿರತರಾಗಿದ್ದರು(60:p135). ಆದರೆ ಕಾಂಗ್ರೆಸ್ ಪಕ್ಷ ಒಂದು ಸಂಘಟನೆ ಎನ್ನುವ ನೆಲೆಯಲ್ಲಿ ಅದರಿಂದ ತಪ್ಪಿಸಿಕೊಳ್ಳುತ್ತಿರುವುದನ್ನು ನಾವು ಕಾಣಬಹುದು. ನಾಯಕತ್ವ ಮೌನದ ಸಂದೇಶವನ್ನು ಅರ್ಥ ಮಾಡಿಕೊಂಡ ಸ್ಥಳೀಯ ಕಾಂಗ್ರೆಸ್ ಮುಖಂಡರು ವಿಮೋಚನಾ ಹೋರಾಟದಲ್ಲಿ ದೊಡ್ಡ ಉತ್ಸಾಹದಿಂದ ಭಾಗವಹಿಸುತ್ತಿದ್ದಾರೆ(113:p75). ಹೈಕಮಾಂಡ್‌ನ ಆಶೀರ್ವಾದದೊಂದಿಗೆ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಇದು ಅವರಿಗೆ ದೊರಕಿದ ಅವಕಾಶವಾಗಿತ್ತು. ದೆಹಲಿಯಲ್ಲಿ

ಹೈಕಮಾಂಡ್ ಜೊತೆ ಮಾತುಕತೆ ನಡೆಸಿದ ನಂತರ, ಮೇ 23, 1959ರಂದು ಕೆಪಿಸಿಸಿ ಹೊಸ ಅಧ್ಯಕ್ಷ ಆರ್.ಶಂಕರ್ ನಡೆಸಿದ ತಮ್ಮ ಪತ್ರಿಕಾ ಪ್ರಕಟಣೆಯಲ್ಲಿ ಈ ವಿಚಾರವಾಗಿ ನಿರ್ದೇಶನವನ್ನು ಸೂಚಿಸಲಾಗಿತ್ತು*(7:24.03.0959).

ಮೇ 1959ರ ಕೊನೆಯಲ್ಲಿ ಊಟಿಯಲ್ಲಿ ನಡೆದ ಎಐಸಿಸಿ ಸಮ್ಮೇಳನದಲ್ಲಿ ಪ್ರಧಾನಿ ನೆಹರೂ, ಇಂದಿರಾ ಗಾಂಧಿ ಮತ್ತು ಮೊರಾರ್ಜಿ ದೇಸಾಯಿ, ಯು.ಎನ್. ಧೇಬಾರ್ ಮುಂತಾದವರು ಬಹಿರಂಗ ಹೋರಾಟಕ್ಕೆ ನಿಸ್ಸಂದಿಗ್ಧ ಅನುಮತಿಯನ್ನು ನೀಡಿದರು. ಸಂಪೂರ್ಣವಾಗಿ ಅಹಿಂಸಾತ್ಮಕ ಧೋರಣೆ ಅನುಸರಿಸುವ ಮೂಲಕ ಶಾಂತಿಯುತ ಆಂದೋಲನ ಮುಂದುವರಿಸಲು ಸಂಘಟನೆಗೆ ಅವಕಾಶ ಕಲ್ಪಿಸಿರುವುದಾಗಿ ಕೆಪಿಸಿಸಿ ಅಧ್ಯಕ್ಷ ಆರ್. ಶಂಕರ್ ವಿವರಣೆ ನೀಡಿದರು.

> "ಜನರು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಲು ಮತ್ತು ಕಮ್ಯುನಿಸ್ಟ್ ಪಕ್ಷ ಮತ್ತು ಅವರ ಸರ್ಕಾರದ ದಾಳಿಗಳ ವಿರುದ್ಧ, ತಾವು ಸ್ವತಃ ಸಂಘಟಿಸುವುದಕ್ಕಾಗಿ ಈ ರೀತಿ ಮಾಡಲಾಗಿತ್ತು"(84:03.06.59).

ಜೂನ್ 3ರಂದು, ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಹೋರಾಟವನ್ನು ಪ್ರಾರಂಭಿಸಲು ಕೆಪಿಸಿಸಿ ನಿರ್ಣಯ ಕೈಗೊಂಡಿತು. ಕೆಪಿಸಿಸಿ ಸಭೆಯ ನಂತರ ಅದೇ ದಿನ, ಪಟ್ಟಂತಾನುಪಿಳ್ಳ, ಪಿ.ಕೆ. ಕುಂಞು, ಅರಂಜಿಲ್ ಶ್ರೀಧರನ್ ಮುಂತಾದ ಪಿಎಸ್‌ಪಿ.ಯ ಮುಖಂಡರೊಂದಿಗೆ ಆರ್.ಶಂಕರ್ ಸಮಾಲೋಚನೆ ನಡೆಸಿದರು. ಪ್ರಸ್ತುತ ಪಿಎಸ್‌ಪಿ ಮುಖಂಡರು, ಕೆ.ಎಂ.ಸೀತಿ ಸಾಹಿಬ್, ಬಿ. ಪೋಕರ್ ಸಾಹಿಬ್ ಮುಂತಾದ ಮುಸ್ಲಿಂ ಲೀಗ್ ನಾಯಕರೊಂದಿಗೆ ಮರುದಿನ ಚರ್ಚೆ ನಡೆಸಿದರು. ಜೂನ್ 12ಕ್ಕೆ ಅಹಿಂಸಾತ್ಮಕ ಚಳುವಳಿಯನ್ನು ಪ್ರಾರಂಭಿಸುವುದಾಗಿ ಘೋಷಿಸಿದರು. ಜೂನ್ 12ರಿಂದ 'ವಿಮೋಚನಾ ದಿನ'ವಾಗಿ ಆಚರಿಸಲಾಗುವುದೆಂದು ಅವರು ಉಲ್ಲೇಖಿಸಿದರು. ಕೊಲ್ಲಂನಲ್ಲಿ ಅವರ ಜೂನ್ 5ರಂದು ಅವರು ಹೊರಡಿಸಿದ ಪತ್ರಿಕಾ ಪ್ರಕಟಣೆ ಈ ರೀತಿಯದಾಗಿತ್ತು:

> "ಸಾಮಾನ್ಯ ಪರಿಸ್ಥಿತಿಗಳಲ್ಲಿ ಕಾಂಗ್ರೆಸ್ ವ್ಯವಸ್ಥಿತ ಆಂದೋಲನದ ಎಂದಿನ ಹಾದಿಯನ್ನು ಅನುಸರಿಸುತ್ತಿತ್ತು. ಆದರೆ ಕೇರಳದ ಬೆಳವಣಿಗೆಗಳಿಗೆ ಮೂಕ ಸಾಕ್ಷಿಯಾಗಲು ಅದಕ್ಕೆ ಸಾಧ್ಯವಾಗಲಾರದು. ಪ್ರಜಾಪ್ರಭುತ್ವ ಮತ್ತು ಸಂವಿಧಾನವನ್ನು ನಾಶಪಡಿಸಿಕೊಂಡು ಮುನ್ನಡೆಯುತ್ತಿರುವ ಒಂದು ಸರ್ಕಾರದ ದುರಾಡಳಿತದ ಪರಿಣಾಮ, ಇಲ್ಲಿನ ಜನರು ತುಳಿತಕ್ಕೊಳಗಾಗಿ ಅತೀವ ಸಂಕಷ್ಟಗಳನ್ನು ಅನುಭವಿಸುತ್ತಿದ್ದಾರೆ (84:06.06.59). ಸರ್ಕಾರವನ್ನು

---

* ಶಂಕರ್ ಹೇಳಿದರು: 'ನಾವು ಈ ವಿಷಯವನ್ನು ಕೇಂದ್ರ ಸಂಸದೀಯ ಮಂಡಳಿಗೆ ವರದಿ ಮಾಡಿದ್ದೇವೆ. ಹೋರಾಟಕ್ಕೂ ಕಾಂಗ್ರೆಸ್‌ಗೂ ಸಂಬಂಧವಿದೆ. ಸಂಸದೀಯ ಮಂಡಳಿಯು ಯಾವುದೇ ಸಲಹೆ ನೀಡಿರುವುದಿಲ್ಲ. ಕೇರಳದ ಕಾಂಗ್ರೆಸ್ ಈ ಬಗ್ಗೆ ಯಾವುದೇ ನಿರ್ಧಾರ ಕೈಗೊಂಡಿಲ್ಲ. ಜನರಲ್ಲಿ ಆಡಳಿತ ವಿರೋಧಿ ಭಾವನೆ ಮೂಡಿದೆ. ಆ ಮೂಲಕ ಕಮ್ಯುನಿಸ್ಟರನ್ನು ಅಧಿಕಾರದಿಂದ ತೆಗೆದುಹಾಕಲು ಕಾರಣವಾಗುತ್ತದೆ ಈ ಆಂದೋಲನಕ್ಕೆ ಕಾಂಗ್ರೆಸ್ ಸಹಾ ಹೊಂದಿದೆ.'

ಸ್ಥಗಿತಗೊಳಿಸುವುದಕ್ಕೆ ಒದಗುವಂಥ ತಕ್ಷಣದ ಕ್ರಮಗಳ್ಯಾವುದನ್ನೂ ಕ್ರಿಯಾ ಯೋಜನೆಯಲ್ಲಿ ಒಳಗೊಳಿಸಿರುವುದಿಲ್ಲ."

ಮೂರನೇ ವಾಚನದಲ್ಲಿ, ಕೇರಳ ಕೃಷಿ ಮಸೂದೆ ಅಂಗೀಕಾರವಾದ ಎರಡು ದಿನಗಳ ನಂತರ, 'ವಿಮೋಚನಾ ದಿನಾಚರಣೆ'ಯ ಸಂದರ್ಭದಲ್ಲಿ ಶಂಕರ್ ವಿವರಿಸಿದರು.

"ಅಂದರೆ, ಕಮ್ಯುನಿಸ್ಟರಿಗೆ ರಾಜೀನಾಮೆ ನೀಡಿ ಹೊರಟು ಹೋಗಲು ಹತ್ತು ದಿನಗಳ ಅವಕಾಶ ನೀಡಲಾಗುತ್ತದೆಯೆಂದೂ ನಂತರವಷ್ಟೆ ಸರ್ಕಾರವನ್ನು ಸ್ಥಗಿತಗೊಳಿಸುವುದರ ಕುರಿತು ಆಲೋಚನೆ ಮಾಡಲಾಗುವುದು"

ಎಂದೂ ಅವರು ಸ್ಪಷ್ಟಪಡಿಸಿದರು. ಕೋಮುಶಕ್ತಿಗಳೊಂದಿಗೆ ಸಹಕರಿಸಿಕೊಂಡೇ ಸರ್ಕಾರಿ ವ್ಯವಸ್ಥೆಯನ್ನು ಸ್ಥಗಿತಗೊಳಿಸುವುದು(60:p136). ಕೆಪಿಸಿಸಿ ಮುಖ್ಯಸ್ಥರು ಮತ್ತು ಅವರ 'ದಿನಮಣಿ' ಪತ್ರಿಕೆಯು ಸ್ಪಷ್ಟವಾಗಿ ಘೋಷಿಸಿದಂತೆ ಸರ್ಕಾರಿ ಕಚೇರಿಗಳನ್ನು ಪಿಕೆಟಿಂಗ್ ಮಾಡಲು ಪ್ರಾರಂಭಿಸಲಾಯಿತು. ಈ ಸಂದರ್ಭದಲ್ಲಿ ಕಾಂಗ್ರೆಸ್ ಅಧ್ಯಕ್ಷರು, ಕೆಪಿಸಿಸಿ ಅಧ್ಯಕ್ಷರಿಗೆ ಈ ಕೆಳಗಿನಂತೆ ಟೆಲಿಗ್ರಾಂ ಕಳುಹಿಸಲಾಗಿದೆ ಎಂದು ವರದಿ ಮಾಡಲಾಗಿದೆ.

('No Picketing, Should Not Resort To Direct Action Without Previous Sanction")

("After Mature Consultations, Congress Along With Other Political Parties Started Picketing Of Public Offices. A Statement Detected By Dhebar At Ooty Permitted Extra Constitutional Methods In Special Circumstances In Kerala. I Assure Strict Adherence To Non Violence. Pray Blessings")

"ಪಿಕೆಟಿಂಗ್ ಅನ್ನು ಅನುಮತಿಸಲಾಗುವುದಿಲ್ಲ. ಪೂರ್ವಾನುಮತಿ ಇಲ್ಲದೆ ನೇರ ಹೋರಾಟ ಸಲ್ಲದು."

ಇದಕ್ಕೆ ಪ್ರತಿಕ್ರಿಯಿಸಿದ ವಿರೋಧ ಪಕ್ಷದ ನಾಯಕ ಪಿ.ಟಿ.ಚಾಕೊ ಈ ರೀತಿ ಸಂದೇಶ ಕಳುಹಿಸಿದ್ದಾರೆ.

"ಇತರ ರಾಜಕೀಯ ಪಕ್ಷಗಳೊಂದಿಗೆ ಪ್ರಬುದ್ಧ ಸಮಾಲೋಚನೆಯ ನಂತರವಷ್ಟೇ ಕಚೇರಿಗಳನ್ನು ಪಿಕೆಟಿಂಗ್ ನಡೆಸಲು ಪ್ರಾರಂಭಿಸಿರುವುದು. ಕೇರಳದ ವಿಶೇಷ ಸಂದರ್ಭಗಳಲ್ಲಿ ಅಸಾಂವಿಧಾನಿಕ ವಿಧಾನಗಳನ್ನು ಅಳವಡಿಸಿಕೊಳ್ಳಬಹುದು ಎಂದು ಊಟಿಯಲ್ಲಿ ಧೇಬಾರ್ ಪ್ರಸ್ತಾಪಿಸಿದ್ದರು. ನಾನು ಅಹಿಂಸೆಯನ್ನು ಖಾತರಿಪಡಿಸುತ್ತೇನೆ. ತಮ್ಮ ಆಶೀರ್ವಾದಗಳು ನಮಗಿರಲಿ"(202:p25).

13 ಜೂನ್ 1959ರಂದು ತಿರುವನಂತಪುರದಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ

ಶಂಕರ್‌ರವರನ್ನು ಪತ್ರಕರ್ತರೊಬ್ಬರು ಪ್ರಶ್ನಿಸಿದರು:

> "ಅಭಿವೃದ್ಧಿ ಕಾರ್ಯಗಳಿಗೆ ಕಾಂಗ್ರೆಸ್ ಅಡ್ಡಿಪಡಿಸುತ್ತಿದೆ ಎಂದು ಮುಖ್ಯಮಂತ್ರಿಗಳು ಆರೋಪಿಸುತ್ತಿದ್ದಾರೆ. ಅದಕ್ಕೆ ತಾವು ಏನು ಹೇಳುತ್ತೀರಿ...?"
>
> ಶಂಕರ್: "ಅಭಿವೃದ್ಧಿಗೆ ಅಡ್ಡಿ ಮಾಡುವುದಷ್ಟೇ ಅಲ್ಲ, ಸರ್ಕಾರದ ಕೆಲಸಗಳನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಲಾಗುವುದು."

ಈ ರೀತಿ ಕೇರಳದಲ್ಲಿ ಕಾಂಗ್ರೆಸ್ ಪಕ್ಷವು, ಕೋಮು/ಸಮುದಾಯ ಸಂಘಟನೆಗಳ ಮತ್ತು ಇತರ ವಿರೋಧಪಕ್ಷಗಳ ಸಹಕಾರದೊಂದಿಗೆ ಜೂನ್ 12ರಿಂದ ಸರ್ಕಾರದ ವಿರುದ್ಧ ಹಿಂಸಾತ್ಮಕವಾದ ಬಹಿರಂಗ ಪ್ರತಿಭಟನೆಗಳು ಪ್ರಾರಂಭಗೊಂಡವು.

**ಪಟ್ಟಂತಾನು ಪಿಳ್ಳ ಅವರ ದಂಗೆಯ ಕರೆ**

ಪಟ್ಟಂ ತಾನು ಪಿಳ್ಳರವರ ನೇತೃತ್ವದ ಪ್ರಜಾ ಸೋಷಿಯಲಿಸ್ಟ್ ಪಾರ್ಟಿ ಮತ್ತು ಅದರ ಕೇರಳ ಘಟಕವು ಕಮ್ಯುನಿಸ್ಟ್ ಸರ್ಕಾರದ ವಿರುದ್ಧವಾಗಿತ್ತು. 57ರ ರಾಜ್ಯ ಚುನಾವಣೆಗಳಲ್ಲಿ, ಪಿಎಸ್‌ಪಿಯು ಮುಸ್ಲಿಂ ಲೀಗ್ ಜೊತೆ ಔಪಚಾರಿಕ ಮೈತ್ರಿಯನ್ನು ಮಾಡಿಕೊಂಡಿತ್ತು. ತಿರು-ಕೊಚ್ಚಿಯ ಮಾಜಿ ಮುಖ್ಯಮಂತ್ರಿ ಮತ್ತು ಕೇರಳ ಪಿಎಸ್‌ಪಿ ಅಧ್ಯಕ್ಷ ಪಟ್ಟಂತಾನು ಪಿಳ್ಳ ತಿರುವನಂತಪುರಂನಲ್ಲಿ ನಡೆದ ಒಂದುಸಮಾವೇಶವನ್ನು ಉದ್ದೇಶಿಸಿ ಈ ಪ್ರಕಾರ ಮಾತನಾಡಿದರು:

> "ಕೇವಲ ಸಭೆಗಳು ಮತ್ತು ನಿರ್ಣಯಗಳಿಂದ ಯಾವುದೇ ಪ್ರಯೋಜನವಿಲ್ಲ. ಪ್ರಸ್ತುತ ಪರಿಸ್ಥಿತಿಯಲ್ಲಿ ಭಿನ್ನವಾದ ನಿಲುವುಗಳನ್ನು ತೆಗೆದುಕೊಳ್ಳಬೇಕು. ಹೆಚ್ಚು ದೃಢವಾದ ಮತ್ತು ಧೈರ್ಯದ ಹೆಜ್ಜೆಗಳ ಅಗತ್ಯವಿದೆ(32:04.04.59). ಜೀವಕ್ಕಿಂತ ಸ್ವಾಭಿಮಾನ ದೊಡ್ಡದು"

ಎಂದು ಸಾರುತ್ತಾ, ಪಟ್ಟಂ

> "ಗಂಡಸುತನವಿರುವ ಹೋರಾಟದ ಭಟರು, ಕಮ್ಯುನಿಸ್ಟ್ ಸರ್ಕಾರವನ್ನು ಸೆಕ್ರೆಟರಿಯೇಟ್‌ನಿಂದ ಹೊರಹಾಕಬೇಕು,"

ಎಂದು ಕರೆ ನೀಡಿದರು.

> "ಹೋರಾಟಗಾರರು ಧೈಹಿಕ ಶಕ್ತಿಯನ್ನು ಪ್ರಯೋಗಿಸುವುದಾದರೆ, ಮೂರು ವರ್ಷಕ್ಕಿಂತ ಹೆಚ್ಚು ಕಾಲಾವಧಿ ಇರುವ ಸರಕಾರವನ್ನು ಕೇವಲ ಮೂರೇ ದಿನಗಳಲ್ಲಿ ಕಿತ್ತೊಗೆಯಬಹುದು"

ಅವರು ಘೋಷಿಸಿದರು(143:07.04.59).

ಪಟ್ಟಂ ತಾನು ಪಿಳ್ಳರವರ ದುಸ್ತರವಾದ ಆತುರದ ದಂಗೆಯ ಮೂಲಕ ಸರಕಾರವನ್ನು ಕಿತ್ತೊಗೆಯಬೇಕು, ಎನ್ನುವ ವಿಚಾರ ಹೊಂದಿದ್ದರು. ಅವರು ಹೇಳಿದ್ದು ಹೀಗೆ:

"ಕೇರಳ ಸರಕಾರವನ್ನು ವಿಸರ್ಜಿಸದಿದ್ದರೆ, ಕ್ರಾಂತಿಯ ಮೂಲಕ ಅದನ್ನು ನಾಶಪಡಿಸಲು ಇಲ್ಲಿನ ಜನರು ನಿರ್ಬಂಧಿತರಾಗುತ್ತಾರೆ. ದೇಶದ ಒಳಿತಿಗಾಗಿ, ಕೇಂದ್ರ ಸರ್ಕಾರ, ಪ್ರಧಾನ ಮಂತ್ರಿ ಮತ್ತು ರಾಜ್ಯಪಾಲರು ಇದನ್ನು ಆದಷ್ಟು ಬೇಗ ಅರ್ಥಮಾಡಿಕೊಳ್ಳುವುದು ಉತ್ತಮ"(104:16.06.59;202:p35).

ಮತ್ತೊಂದು ಸಭೆಯಲ್ಲಿ ಪಟ್ಟಂ ಈ ರೀತಿ ಮಾತನಾಡಿದ್ದಾಗಿ ವರದಿ ಇದೆ: 'ಸರ್ಕಾರಿ ನೌಕರರು, ಮಂತ್ರಿಗಳ ಮತ್ತು ಸರ್ಕಾರದ ಆದೇಶಗಳನ್ನು ಉಲ್ಲಂಘಿಸಬೇಕು'. ಅವರಲ್ಲಿ ರಾಜೀನಾಮೆ ನೀಡುವಂತೆ ಕೇಳಿಕೊಂಡರು. ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಿದ ನಂತರ ಅವರು (ಪ್ರತಿಪಕ್ಷಗಳು) "ಅಧಿಕಾರಕ್ಕೆ ಬಂದರೆ, ಪ್ರತಿಯೊಬ್ಬರನ್ನು ಅವರ ಹಳೆಯ ಸ್ಥಾನಗಳಲ್ಲಿ ಮರುಸ್ಥಾಪಿಸಲಾಗುವುದು" ಎಂದು ಅವರು ಭರವಸೆ ನೀಡಿದರು(84:06.06.59).

ಜೂನ್ 16, 1959ರಂದು ಪಿ.ಎಸ್.ಪಿ.ಯು ತನ್ನ ಸುದ್ದಿಪಪ್ರಿಕೆಯಲ್ಲಿ 'ನರಭಕ್ಷಕತೆ"ಎಂಬ ಶೀರ್ಷಿಕೆಯ ಸಂಪಾದಕೀಯದಲ್ಲಿ ಅವರು ಹೀಗೆ ಬರೆದಿದ್ದಾರೆ:

"ರಾಜ್ಯ ಸರ್ಕಾರವನ್ನು ಸ್ಥಗಿತಗೊಳಿಸುವ ಮತ್ತು ನಾಶಗೊಳಿಸುವ, ಕಾರ್ಯಕ್ರಮವನ್ನು ಇಂದು ಜನರು ಕೈಗೆತ್ತಿಕೊಂಡಿದ್ದಾರೆ. ರಾಜ್ಯದ ಸಂಘಟಿತ ಜನರಿಂದ ಈ ಸರ್ಕಾರವನ್ನು ಹೊಡೆದು ಓಡಿಸಲಾಗುವುದು ಎನ್ನುವುದರಲ್ಲಿ ನಮಗೆ ಯಾವುದೇ ಸಂಶಯವಿಲ್ಲ. ಅದರ ದಿನಗಳು ಎಣಿಸಲಾರಂಭಿಸಿದೆ".

ಕಾಂಗ್ರೆಸ್ ಆಂದೋಲನದಲ್ಲಿ ಹೆಚ್ಚು ಸಕ್ರಿಯವಾಗಿಲ್ಲ ಮತ್ತು ನೇರ ಹೋರಾಟದ ನಿಜವಾದ ಸಂಘಟಕರು ತಾವೇ ಆಗಿದ್ದೇವೆ, ಎಂದು ಪಿಎಸ್‌ಪಿ ಭಾವಿಸಿತು.. ಪಿಎಸ್‌ಪಿಯ ನಾಲಿಗೆ/ಮೌತ್‌ಪೀಸ್ 'ಕೇರಳ ಜನತಾ'ದ 20 ಜೂನ್ 1959ರ ತನ್ನ ಸಂಪಾದಕೀಯದಲ್ಲಿ ಈ ರೀತಿ ಬರೆದಿತ್ತು:

"ಜನರ ಮುಂದೆ ಒಂದು ದಾರಿ ಮಾತ್ರ ತೆರೆದುಕೊಂಡಿದೆ. ಅದೆಂದರೆ, ನೇರ ಹೋರಾಟದ ಮಾರ್ಗ. ಅದು ಇಂದು ಕೇರಳದಲ್ಲಿ ನಡೆಯುತ್ತಾ ಇದೆ"(60:p30).

ಪಟ್ಟಂ ತಾನು ಪಿಳ್ಳರವರು ಕೇರಳ ಸರ್ಕಾರವನ್ನು ವಿಸರ್ಜಿಸುವಂತೆ ಕೇಂದ್ರವನ್ನು ಪುನಃ ಪುನಃ ಕೇಳಿಕೊಂಡರು. ಅವರು ಜೂನ್ 15ರಂದು ತಿರುವನಂತಪುರದಲ್ಲಿ ಈ ಪ್ರತಿಕ್ರಿಯೆಯನ್ನು ನೀಡಿದರು. ಭಾರತ ಸರ್ಕಾರವು ಕೇರಳ ಮಂತ್ರಿಮಂಡಲವನ್ನು ವಿಸರ್ಜಿಸದಿದ್ದರೆ, ಈ ರಾಜ್ಯದ ಜನರು ಆ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ಅದರೊದಿಗೆ ಅವರು ಹೀಗೆ ಸೇರಿಸಿ ಹೇಳಿದರು:

"ತನಿಖೆಗೆ ಆದೇಶಿಸುವಂತೆ ಸರಕಾರವನ್ನು ಕೇಳುವ ಬದಲು ರಾಜ್ಯಪಾಲರು ವಿನಂತಿಯೊಂದಿಗೆ. ರಂಗಪ್ರವೇಶ ಮಾಡಿದ್ದು, ತಮಗೆ ವಿಷಾಧವೆನಿಸಿದೆ. ಕರ್ತವ್ಯ ನಿರ್ವಹಿಸಲು ವಿಫಲರಾದ ರಾಜ್ಯಪಾಲರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕು" (84:05.06.59).

ಸಂಕ್ಷಿಪ್ತವಾಗಿ ಹೇಳುವುದಾದರೆ, ಪಿಎಸ್‌ಪಿಯ ಕಮ್ಯುನಿಸ್ಟ್ ವಿರೋಧಿ ಧೋರಣೆಯಿಂದಾಗಿ, ಮೊದಲ ಇಎಂಎಸ್ ಸರ್ಕಾರದೊಂದಿಗಿನ ಹಗೆತನದ ವರ್ತನೆಯಿಂದಾಗಿ, ಹಿಂಸಾತ್ಮಕವಾದ ಬಹಿರಂಗ ಹೋರಾಟಕ್ಕೆ ತೀವ್ರತೆಯನ್ನುಂಟು ಮಾಡಿತು.

**ಕ್ರಾಂತಿಕಾರಿ ಸಮಾಜವಾದಿಗಳ ಹೋರಾಟದ ಮನೋಭಾವ**

ಎನ್.ಶ್ರೀಕಂಠನ್ ನಾಯರ್ ನೇತೃತ್ವದ ಕ್ರಾಂತಿಕಾರಿ ಸಮಾಜವಾದಿ ಪಕ್ಷ (RSP) ವಿಮೋಚನಾ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿತು. ಏಕೆಂದರೆ ಆಡಳಿತದ ಆರಂಭದಿಂದಲೂ ಆರ್‌ಎಸ್‌ಪಿಯು ಕಮ್ಯುನಿಸ್ಟರನ್ನು ದ್ವೇಷಿಸುತ್ತಿತ್ತು. ಅದಕ್ಕೆ ಸೂಕ್ತ ಕಾರಣಗಳೂ ಇದ್ದವು.ಕಮ್ಯುನಿಸ್ಟರು ಮೂಲತಃ ಕಾರ್ಮಿಕ ವರ್ಗದ ಪಕ್ಷವಾಗಿದೆ. ಆರ್‌ಎಸ್‌ಪಿಯು ಸಹ ಹಾಗೆಯೇ. ಕಮ್ಯುನಿಸ್ಟರು ಅಧಿಕಾರದಲ್ಲಿದ್ದಾಗ, ಅವರ ಕಾರ್ಮಿಕ ವರ್ಗದ ನೆಲೆಗೆ ಹೆಚ್ಚು ಘನತೆ ಮತ್ತು ಶಕ್ತಿ ಪಡೆಯುತ್ತಿತ್ತು. ಅದು ಆರ್‌ಎಸ್‌ಪಿ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತಿತ್ತು. ಸಿಪಿಐ ಅನ್ನು ಅಧಿಕಾರದಿಂದ ಕಿತ್ತೊಗೆಯುವುದು, ತಮ್ಮ ರಾಜಕೀಯ ಮತ್ತು ಟ್ರೇಡ್ ಯೂನಿಯನ್ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಲು ಅತ್ಯಗತ್ಯ ಎಂದು ಆರ್‌ಎಸ್‌ಪಿ ಭಾವಿಸಿತು. ಆದ್ದರಿಂದ ಅವರು ಕಮ್ಯುನಿಸ್ಟ್ ಮಂತ್ರಿಮಂಡಲವನ್ನು ನಖಶಿಖಾಂತವಾಗಿ ವಿರೋಧಿಸಿದರು(84:24.07.59). ಜೂನ್ 4, 1959ರಂದು, ಕೇರಳದ ಕಮ್ಯುನಿಸ್ಟ್ ಸರ್ಕಾರದ ನ್ಯೂನತೆ ಮತ್ತು ಲೋಪದೋಷಗಳನ್ನು ಬಹಿರಂಗಪಡಿಸಲು ಒಂದು ಆಂದೋಲನವನ್ನು ಪ್ರಾರಂಭಿಸಬೇಕೆಂದು ಆರ್‌ಎಸ್‌ಪಿ ನಿರ್ಧರಿಸಿತು(60:p138). ಹೀಗೆ ಅವರು ಹೋರಾಟದಲ್ಲಿ ಭಾಗವಹಿಸಿದ್ದಲ್ಲದೆ, ಸಂಘರ್ಷದಲ್ಲಿ ತಮ್ಮ ಪಾತ್ರವನ್ನು ತೀವ್ರವಾಗಿ ನಿರ್ವಹಿಸಿದರು. ಹಿಂದೂ ಪತ್ರಿಕೆಯ ರಾಜಕೀಯ ವರದಿಗಾರ ರಂಗಸ್ವಾಮಿ, ಈ ರೀತಿ ಅವಲೋಕಿಸಿದರು. "ಕ್ರಾಂತಿಕಾರಿ ಸಮಾಜವಾದಿ ಪಕ್ಷವು ರಾಜ್ಯದಲ್ಲಿ ತನ್ನ ಸದಸ್ಯತ್ವಕ್ಕೆ ಯಾವುದೇ ಅನುಪಾತದಲ್ಲಿಲ್ಲದ ರೀತಿಯಲ್ಲಿ ತನ್ನದೇ ಆದ ವಿಶಿಷ್ಟ ಅಸ್ತಿತ್ವವನ್ನು ಹೇಳಿಕೊಳ್ಳುತ್ತಾ, ತನ್ನದೊಂದು ದೊಡ್ಡ ಶಕ್ತಿ ಎಂಬ ಭ್ರಮೆಯಲ್ಲಿ ತನ್ನದೇ ಆದ ಅಭಿಯಾನವನ್ನು ಆಯೋಜಿಸುತ್ತದೆ. ಪೋಲೀಸರು ಅವರನ್ನು ನಿಭಾಯಿಸಲು ಕಷ್ಟ ಮತ್ತು ಆತಂಕವನ್ನು ಅನುಭವಿಸುತ್ತಾರೆ. ಖಖಕಯ ಸದಸ್ಯರು ನಿರ್ದಿಷ್ಟ ಸ್ಥಳದಲ್ಲಿ ನೆಲೆಸುವುದನ್ನೋ ಪಿಕೆಟಿಂಗ್‌ನಲ್ಲಿ ತೊಡಗಿಕೊಳ್ಳುವುದನ್ನೋ ಮಾಡುವುದಿಲ್ಲ. ಅವರು ಹೋರಾಟದಲ್ಲಿ ಮುಂದುವರಿಯುವುದನ್ನು ಪೊಲೀಸರು ತಡೆಯುವ ಸಂದರ್ಭದಲ್ಲಿ ಅವರು ಪರಸ್ಪರರ ಕೈಗಳನ್ನು ಬಿಗಿಯಾಗಿ ಹಿಡಿದು ಕೆಳಗೆ ಮಲಗಿ ಮಾನವ ಸರಪಳಿ ನಿರ್ಮಿಸಿಕೊಳ್ಳುತ್ತಾರೆ. ಅವರ ಬಂಧನದ ಬಗ್ಗೆ ತಿಳಿಸಿದಾಗಲೂ ಅವರು ಎದ್ದು ನಿಲ್ಲುವುದಾಗಲೀ ಪೊಲೀಸ್‌ವ್ಯಾನ್‌ಗೆ ಹತ್ತಿಕೊಳ್ಳುವುದಾಗಲೀ ಮಾಡುವುದಿಲ್ಲ. ಪೊಲೀಸರು ಅವರನ್ನು ಬಲವಂತವಾಗಿ ನೆಲದಿಂದ ಮೇಲಕ್ಕೆತ್ತಬೇಕು. ಒಬ್ಬರನ್ನು ಎತ್ತುವಾಗ ಎರಡು ಮೂರು ಜನರುಸೇರಿ ಎಬ್ಬಿಸಿ ಎಳೆದು ತರಬೇಕಾಗುತ್ತಿತ್ತು..(60:p31).

ಆಂದೋಲನಕ್ಕೆ ಅನುಕೂಲವಾಗುವಂತೆ ಆರ್‌ಎಸ್‌ಪಿಯು ಭಾಗವಹಿಸುತ್ತಿದೆ

ಎಂದು ಅವರು ಸಮರ್ಥಿಸಿಕೊಂಡರು. ಏಕೆಂದರೆ, ಆಂದೋಲನವನ್ನು ಪ್ರತಿಗಾಮಿ ಶಕ್ತಿಗಳ ಪ್ರಭಾವದಿಂದ ತಿರುಗಿಸಿಬಿಡಲು ಅವರಿಗೆ ಸಾಧ್ಯವಾಯಿತು. ಕೋಮುವಾದಿ ಶಕ್ತಿಗಳೊಂದಿಗೆ ಮೈತ್ರಿ ಮಾಡಿಕೊಂಡಿದ್ದಾರೆ ಎನ್ನುವ ಆರೋಪವನ್ನುಆರ್‌ಎಸ್‌ಪಿ ಸಂಪೂರ್ಣವಾಗಿ ನಿರಾಕರಿಸಿತು. ಕಮ್ಯುನಿಸ್ಟೇತರ ಕಾರ್ಮಿಕ ಸಂಘಟನೆಗಳ ಸಹಯೋಗದಲ್ಲಿ ಆರ್.ಎಸ್.ಪಿ ಆಂದೋಲನದಲ್ಲಿ ಭಾಗವಹಿಸಿದ್ದು, ಕಾರ್ಮಿಕ ವರ್ಗವು ಎತ್ತುವ ಬೇಡಿಕೆಗಳಿಗೆ ಸಹಾನುಭೂತಿಯನ್ನು ವ್ಯಕ್ತಪಡಿಸುವುದಕ್ಕಾಗಿ ಮಾತ್ರವಾಗಿತ್ತು*. ಆರ್‌ಎಸ್‌ಪಿ ವ್ಯಕ್ತಪಡಿಸಿದ ರಣೋತ್ಸಾಹ ಪ್ರತಿಭಟನಾಕಾರರಲ್ಲಿ ಆವೇಶ ಹುರುಪನ್ನು ಹೆಚ್ಚಿಸಿತು.

**ಮುಸ್ಲಿಂ ಲೀಗ್‌ನ ಪಾತ್ರ**

ಬಹಿರಂಗ ಹೋರಾಟ ಮತ್ತು ಉಚ್ಚಾಟನೆಯ ಚಳುವಳಿಯಲ್ಲಿ ಕೊನೆಯದಾಗಿ ಸೇರಿ ಭಾಗವಹಿಸಿದ ಪಕ್ಷವೆಂದರೆ, ಮುಸ್ಲಿಂ ಲೀಗ್. ಪಿಎಸ್ಪಿ ಜೊತೆ ಲೀಗ್ ಹಿಂದೆಯೇ ಸ್ವತಃ ಒಂದು ತಿಳುವಳಿಕೆಗೆ ಬಂದಿತ್ತು. ಸ್ವಾಭಾವಿಕವಾಗಿ, ಪಿಎಸ್ಪಿ ವಿಮೋಚನಾ ಹೋರಾಟದಲ್ಲಿ ಭಾಗವಹಿಸಲು ಲೀಗ್ ಮೇಲೆ ಗಣನೀಯ ಒತ್ತಡ ಹಾಕಲಾಯಿತು. ಮುಸ್ಲಿಂ ಲೀಗ್ ಆರಂಭದಲ್ಲಿ ನೇರ ಹೋರಾಟದಲ್ಲಿ ಭಾಗವಹಿಸಲು ಹಿಂದೇಟು ಹಾಕಿತ್ತು. ಏಕೆಂದರೆ, ಹಿಂಸಾತ್ಮಕ ಚಟುವಟಿಕೆಗಳಲ್ಲಿ ಅದಕ್ಕೆ ಆಸಕ್ತಿ ಇರಲಿಲ್ಲ. ಲೀಗ್‌ಗೆ ತ್ರಾಸದಾಯಕವಾಗುವ ಒಂದು ವಿಚಾರವಿತ್ತು. ಅದು ಮುಖ್ಯವಾಹಿನಿ ರಾಜಕೀಯದ ಮನ್ನಣೆಯ ವಿಷಯ ಕೂಡ ಆಗಿತ್ತು. ಕಾಂಗ್ರೆಸ್ ಪಕ್ಷವು ಅವರ ಲಾಭವನ್ನು ಪಡೆದುಕೊಂಡು ಆಂದೋಲನದಲ್ಲಿ ಅವರನ್ನು ಪಾಲ್ಗೊಳ್ಳುವಂತೆ ಮಾಡಿತು. ಕಮ್ಯುನಿಸ್ಟರನ್ನು ಅಧಿಕಾರದಿಂದ ತೆಗೆದುಹಾಕಲು ಪಕ್ಷವು ಒಪ್ಪಿತ್ತಾದರೂ ಅದನ್ನು ವ್ಯವಸ್ಥಿತ ವಿಧಾನದ ಮೂಲಕ ಮಾತ್ರ ಮಾಡಬಹುದು ಎಂದು ಮುಸ್ಲಿಂ ಲೀಗ್‌ನ ಅಧ್ಯಕ್ಷರಾದ, ಬಾಫಖಿ ತಂಜಳ್, ಮೇ 26, 1959ರಂದು ತಿರುನಾವಾಯದಲ್ಲಿ (ಸರ್ವೋದಯ ನಾಯಕ ಕೆ ಕೇಳಪ್ಪನ್ ಅಲ್ಲಿ ಉಪವಾಸ ಸತ್ಯಾಗ್ರಹ ನಡೆಸುತ್ತಿದ್ದರು) ಪ್ರಸ್ತಾಪಿಸಿದ್ದರು. ಚುನಾವಣೆಯ ಮೂಲಕ ಅಧಿಕಾರಕ್ಕೆ ಬಂದವರನ್ನು ಚುನಾವಣೆಯ ಮೂಲಕವೇ ಹೊರಹಾಕುವುದು ನ್ಯಾಯೋಚಿತವಾದ ಮಾರ್ಗ ಎಂದು ಲೀಗ್ ಅಭಿಪ್ರಾಯಪಟ್ಟಿತ್ತು. ಎಲ್ಲಾ ಶಾಲೆಗಳನ್ನು ಮುಚ್ಚುವ ಮನ್ನತ್‌ರವರ ಮತ್ತು ಅವರ ಮಿತ್ರರ ನೀತಿಯನ್ನು ಮುಸ್ಲಿಂ ಲೀಗ್ ಬೆಂಬಲಿಸಿರಲಿಲ್ಲ(60:p32).

ಮುಸ್ಲಿಂ ಲೀಗ್ ಅಲ್ಪಸಂಖ್ಯಾತ ಸಮುದಾಯದಲ್ಲಿ ದೊಡ್ಡ ಸಂಖ್ಯೆಯ ಅನುಯಾಯಿಗಳನ್ನು ಹೊಂದಿತ್ತು. ಕೇರಳದಲ್ಲಿ ಮುಸ್ಲಿಮರೇ ಪ್ರಬಲ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರು. ಒಂದು ಧಾರ್ಮಿಕ ಹಿನ್ನಲೆಯಿರುವ ರಾಜಕೀಯ ಪಕ್ಷವಾದ

---

* ಯುಟಿಯುಸಿಯ ಹಿರಿಯ ನಾಯಕರಾದ ಶ್ರೀ ಟಿ.ಎಂ.ಪ್ರಭಾ ಅವರೊಂದಿಗೆ 4ನೇ ಮೇ 2010 ರಂದು ಅವರ ನಿವಾಸದಲ್ಲಿ ಸಂದರ್ಶನ ನಡೆಸಲಾಯಿತು. ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರದ ವಿರುದ್ಧ ಆರ್‌ಎಸ್‌ಪಿಯು ಆಂದೋಲನದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿತು.

ಬಾ. ನೀನೂ ಕೂಡ
ನನ್ನನ್ನು ಕಮ್ಯುನಿಸ್ಟ್
ಆಳ್ವಿಕೆಯಿಂದ ಉಳಿಸು

ಮೊಸಳೆ ಕಣ್ಣೀರು:
ವ್ಯಂಗ್ಯಚಿತ್ರ: ರಂಗನಾಥನ್




ಇಎಂಎಸ್ ಸರ್ಕಾರದ ವಿರುದ್ಧದ
ಚಳುವಳಿಯ ಸಮಯಾವಧಿಯಲ್ಲಿ
ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ
ವ್ಯಂಗ್ಯಚಿತ್ರಗಳಲ್ಲೊಂದು

ಮುಸ್ಲಿಂ ಲೀಗ್ ವಿಷಯದಲ್ಲಿ ಪ್ರಧಾನಿ ನೆಹರೂ ಅವರ ತತ್ವಾಧಾರಿತ ನಿಲುವು ಕೇರಳದ ಕಾಂಗ್ರೆಸ್ ಪಕ್ಷಕ್ಕೆ ಇಷ್ಟವಾಗಿರಲಿಲ್ಲ.*(206:p191) ತಮ್ಮನ್ನು, ವಿಶೇಷವಾಗಿ ಕಾಂಗ್ರೆಸ್‌ನವರು, ಒಂದು ಸಮುದಾಯ ಅಥವಾ ಒಂದು ಧಾರ್ಮಿಕ ಘಟಕ ಎಂದು ಮನವೊಲಿಸಲು ಪ್ರಯತ್ನಿಸುವವರಿಗೆ ಅದನ್ನು ರಾಜಕೀಯ ಪಕ್ಷವಾಗಿ ಗುರುತಿಸಬೇಕೇ ಹೊರತು ಧಾರ್ಮಿಕ ಘಟಕವಾಗಿ ಅಲ್ಲೆಂದು ಮುಸ್ಲಿಂ ಲೀಗ್ ಆಗ್ರಹಿಸಿತ್ತು. ಪಿ.ಎಸ್.ಪಿ.ಯು ಲೀಗ್‌ನ ಈ ನಿಲುವನ್ನು ಒಪ್ಪಿಕೊಂಡು, ರಾಜಕೀಯ ಲಾಭ ಪಡೆಯಲು, ಅವರೊಂದಿಗೆ ಮೈತ್ರಿ ಮಾಡಿಕೊಂಡಿತು. ಮುಸ್ಲಿಂ ಲೀಗ್‌ನ್ನು ಕೇರಳದ ಒಂದು ರಾಜಕೀಯ ಪಕ್ಷವಾಗಿ ಗುರುತಿಸಬಹುದು ಎಂದು ಕಾಂಗ್ರೆಸ್ ನಾಯಕತ್ವ ಅವರಿಗೆ ಗೌಪ್ಯವಾಗಿ ಭರವಸೆ ನೀಡಿತು. ಅದರ ನಂತರವಷ್ಟೇ ಸರ್ಕಾರವನ್ನು ಹೊರಹಾಕುವ ಚಳವಳಿಯಲ್ಲಿ ಪಾಲ್ಗೊಳ್ಳಲು ಮುಸ್ಲಿಂ ಲೀಗ್ ಸಿದ್ಧವಾಗಿದ್ದು(60:p32).

ಇಂದಿರಾ ಗಾಂಧಿಯವರ ಮಾತುಗಳಿಂದ ಮುಸ್ಲಿಂ ಲೀಗ್ ಸಾಂತ್ವನ ದೊರಕಿತು. ಅವರು ಲೀಗ್ ಒಂದು ಪ್ರಜಾಪ್ರಭುತ್ವ ಪಕ್ಷವೆಂದು ವರ್ಗೀಕರಿಸಿದರು. ಕಾಂಗ್ರೆಸ್,

---

* ಪ್ರಧಾನಿ ಜವಾಹರಲಾಲ್ ನೆಹರು ಮತ್ತು ಇತರ ಕೆಲವು ಕಾಂಗ್ರೆಸ್ ನಾಯಕರು ಅಪಾಯಕಾರಿ ಕೋಮುವಾದಿ ಸಂಘಟನೆಯಾಗಿ ಭಾರತಕ್ಕೆ ದೊಡ್ಡ ದುರಂತವನ್ನು ತಂದರು ಎಂದು ಮುಸ್ಲಿಂ ಲೀಗ್ ಅನ್ನು ಚಿತ್ರಿಸಿದ್ದರು. ಮಲಬಾರ್ ಪ್ರವಾಸದ ವೇಳೆ ಪ್ರಧಾನಿಯವರು ಮುಸ್ಲಿಂ ಲೀಗ್ ಅನ್ನು 'ಸತ್ತ ಕುದುರೆ' ಎಂದು ಬಣ್ಣಿಸಿದ್ದರು. ಈ ಸಂಘಟನೆಯನ್ನು ಕೇರಳದಲ್ಲೂ ವಿರೋಧಿಸಬೇಕು. ಭಾರತದಲ್ಲಿ ಬೇರೆಡೆ ರಾಷ್ಟ್ರೀಯ ಮ್ಯೂಸಿಯಂನ ಒಂದು ವಸ್ತುವಾಗಿ ಅವರು ಲೀಗ್ ಅನ್ನು ಬಣ್ಣಿಸಿದ್ದಲ್ಲದೆ, ವಿಭಜನಾಪೂರ್ವ ಭಾರತದಲ್ಲಿ ಜಿನ್ನಾ ನಡೆಸಿದ ಹತ್ಯಾಕಾಂಡದ ದಿನಗಳನ್ನು ಅವರು ನೆನಪಿಸಿಕೊಂಡರು.(57:)

ನಂತರ ಲೀಗ್‌ನೊಂದಿಗೆ ಸೇರಿಕೊಂಡು ಸಂಯುಕ್ತ ರಂಗವನ್ನು ರಚಿಸಿಕೊಂಡಿತು. ರಾಜ್ಯದಲ್ಲಿ ಅಸ್ತವ್ಯಸ್ತವಾಗಿರುವ ಪರಿಸ್ಥಿತಿಯನ್ನು ಇತ್ಯರ್ಥಗೊಳಿಸಲು 22 ಜೂನ್ 1959ರಂದು ಪ್ರಧಾನ ಮಂತ್ರಿಗಳು ಕೇರಳಕ್ಕೆ ಬಂದಾಗ, ಲೀಗ್ ನಾಯಕರಿಗೂ ಆಹ್ವಾನ ನೀಡಲಾಗಿತ್ತು(84:28.06.59). ಬಳಿಕ ಮುಸ್ಲಿಂ ಲೀಗ್‌ನ ಅಸೆಂಬ್ಲಿ ಪಕ್ಷದ ಮುಖಂಡ ಸಿ.ಎಚ್. ಮೊಹಮ್ಮದ್ ಕೋಯಾರವರು ದೆಹಲಿಯಲ್ಲಿ ಪ್ರಧಾನಿಯನ್ನು ಭೇಟಿಯನ್ನೂ ಮಾಡಿದರು.*(143:19.05.59) ಕಾಂಗ್ರೆಸ್ಸಿನ ಮತಾಂಧರು ಅಂತಿಮವಾಗಿ ತಮ್ಮನ್ನು ಒಂದು ರಾಜಕೀಯವಾಗಿ ಪಕ್ಷವಾಗಿ ಅಂಗೀಕರಿಸಲು ನಿರ್ಬಂಧಿತರಾಗುವ ಸನ್ನಿವೇಶಗಳು ಉದ್ಭವಿಸಿವೆ ಎಂದು ಅರಿತುಕೊಂಡ ಲೀಗ್, ಘಟನೆಗಳನ್ನು ಅದಕ್ಕೆ ಅನುಗುಣವಾಗಿಯೇ ವ್ಯಾಖ್ಯಾನಿಸಿತು. ಹಿಂದೂ ಪತ್ರಿಕೆಯ ರಾಷ್ಟ್ರೀಯ ಲೇಖಕ ಕೆ. ರಂಗಸ್ವಾಮಿ ಅವರು ಕೇರಳ ಆಂದೋಲನದ ಕುರಿತು ತಮ್ಮ ವಿಶೇಷ ಲೇಖನದಲ್ಲಿ ಈ ರೀತಿ ವಿಮರ್ಶಿಸಿದ್ದಾರೆ:

> "ಆಂದೋಲನದಲ್ಲಿ ಭಾಗವಹಿಸಿರುವುದನ್ನು ಪರಿಗಣಿಸಿ ಕಾಂಗ್ರೆಸ್, ಒಂದು ಅಖಿಲ ಭಾರತ ಸಂಘಟನೆಯಾಗಿ ಮುಸ್ಲಿಂ ಲೀಗ್‌ಗೆ ಮಾನ್ಯತೆ ನೀಡಬೇಕೆಂದು ಲೀಗ್ ಆಗ್ರಹಿಸಿತ್ತು"(143:11.06.59).

**ಕಾರ್ಮಿಕ ಸಂಘಗಳು ಮತ್ತು ವಿದ್ಯಾರ್ಥಿ ಸಂಘಟನೆಗಳು**

ಕಮ್ಯುನಿಸ್ಟೇತರ ಕಾರ್ಮಿಕ ಸಂಘಗಳು ಮತ್ತು ವಿದ್ಯಾರ್ಥಿ ಸಂಘಗಳು, ಪ್ರತಿಭಟನಾರಂಗವನ್ನು ರಚಿಸಿಕೊಂಡಿತು. ಕೇರಳ ವಿದ್ಯಾರ್ಥಿ ಸಂಘ (ಕೆಎಸ್‌ಯು), ಸ್ವತಂತ್ರ ವಿದ್ಯಾರ್ಥಿ ಸಂಘ (ಐಎಸ್‌ಒ), ಪ್ರಗತಿಶೀಲ ವಿದ್ಯಾರ್ಥಿಗಳ ಒಕ್ಕೂಟ (ಪಿಎಸ್‌ಯು), ವಿದ್ಯಾರ್ಥಿಗಳ ಕಾಂಗ್ರೆಸ್ ಮುಂತಾದವುಗಳ ಪ್ರತಿನಿಧಿಗಳಸಭೆಯನ್ನು ಎರ್ನಾಕುಲಂನಲ್ಲಿ 17 ಮೇ 1959ರಂದು ನಡೆಸಿ, ಜಂಟಿ ಆಂದೋಲನದ ಕೇಂದ್ರ ಕಾರ್ಯಕಾರಿ ಸಮಿತಿಯನ್ನು ರಚಿಸಿಕೊಂಡಿತು. ಕಮ್ಯುನಿಸ್ಟ್ ಸರ್ಕಾರವು ತಮ್ಮ ಬೇಡಿಕೆಗಳನ್ನು ಈಡೇರಿಸಲು ವಿಫಲವಾದರೆ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಆಂದೋಲನವನ್ನು ಆಯೋಜಿಸುವುದೇ ಈ 21 ಸದಸ್ಯರ ಸಮಿತಿ ರಚನೆಯ ಗುರಿಯಾಗಿತ್ತು(108:12.06.59). ಅದರಂತೆ ಅವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದರು. ಅವರ ಬೇಡಿಕೆಗಳ ಪರವಾಗಿ ಸೂಕ್ತ ಕ್ರಮಗಳನ್ನು ಸರ್ಕಾರ ತೆಗೆದುಕೊಳ್ಳದಿರುವುದರಿಂದ, 12ನೇ ದಿನಾಂಕ, 'ವಂಚನಾ ದಿನ'ವನ್ನಾಗಿ ಆಚರಿಸಲು ಕೇಂದ್ರ ಕಾರ್ಯಕಾರಿ ಸಮಿತಿ, ಜೂನ್ 10, 1959ರಂದು ವಿದ್ಯಾರ್ಥಿಗಳಿಗೆ ಕರೆ ನೀಡಿತು. ಐಎನ್‌ಟಿಯುಸಿ, ಯುಟಿಯುಸಿ, ಎಚ್‌ಎಂಎಸ್ ಮತ್ತು ಕೊಚ್ಚಿನ್ ಡಾಕ್ ವರ್ಕರ್ಸ್ ಯೂನಿಯನ್‌ನ ರಾಜ್ಯ ಘಟಕಗಳ ಪ್ರತಿನಿಧಿಗಳು 11

---

* ಜುಲೈ 19, 1959ರಂದು, ವಿಮೋಚನಾ ಹೋರಾಟವು ತೀವ್ರ ಸ್ವರೂಪದಲ್ಲಿದ್ದಾಗ, ಸಿ.ಎಚ್. ಮುಹಮ್ಮದ್ ಕೋಯ ಅವರು ದೆಹಲಿಗೆ ಬಂದು ಪ್ರಧಾನಿ ಜವಾಹರಲಾಲ್ ನೆಹರೂ ಅವರನ್ನು ಭೇಟಿ ಮಾಡಿ, ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಬೇಕೆಂದು ಒತ್ತಾಯಿಸಿದರು. ಆ ಬಳಿಕ ಕೇಂದ್ರದ ಮಧ್ಯಸ್ಥಿಕೆ ಶೀಘ್ರವೇ ಆಗಲಿದೆ ಎಂದು ಸುದ್ದಿಗೋಷ್ಠಿಯಲ್ಲಿ ತಿಳಿಸಿದರು ಎಂದು ಉಲ್ಲೇಖಿಸಲಾಗಿದೆ. ವಿವರಗಳಿಗೆ 57: 206:

ಜೂನ್ 1959ರಂದು ಸಭೆ ಸೇರಿ, ಕಮ್ಯುನಿಸ್ಟರನ್ನು ಅಧಿಕಾರದಿಂದ ಕಿತ್ತೊಗೆಯುವ ಆಂದೋಲನದಲ್ಲಿ ಭಾಗವಹಿಸುವ ತೀರ್ಮಾನ ಕೈಗೊಂಡಿತು(109:16.06.59).

**ದ್ವೇಷದ ರಾಜಕಾರಣ**

ಈ ಕಾಲದಲ್ಲಿ ಬಹಳಷ್ಟು ದ್ವೇಷ ಮತ್ತು ಹಗೆತನದ ರಾಜಕೀಯ ಸಂಸ್ಕೃತಿಯೊಂದು ಕೇರಳದ ಸಮಾಜದಲ್ಲಿ ಹುಟ್ಟಿಕೊಂಡಿತು. ಕಮ್ಯುನಿಸ್ಟ್ ವಿರೋಧಿ ಶಕ್ತಿಗಳು, ಜಾತಿ/ಕೋಮುವಾದಿ ಸಂಘಟನೆಗಳು, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು, ರಾಜಕೀಯ ಪಕ್ಷಗಳು, ಮುದ್ರಣ ಮಾಧ್ಯಮ ಮುಂತಾದವುಗಳ ಪ್ರಚೋದನಕಾರಿ ಮಾತುಗಳು ಮತ್ತು ಕ್ರಿಯೆಗಳು ಇಂತಹ ಸಂಸ್ಕೃತಿಯ ಹುಟ್ಟಿಗೆ ಕಾರಣವಾಯಿತು. ರಾಜ್ಯದಲ್ಲಿ ಜೂನ್ 11, 1959ರ ಹೊತ್ತಿಗೆ ರಾಜಕೀಯ ಶಕ್ತಿಗಳ ಸ್ಪಷ್ಟ ಧ್ರುವೀಕರಣ ಆಗಿತ್ತು. ಒಂದು ಕಡೆಯಲ್ಲಿ ಕಮ್ಯುನಿಸ್ಟ್ ಪಕ್ಷ ಮತ್ತು ಅದರ ಅನುಯಾಯಿಗಳು, ಮುಖ್ಯವಾಗಿ ಕೈಗಾರಿಕಾ ಕಾರ್ಮಿಕರು, ರೈತರು ಹಾಗೂ ವಿದ್ಯಾರ್ಥಿಗಳು ಅಣಿಗೊಂಡರು. ಮತ್ತೊಂದು ಕಡೆಯಲ್ಲಿ ಕ್ರಿಶ್ಚಿಯನ್ ಚರ್ಚುಗಳು, ಓಖಖ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್, ಪಿಎಸ್‌ಪಿ, ಐಯುಎಂಎಲ್, ಆರ್‌ಎಸ್‌ಪಿ ಮತ್ತು ಭೂಮಾಲೀಕರು ಮುಂತಾದವರು ದೃಢವಾಗಿ ನೆಲೆಗೊಂಡರು. ಇವರನ್ನು ಬೆಂಬಲಿಸಲು ಸಾಕಷ್ಟು ಕಾರ್ಮಿಕರು, ರೈತರು, ವಿದ್ಯಾರ್ಥಿಗಳೂ ಇದ್ದರು.

**ಕೆಪಿಸಿಸಿ ದೋಷಾರೋಪಣಾ ಪಟ್ಟಿ(ಚಾರ್ಜ್ ಶೀಟ್)**

ಇದೇ ವೇಳೆ, ಕಮ್ಯುನಿಸ್ಟ್ ಸಚಿವ ಸಂಪುಟದ ವಿರುದ್ಧ 37 ಆರೋಪಗಳನ್ನು ಒಳಗೊಂಡ 'ಚಾರ್ಜ್ ಶೀಟ್'ನ್ನು ಕಾಂಗ್ರೆಸ್ ಸಿದ್ಧಪಡಿಸಿತ್ತು. ಈ ಚಾರ್ಜ್ ಶೀಟ್‌ನ್ನು ಎತ್ತಿ ಹಿಡಿಯುವ ಮೂಲಕ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ವಿಮೋಚನಾ ಹೋರಾಟ ಪ್ರಾರಂಭವಾಯಿತು. ವಾಸ್ತವವಾಗಿ ಇದೇ ಆರೋಪಗಳನ್ನು ಕಮ್ಯುನಿಸ್ಟರು ಅಧಿಕಾರಕ್ಕೆ ಬಂದ ಆರಂಭದಲ್ಲೇ ಎತ್ತಲಾಗಿತ್ತು. ಜುಲೈ 7, 1959ರಂದು, ಕಾಂಗ್ರೆಸ್ ಈ ಚಾರ್ಜ್ ಶೀಟ್‌ನ್ನು ಕೂಲಂಕುಷವಾಗಿ ಪರಿಶೀಲಿಸಿ, ಅದನ್ನು ಭಾರತದ ರಾಷ್ಟ್ರಪತಿಗಳಿಗೆ ಸಲ್ಲಿಸಿತು. ಈ 37 ವಿಚಾರಗಳ ಸಂಗ್ರಹವು ಕೇವಲ ಹಕ್ಕುಗಳ ಪಟ್ಟಿಯಾಗಿತ್ತು. ಇವುಗಳನ್ನು ಸಮರ್ಥಿಸುವಂಥ ಯಾವುದೇ ಪ್ರಯತ್ನ ಅವರ ಕಡೆಯಿಂದ ಉಂಟಾಗಿರಲಿಲ್ಲ. ಅವುಗಳನ್ನು ಸಿದ್ಧಪಡಿಸಿದವರ ನಂಬಿಕೆಯೆನ್ನುವುದು, ಈ ಹಕ್ಕುಗಳನ್ನು/ಆರೋಪಗಳನ್ನು ಎತ್ತುವುದು ಮಾತ್ರ ತಮ್ಮ ಕರ್ತವ್ಯವಾಗಿದೆಯೆಂದೂ ಅವುಗಳನ್ನು ನಂಬುವುದು ಜನರ ಜವಾಬ್ದಾರಿಯಾಗಿದೆಯೆಂದೂ ತಿಳಿದುಕೊಂಡಿದ್ದರು(84:03.06.59).

"ಕಮ್ಯುನಿಸ್ಟ್ ಪಕ್ಷದ ಸದಸ್ಯರು ಮಾತ್ರ ಒಳಗೊಂಡಿರುವ ವಿಶೇಷ ವರ್ಗವನ್ನು ರಚಿಸುವುದೇಸರ್ಕಾರದ ಶಾಶ್ವತ ನೀತಿಯಾಗಿದೆ." ಎನ್ನುವುದು ಅವರ ಪ್ರಮುಖ ಆರೋಪವಾಗಿತ್ತು. ಇತರ ಆರೋಪಗಳೆಂದರೆ,

"ಸ್ವಜನಪಕ್ಷಪಾತ ನೀತಿ ಮತ್ತು ಇವರನ್ನು ಅನುಸರಿಸಿದವರಲ್ಲಿ ಭ್ರಷ್ಟಾಚಾರವು

ವಿಜೃಂಭಿಸಿತು. ರಾಜ್ಯದ ಖಜಾನೆಯಿಂದ ಪಕ್ಷದ ನಿಧಿಗೆ ಹಣ ರಹಸ್ಯವಾಗಿ ಹರಿಯಿತು"(113:p86-88;169:p85-88).

ಪೊಲೀಸ್ ಪಡೆ ಮತ್ತು ಇತರ ಸೇವೆಗಳನ್ನು ರಾಜಕೀಯಗೊಳಿಸಲು ಪಕ್ಷದ ಪ್ರಯತ್ನಗಳು, ಆಡಳಿತ ಮತ್ತು ನ್ಯಾಯಾಂಗದಲ್ಲಿ ಅನಧಿಕೃತ ಹಸ್ತಕ್ಷೇಪ, ಸರ್ಕಾರ ವಹಿವಾಟು ಮತ್ತು ಸಹಕಾರ ಯೋಜನೆಗಳಲ್ಲಿ ಭ್ರಷ್ಟಾಚಾರ, ಶಿಕ್ಷಣ ಸ್ವಾತಂತ್ರ್ಯವನ್ನು ಹಾಳುಮಾಡುವಿಕೆ, ಕಮ್ಯುನಿಸ್ಟ್ ತಮ್ಮ ಅನುಯಾಯಿ ಕಾರ್ಮಿಕ ಸಂಘಟನೆಗಳ ಅಪರಾಧಿ ಸ್ವರೂಪ, ಅನಿಯಂತ್ರಿತ ಕ್ರಮಗಳು, ಉಪಚುನಾವಣೆಯಲ್ಲಿ ಕುಶಲತೆ, ಆಡಳಿತ, ಪೊಲೀಸ್, ನ್ಯಾಯ ನೀತಿಗಳ ವಿಚಾರಗಳು, ಇವೇ ಮುಂತಾದ ಕ್ಷೇತ್ರಗಳಲ್ಲಿ 'ಕಮ್ಯುನಿಸ್ಟ್' ಪಕ್ಷದ ಸದಸ್ಯರಲ್ಲದವರ ಮೇಲೆ ನೇರ ಕಿರುಕುಳ, ಆರ್ಥಿಕ ದಿವಾಳಿತನ, ಆರ್ಥಿಕ ಕುಸಿತ ಮುಂತಾದವುಗಳೇ ಪಕ್ಷ ಮತ್ತು ಸರ್ಕಾರದ ವಿರುದ್ಧ ಹೊರಿಸಲಾದ ಉಳಿದ ಗಂಭೀರವಾದ ಆರೋಪಗಳು.*

ಜೂನ್ 3, 1959ರಂದು, ದಿ ಹಿಂದೂ ಪತ್ರಿಕೆ ಹೀಗೆ ಅವಲೋಕಿಸಿತ್ತು:

"ಈ ಸಂಬಂಧದಲ್ಲಿ ಒಂದು ವಿಷಯವನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಅದೆಂದರೆ, 'ಕೇರಳದ ನಿಜವಾದ ಚಿತ್ರ – ಒಂದು ಪ್ರತ್ಯಾರೋಪ' ಎಂಬ ಶೀರ್ಷಿಕೆ ಅಕ್ಟೋಬರ್ 1958ರಲ್ಲಿ ಬಿಡುಗಡೆಯಾದ ಕೆಪಿಸಿಸಿಯ ಪ್ರಕಟಣೆಯಲ್ಲಿ, ಇದೇ ಆರೋಪಗಳನ್ನು ಮತ್ತು ಇತರ ಸಂಬಂಧಿತ ವಿಷಯಗಳನ್ನು ಪಟ್ಟಿಮಾಡಿತ್ತು"(60:p121).

ಕಮ್ಯುನಿಸ್ಟ್ ಪಕ್ಷದ ಮೇಲೆ ಆರೋಪಿತವಾದ ದ್ವಂದ್ವನೀತಿಯು, ಸಂವಿಧಾನ ಮತ್ತು ಪ್ರಜಾಪ್ರಭುತ್ವದಲ್ಲಿ ಕಮ್ಯುನಿಸ್ಟ್ ಪಕ್ಷಕ್ಕೆ ನಂಬಿಕೆಯ ಇಲ್ಲ ಎನ್ನುವ ಪ್ರಚಾರ, ರಾಜ್ಯದಲ್ಲಿ ದ್ವೇಷ ಮತ್ತು ಸಂಘರ್ಷವನ್ನು ಬೆಳೆಸಿ, ಜೀವ ಮತ್ತು ಆಸ್ತಿಗಳಿಗೆ ಅಭದ್ರತಾ ಸ್ಥಿತಿಯನ್ನು ಸೃಷ್ಟಿಸಿದ್ದಾಗಿ ವ್ಯಾಪಕವಾಗಿ ಅಪಪ್ರಚಾರ ನಡೆಸಲಾಯಿತು. ಸುಳ್ಳು ಪ್ರಚಾರದ ಪ್ರಭಾವದಿಂದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರದ ವಿರುದ್ಧ ತಿರುಗಿಬಿದ್ದರು. ಇದರಿಂದಾಗಿ, ಸಿ.ಪಿ.ಐ. ಪಡೆದುಕೊಂಡಿದ್ದ ಜನಪ್ರಿಯ ಬೆಂಬಲದಲ್ಲಿ ಗಮನಾರ್ಹ ಇಳಿಕೆಗೆ ಕಾರಣವಾಯಿತು. ದ್ವೇಷ ಮತ್ತು ಹಗೆತನದ ಆಧಾರದ ಮೇಲೆ ಅಪಪ್ರಚಾರದಿಂದಾಗಿ ಜನರನ್ನು ಎರಡು ವಿಭಾಗಗಳಾಗಿ ವಿಂಗಡಿಸಲ್ಪಟ್ಟ ಸ್ಥಿತಿಯಲ್ಲಿ, ಹಿಂಸಾತ್ಮಕ ಹೋರಾಟಗಳ ಮೂಲಕ ರಾಷ್ಟ್ರಪತಿಗಳ ಹಸ್ತಕ್ಷೇಪಕ್ಕೆ ದಾರಿಮಾಡಿಕೊಟ್ಟು, ಆ ಮೂಲಕ ಕಮ್ಯುನಿಸ್ಟ್ ಸರ್ಕಾರವನ್ನು ವಿಸರ್ಜಿಸಿ, ಹೊಸ ಚುನಾವಣೆಯ ಮೂಲಕ ಅಧಿಕಾರಕ್ಕೇರಲು ಅಗತ್ಯವಾದ ಪರಿಸ್ಥಿತಿಯನ್ನು ಸಿದ್ಧಗೊಳಿಸುವುದು ವಿಮೋಚನಾ

* 84:03.06.59;110: This book in 86 pages contain large number of serious allegations and charges against the Communist government. Most of this allegations were baseless and futile. The Communist Party and its government refuted these charges and attributed that it published and propagated only for political motives. 40:03.11.59

ಹೋರಾಟಗಾರರ ಗುರಿಯಾಗಿತ್ತು(143:10.06.59).

**ವಿಮೋಚನಾ ದಿನಾಚರಣೆ**

ಜೂನ್ 5, 1959ರಂದು ಸಭೆ ಸೇರಿದ ವಿಮೋಚನಾ ಹೋರಾಟ ಸಮಿತಿಯು, ಜೂನ್ 12ರಂದು 'ವಿಮೋಚನಾ ದಿನ' ಎಂದು ಆಚರಿಸಲು ನಿರ್ಧರಿಸಲಾಯಿತು. ಜೂನ್ 12ರ ದಿನವನ್ನೇ ಕಮ್ಯುನಿಸ್ಟೇತರ ವಿದ್ಯಾರ್ಥಿ ಸಂಘಟನೆಗಳು ಸಹ, 'ವಂಚನಾ ದಿನ'ವಾಗಿ ಆಚರಿಸಲು ಆಯ್ಕೆ ಮಾಡಿಕೊಂಡಿದ್ದು. ಜೂನ್ 8, 1959ರಂದು ವಿಮೋಚನ ದಿನವನ್ನು ಆಚರಿಸಲು ವಿಮೋಚನಾ ಹೋರಾಟ ಸಮಿತಿಯ ತನ್ನಕಾರ್ಯ ಚಟುವಟಿಕೆಗಳನ್ನು ಪ್ರಕಟಿಸಿತು. ಇದರ ಪ್ರಕಾರ ಆ ದಿನದಂದು, ಬೆಳಿಗ್ಗೆ 07.30ರಿಂದ 09.00ರವರೆಗೆ ಚರ್ಚ್, ಮಸೀದಿ ಮತ್ತು ದೇವಾಲಯಗಳಲ್ಲಿ ವಿಶೇಷ ಪ್ರಾರ್ಥನೆಗಳನ್ನು ಸಲ್ಲಿಸಬೇಕಾಗುತ್ತದೆ.ಇದು ರಾಜ್ಯವು ಕಮ್ಯುನಿಸಂನ ಹಿಡಿತದಿಂದ ಮುಕ್ತವಾಗಲು ನಡೆಸಿದ ಪ್ರಾರ್ಥನೆಗಳಾಗಿರುತ್ತವೆ. ರಾಜ್ಯದಾದ್ಯಂತವಿರುವ ಸಾರ್ವಜನಿಕ ಕಟ್ಟಡಗಳು ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಕಪ್ಪು ಬಾವುಟ ಹಾರಿಸುವುದು, ಬೆಳಿಗ್ಗೆ 6ರಿಂದ ಸಂಜೆ 6ರವರೆಗೆ ಎಲ್ಲಾ ಮಾರುಕಟ್ಟೆಗಳು, ಅಂಗಡಿಗಳು ಮತ್ತು ವ್ಯಾಪಾರದ ಇತರ ಸ್ಥಳಗಳನ್ನು ಮುಚ್ಚುವುದು, ರೈತರು, ಕಾರ್ಮಿಕರು, ವ್ಯಾಪಾರಿಗಳು ಮತ್ತು ಸರ್ಕಾರಿ ನೌಕರರು ಮುಂತಾದವರನ್ನು ಮುಷ್ಕರ ನಡೆಸಲು ಪ್ರೇರೇಪಿಸುವುದು, ಮೌನ ಮೆರವಣಿಗೆಗಳನ್ನು ಕೈಗೊಳ್ಳುವುದು, ಸಂಜೆಯ ಸಮಯಗಳಲ್ಲಿ, ಪ್ರತಿಭಟನಾ ಸಭೆಗಳನ್ನು ನಡೆಸಿ ಸರಕಾರವನ್ನು ಆಕ್ಷೇಸುವನಿರ್ಣಯಗಳನ್ನು ಅಂಗೀಕರಿಸುವುದು, ಇವೇ ಮುಂತಾದವುಗಳು ವಿಮೋಚನಾ ದಿನಾಚರಣೆಯ ಸಂಭವನೀಯ ಘಟನೆಗಳಾಗಿ ಘೋಷಿಸಲಾದ ಇತರ ಪ್ರಮುಖ ಸಂಗತಿಗಳು.

**ನೆಹರೂರವರ ನಿಲುವು**

ಎಲ್ಲಾ ರೀತಿಯಿಂದಲೂ ಶಾಂತಿಯುತ ಮಾರ್ಗಗಳನ್ನು ಅನುಸರಿಸಿ, ಮಾತು ಮತ್ತು ಕೃತಿಗಳಲ್ಲಿ ಹಿಂಸೆಯನ್ನು ತಪ್ಪಿಸಲು ಪ್ರಧಾನಿ ಜವಾಹರಲಾಲ್ ನೆಹರೂ ಜೂನ್ 6, 1959ರಂದು ಕೊಯಮತ್ತೂರಿನಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ಕೇರಳದ ಜನತೆಗೆ ಪ್ರಾಮಾಣಿಕವಾಗಿ ಕರೆ ನೀಡಿದರು. ಅವರು ಹೀಗೆ ಹೇಳಿದರು:

> "...ಪ್ರಜಾಸತ್ತಾತ್ಮಕ ಮತ್ತು ಶಾಂತಿಯುತ ವಿಧಾನಗಳನ್ನು ಕಟ್ಟುನಿಟ್ಟಾಗಿ ಅಳವಡಿಸಿಕೊಳ್ಳುವುದು, ವಿರೋಧಿ ಬಣಗಳ ಪ್ರಜಾಸತ್ತಾತ್ಮಕ ಕರ್ತವ್ಯವಾಗಿದೆ. ಶಾಂತಿಯುತವಾಗಿ ಪ್ರತಿಭಟಿಸಲು ಮತ್ತು ಸರ್ಕಾರದ ದೃಷ್ಟಿಕೋನಗಳ ಮತ್ತು ನೀತಿಗಳ ನೈತಿಕತೆಯನ್ನು ಜನರಿಗೆ ಮನವರಿಕೆ ಮಾಡಿಕೊಡುವ ಹಕ್ಕು ಇರುತ್ತದೆ. ಅವರು ಸರ್ಕಾರವನ್ನು ಬದಲಾಯಿಸಲು ಪ್ರಯತ್ನಿಸಬಹುದು. ಆದರೆ ಅದು ಪ್ರಜಾಸತ್ತಾತ್ಮಕ ಮತ್ತು ಶಾಂತಿಯುತ ಪ್ರಕ್ರಿಯೆಗಳ ಮೂಲಕ ಮಾತ್ರ ಸಾಧ್ಯವಾಗಬೇಕು. ಶಾಂತಿಯುತ ವಿಧಾನಗಳನ್ನು ತ್ಯಜಿಸುವುದು ಪ್ರಜಾಪ್ರಭುತ್ವವನ್ನು ತ್ಯಜಿಸುವತ್ತಾ ನಮ್ಮನ್ನು ಕೊಂಡೊಯ್ಯಬಹುದು.

ಅಹಿಂಸೆಯೆನ್ನುವುದು ಶಾಂತಿಯುತ ವಿಧಾನಗಳ ಮೂಲಕ ವಿಮರ್ಶೆ ನಡೆಸುವುದೇ ಆಗಿರುತ್ತದೆ. ಆದರೆ ಅವುಗಳಲ್ಲಿ ಅದಕ್ಕಿಂತಲೂ ಹೆಚ್ಚಿನ ಅರ್ಥ ಧ್ವನಿಸುತ್ತಿತ್ತು. ಹಿಂಸೆಯ ಭಾಷೆ ಎನ್ನುವುದು ಶಾಂತಿಯುತ ಮಾರ್ಗಕ್ಕೆ ವಿರುದ್ಧವಾಗಿದೆ. ಶಾಂತಿಯುತ ವಿಧಾನಗಳನ್ನು ಕಟ್ಟುನಿಟ್ಟಾಗಿ ಅನ್ವಯಿಸಿಕೊಂಡು, ಯಾವುದೇ ರೀತಿಯ ಮಾತುಗಳಲ್ಲಿ ಮತ್ತು ಕೃತ್ಯಗಳಲ್ಲಿ ಹಿಂಸಾಚಾರವನ್ನು ತಪ್ಪಿಸಲು ನಾನು ಕೇರಳದ ಜನರಿಗೆ, ಅವರು ಯಾವುದೇ ಪಕ್ಷಕ್ಕೆ ಸೇರಿರಲಿ, ಪ್ರಾಮಾಣಿಕವಾಗಿ ವಿನಂತಿಸುತ್ತೇನೆ. ನಾವು ಅಂತರರಾಷ್ಟ್ರೀಯ ಸಮಸ್ಯೆಗಳನ್ನು ಸಹ ಶಾಂತಿಯುತ ಮಾರ್ಗಗಳ ಮೂಲಕವೇ ಪರಿಹರಿಸುವ ಪ್ರಯತ್ನಗಳನ್ನು ಮಾಡುತ್ತಿದ್ದೇವೆ. ಈ ವಿಧಾನಗಳ ಮೂಲಕ ನಮ್ಮ ಸಮಸ್ಯೆಗಳನ್ನು ಪರಿಹರಿಸಲು ನಾವು ವಿಫಲರಾಗುತ್ತಿರುವುದು, ಒಂದು ದುರಂತವೇ ಸರಿ. ವಿಶೇಷವಾಗಿ ನಾವು ಹಿಂಸೆ ಮತ್ತು ಬೆದರಿಕೆಗಳನ್ನು ಅವಲಂಬಿತರಾಗುವಾಗ.... ಕೇರಳದ ಜನರು ಎದುರಿಸಬೇಕಾಗಿ ಬರುವುದು, ಸಂಘರ್ಷ ಮತ್ತು ಹಿಂಸಾಚಾರದಿಂದ ಕೂಡಿರುವ ಪರಿಸ್ಥಿತಿ ಎನ್ನುವುದು ವಿಷಾದನೀಯ ಸಂಗತಿಯಾಗಿದೆ"(84:11.06.59)

ನಿರೀಕ್ಷೆಯಂತೆ, ನೆಹರೂ ನೀಡಿದ ಕರೆಗೆ ಜಾತಿ/ಸಮುದಾಯದ ಗುಂಪುಗಳಾಗಲೀ ವಿರೋಧಪಕ್ಷಗಳಾಗಲೀ ಕಿವಿಗೊಡಲಿಲ್ಲ. 12 ಜೂನ್ 1959ರಂದು, ತಮ್ಮ ಏಕತೆ ಮತ್ತು ದೃಢನಿಶ್ಚಯವನ್ನು ವ್ಯಕ್ತಪಡಿಸಲು 12 ಜೂನ್ 1959ರಂದು ವಿಮೋಚನಾ ದಿನವನ್ನಾಗಿ ಆಚರಿಸುವ ಕಾರ್ಯಕ್ರಮವನ್ನು ಮುಂದುವರಿಸಲು ವಿಮೋಚನಾ ಹೋರಾಟ ಸಮಿತಿ ಮತ್ತು ವಿರೋಧಪಕ್ಷಗಳು ನಿರ್ಧರಿಸಿದವು. 10 ಜೂನ್ 1959ರಂದು ದೆಹಲಿಯಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ನೆಹರೂರವರು, ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಆಂದೋಲನವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ, ಹೀಗೆ ಹೇಳಿದರು:

"ಪೂರ್ಣವಾಗಿಯೂ ಒಂದು ರಾಜಕೀಯ ಸಂಘರ್ಷವಾಗಬೇಕಾಗಿದ್ದ ಈ ಆಂದೋಲನದಲ್ಲಿ, ಜಾತಿಯ ಘಟಕಗಳನ್ನು ತಂದಿರುವುದಕ್ಕೆ ನನಗೆ ತುಂಬಾ ಬೇಸರವಾಗಿದೆ. ನಾಯರ್ ಸರ್ವೀಸ್ ಸೊಸೈಟಿ ಮತ್ತು ಕ್ಯಾಥೋಲಿಕ್ ಸಂಘಟನೆಯ ಗುಂಪುಗಳು ಸೇರಿ ಕೇರಳದಲ್ಲಿ ಭಾರೀ ಸದ್ದು ಮಾಡುತ್ತಿರುವುದು" (40:12.07.59).

ವಾಸ್ತವವಾಗಿ ವಿವಾದಾಸ್ಪದ ಸಮಸ್ಯೆಗಳನ್ನು ಸೌಹಾರ್ದಯುತವಾಗಿ ಬಗೆಹರಿಸಲು ಕಮ್ಯುನಿಸ್ಟ್ ಪಕ್ಷವು ಆಸಕ್ತಿ ಹೊಂದಿತ್ತು. ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಹೇಳಿದರು:

"ಎಲ್ಲ ವಿರೋಧಪಕ್ಷಗಳೊಂದಿಗೆ ಪ್ರತ್ಯೇಕವಾಗಿ ಅಥವಾ ಜಂಟಿಯಾಗಿ ಅವರಿಗೆ ಇಷ್ಟವಾದಂತೆ ಎಲ್ಲಾ ವಿಷಯಗಳನ್ನು ಚರ್ಚಿಸಲು ನಾವು ಸದಾ ಸಿದ್ಧರಿದ್ದೇವೆ"(84:12.06.59).

ದಿನಾಂಕ 11 ಜೂನ್ 1959ರಂದು ಸಿಪಿಐನ ರಾಜ್ಯ ಸಮಿತಿಯು, ವಿರೋಧಪಕ್ಷಗಳ

ಮುಂದೆ ಒಂದು ಪ್ರಸ್ತಾವನೆಯನ್ನು ಇಟ್ಟಿತು. ಏನೆಂದರೆ, ಒಂದು ಮೇಜಿನ ಸುತ್ತ ಕುಳಿತು, ಸಂಬಂಧಪಟ್ಟ ಎಲ್ಲರೊಂದಿಗೆ ಚರ್ಚಿಸಿ, ಎಲ್ಲಾ ವಿವಾದಾತ್ಮಕ ವಿಷಯಗಳ ಬಗ್ಗೆ ಸೌಹಾರ್ದಯುತ ಪರಿಹಾರ ಕಂಡುಕೊಳ್ಳಲು ನಾವು ಸಿದ್ಧರಿದ್ದೇವೆ(108:13.06.59). ಕ್ಯಾಥೋಲಿಕ್ ಬಿಷಪ್‌ಗಳು, ಎನ್‌ಎಸ್‌ಎಸ್, ಸಿಇಎಸಿ (ಕ್ರೈಸ್ತ ಶಿಕ್ಷಣ ಕ್ರಿಯಾ ಸಮಿತಿ), ಕೆಎಸ್‌ಎಂಎ (ಕೇರಳ ಶಾಲಾ ವ್ಯವಸ್ಥಾಪಕರ ಸಂಘ) ಮುಂತಾದರಿರುವ ವಿಮೋಚನಾ ಹೋರಾಟ ಸಮಿತಿಯು ಸಮಾಲೋಚನೆ ಮತ್ತು ದುಂಡು ಮೇಜಿನ ಚರ್ಚೆಗಳಿಗೆ, ಸರ್ಕಾರದ ಪ್ರಸ್ತಾವನೆಯನ್ನು ಬೇಷರತ್ತಾಗಿ ತಿರಸ್ಕರಿಸಿತು. ಅಧಿಕಾರದಿಂದ ಇಳಿಯುವವರೆಗೂ 'ಕಮ್ಯುನಿಸ್ಟ್ ಪಕ್ಷದೊಂದಿಗೆ ಯಾವುದೇ ಸಮಾಲೋಚನೆಯು ಅರ್ಥಹೀನವಾಗುತ್ತದೆ', ಎನ್ನುತ್ತಾ ಚಳುವಳಿಯ ಮುಖಂಡರಾದ ಮನ್ನಾತ್ ಪದ್ಮನಾಭನ್ ಪ್ರಸ್ತಾವನೆಯನ್ನು ಸಾರಾಸಗಟಾಗಿ ತಿರಸ್ಕರಿಸಿದರು(143:13.06.59).

**ಹಿಂಸಾತ್ಮಕ ಆಂದೋಲನ**

ಈ ಸಂಶೋಧನಾ ಕೃತಿಯಲ್ಲಿ, ಇಲ್ಲಿಯವರೆಗೆ ಪರಿಶೀಲಿಸಿದಂತೆ, ಕೋಮುವಾದಿ–ಜಾತಿ ಗುಂಪುಗಳು ಮತ್ತು ವಿರೋಧ ಪಕ್ಷಗಳು, ಸರ್ಕಾರ ಅಸ್ತಿತ್ವಕ್ಕೆ ಬಂದ ಆರಂಭದಿಂದಲೂ ಸರ್ಕಾರದ ವಿರುದ್ಧ ಆರಂಭಿಸಿದ ಆಂದೋಲನವು, 1959, ಜೂನ್ 12ರ 'ವಿಮೋಚನ ದಿನ' ಆಚರಿಸುವುದರೊಂದಿಗೆ ಅದು ಅತ್ಯಂತ ವಿಧ್ವಂಸಕ ಮತ್ತು ಹಿಂಸಾತ್ಮಕ ಹಂತವನ್ನು ತಲುಪಿತು. ಅಂಗಡಿಗಳು, ಮಾರುಕಟ್ಟೆಗಳು, ವಾಣಿಜ್ಯ/ವ್ಯಾಪಾರ ಸಂಸ್ಥೆಗಳು ಮತ್ತು ಸರ್ಕಾರಿ ಕಚೇರಿಗಳೆಲ್ಲವೂ ಮುಚ್ಚಲಾಗಿದ್ದವು. ರಾಜ್ಯಾದ್ಯಂತ ಕಪ್ಪು ಬಾವುಟ ಹಾರಿಸಲಾಯಿತು. ಕಪ್ಪು ಬ್ಯಾಡ್ಜ್ ಧರಿಸಿದ ಪ್ರತಿಭಟನಾಕಾರರು ಕಪ್ಪು ಬಾವುಟವನ್ನು ಹಾರಿಸುತ್ತಾ, ಮೆರವಣಿಗೆ ಮತ್ತು ಪ್ರತಿಭಟನಾ ಸಭೆಗಳನ್ನು ನಡೆಸಿದರು(84:12.06.59). ದಿ ಹಿಂದೂ ದಿನಪತ್ರಿಕೆ ಹೀಗೆ ವರದಿ ಮಾಡಿತು:

> "ಕೇರಳದಾದ್ಯಂತ ಸಾಮಾನ್ಯ ವಾಣಿಜ್ಯ ಚಟುವಟಿಕೆಗಳು ಸ್ಥಗಿತಗೊಂಡಿವೆ. ಕೇರಳದಲ್ಲಿ ಕಮ್ಯುನಿಸ್ಟ್ ಆಡಳಿತವನ್ನು ಕೊನೆಗಾಣಿಸುವುದಕ್ಕಾಗಿ ನಡೆಯುತ್ತಿರುವ ಚಳವಳಿಗೆ ಗೌರವ ಸಲ್ಲಿಸಲು ವಿರೋಧ ಪಕ್ಷಗಳು ಒಟ್ಟಾಗಿ ಸೇರಿಕೊಂಡು ನೀಡಿದ ಕರೆಗೆ, ಸಕಾರಾತ್ಮಕವಾಗಿ ಸ್ಪಂದಿಸಿಕೊಂಡು ಅಂಗಡಿ, ವ್ಯಾಪಾರದ ಸ್ಥಳಗಳಲ್ಲಿ ಹರತಾಳ ಆಚರಿಸಲಾಯಿತು"*(84:12.06.59).

ಜೂನ್ 12, 1959ರಿಂದ ಜುಲೈ 31, 1959ರವರೆಗೆ ಐವತ್ತು ದಿನಗಳ ಕಾಲ ಪ್ರತಿಭಟನಾಕಾರರ ನೇತೃತ್ವದಲ್ಲಿ ವಿವಿಧ ತರಹಗಳಲ್ಲಿ ನಡೆದ ಬಹಳಷ್ಟು

---

* ಆಂದೋಲನದ ಸಮಯದಲ್ಲಿ ಕೇರಳದ ಹೆಚ್ಚಿನ ಪತ್ರಿಕೆಗಳು, ಕೇರಳದಲ್ಲಿ ನಡೆದ ಆಂದೋಲನದ ಪರವಾಗಿ ವರದಿಗಳನ್ನು ಪ್ರಸ್ತುತಪಡಿಸಲಾಗಿದ್ದವು. ಪತ್ರಿಕೆಗಳು ಸರ್ಕಾರದ ಪರವಾದ ಚಳುವಳಿಗಳು ಮತ್ತು ಅಲೆಗಳನ್ನು ಕಡೆಗಣಿಸಿದವು. ಕೇರಳದ ಮುದ್ರಣ ಮಾಧ್ಯಮಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಹೋರಾಟದಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದವು. ಆದರೆ 84: ದಿ ಹಿಂದೂ ಮತ್ತು 193:ಟೈಮ್ಸ್ ಆಫ್ ಇಂಡಿಯಾದಂತಹ ಉನ್ನತ ಪತ್ರಿಕೆಗಳು ರಾಜ್ಯದ ಸ್ಥಿತಿಗತಿಗಳ ಬಗ್ಗೆ ನಿಷ್ಪಕ್ಷಪಾತವಾದ ಚಿತ್ರಣಗಳ ವರದಿಗಳನ್ನು ಪ್ರಸ್ತುತಪಡಿಸುತ್ತಿದ್ದವು.





ವಿಮೋಚನಾ ಹೋರಾಟಗಾರರು ಬೆಂಕಿ ಹಾಕಿ ನಾಶಗೊಳಿಸಿದ ಶಾಲೆಗಳು
ಬೆತ್ತಲ್ ಎಂ.ಟಿ. ಸ್ಕೂಲ್ ಮತ್ತು ಪಳಂಜಳಲಂ ಎಲ್.ಪಿ.ಸ್ಕೂಲ್ (02.07.1959)

ಹಿಂಸಾಚಾರಗಳಿಗೆ ಕೇರಳ ಸಾಕ್ಷಿಯಾಯಿತು. ಆಂದೋಲನದ 50 ದಿನಗಳ ಅವಧಿಯಲ್ಲಿ ರಾಜ್ಯದಲ್ಲಿ ನಡೆದ ಹಿಂಸಾತ್ಮಕ ಘಟನೆಗಳ ದಿನನಿತ್ಯದ ವಿವರಗಳನ್ನು ಸ್ಥಳಾವಕಾಶದ ಮಿತಿಯಿಂದಾಗಿ ಇಲ್ಲಿ ಸೇರಿಸಲಾಗಿಲ್ಲ. ಚಳವಳಿಗಾರರ ಸಾಮರ್ಥ್ಯ ಮತ್ತು ಮುಖಾಮುಖಿಯಾಗುವುದಕ್ಕೆ ಅನುಗುಣವಾಗಿ ವಿವಿಧ ಸ್ಥಳಗಳಲ್ಲಿ ವಿವಿಧ ಶೈಲಿಗಳಲ್ಲಿ ಮುಷ್ಕರಗಳು ನಡೆದವು. ಜನರು ಪ್ರದರ್ಶಿಸಿದ ಭಾವನಾತ್ಮಕತೆಯ ತೀವ್ರತೆ, ಅತ್ಯುತ್ಸಾಹ, ಮುಂತಾದವುಗಳಿಂದಾಗಿ ನಾಯಕರ ಎಲ್ಲಾ ಲೆಕ್ಕಾಚಾರಗಳೂ ದಾರಿತಪ್ಪುತಿತ್ತು.* ವಾಸ್ತವವಾಗಿ, ಹುಚ್ಚು ಪ್ರತಿಭಟನಾಕಾರರು, ಬುದ್ಧಿಭ್ರಮಣೆ ಭಾಧಿಸಿದ ಗುಂಪುಗಳಂತೆ ವರ್ತಿಸುತ್ತಿದ್ದರು. ಮುಖ್ಯವಾಗಿ ತಿರಸ್ಕಾರ, ದ್ವೇಷ, ಹಗೆತನ, ನಡುಕ, ಶತ್ರುತ್ವ ಮುಂತಾದ ಭಾವೋದ್ರೇಕ ಮುಂತಾದವುಗಳಿಂದ ಚಳವಳಿಗಾರರನ್ನು ಮುನ್ನಡೆಸಲ್ಪಡುತ್ತಿತ್ತು. ಅನೇಕ ಸಂದರ್ಭಗಳಲ್ಲಿ ವಿವೇಚನೆಯಿಲ್ಲದ ಸಮೂಹವು, ತಮ್ಮ ಕ್ಷಣಿಕ ಭಾವೋದ್ರೇಕಗಳಿಗೂ ವಿನಾಶಕಾರಿ ಆಲೋಚನೆಗಳಿಗೂ ಒಳಗಾಗಿ ವಿಚಿತ್ರವಾಗಿ ವರ್ತಿಸುತ್ತಿದ್ದರು. ಕ್ರೋಧವನ್ನು ಕೆರಳಿಸಿಕೊಂಡ ಆ ಜನಸಮೂಹಕ್ಕೆ ಋಣಾತ್ಮಕ ಆಲೋಚನೆಗಳು ಆವರಿಸಿಕೊಂಡಿದ್ದವು. ಶಾಲೆಗಳು, ಸರ್ಕಾರಿ ಕಚೇರಿಗಳು, ಸಾರ್ವಜನಿಕ ಸಂಸ್ಥೆಗಳು, ಸಾರಿಗೆ ವ್ಯವಸ್ಥೆಗಳು, ಸೇತುವೆಗಳು, ಸಾರ್ವಜನಿಕ ವಾಹನ ಮುಂತದವುಗಳನ್ನೆಲ್ಲ ಧ್ವಂಸಗೊಳಿಸಿದರು.

ಸರ್ಕಾರಕ್ಕೆ ಈ ಆಂದೋಲನವನ್ನು ಕಾನೂನು ರೀತಿ ಹತ್ತಿಕ್ಕಲು ಸಿದ್ಧವಾಗಲಿಲ್ಲ.

---

* 84:12.06.59 ಆಂದೋಲನದ ಸಮಯದಲ್ಲಿ ಕೇರಳದ ಹೆಚ್ಚಿನ ಪತ್ರಿಕೆಗಳು, ಕೇರಳದಲ್ಲಿ ನಡೆದ ಆಂದೋಲನದ ಪರವಾಗಿ ವರದಿಗಳನ್ನು ಪ್ರಸ್ತುತಪಡಿಸಲಾಗಿದೆ. ಪತ್ರಿಕೆಗಳು ಸರ್ಕಾರದ ಪರವಾದ ಚಳುವಳಿಗಳು ಮತ್ತು ಅಲೆಗಳನ್ನು ಕಡೆಗಣಿಸಿದವು. ಕೇರಳದ ಮುದ್ರಣ ಮಾಧ್ಯಮಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಹೋರಾಟದಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದವು. ಆದರೆ 84: ದಿ ಹಿಂದೂ ಮತ್ತು 193:ಟೈಮ್ಸ್ ಆಫ್ ಇಂಡಿಯಾದಂತಹ ಉನ್ನತ ಪತ್ರಿಕೆಗಳು ರಾಜ್ಯದ ಸ್ಥಿತಿಗತಿಗಳ ಬಗ್ಗೆ ನಿಷ್ಪಕ್ಷಪಾತವಾದ ಚಿತ್ರಣಗಳ ವರದಿಗಳನ್ನು ಪ್ರಸ್ತುತಪಡಿಸುತ್ತಿದ್ದವು.

ಇದಕ್ಕೆ ಕಮ್ಯುನಿಸ್ಟ್ ಸರ್ಕಾರದ ನಿಷ್ಪಕ್ಷಪಾತವಾದ ಪೊಲೀಸ್ ನೀತಿಯೇ ಕಾರಣ. ರಾಜಕೀಯ ಆಂದೋಲನಗಳನ್ನು ಎದುರಿಸುವಲ್ಲಿ ರಾಜ್ಯ ಪೊಲೀಸರು ತಟಸ್ಥರಾಗಿದ್ದರು. ಆದರೆ, ಕೆಲವು ಸಂದರ್ಭಗಳಲ್ಲಿ ಮಾತ್ರ ಹಿಂಸಾತ್ಮಕ ಗುಂಪಿನಿಂದ ತಮ್ಮ ಪ್ರಾಣವನ್ನು ರಕ್ಷಿಸಲು ಪೊಲೀಸರು ಗುಂಡು ಹಾರಿಸಬೇಕಾಯಿತು. ಹಾಗೆ, ಕೆಲವು ಚಳವಳಿಗಾರರು ಸಾಯುವುದಕ್ಕೆ ಕಾರಣವಾಗುವ ವಿಧದಲ್ಲಿ, ಅಂಗಮಾಲಿ, ವೆಟ್ಟುಕಾಡು, ಚೆರಿತುರ, ಪುಲ್ಲುವಿಳ ಮುಂತಾದ ಸ್ಥಳಗಳಲ್ಲಿ ಪೊಲೀಸರು ಗುಂಡು ಹಾರಿಸಬೇಕಾಗಿ ಬಂತು. ಈ ಸಾವುಗಳಿಂದಾಗಿ, ಆಂದೋಲನಕಾರರ ವಿಧ್ವಂಸಕ ಕೃತ್ಯಗಳ ಬೆಂಕಿಗೆ ಎಣ್ಣೇ ಹೊಯ್ದಂತಾಯಿತು. ಆದರೆ ಜುಲೈ ಕೊನೆಯ ವಾರದ ವೇಳೆಗೆ ಆಂದೋಲನವನ್ನು ಹತೋಟಿಗೆ ತರಲಾಯಿತು. ಭಾರತದ ಸಂವಿಧಾನದ 356 ಸೆಕ್ಷನ್ ಪ್ರಕಾರ ಕೇಂದ್ರ ಸರ್ಕಾರದ ಹಸ್ತಕ್ಷೇಪದೊಂದಿಗೆ, ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ ನೇತೃತ್ವ ನೀಡಿದ ಕೇರಳ ಮೊದಲ ಪ್ರಜಾಪ್ರಭುತ್ವ ಸರ್ಕಾರದ ಭವಿಷ್ಯ ನಿರ್ಧರಿಸಲ್ಪಟ್ಟಿತು.

●

# 7

# ವಜಾಗೊಳಿಸಲು ಕಾರಣವಾದ ಕೇಂದ್ರದ ಹಸ್ತಕ್ಷೇಪ

*(ಈ ಅಧ್ಯಾಯದಲ್ಲಿ ಕೇಂದ್ರದ ಹಸ್ತಕ್ಷೇಪ ಮತ್ತು ಇಎಮ್‌ಎಸ್ ಸರ್ಕಾರದ ವಜಾಗೊಳಿಸುವಿಕೆಯನ್ನು ಆಧರಿಸಿದ ವಿಚಾರಗಳನ್ನು ವಿಶ್ಲೇಷಣೆಗೆ ಒಳಪಡಿಸಿರುತ್ತದೆ. ರಾಜ್ಯದ ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ಪ್ರಧಾನ ಮಂತ್ರಿ ಜವಾಹರಲಾಲ್ ನೆಹರೂ ಮತ್ತು ಕೇಂದ್ರ ಮಂತ್ರಿಗಳ ವರ್ತನೆಗಳನ್ನು, ಕೈಗೊಂಡ ಕ್ರಮಗಳ ಕಾರ್ಯವಿಧಾನವನ್ನು ಈ ಅಧ್ಯಾಯ ಪರಿಶೀಲಿಸುತ್ತದೆ. ವಿಮೋಚನಾ ಹೋರಾಟಗಾರರ ಒತ್ತಡ ತಂತ್ರಗಳು, ಕಾಂಗ್ರೆಸ್ ಹೈಕಮಾಂಡ್‌ನ ನಿಲುವುಗಳು ಮತ್ತು ಕೇಂದ್ರ ಗುಪ್ತಚರ ಸಂಸ್ಥೆಯ ವಿಭಾಗದ ಚಟುವಟಿಕೆಗಳನ್ನು ಸಹ ಇಲ್ಲಿ ವಿಶ್ಲೇಷಿಸಲಾಗುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವಿನ ಮಾತುಕತೆಗಳು ಕಮ್ಯುನಿಸ್ಟ್ ಸರ್ಕಾರದ ಉಚ್ಚಾಟನೆಗೆ ಕಾರಣವಾದ ಇತರ ಕ್ರಮಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.)*

ಸಾರ್ವತ್ರಿಕ ಚುನಾವಣೆಯಲ್ಲಿ ಬಹುಮತ ಗಳಿಸಿ ಕಮ್ಯುನಿಸ್ಟ್ ಪಕ್ಷ ಕೇರಳದಲ್ಲಿ ಅಧಿಕಾರ ಹಿಡಿದಿದ್ದು ಒಂದು ಚಾರಿತ್ರಿಕ ಘಟನೆ. ಅದರ ಅಲೆಗಳ ತರಂಗಗಳು ಪ್ರಪಂಚದಾದ್ಯಂತ ಹರಡಿದ್ದವು. ದಿ ನ್ಯೂಯಾರ್ಕ್ ಟೈಮ್ಸ್ ಹೀಗೆ ವರದಿ ಮಾಡಿತ್ತು: "ಕಾಂಗ್ರೆಸ್ ರಾಜಕಾರಣಿಗಳು ಊಹಿಸಿದಂತೆ ಭಾರತೀಯ ಕಮ್ಯುನಿಸ್ಟ್ ಪಕ್ಷವು ಸಾಯಲು ಸಿದ್ಧವಾಗಲಿಲ್ಲ"(144:p388). ಎಡಪಕ್ಷದ ಪ್ರಮುಖ ಬ್ರಿಟಿಷ್ ಪಾಕ್ಷಿಕ ಟ್ರಿಬ್ಯೂನ್ ಹೀಗೆ ಸೂಚಿಸಿತು: "ಕಮ್ಯುನಿಸ್ಟ್ ಪಕ್ಷವು ಪ್ರಜಾಪ್ರಭುತ್ವ ವಿಧಾನಗಳ ಮೂಲಕ ಅಧಿಕಾರಕ್ಕೇರಿದ ಮೊದಲ ಪ್ರದೇಶವನ್ನು ಕೇರಳ ಪ್ರತಿನಿಧಿಸುತ್ತದೆ. ದಿ ಟ್ರಿಬ್ಯೂನ್ ಮತ್ತೂ ಹೇಳಿದ್ದೇನೆಂದರೆ.: "ಕೇಂದ್ರದ ಕಾಂಗ್ರೆಸ್ ಸರ್ಕಾರಕ್ಕೆ ಒಂದು ಅಸಹಕಾರ ಧೋರಣೆಯನ್ನು ಹುಟ್ಟು ಹಾಕುವುದಕ್ಕಾಗಲೀ ಕಮ್ಯುನಿಸ್ಟರನ್ನು ತಡೆಯುವುಕ್ಕಾಗಲೀ ಸಾಧ್ಯವಾಗಲಿಲ್ಲ.... ಇದಕ್ಕೆ ವಿರುದ್ಧವಾಗಿ, ಸಂಪೂರ್ಣವಾಗಿ ಸಾಂವಿಧಾನಿಕ ವಿಧಾನಗಳನ್ನು ಅನುಸರಿಸಿಕೊಂಡೂ ಕಾಂಗ್ರೆಸ್‌ನೊಂದಿಗೆ ಸಹಕರಿಸಿಕೊಂಡೂ ಆ ಮೂಲಕ ಜನರಿಗೆ ಒಳ್ಳೆಯದನ್ನು ಮಾಡಲು ಕಮ್ಯುನಿಸ್ಟರಿಗೆ ಅವಕಾಶ ಮಾಡಿಕೊಟ್ಟರೆ, ಅವರು ಹಿಂಸೆಯ ಮೂಲಕ ಕ್ರಾಂತಿಯನ್ನು ಆರಾಧಿಸುವ ತಮ್ಮ ಅನುಯಾಯಿಗಳು ಅಪಕ್ವತೆಯಿಂದ ಮುಕ್ತರಾಗಲು ಸಾಧ್ಯವಾಗಬಹುದು" (40:06.05.57).

ಲಂಡನ್ನಿನ 'ಎಕನಾಮಿಸ್ಟ್' ಪತ್ರಿಕೆ ಕೂಡ, ದೆಹಲಿ ಮತ್ತು ತಿರುವನಂತಪುರಂ ನಡುವಿನ ಸಹಕಾರಕ್ಕಾಗಿ ಕೋರಲಾಯಿತು. ದಿ ಎಕನಾಮಿಸ್ಟ್ ಹೀಗೆ ಹೇಳಿತು:

> "ಕೇರಳದ ಕಮ್ಯುನಿಸ್ಟರು ತಮ್ಮ ಉತ್ತಮ ನಡವಳಿಕೆಯನ್ನು ಹೊಂದಿರಬೇಕಾಗಿದೆ... ಏಕೆಂದರೆ, ಇಡೀ ಭಾರತ ಇವರನ್ನು ಗಮನಿಸುತ್ತಾ ಇದೆ ಎನ್ನುವುದನ್ನು ಅವರು ಅರಿತುಕೊಳ್ಳಬೇಕು... ಭೂಸುಧಾರಣೆಯಂಥ ಶಕ್ತವಾದ ಕಾರ್ಯಕ್ರಮಗಳ ಮೂಲಕ ಖ್ಯಾತಿಯನ್ನು ಗಳಿಸುವುದೂ ದೆಹಲಿಯೊಂದಿಗೆ ಸಂಭವನೀಯವಾದ ಘರ್ಷಣೆಗಳನ್ನು ತಪ್ಪಿಸಿಕೊಳ್ಳುವುದೂ ಅವರ ಆದ್ಯತೆಯಾಗಿರಬೇಕು..." (40:21.07.57).

ಬ್ರಿಟನ್‌ನ 'ನ್ಯೂಸ್ ಕ್ರಾನಿಕಲ್ ಹೇಳಿದ್ದು:

> "ಅದು (ಕಮ್ಯುನಿಸ್ಟ್ ಪಕ್ಷದ) ಸಮ್ಮತಿಯಿಂದ ಮೂಡಿಬಂದ ಒಂದು ಕ್ರಾಂತಿ... ಹೆಚ್ಚು ಕಡಿಮೆ ಯಾತನಾಕರವಾದ ವಿವೇಚನೆಯೊಂದಿಗೆ... ಸಾಂವಿಧಾನಿಕ ಮಿತಿಗಳ ಒಳಗಿದ್ದುಕೊಂಡೇ ಕಮ್ಯುನಿಸ್ಟರು ಅದನ್ನು ರಹಸ್ಯವಾಗಿ ತಮ್ಮ ಬತ್ತಳಿಕೆಯಲ್ಲಿಟ್ಟುಕೊಂಡಿದ್ದರು ಎಂದೇ ಅವರು ಹೇಳಿಕೊಳ್ಳುವುದು. ಆದರೆ ಅವರ ಆರಂಭಿಕ ಗುರಿಗಳನ್ನು ರಹಸ್ಯವಾಗಿಟ್ಟಿರಲಿಲ್ಲ. ರಾಜ್ಯದಲ್ಲಿ ಮೊದಲನೆಯದಾದರೂ ಸ್ಥೂಲವಾದ ಒಂದು ಆಡಳಿತವನ್ನು ಅಥವಾ ಸರ್ಕಾರವನ್ನು ಸ್ಥಾಪಿಸಲು ಅವರ ಶಿಸ್ತು ಮತ್ತು ಸಂಘಟನಾ ಕೌಶಲ್ಯಗಳನ್ನು ಬಳಸಲು ಅವರು ಉದ್ದೇಶಿಸಿದರು. ರಾಜ್ಯ ಸರ್ಕಾರಕ್ಕೆ ಒಂದೇ ಸಮಯದಲ್ಲಿ, ದಕ್ಷ ಮತ್ತು ಭ್ರಷ್ಟಾಚಾರ-ಮುಕ್ತಗೊಳಿಸಲು ಸಾಧ್ಯವಾಗುತ್ತದೆ ಎನ್ನುವ ವಿಚಾರ ಸಾಬೀತುಪಡಿಸುವುದು ಅವರ ಗುರಿಯಾಗಿತ್ತು; ವಿಶೇಷವಾಗಿ ಅದಕ್ಕೆ ವಿರುದ್ಧವಾದ ಪರಿಸ್ಥಿತಿ ನೆಲೆಗೊಂಡಿರುವಾಗ"(40:021.07.57).

ಮ್ಯಾಂಚೆಸ್ಟರ್ ಗಾರ್ಡಿಯನ್ ಹೀಗೆ ಹೇಳುತ್ತದೆ:

> "...ತುಂಬಾ ಪ್ರತಿಭಾವಂತರಾದ ಕೆಲವು ಜನರ ನೇತೃತ್ವದಲ್ಲಿ ಮುನ್ನಡೆಯುವ ಕೇರಳದ ಕಮ್ಯುನಿಸ್ಟ್ ಸರ್ಕಾರವು, ಏನನ್ನು ಪ್ರತಿಬಿಂಬಿಸುತ್ತದೆ ಎಂದರೆ, ಅವರು ಕಮ್ಯುನಿಸಂಗೆ ಹತ್ತಿರವೇ ಇದ್ದಾರೆನ್ನುವ ಒಂದು ಪರಿಸ್ಥಿತಿಯನ್ನು ಸೃಷ್ಟಿಸುತ್ತದೆ ಎನ್ನುವುದೇ ಆಗಿದೆ. ಅದೆಲ್ಲವೂ ಸಂವಿಧಾನದ ಪ್ರಮುಖ ಆಶಯಗಳನ್ನು ಮೈಗೂಡಿಸಿಕೊಳ್ಳುವುದಕ್ಕೂ ತಾದಾತ್ಮ್ಯತೆಯನ್ನು ಉಳಿಸಿಕೊಳ್ಳುವುದಕ್ಕೂ ಸಾಧ್ಯವಾಗುವ ರೀತಿಯಲ್ಲಿ ಅರ್ಥೈಸಿಕೊಂಡು ಕಾರ್ಯಗತಗೊಳಿಸಲಾಗುತ್ತದೆ..." (40:21.07.57).

ಹೊರ ದೇಶಗಳಿಂದ ಬಂದ ಸುದ್ದಿಗಳು ಈ ರೀತಿಯವುಗಳಾಗಿದ್ದರೆ, ಭಾರತದ ರಾಷ್ಟ್ರೀಯ ಮಾಧ್ಯಮಗಳಲ್ಲಿನ ಪ್ರತಿಕ್ರಿಯೆಗಳು ಭಾರತೀಯ ಪ್ರಜಾಪ್ರಭುತ್ವದ ಸುಸ್ಥಿರ ಆರೋಗ್ಯದ ಬಗ್ಗೆ ಸಾಕಷ್ಟು ಪುರಾವೆಗಳನ್ನು ಒದಗಿಸುವಂಥದ್ದಾಗಿದ್ದವು. ಭಾರತದ ಬಹುತೇಕ ದಿನಪತ್ರಿಕೆಗಳು ಕಮ್ಯುನಿಸ್ಟರ ಸಾಂವಿಧಾನಿಕ ನಡವಳಿಕೆಯ




ಕೇರಳದಲ್ಲಿ ಪರಿಸ್ಥಿತಿ ಗಂಭೀರವಾಗಿದೆ... ಏಕೆಂದರೆ ಕಮ್ಯುನಿಸ್ಟರು ಮಾತ್ರವೇ ಕೇರಳದ ಮೇಲೆ ಇಷ್ಟು ದೀರ್ಘ ಕಾಲ ಆಳಿದ್ದಾರೆ... ಅವರು ನಮ್ಮ ಎಲ್ಲ ಧೋರಣೆಗಳನ್ನು ಅನುಷ್ಠಾನಗೊಳಿಸುತ್ತಿದ್ದಾರೆ... ಅದರಿಂದ ಅವರು ಹೆಚ್ಚೆಚ್ಚು ಜನಪ್ರಿಯರಾಗುತ್ತಿದ್ದಾರೆ... ಇತರ ರಾಜ್ಯಗಳು ಬಹಳ ಬೇಗನೇ ಅವರ ಕೈಗೆ ಹೋಗುತ್ತವೆ...
ಆಗ ಪ್ರಜಾಪ್ರಭುತ್ವ ಉಡೀಸ್‌ಆಗುತ್ತದೆ – ಕಾಂಗ್ರೆಸ್ ಎಲ್ಲಿಯೂ ಇಲ್ಲದಾಗುತ್ತದೆ
– (ರಾಷ್ಟ್ರೀಯ ಪತ್ರಿಕೆಯಲ್ಲಿಒಂದು ವ್ಯಂಗ್ಯ)

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಬಗ್ಗೆ ಸ್ಪಷ್ಟವಾದ ಧೋರಣೆಯನ್ನು ಹೊಂದಿರಲಿಲ್ಲ. ಆದಾಗ್ಯೂ ಮತದಾರರ ತೀರ್ಪನ್ನು ಗೌರವಿಸಬೇಕೆಂದೂ ಕೇರಳದ ಕಮ್ಯುನಿಸ್ಟ್ ಸರ್ಕಾರ ಮತ್ತು ಕೇಂದ್ರದ ಕಾಂಗ್ರೆಸ್ ಸರಕಾರಗಳು ಪರಸ್ಪರ ಸಹಕಾರ ನೀಡಬೇಕೆಂದೂ ಸಹಕಾರದ ಪಾಠವನ್ನು ಒಳಗೊಳ್ಳಬೇಕೆಂದೂ ಪತ್ರಿಕೆಗಳು ಅಭಿಪ್ರಾಯಪಟ್ಟವು. ಈ ದಿಕ್ಕಿನಲ್ಲಿ ಭಿನ್ನಧ್ವನಿಯನ್ನು ಹೊರಡಿಸಿದ್ದು ತಿರುವನಂತಪುರದಲ್ಲಿ ಸ್ಟೇಟ್‌ಮ್ಯಾನ್ ಪತ್ರಿಕೆಯ ತಿರುವನಂತಪುರದಲ್ಲಿರುವ ವಿಶೇಷ ಲೇಖಕರಾಗಿದ್ದರು.

> "ವಿವಿಧ ಪಕ್ಷಗಳು ಅಧಿಕಾರದಲ್ಲಿರುವಾಗ ಕೇಂದ್ರ ಮತ್ತು ರಾಜ್ಯದ ನಡುವಿನ ಸಹಕಾರ, ಭಾರತಕ್ಕೆ ಸಂಬಂಧಿಸಿದಂತೆ ಇದೊಂದು ವಿನೂತನ ಪ್ರಯೋಗವಾಗಲಿದೆ. ಇದು ಸಂಸದೀಯ ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಒಂದು ಉತ್ತಮ ಸಂಪ್ರದಾಯವಾಗಿರುತ್ತದೆ. ಆದರೆ, ಅದಕ್ಕೆ ಹೆಚ್ಚಿನ ಸಂಯಮ, ತಾಳ್ಮೆ ಮತ್ತು ಎರಡು ಕಡೆಯಿಂದಲೂ ದೊರಕುವ ಪರಸ್ಪರ ತಿಳುವಳಿಕೆ ಅಗತ್ಯವಾಗಿರುತ್ತದೆ" (109:04.04.57).

ದಿ ಹಿಂದೂ ಹೀಗೆ ಬರೆದಿದೆ:

> "ಸಂವಿಧಾನದ ಚೌಕಟ್ಟಿನೊಳಗೆ ಕೆಲಸ ಮಾಡಲು ಇತ್ತೀಚೆಗೆ ತಮ್ಮ

ಇಚ್ಛೆಯನ್ನು ಕಮ್ಯುನಿಸ್ಟ್ ಪಕ್ಷದ ನಾಯಕರು ದೃಢಪಡಿಸಿದ್ದಾರೆ... ಐವರು ಸ್ವತಂತ್ರರ ಬೆಂಬಲದೊಂದಿಗೆ ಮತದಾರರು ಅವರನ್ನು ಅತಿ ದೊಡ್ಡ ಏಕೈಕ ಪಕ್ಷವಾಗಿ ವಿಧಾನಸೌಧಕ್ಕೆ ಕಳುಹಿಸಿದ್ದಾರೆ. ಶಾಸಕಾಂಗದಲ್ಲಿ ಬಹುಮತವಿರುವ ಅವರ ಚಟುವಟಿಕೆಗಳನ್ನು ಮುಖಬೆಲೆಗೆ ತೆಗೆದುಕೊಂಡು, ಅವರಿಗೆ ಸಚಿವ ಸಂಪುಟವನ್ನು ರಚಿಸುವ ಅವಕಾಶವನ್ನೂ ನೀಡಬೇಕು"(84:04.04.57).

"ನವದೆಹಲಿಯ ಕಡೆಯಿಂದ ಉನ್ನತ ಮಟ್ಟದ ರಾಜತಾಂತ್ರಿಕತೆ, ತಂತ್ರ ಮತ್ತು ಚಾತುರ್ಯತೆ ಇರಬೇಕು"

ಎಂದು ಟೈಮ್ಸ್ ಆಫ್ ಇಂಡಿಯಾ ಅಭಿಪ್ರಾಯಪಟ್ಟಿದೆ.

"ಕಮ್ಯುನಿಸ್ಟರಿಂದ ದಕ್ಷತೆ ಮತ್ತು ಭ್ರಷ್ಟಾಚಾರಮುಕ್ತ ಆಡಳಿತವನ್ನು ರಾಜ್ಯದಲ್ಲಿ ನಡೆಸುವುದರಲ್ಲಿ ಯಶಸ್ವಿಯಾದರೆ ಖಂಡಿತವಾಗಿಯೂ ಜನಪ್ರಿಯರಾಗುತ್ತಾರೆ. ಆದರೆ ಅವರು ಪ್ರಜಾಸತ್ತಾತ್ಮಕ ತತ್ವಗಳನ್ನು ಜಾರಿಗೆ ತರಲು ಉತ್ಸುಕರಾಗಿದ್ದಾರೆಯೇ ಎಂದು ಜನರು ಅವರನ್ನು ಪರೀಕ್ಷೆಗೆ ಒಳಪಡಿಸುತ್ತಾರೆ"(193:06.04.57).

ಫ್ರೀ ಪ್ರೆಸ್ ಜರ್ನಲ್ ಹೀಗೆ ಬರೆಯಿತು:

"ಕೇರಳದಲ್ಲಿ ಕಮ್ಯುನಿಸ್ಟ್ ಯಶಸ್ಸಿಗೆ ರಾಜಧಾನಿಯಲ್ಲಿ ನೀಡಿದ ಅತ್ಯುತ್ತಮ ಪ್ರತಿಕ್ರಿಯೆ ಎಂದರೆ, ನಮ್ಮ ಪ್ರಜಾಪ್ರಭುತ್ವವು ಪ್ರಹಸನವಾಗಿರಲಿಲ್ಲ, ಎನ್ನುವುದಾಗಿದೆ. ಅದು ನೂರಕ್ಕೆ ನೂರು ವಾಸ್ತವವಾಗಿದ್ದು, ಜನರ ಇಚ್ಛಾಶಕ್ತಿಗೆ ನೇರವಾಗಿಯೂ ನಂಬಿಕೆಯಿಂದಲೂ ಪ್ರತಿಫಲಿಸುತ್ತದೆ ಎನ್ನುವುದೇ ಆಗಿದೆ".

"ಕೇರಳ, ಕಮ್ಯುನಿಸ್ಟರಿಗೆ ಒಂದು ಅವಕಾಶ ಮಾತ್ರವಲ್ಲ, ಒಂದು ಅಗ್ನಿಪರೀಕ್ಷೆ ಸಹ ಕೊಡುಗೆಯಾಗಿ ಸಿಕ್ಕಿದೆ,"(48:p19)

ಎಂದು ಸಹ ಹೇಳಿದೆ.

ಕೇರಳದಲ್ಲಿ ಕಮ್ಯುನಿಸ್ಟರು ಅಧಿಕಾರಕ್ಕೇರಿದ ಬಗ್ಗೆ ಮೇಲಿನ ಅಗಾಧವಾದ ಸಕಾರಾತ್ಮಕ ಪ್ರತಿಕ್ರಿಯೆಗಳ ಹೊರತಾಗಿ, ಕೆಲವು ನಕಾರಾತ್ಮಕ ಪರಾಮರ್ಶೆಗಳು ಬಂದಿವೆ. ಹಿಂದೂಸ್ತಾನ್ ಟೈಮ್ಸ್ ಪ್ರಕಾರ,

ತಾವು ಬುದ್ಧಿವಂತರು ಎಂದುಕೊಂಡಿರುವ ಕೇರಳದ ಇಬ್ಬರು ದಡ್ಡರು (ಕೆಪಿಸಿಸಿ ಮತ್ತು ಪಿಎಸ್‌ಪಿ) ಹುಲಿಸವಾರಿ (ಕ್ಯಾಥೊಲಿಕ್ ಚರ್ಚ್) ಮಾಡುತ್ತಿದ್ದಾರೆ
ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು



ರಾಜ್ಯದ ಕಮ್ಯುನಿಸ್ಟ್ ಆಡಳಿತದ ಕೈಯಲ್ಲಿ ಕೇಂದ್ರದ ಹಿತಾಸಕ್ತಿಗಳು ಸುರಕ್ಷಿತವಾಗಿರುವುದಿಲ್ಲ. ಕೇಂದ್ರದ ಹಿತಾಸಕ್ತಿಗಳನ್ನು ಕಾಪಾಡಲು ಮತ್ತು ರಾಜ್ಯದ ಆಡಳಿತದ ಬಗ್ಗೆ ಕೇಂದ್ರಕ್ಕೆ ತಿಳಿಸಲು, ಒಂದು ಫೆಡರಲ್ ಪೊಲೀಸ್ ಅಗತ್ಯವಿದೆ. ಇನ್ನೊಂದು ವಿಧದಲ್ಲಿ ಹೇಳುವುದಾದರೆ, ರಾಜ್ಯದ ಕಾರ್ಯಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಅವಶ್ಯಕತೆಯಿದೆ. ಇದು ವಾಸ್ತವವಾಗಿ, ರಾಜ್ಯಸರ್ಕಾರದೊಂದಿಗಿನ ಸಂಬಂಧಗಳನ್ನು ಮರುಹೊಂದಿಸಲು ಕೇಂದ್ರಕ್ಕೆ ಮಾಡುವ ಮನವಿ. ಕೇಂದ್ರ ಸರ್ಕಾರದ ರಹಸ್ಯ ದಾಖಲೆಗಳನ್ನು ವರ್ಗೀಕರಿಸುವುದಕ್ಕಾಗಿ ನೀಡಿದ ಸೂಚನೆ ಅದರಲ್ಲಿ ಅಡಗಿದೆ(48:p19).

## ಕೇಂದ್ರ ಸರ್ಕಾರದ ವಿಧಾನ

ಕಮ್ಯೂನಿಸ್ಟ್ ಪಕ್ಷದ ಯಶಸ್ಸು ಮತ್ತು ಕೇರಳದಲ್ಲಿ ಸರ್ಕಾರವನ್ನು ರಚಿಸಿದ್ದು, ಭಾರತದ ಮತ್ತು ವಿದೇಶಗಳಲ್ಲಿರುವ ಬಂಡವಾಳಗಾರರನ್ನು ಕೋಪೋದ್ರಿಕಗೊಳಿಸಲು ಕಾರಣವಾಯಿತು. ರಾಜ್ಯದ ಬಂಡವಾಳಿಗರ ಹಿತಾಸಕ್ತಿಗಳಿಗೆ ಆವರಿಸಿಕೊಂಡ ಭೀತಿ ಮತ್ತು ಅನುಮಾನಗಳು ವಿಭಿನ್ನ ಕೈದಾರಿಗಳ ಮೂಲಕ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ತಿರುಗಿಬಿದ್ದವು. ರಾಜ್ಯ ಸರ್ಕಾರದ ವಿರುದ್ಧ ಬಹಿರಂಗವಾಗಿ ಅಖಾಡಕ್ಕೆ ಬಂದ ಕಾಂಗ್ರೆಸ್ ನಾಯಕತ್ವದ ಮೊದಲ ಪ್ರಮುಖ ವ್ಯಕ್ತಿಯೆಂದರೆ, ಎಐಸಿಸಿ ಸೆಕ್ರಟರಿಯಾದ ಶ್ರೀಮನ್ ನಾರಾಯಣ್. ಅರಾಜಕತೆಯನ್ನು ಹರಿಯಬಿಡುವ ಮೂಲಕ ನಿರಂಕುಶಪ್ರಭುತ್ವದೆಡೆಗೆ ಹಿಂತಿರುಗಲು ಪ್ರಯತ್ನಿಸುತ್ತಾ, ಕಮ್ಯುನಿಸ್ಟ್ ಮಂತ್ರಿಮಂಡಲ ಸಂವಿಧಾನವನ್ನು ಬುಡಮೇಲು ಮಾಡುತ್ತಿದೆ, ಎಂದು ಎರ್ನಾಕುಳಂನಲ್ಲಿ ನಡೆದ ಕೆಪಿಸಿಸಿ ಸಭೆಯಲ್ಲಿ ಶ್ರೀಮನ್ ನಾರಾಯಣ್ ಆರೋಪಿಸಿದರು.

ಭಾರತದ ಸಂಘಟಿತವಾದ ಪ್ರಜಾಸತ್ತಾತ್ಮಕ ಅಭಿಪ್ರಾಯಗಳು, ಶ್ರೀಮನ್ ನಾರಾಯಣರ ಆರೋಪಗಳನ್ನು ಶೂನ್ಯಗೊಳಿಸುವಂತಿತ್ತು. ನವದೆಹಲಿಯ ಕೆಲವು ಮೂಲೆಗಳಿಂದ ಪ್ರೇರಿತವಾದ ಈ ಅನಾರೋಗ್ಯಕರವಾದ ಸಂಪ್ರದಾಯಗಳನ್ನು ಮರೆಮಾಚುವ ವಿಧದಲ್ಲಿತ್ತು, ಕೇಂದ್ರ ಸರ್ಕಾರದ ಆ ವಕ್ತಾರ ನಡೆಸಿದ ಆ ಪ್ರಸ್ತಾವನೆ:




ಭಾರೀ ಪ್ರಚಾರದ ಹೊರತಾಗಿಯೂ ಕೇರಳ ಸರಕಾರದ ವಿರುದ್ಧ ಕೆಪಿಸಿಸಿ ಚಾರ್ಜ್‌ಶೀಟ್ ಪ್ರಸ್ತುತ ಪಡಿಸಿದೆ! –ಶಂಕರ್ಸ್ ವೀಕ್ಲಿಯಲ್ಲಿ ವ್ಯಂಗ್ಯ

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯದಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

"ಕೇರಳದ ಕಮ್ಯೂನಿಸ್ಟ್ ಸರ್ಕಾರದೊಂದಿಗೆ ವಿವೇಚನಾತ್ಮಕವಾದ ಕಾರ್ಯವಿಧಾನವು ಇರುವುದಿಲ್ಲ"(129:13.04.57).

ನಿರಂಕುಶತ್ವದ ಭೂತ ಕೇರಳವನ್ನು ಹಿಡಿದುಕೊಂಡಿದೆಯೆಂದು, ಶಾಂತಿ ಮತ್ತು ಸುವ್ಯವಸ್ಥೆ ಪರಿಸ್ಥಿತಿ ಸಂಪೂರ್ಣವಾಗಿ ಹದಗೆಟ್ಟು ಹೋಗಿದೆ ಎನ್ನುವ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯ ಆರೋಪಗಳು ರಾಜ್ಯ ಸರ್ಕಾರದದೊಂದಿಗಿನ ದೆಹಲಿಯ ಒಂದು ವಿಭಾಗದ ಕಾಂಗ್ರೆಸ್ ನಾಯಕರ ಮನೋಭಾವವನ್ನು ಬಹಿರಂಗೊಳಿಸುವುದೇ ಆಗಿತ್ತು. ಯು.ಎನ್. ಧೇಬಾರ್, ಇಂದಿರಾಗಾಂಧಿ, ಕೇಂದ್ರ ಸರ್ಕಾರದ ಆಂತರಿಕ ಸಚಿವರಾದ ಜಿ.ಬಿ.ಪಾಂತ್, ಇಂಟೆಲಿಜನ್ಸ್ ಬ್ಯೂರೋ ಮುಖ್ಯಸ್ಥ ಬಿ.ಎನ್.ಮಲ್ಲಿಕ್ ಮುಂತಾದವರೇ ಪ್ರಸ್ತುತ ವಿಭಾಗದ ಪ್ರಮುಖರು.

ಕೇರಳದ ಕಮ್ಯೂನಿಸ್ಟ್ ಸರ್ಕಾರದ ಬಗ್ಗೆ ಪ್ರಧಾನಮಂತ್ರಿ ಜವಹರ್‌ಲಾಲ್ ನೆಹರೂರವರ ಮನೋಭಾವದ ವಿಶ್ಲೇಷಣೆಯನ್ನು ಪರಿಶೀಲಿಸಿದಾಗ ಅದು ಸಂಪೂರ್ಣವಾಗಿ ಪಕ್ಷಪಾತರಹಿತವಾಗಿತ್ತು. ಕಮ್ಯುನಿಸಮ್‌ನ ಕೆಲವು ಆರ್ಥಿಕ ಸಿದ್ಧಾಂತಗಳು ನೆಹರೂರವರಿಗೆ ಸಮ್ಮತಿದಾಯಕವಾಗಿತ್ತು. ಆದರೆ ಅವರು ಭಾರತೀಯ ಕಮ್ಯುನಿಸ್ಟರ ವಿಧಾನಗಳನ್ನು ಅಂಗೀಕರಿಸಲಿಲ್ಲ. ಅವರ ವಿಧಾನಗಳು ಅಕ್ರಮ/ಹಿಂಸಾಚಾರಗಳಿಂದಲೂ ದ್ವೇಷದಿಂದಲೂ ಪ್ರಚೋದಿತವಾದವು ಎಂದು ಅವರು




**ಸಹಾಯ ಮಾಡಿ! ... ಬೆಂಕಿ!**
(ಕೇರಳದಲ್ಲಿ ಚಳುವಳಿಯ ಬೆಂಕಿಗೆ ಸೀಮೆ ಎಣ್ಣೆ ಸುರಿದು ಉರಿಯನ್ನು ಹೆಚ್ಚಿಸುತ್ತಾ ಕೆಪಿಸಿಸಿ ಬೊಬ್ಬೆ)
*ವ್ಯಂಗ್ಯಚಿತ್ರ: ಥ್ಯಾಕರೆ, ಭಾರತ್‌ಜ್ಯೋತಿ*

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು




ಭಾರತದ ಸಂವಿಧಾನ ಇದು ಇನ್ನೊಂದು ಆಕ್ಷೇಪಾರ್ಹ ಪಠ್ಯ ಪುಸ್ತಕ

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಭಾವಿಸಿದರು. ಅಲ್ಲದೆ ವಿಧ್ವಂಸಕವೂ ದೇಶವಿರೋಧಿಯೂ ಆದ ಅವರ ಮಾರ್ಗಗಳು ರಾಷ್ಟ್ರಬಾಹ್ಯವಾದ/ಹೊರರಾಷ್ಟ್ರದ ಕಾರ್ಯಕ್ರಮಗಳಿಂದ ಪ್ರಭಾವಿತವಾದವುಗಳೆಂದು ಅವರು ನಂಬುತ್ತಾರೆ. ಆದ್ದರಿಂದ ಅವರ ದೃಷ್ಟಿಯಲ್ಲಿ ಭಾರತದಲ್ಲಿ ಕಮ್ಯೂನಿಸ್ಟ್ ಪಕ್ಷವು ಸಂಪೂರ್ಣವಾಗಿ ಅಸಮರ್ಪಕ ಸ್ಥಾನದಲ್ಲಿದೆ(84:--.02.57). 'ಕೇರಳದ ಚುನಾವಣಾ ಪ್ರಚಾರದ ವೇಳೆಯಲ್ಲಿ ಅವರು ಭಾರತೀಯ ಕಮ್ಯುನಿಸ್ಟರು ನೈತಿಕ ದಿವಾಳಿಯಾಗಿದ್ದಾರೆ ಎಂದು ಮುದ್ರೆಯೊತ್ತಿದರು. ಚಿಂತನಶೀಲತೆಯನ್ನು ಕಳೆದುಕೊಂಡವರೆಂದು ಅವರನ್ನು ದೂಷಿಸಿದರು. ಜಗತ್ತಿನ ಗಡಿಯಾರವು ಮುಂದಕ್ಕೆ ಸಾಗುತ್ತಿರುವಾಗ ಭಾರತದ ಕಮ್ಯೂನಿಸ್ಟ್ ಮನಸ್ಸಿನ ಗಡಿಯಾರ ಬಹಳ ಹಿಂದೆಯೇ ನಿಂತುಹೋಗಿತ್ತು'. ನೆಹರೂ ಅವರ ದೃಷ್ಟಿಯಲ್ಲಿ, ಕಮ್ಯುನಿಸ್ಟರ ವಿಚಾರಗಳು ಸಂಪೂರ್ಣವಾಗಿ ಗ್ರಂಥಜನ್ಯವಾದ (ಪುಸ್ತಕದ ಬದನೆಕಾಯಿ), ಅಪಕ್ವವಾದ, ನಕಾರಾತ್ಮಕವಾದ, ಭಾರತೀಯ ಪರಿಸ್ಥಿತಿಗಳಿಗೆ ಹೊಂದಿಕೆಯಾಗದ, ಸಂಸದೀಯ ಪ್ರಜಾಪ್ರಭುತ್ವ ಮತ್ತು ಶಾಂತಿಯುತ ಪ್ರಗತಿಗಳಿಗೆ ಸೂಕ್ತವಾದದ್ದಲ್ಲ, ಎನ್ನುವುದಾಗಿತ್ತು. ಅವರು ಯಾವಾಗಲೂ ಅಶಾಂತಿ ಮತ್ತು ಹಿಂಸಾಚಾರದ ಕಡೆಯಲ್ಲೇ ನೆಲೆಗೊಂಡವರಾಗಿರುತ್ತಾರೆ. ಅವರು ತಮ್ಮ ಸ್ಫೂರ್ತಿಗಾಗಿ ವಿದೇಶದ ಕಡೆಗೆ ಮುಖಮಾಡಿಕೊಂಡಿರುತ್ತಾರೆ,(127:p53) ಎನ್ನುವುದನ್ನೂ ನೆಹರೂ ತಮ್ಮ ಮಾತುಗಳಲ್ಲಿ ಸೇರಿಸಿ ಹೇಳಿದರು. ಆದರೆ ಚುನಾವಣೆಯಲ್ಲಿ ಯಶಸ್ವಿಯಾದಾಗ ಅವರಿಗೆ ಸರ್ಕಾರ ರಚಿಸುವ ಸಾಮರ್ಥ್ಯವಿದೆ ಎಂದು ಗೊತ್ತಾದ ನಂತರ, ಕಮ್ಯುನಿಸ್ಟ್ ಪಕ್ಷಕ್ಕೆ ಒಂದು ಅವಕಾಶ ಕೊಡಲು ಸಿದ್ಧರಾದರು(127:p53). ಕಮ್ಯುನಿಸ್ಟರು ಮಿತತ್ವದ ಅಥವಾ ಮಧ್ಯಮ ಮಾರ್ಗದ ಕಾರ್ಯಕ್ರಮಗಳ ಆಧಾರಗಳ ಮೇಲೆ ಪಕ್ಷವು ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಆ ಕಾರಣಕ್ಕಾಗಿ ಅವರು ರಚಿಸಿದ ಸರ್ಕಾರವನ್ನು 'ಶುದ್ಧ ಕಮ್ಯುನಿಸ್ಟ್ ಸರ್ಕಾರ' ಎಂದು ಬಣ್ಣಿಸಲು ಸಾಧ್ಯವಿಲ್ಲ.*(84:30.03.57; 40:14.04.57)

---

* The election manifesto of the Communist Party was a unique document, which combined hard hitting punches against the Congress with a constructive programme of political economic and social reforms for a wealthy and prosperous Kerala. On assuming office, the Chief Minister EMS Namboodiripad issued his policy statement in which he pointed that they would only try to implement the

ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಸರ್ಕಾರ ರಚಿಸುವ ಮುನ್ನವೇ ಹೊಸದಿಲ್ಲಿ ಮತ್ತು ತಿರುವನಂತಪುರಂ ನಡುವೆ ಹಗ್ಗಜಗ್ಗಾಟ ನಡೆದು, ವಿವಾದ ಹುಟ್ಟಿಕೊಂಡಿತು(118:06.01.79p31). ಕಮ್ಯುನಿಸ್ಟ್ ಪಕ್ಷ ಅಧಿಕಾರಕ್ಕೆ ಬಂದರೆ, ಅದು ಕೇರಳದಲ್ಲಿ ವಿದೇಶಿ ಒಡೆತನದ ತೋಟ/ಎಸ್ಟೇಟ್‌ಗಳ ರಾಷ್ಟ್ರೀಕರಣ ಮಾಡುವುದಾಗಿ ಘೋಷಿಸಲಾಗಿತ್ತು(40:10.02.57p9). ಇದನ್ನು ತಕ್ಷಣಕ್ಕೆ, ಕಾಂಗ್ರೆಸ್, ವಿಶೇಷವಾಗಿ ಪ್ರಧಾನಮಂತ್ರಿ ತೀವ್ರವಾಗಿ ವಿರೋಧಿಸಿದರು. ಕೇವಲ ಕೆಲವು ಕೋಟಿ ರೂಪಾಯಿಗಳಿಗಾಗಿ ಭಾರತದ ಘನತೆಯನ್ನು ಬಲಿಕೊಡುವುದನ್ನು ನೆಹರೂ ವಿರೋಧಿಸಿದ್ದರು.

> "ಕೆಲವು ಕೋಟಿ ರೂಪಾಯಿಗಳಿಗಾಗಿ ಭಾರತದ ಪ್ರತಿಷ್ಠೆ ಮತ್ತು ಕೀರ್ತಿಗಳನ್ನು ಕಳಂಕಗೊಳಿಸಲು ನಾನು ಸಿದ್ಧನಿಲ್ಲ"(84:02.02.57).

> ಒಂದು ಸಮಾಜವಾದಿ ಸಮಾಜ ಕಟ್ಟಿ ಬೆಳೆಸುವುದಾಗಿರುವುದಿಲ್ಲ, ಮುಖ್ಯಮಂತ್ರಿ ಎನ್ನುವ ನೆಲೆಯಲ್ಲಿ ತನ್ನ ನೀತಿ. ಕೇರಳದ ಕಮ್ಯುನಿಸ್ಟ್ ಸರ್ಕಾರವು ಕಾಂಗ್ರೆಸ್ ಮತ್ತು ಕೇಂದ್ರ ಸರ್ಕಾರ ನೀಡಿದ ಭರವಸೆಗಳನ್ನು ಜಾರಿಗೆ ತರಲು ಪ್ರಯತ್ನಿಸುತ್ತಿದೆ. ಇವುಗಳನ್ನು ಕಾಂಗ್ರೆಸ್ ಆಡಳಿತವಿರುವ ರಾಜ್ಯಗಳಲ್ಲೂ ಜಾರಿಗೆ ತರಲು ಸಾಧ್ಯವಾಗಿರುವುದಿಲ್ಲ (40:14.04.57).

ಎಂದು ಕೇರಳ ಸಂಪುಟ ರಚನೆ ಮಾಡಲು ರಾಜ್ಯಪಾಲರು ಇಎಂಎಸ್ ನಂಬೂದಿರಿಪಾಡ್ ಅವರನ್ನು ಆಹ್ವಾನಿಸಿದ ಸಂದರ್ಭದಲ್ಲಿ ಅವರು ಘೋಷಿಸಿದರು (84:30.03.57, 06.04.57;107:30.03.57).

ಆದರೆ ಮಂತ್ರಿಮಂಡಲದ ಆರಂಭಿಕ ಕ್ರಮಗಳು ಮುಖ್ಯಮಂತ್ರಿಗಳ ಹೇಳಿದ್ದಕ್ಕೆ ಹೊಂದುವಂಥದ್ದಾಗಿರಲಿಲ್ಲ. ಕಮ್ಯುನಿಸ್ಟ್ ಮಂತ್ರಿಮಂಡಲದ ನೀತಿಗಳು, ಕಾರ್ಯಕ್ರಮಗಳು ಮತ್ತು ಕಾರ್ಯಶೈಲಿಗಳು, ವಾಸ್ತವದಲ್ಲಿ ಸಾಂಪ್ರದಾಯಿಕ ವಿಧಾನಗಳಿಗಿಂತ ಭಿನ್ನವಾಗಿತ್ತು. ಅಧಿಕಾರವನ್ನು ವಹಿಸಿಕೊಂಡ ಸರ್ಕಾರವು ರಾಜಕೀಯ ಕೈದಿಗಳ, ಮರಣದಂಡನೆಯ ಶಿಕ್ಷೆಯಲ್ಲಿ ರಿಯಾಯಿತಿ ತೋರಿಸಿದ್ದಲ್ಲದೆ, ರಾಜಕೀಯ ಕೈದಿಗಳಿಗೆ ಕ್ಷಮಾದಾನವನ್ನು ತಕ್ಷಣವೇ ನೀಡಲಾಯಿತು ಮತ್ತು ಗೇಣಿದಾರರನ್ನು ಒಕ್ಕಲೆಬ್ಬಿಸುವಿಕೆಯನ್ನು ನಿಷೇಧಿಸಲಾಯಿತು. ರಾಜ್ಯ ಸರ್ಕಾರವು ಸಂವಿಧಾನದ ಉಲ್ಲಂಘನೆಯಾಗುವ ರೀತಿಯಲ್ಲಿ ಕೆಲವು ಘೋಷಣೆಗಳನ್ನು ಮಾಡಿರುವುದಾಗಿ, ಕೇಂದ್ರ ಸಚಿವ ಸಂಪುಟಕೆ ಅನಿಸಿತು(127:p54). ರಾಜ್ಯ ಸರ್ಕಾರ ಅಧಿಕ ಲಾಭಕ್ಕಾಗಿ ಜ್ಯಾಣ್ಮೆಯಿಂದ ಕೆಲಸ ಮಾಡುತ್ತಿರುವುದಾಗಿ, ಕಮ್ಯುನಿಸ್ಟರ ಬಗ್ಗೆ ಅಸಹಿಷ್ಣುತೆ ಮತ್ತು ಸಂಶಯಗಳನ್ನು ಹೊಂದಿರುವ ಕೇಂದ್ರ ಗೃಹ ಸಚಿವರಾದ ಜಿ.ಬಿ.ಪಂತ್ ನಂಬಿಕೊಂಡಿದ್ದರು. ಚುನಾವಣಾ ಸಂದರ್ಭದಲ್ಲಿ ಕಮ್ಯುನಿಸ್ಟರು ನೀಡಿದ ಹಲವು ಭರವಸೆಗಳನ್ನು ಈಡೇರಿಸುವಲ್ಲಿ ವಿಫಲವಾದಲ್ಲಿ, ಕೇಂದ್ರ ಸರ್ಕಾರದ

---

promises which the Congress and the Central Government had made but which the Congress Governments in the states had failed to carry out.

ತಾರತಮ್ಯ ಮತ್ತು ಪಕ್ಷಪಾತದಿಂದ ಉಂಟಾದದ್ದು ಎನ್ನುವ ಆರೋಪಗಳನ್ನು ಮತ್ತು ಕುಂದುಕೊರತೆಗಳನ್ನು ಕೇಳಬೇಕಾಗುತ್ತದೆ, ಎನ್ನುವುದಾಗಿತ್ತು ಜಿ.ಬಿ.ಪಂತ್ ಅವರ ಅನುಮಾನಗಳಲ್ಲಿ ಮುಖ್ಯವಾದುದು(127:p54).

ಆಂಧ್ರಪ್ರದೇಶದ ಸಾಂಪ್ರದಾಯಿಕ ಕಾಂಗ್ರೆಸ್ಸಿಗರಾದ ಬಿ. ರಾಮಕೃಷ್ಣ ರಾವ್ ಕೇರಳದ ರಾಜ್ಯಪಾಲರಾಗಿದ್ದರು. ಅವರು ಮೊದಲಿನಿಂದಲೂ ಕೇರಳದ ಕಮ್ಯುನಿಸ್ಟ್ ಸರ್ಕಾರದ ಪರವಾಗಿರಲಿಲ್ಲ. ಕಮ್ಯುನಿಸ್ಟರ ಬಗ್ಗೆ ಹಗೆತನದ ಧೋರಣೆ ಹೊಂದಿರುವ ಜಿ.ಬಿ.ಪಂತ್‌ರಿಂದಲೇ ರಾಜ್ಯಪಾಲರು ಕಮ್ಯುನಿಸ್ಟ್ ವಿರೋಧಿ ಪ್ರೇರೇಪಣೆ ಪಡೆದುಕೊಂಡಿದ್ದು. ಆದ್ದರಿಂದಲೇ ನೆಹರೂರವರಿಗೆ, ತಮ್ಮ ಸಹೋದ್ಯೋಗಿಗಳು ಕೇರಳ ಸರ್ಕಾರದ ಮೇಲೆ ಕಠಿಣ ನಿಲುವು ತಳೆಯದಂತೆ ಖಾತ್ರಿ ಮಾಡಿಕೊಳ್ಳಬೇಕಾಗಿ ಬಂದಿದ್ದು. ಇದು ಸಾಧ್ಯವಾಗಬೇಕಾದರೆ, ನೆಹರೂ ಈ ವಿಷಯದಲ್ಲಿ ವೈಯಕ್ತಿಕ ಆಸಕ್ತಿಯನ್ನು ತೆಗೆದುಕೊಳ್ಳಬೇಕಾಗಿತ್ತು. ಏಕೆಂದರೆ, ಜಿ.ಬಿ.ಪಂತ್ ಮತ್ತು ರಾಮಕೃಷ್ಣರಾವ್‌ರವರಲ್ಲಿ ತಮ್ಮ ಸ್ಥಾನಗಳಿಗೆ ಇರಬೇಕಾದ ಅಗತ್ಯವಿರುವ ವಿಶಾಲ ದೃಷ್ಟಿ ಇರಲಿಲ್ಲ(127:p55). ಖೈದಿಗಳ ಬಿಡುಗಡೆ ಮತ್ತು ಮರಣದಂಡನೆಯ ಶಿಕ್ಷೆಗಳಲ್ಲಿ ರಿಯಾಯಿತಿ ತೋರಿಸುವಲ್ಲಿ, ಸರ್ಕಾರ ಕೈಗೊಂಡಿರುವ ನಿರ್ಧಾರಗಳಲ್ಲಿ ಪ್ರಧಾನಿ ಅತೃಪ್ತಿಯನ್ನು ದಾಖಲಿಸಿದರು*(127:p55). ಪಂತ್‌ರವರು ಮರಣದಂಡನೆಯ ಶಿಕ್ಷೆಯಲ್ಲಿ ರಿಯಾಯಿತಿ ತೋರಿಸಿದ್ದರ ಬಗ್ಗೆ ವಿರೋಧ ವ್ಯಕ್ತಪಡಿಸಿದ್ದರೂ ಕೊನೆಗೆ ಈ ಬಗ್ಗೆ ಒಂದು ಒಪ್ಪಂದಕ್ಕೆ ಬರಲು ಸಿದ್ಧರಾದರು.** ರಾಷ್ಟ್ರಪತಿಗಳು ಈ ಹಿಂದೆ ಕ್ಷಮಾದಾನ ಅರ್ಜಿಯನ್ನು ತಿರಸ್ಕರಿಸಿದ ಮೂರು ಪ್ರಕರಣಗಳಲ್ಲಿ ಮರಣದಂಡನೆಗೆ ಬದಲಾಗಿ ಪ್ರತಿವಾದಿಗಳು ಜೀವಾವಧಿ ಶಿಕ್ಷೆಗೆ ನೆಹರೂರವರ ಬೆಂಬಲದೊಂದಿಗೆ ಪಂತ್ ಒಪ್ಪಿಕೊಂಡಿದ್ದರು. ಶಿಕ್ಷೆಯ ಕಾಲಾವಧಿ ಪೂರ್ಣಗೊಳಿಸುವುದಕ್ಕೂ ಮೊದಲು ಜೈಲಿನಿಂದ ಬಿಡುಗಡೆಯಾಗುವುದಿಲ್ಲ ಎಂದು ನಂಬೂದಿರಿಪಾಡ್‌ರವರು ಭರವಸೆ ನೀಡಿದರು. ನೆಹರೂ ಮತ್ತೊಂದು ಭೂತವನ್ನೂ ತಡೆಯಬೇಕಾಗಿ ಬಂತು. ಕೇರಳದಲ್ಲಿ ಎಲ್ಲಾ ನಿರ್ಧಾರಗಳನ್ನು ಮಂತ್ರಿಮಂಡಲದ ಬದಲಿಗೆ ಪಕ್ಷವೇ ತೆಗೆದುಕೊಳ್ಳುತ್ತದೆ ಮತ್ತು ಮಾರ್ಗದರ್ಶನಕ್ಕಾಗಿ ಒಬ್ಬ ಹಿರಿಯ ಕಮ್ಯುನಿಸ್ಟ್ ನಾಯಕನನ್ನು ಮಾಸ್ಕೋಗೆ ಪಕ್ಷವು ಕಳುಹಿಸಲು ಸಿದ್ಧವಾಗಿದೆ ಎಂದೆನ್ನುವ ವಿಚಾರ ನೆಹರೂರವರ ಕಿವಿಗೆ

* Apart from legal and constitutional aspects of this decision, there were also issues of propriety and procedure. The central Government had a right to be consulted because other states were also concerned; and a unilateral decision on this subject implied discourtesy to the President and the Supreme Court.

** ಕೇರಳದಲ್ಲಿ ಮರಣದಂಡನೆ ರದ್ದತಿ ಪ್ರಕರಣದಲ್ಲಿ ಕೇತಕುಲಂಗರ ವಾಸುಪಿಳ್ಳೈ ಕಾಂಗ್ರೆಸ್ ಪಕ್ಷ ಮತ್ತು ಕಮ್ಯುನಿಸ್ಟ್ ವಿರೋಧಿ ಗುಂಪುಗಳಿಂದ ತೀವ್ರ ವಿರೋಧವಿತ್ತು. ಆದರೆ, ಇವರ ವಿಷಯದಲ್ಲಿ ಕಮ್ಯುನಿಸ್ಟ್ ಪಕ್ಷಕ್ಕೆ ವಿಶೇಷ ಆಸಕ್ತಿ ಇತ್ತು. ಏಕೆಂದರೆ ವಾಸುಪಿಳ್ಳಾ ಕೇವಲ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರಾಗದೆ ಕೆಪಿಎಸಿಯ ಬೆಳವಣಿಗೆಗೆ ಗಣನೀಯವಾಗಿ ಶ್ರಮಿಸಿದ್ದರು.

ಯಾರೋ ತುಂಬಿದರು*(48:). ಭಾರತದ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಬಾರದಾಗಿ, ಪ್ರಧಾನ ಮಂತ್ರಿಗಳು ರಷ್ಯಾದ ರಾಯಭಾರಿಗೆ ನೆನಪಿಸಿದರು. ಮಾಸ್ಕೋದಲ್ಲಿರುವ ಸೋವಿಯತ್ ಸರ್ಕಾರವು ಯಾವುದೇ ಕಾರಣಕ್ಕೆ, ಭಾರತದ ಕಮ್ಯುನಿಸ್ಟ್ ನಾಯಕನೊಬ್ಬ ಕೇರಳದ ವಿಷಯಗಳ ಬಗ್ಗೆ ಚರ್ಚಿಸಲು ಬಂದರೆ, ಪ್ರೋತ್ಸಾಹಿಸುವುದಿಲ್ಲ ಎಂದು ನೆಹರೂಗೆ ಭರವಸೆಯನ್ನೂ ನೀಡಿತು**(127:p55).

### ಶಿಕ್ಷಣ ಮಸೂದೆಯ ಗತಿ

ಏನೇಯಾದರೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ತಕ್ಷಣದಲ್ಲಿಯೇ ಇತರೆ ವಿಷಯಗಳ ಬಗ್ಗೆಭಿನ್ನಾಭಿಪ್ರಾಯಗಳು ಉದ್ಭವಿಸಿದವು. ಕೇರಳದಲ್ಲಿ ಶಾಲಾ ಶಿಕ್ಷಣವನ್ನು ಕ್ರಮಬದ್ಧಗೊಳಿಸಲು ಕೇರಳ ಸರ್ಕಾರ ಶಿಕ್ಷಣ ಮಸೂದೆಯನ್ನು ತಂದಿತು. ಈ ಮಸೂದೆಯ ಕೆಲವು ನಿಬಂಧನೆಗಳು ಕಾನೂನು ಬಾಹಿರ ಎನ್ನುವ ಅಭಿಪ್ರಾಯ ಜಿ.ಬಿ. ಪಂತ್‌ಗಿತ್ತು. ಮಸೂದೆಯನ್ನು ಅಂಗೀಕರಿಸಿದರೆ, ಅಧಿಕೃತವಲ್ಲದ ಸಂಸ್ಥೆಗಳು ಶಿಕ್ಷಣ ಕ್ಷೇತ್ರದಲ್ಲಿ ಮುಂದಾಳತ್ವವನ್ನು ತೆಗೆದುಕೊಳ್ಳುವುದಕ್ಕೆ ನಿರುತ್ಸಾಹಗೊಳಿಸುತ್ತದೆಯೆಂದು ಅವರು ಭಾವಿಸಿದರು(127:p56). ಶಿಕ್ಷಣ ಮಸೂದೆಗೆ ಸಂಬಂಧಿಸಿದ ಶಾಸಕಾಂಗ ಪ್ರಕ್ರಿಯೆಗಳು ನಡೆಯುತ್ತಿರುವಾಗಲೇ ಕ್ರೈಸ್ತ ಚರ್ಚುಗಳೂ ಪಟ್ಟಭದ್ರ ಹಿತಾಸಕ್ತಿ ಗುಂಪುಗಳೂ ಸರ್ಕಾರದ ವಿರುದ್ಧ ಪ್ರತಿಭಟನಾ ಜಾಥಾಗಳು, ಪ್ರತಿಭಟನೆಗಳು, ಸುಳ್ಳು ಪ್ರಚಾರಗಳನ್ನು ನಡೆಸುತ್ತಾ, ಅನಿಶ್ಚಿತತೆಯ ಗದ್ದಲವನ್ನು ಎಬ್ಬಿಸಿದರು. ಕಾನೂನು ಸುವ್ಯವಸ್ಥೆ ಹದಗೆಟ್ಟಿರುವ ಬಗ್ಗೆ ಬಂದ ವರದಿಗಳಿಗೆ ಪ್ರಧಾನಿ ಕಳವಳ ವ್ಯಕ್ತಪಡಿಸಿದರು(115:31.07.57). ಅರಾಜಕತೆಯಿಂದಾಗಿ ಕೇರಳಿಗರ ಮನಸ್ಸಿನಲ್ಲಿ ಭಯ ಹುಟ್ಟಿಸುತ್ತಿದೆಯೆಂದು ನೆಹರೂ ನಂಬಿದರು(84:22.10.57). ಕೋಮುವಾದಿ ಗುಂಪುಗಳ, ವಿರೋಧ ಪಕ್ಷಗಳ ಮತ್ತು ಪಟ್ಟಭದ್ರ ಹಿತಾಸಕ್ತಿ ಗುಂಪುಗಳ ಒಡೆತನದ ಪತ್ರಿಕೆಗಳು, ದುರುದ್ದೇಶಪೂರ್ವಕವಾಗಿ ನಡೆಸಲಾದ ಸುಳ್ಳು ಪ್ರಚಾರಗಳು ನೆಹರೂ ಅವರ ನಂಬಿಕೆಯನ್ನು ಬಲಪಡಿಸಿತು.***

---

* ಆಲಪ್ಪುಳದಲ್ಲಿ ನಡೆದ ಸಭೆಯಲ್ಲಿ, ಎಐಸಿಸಿ ಅಧ್ಯಕ್ಷರಾಗಿದ್ದ ಯು.ಎನ್.ಧೇಬಾರ್ ಹೀಗೆ ಘೋಷಿಸಿದರು. 'ಮಾಸ್ಕೋ ಗ್ರಂಥಾಲಯಗಳಲ್ಲಿ ಭಾರತೀಯ ರಾಜ್ಯದ ಆಡಳಿತವನ್ನು ಹೇಗೆ ನಡೆಸಬೇಕು ಎಂಬುದರ ಕುರಿತು ಯಾವುದೇ ಪುಸ್ತಕಗಳಿಲ್ಲ..' ಸೋವಿಯತ್ ಒಕ್ಕೂಟಕ್ಕೆ ಕಮ್ಯುನಿಸ್ಟರ ಪ್ರತಿಕ್ರಿಯೆಯ ಕುರಿತು ಕಾಂಗ್ರೆಸ್ ನಾಯಕರು ಪದೇ ಪದೇ ಆರೋಪ ಮಾಡುತ್ತಿದ್ದರು.

** B.R.Rao to Nehru, 25 April, Nehru's note to Secretary, General, Ministry of External Affairs, 28 April, and K.P.S.Menon to Secretary-General reporting conversation with Kusnetzov, 5 June 1957

*** ವಾಸ್ತವವಾಗಿ ಕೇರಳದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ನಿರ್ವಹಣೆಯು ಭಾರತದ ಇತರ ರಾಜ್ಯಗಳಿಗಿಂತ ಉತ್ತಮವಾಗಿತ್ತು. (ಉಲ್ಲೇಖ – ಮಾಸಿಕ ಅಂಕಿಅಂಶಗಳ ಸಾರಾಂಶ, ಭಾರತ ಸರ್ಕಾರ).

ಏಕಪಕ್ಷೀಯ ಕಾರ್ಯ ಚಟುವಟಿಕೆಗಳು, ತಪ್ಪು ಕಲ್ಪನೆಗಳು, ಕೇಂದ್ರೀಯ ಸಂಸ್ಥೆಗಳ ಕಮ್ಯುನಿಸ್ಟ್ ವಿರೋಧಿ ವರದಿ ಮುಂತಾದವುಗಳೆಲ್ಲವೂ ಕೇಂದ್ರ ಗೃಹಸಚಿವರಾದ ಜಿ.ಬಿ. ಪಂತ್‌ರ ಮೇಲೆ ಪ್ರಭಾವ ಬೀರಿದವು. ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಅಂತರ್ಗತವಾದ ಪಕ್ಷಪಾತವನ್ನು ಅವರು ಹೊಂದಿದ್ದರು. ಈ ಪರಿಸ್ಥಿತಿಯಲ್ಲಿ, ಕೇರಳದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಟ್ಟಿದೆ ಎನ್ನುವ ವರದಿಗಳನ್ನು ಕೇಂದ್ರ ಗೃಹ ಸಚಿವರು ಗಂಭೀರವಾಗಿ ಪರಿಗಣಿಸಿದ್ದಲ್ಲದೆ, ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಅವರಿಗೆ ಎಚ್ಚರಿಕೆಯನ್ನೂ ನೀಡಲಾಯಿತು.*

ವಿಧಾನಸಭೆಯಲ್ಲಿ ಕೇರಳ ಶಿಕ್ಷಣ ಮಸೂದೆಯ ಅಂಗೀಕಾರದ ನಂತರ ರಾಷ್ಟ್ರಪತಿಗಳ ಅನುಮೋದನೆಗೆ ಸಲ್ಲಿಸಲಾಯಿತು. ಈ ಮಧ್ಯೆ ಪ್ರತಿಗಾಮಿ ಶಕ್ತಿಗಳು ಮಸೂದೆಯ ವಿರುದ್ಧ ತಮ್ಮ ಆಂದೋಲನವನ್ನು ತೀವ್ರಗೊಳಿಸಿದರು. ಹಲವಾರು ಮೆಮೊರಾಂಡಮ್‌ಗಳನ್ನು ಮತ್ತು ಅರ್ಜಿಗಳನ್ನು ನಿರಂತರವಾಗಿ ಕೇಂದ್ರದ ಅಧಿಕಾರಿಗಳಿಗೆ ಕಳುಹಿಸಿಕೊಡುತ್ತಾ ಇದ್ದರು. ಕಾಂಗ್ರೆಸ್‌ನ ಉನ್ನತವಾದ ಕಾರ್ಯಕಾರಿ ಸಮಿತಿಯಲ್ಲಿ ವಿವೇಕಶೂನ್ಯರಾದ ಕಮ್ಯುನಿಸ್ಟ್ ವಿರೋಧಿಗಳು, ಮಸೂದೆಯ ಪ್ರಗತಿಪರ ಮತ್ತು ಜಾತ್ಯತೀತ ಉದ್ದೇಶಗಳನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದರು. ಮಸೂದೆಯ ವಿಚಾರದಲ್ಲಿ ಈ ರೀತಿಯಲ್ಲಿ ಕಾಲಾಹರಣವನ್ನು ಸೃಷ್ಟಿಸಿಕೊಂಡು, ವಿಷಯವನ್ನು ರಾಷ್ಟ್ರಮಟ್ಟದಲ್ಲಿ, ಕಮ್ಯುನಿಸ್ಟ್ ಸರ್ಕಾರವನ್ನು ಅಪಖ್ಯಾತಿಗೆ ಒಳಗಾಗುವ ಅಸ್ತ್ರವನ್ನಾಗಿ ಮಾಡಲು ಅವರು ಸಹಕರಿಸಿದರು(48:p32). ಕೇರಳ ಶಿಕ್ಷಣ ಮಸೂದೆಗೆ ರಾಷ್ಟ್ರಪತಿಗಳ ಒಪ್ಪಿಗೆಯ ಬಗ್ಗೆ ಸಂಸತ್ತಿನಲ್ಲಿ ಎದ್ದಿರುವ ಪ್ರಶ್ನೆಗಳಿಗೆ, ಅವರು ತಪ್ಪಿಸಿಕೊಳ್ಳುವ ರೀತಿಯಲ್ಲಿ ಹಾರಿಕೆಯ ಉತ್ತರಗಳನ್ನು ನೀಡಿದರು(40:27.04.58). ಡಿಸೆಂಬರ್ 1957ರ ಅಂತ್ಯದ ವೇಳೆಗೆ ಸಂವಿಧಾನದ 143ನೇ ವಿಧಿಯ ಅಡಿಯಲ್ಲಿ, ಮಸೂದೆಯನ್ನು, ರಾಷ್ಟ್ರಪತಿಗಳು ಸುಪ್ರೀಮ್ ಕೋರ್ಟ್‌ನ ಪರಿಗಣನೆಗೆ ಕಳುಹಿಸಿಕೊಡಲಾಯಿತು.

ಹೀಗೆ ಕೇರಳ ಶಿಕ್ಷಣ ಮಸೂದೆ ಇತಿಹಾಸವನ್ನೇ ಸೃಷ್ಟಿಸಿತು. ರಾಷ್ಟ್ರಪತಿಯವರು, ಸುಪ್ರೀಂ ಕೋರ್ಟ್ ಪರಿಗಣನೆಗಾಗಿ ಕಳುಹಿಸಿದ ಈ ರೀತಿಯ ಮೊದಲ ಮಸೂದೆ, ಇದಾಗಿತ್ತು. ಈ ಘಟನೆಗೆ ತಕ್ಷಣದ ಪ್ರತಿಕ್ರಿಯೆಗಳೂ ಹೊರಬಿದ್ದವು. ಮಸೂದೆಯ ವಿಷಯದಲ್ಲಿ ಕೇಂದ್ರ ಸರ್ಕಾರ ನೀಡಿದ ನಿರ್ದೇಶನಗಳಲ್ಲಿ ಕೇರಳ ಸರ್ಕಾರವು ಹೆಚ್ಚಿನವುಗಳನ್ನು ಒಪ್ಪಿಕೊಂಡಿದ್ದು, ಕೆಲವನ್ನು ಮಾತ್ರ ತಿರಸ್ಕರಿಸಿರುವುದಾಗಿ ಜನವರಿ 2, 1958ರಂದು ನವದೆಹಲಿಯಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ಪ್ರಶ್ನೆಗಳಿಗೆ ಉತ್ತರಿಸುವ ಸಂದರ್ಭದಲ್ಲಿ ಪ್ರಧಾನಿಗಳು ಹೇಳಿದರು(193:03.01.58). ಮಸೂದೆಯನ್ನು ಸುಪ್ರೀಂ ಕೋರ್ಟ್‌ನ ಪರಿಗಣನೆಗೆ ಬಿಟ್ಟಿದ್ದಕ್ಕೆ ಪ್ರಧಾನಿಯವರು ವಿವರಣೆ ನೀಡಿದರು. ಈ ಮಸೂದೆಯನ್ನು ಖಾಸಗಿ ವ್ಯಕ್ತಿಗಳು ಪ್ರಶ್ನಿಸಬಹುದು ಎಂಬುದರಲ್ಲಿ ಸಂದೇಹವಿರಲಿಲ್ಲ.

---

* ಕಮ್ಯುನಿಸ್ಟ್ ಸರ್ಕಾರವು ಪೊಲೀಸರು ಮತ್ತು ನ್ಯಾಯಾಲಯಗಳ ಮೇಲೆ ಒತ್ತಡದ ತಂತ್ರಗಳನ್ನು ಬಳಸುತ್ತಿದೆ ಎಂದು ಕೇಂದ್ರ ಗೃಹ ಸಚಿವ ಜಿ.ಬಿ. ಪಂತ್ ನಂಬಿದ್ದರು.

"ಹಲವಾರು ಪ್ರಶ್ನೆಗಳನ್ನು ಎದುರಿಸಿದ್ದ ಒಂದು ವಿಷಯ ಎನ್ನುವ ನೆಲೆಯಲ್ಲಿ (ಶಿಕ್ಷಣ ಮಸೂದೆ) ಸುಪ್ರೀಂ ಕೋರ್ಟ್‌ನ ಸಲಹೆಯನ್ನು ಪಡೆಯುವುದು ಹೆಚ್ಚು ಅಪೇಕ್ಷಣೀಯ",(193:03.01.58) ಎಂದು ನೆಹರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ರಾಜ್ಯದ ಸ್ವಾಯತ್ತತೆಗೆ ಯಾವುದೇ ರೀತಿಯಲ್ಲಿ ಹಾನಿ ಮಾಡುವ ಉದ್ದೇಶವನ್ನು ಕೇಂದ್ರ ಸರ್ಕಾರ ಹೊಂದಿಲ್ಲ ಎಂದೂ ಅವರು ತಿಳಿಸಿದರು. ಕೇಂದ್ರ ಸರ್ಕಾರ ಮಸೂದೆಯ ವಿಚಾರದಲ್ಲಿ ಅನ್ಯಾಯವಾಗಿ ಹಸ್ತಕ್ಷೇಪ ನಡೆಸಿದರು, ಎಂಬ ತಪ್ಪು ಕಲ್ಪನೆಯನ್ನು ಹೋಗಲಾಡಿಸಲು ನೆಹರೂ ಮೇಲಿನ ಹೇಳಿಕೆಯನ್ನು ನೀಡಿದ್ದರು.

ಪ್ರಧಾನಮಂತ್ರಿಯವರ ವಾದಗಳು ಮೇಲ್ನೋಟಕ್ಕೆ ಕೇರಳ ಸರ್ಕಾರವನ್ನು ತೃಪ್ತಿಪಡಿಸಲಿಲ್ಲ. ಆ ವೇಳೆ ದೆಹಲಿಯಲ್ಲಿದ್ದ ಮುಖ್ಯಮಂತ್ರಿ ನಂಬೂದಿರಿಪಾಡ್ ಗೃಹ ಸಚಿವ ಜಿ.ಬಿ. ಪಂತ್‌ರನ್ನು ಭೇಟಿ ಮಾಡಿ, ಈ ಕ್ರಮಕ್ಕೆ ರಾಜ್ಯ ಸರ್ಕಾರದ ವಿರೋಧವನ್ನು ವ್ಯಕ್ತಪಡಿಸಿದರು.ಜನವರಿ 11, 1958ರಂದು ತಿರುವನಂತಪುರಂನಲ್ಲಿರುವ ಕಮ್ಯುನಿಸ್ಟ್ ಪಕ್ಷದ ಕೇರಳ ರಾಜ್ಯ ಸಮಿತಿಯ ಸೆಕ್ರೆಟರಿಯೇಟ್‌ನಲ್ಲಿ ಕೇಂದ್ರ ಸರ್ಕಾರದ ಈ ಕ್ರಮವನ್ನು ತೀವ್ರವಾಗಿ ವಿರೋಧಿಸುವ ನಿರ್ಣಯವನ್ನು ಅಂಗೀಕರಿಸಲಾಯಿತು(107:12.01.58). ಆಡಳಿತ ಪಕ್ಷದ ಹಿತಾಸಕ್ತಿಗಾಗಿ ಸಾಂವಿಧಾನಿಕ ನಿಬಂಧನೆಗಳನ್ನು ಮತ್ತು ಅಧಿಕಾರವನ್ನು ಕೇಂದ್ರ ಸರ್ಕಾರ ದುರ್ಬಳಕೆ ಮಾಡುತ್ತಿದೆ ಎನ್ನುವುದನ್ನು ಸೆಕ್ರೆಟರಿಯೇಟ್ ಈ ನಿರ್ಣಯದಲ್ಲಿ ವಿವರಿಸಲಾಗಿತ್ತು. ಕಮ್ಯುನಿಸ್ಟ್ ಸರ್ಕಾರಕ್ಕೆ ವಿರುದ್ಧವಾದ ರಾಜಕೀಯ ತಾರತಮ್ಯದ ಸ್ಪಷ್ಟ ನಿದರ್ಶನವಾಗಿಯೂ ಇದನ್ನು ವ್ಯಾಖ್ಯಾನಿಸಲಾಯಿತು(48:p32).

### ವಿ.ಕೆ. ಕೃಷ್ಣ ಮೆನನ್ ಅವರ ಮೌಲ್ಯಮಾಪನ ಮತ್ತು ನೆಹರೂ ಅವರ ಅಭಿಪ್ರಾಯಗಳು

ಕೇಂದ್ರ ಸಚಿವ ವಿ.ಕೆ.ಕೃಷ್ಣ ಮೆನನ್ ಅವರು ಸಾಮಾನ್ಯವಾಗಿ ಎಡ ಚಳುವಳಿಗಳ ಬಗ್ಗೆ ಸಹಾನುಭೂತಿ ಹೊಂದಿರುತ್ತಿದ್ದರು. ಅನಿರೀಕ್ಷಿತವಾಗಿ ಅವರು ಕೊಚ್ಚಿಗೆ ಭೇಟಿ ನೀಡುವಂಥ ಸಂದರ್ಭ ಒದಗಿ ಬಂದಾಗ, ಕೇರಳದ ಕಾನೂನು ಮತ್ತು ಸುವ್ಯವಸ್ಥೆ ಬಗ್ಗೆ ಒಂದು ವರದಿಯನ್ನೂ ನೀಡಿದರು. ಮೇಲಿನಿಂದ ನೋಡುವಾಗ ಕಾಣದೇ ಇರುವಂಥ ದುರ್ಗುಣಗಳು ಬೆಳೆಯುತ್ತಿದ್ದು, ಪರಿಸ್ಥಿತಿಯು ಹದಗೆಡುವ ಸಾಧ್ಯತೆಯಿರುವ ಬಗ್ಗೆ ಅವರು ಅರಿತುಕೊಂಡರು(127:p57). ಸ್ಥಳೀಯ ಕಾಂಗ್ರೆಸ್ ನಾಯಕರ ನಿರಂತರ ದೂರುಗಳಿಗಿಂತಲೂ ರಾಜ್ಯಪಾಲರ ವರದಿಗಿಂತಲೂ ಕೃಷ್ಣ ಮೆನನ್‌ರವರ ಮೌಲ್ಯಮಾಪನದಿಂದಾಗಿ ನೆಹರೂ ಹೆಚ್ಚು ಪ್ರಭಾವಿತರಾದರು. ಹೀಗೆ ಹೊಸ ವರ್ಷದಲ್ಲಿ (1958) ಪ್ರಧಾನ ಮಂತ್ರಿ ನೆಹರೂ, ಕೇರಳದ ಇಎಂಎಸ್ ಸರಕಾರದ ಬಗ್ಗೆ ಮೊದಲಿಗಿಂತ ಹೆಚ್ಚು ಟೀಕಿಸಲು ಪ್ರಾರಂಭಿಸಿದರು. ಕೇರಳ ಶಿಕ್ಷಣ ಮಸೂದೆಯನ್ನು ಸುಪ್ರೀಮ್ ಕೋರ್ಟ್‌ನ ಪರಿಗಣನೆಗೆ ಕಳುಹಿಸಿದ ರಾಷ್ಟ್ರಪತಿಗಳಿಗೆ ಕಮ್ಯುನಿಸ್ಟ್ ಪಕ್ಷ ಟೀಕಿಸಿದ್ದಕ್ಕಾಗಿ, ನೆಹರೂ ಮುಖ್ಯಮಂತ್ರಿಗೆ ಛೀಮಾರಿ ಹಾಕಿದರು.

ತರುವಾಯ ಪ್ರಧಾನಮಂತ್ರಿಯವರು ಕೇರಳದಲ್ಲಿ ಪ್ರತಿಪಕ್ಷಗಳ ನಡೆಸುತ್ತಿರುವ ಹಿಂಸಾತ್ಮಕ ಪ್ರತಿಭಟನೆಯನ್ನೂ ಖಂಡಿಸಿದರು. ಆದರೆ ಕೇರಳದಲ್ಲಿ ಉದ್ವಿಗ್ನತೆ ಮತ್ತು ಸಂಘರ್ಷಕ್ಕೆ ಕಮ್ಯುನಿಸ್ಟ್ ಪಕ್ಷದ ಕಾರ್ಯವಿಧಾನ ಮತ್ತು ಕಾರ್ಯ ಚಟುವಟಿಕೆಗಳೇ ಮುಖ್ಯ ಕಾರಣ ಎಂದು ಅವರು ಪ್ರತಿಕ್ರಿಯಿಸಿದರು. ಕೇರಳದಲ್ಲಿ ಕಮ್ಯುನಿಸ್ಟ್ ಪ್ರಾಬಲ್ಯವನ್ನು ಸ್ಥಾಪಿಸುವ ಹೋರಾಟದಲ್ಲಿ,ಇಲ್ಲಿನ ಕಮ್ಯುನಿಸ್ಟರು ಲೆನಿನ್ ರೂಪಿಸಿದ ತಂತ್ರವಾದ 'ಬೂರ್ಜ್ವಾ ಪ್ರಜಾಪ್ರಭುತ್ವ'ವನ್ನು ಅನುಸರಿಸುತ್ತಿದ್ದಾರೆ ಎಂದು ಅವರು ನಂಬಿದ್ದರು. ಇಲ್ಲಿ ಕಮ್ಯುನಿಸಂ ಅಸ್ತಿತ್ವದಲ್ಲಿರಲು ನಾನು ಬಯಸುವುದಿಲ್ಲ(127:p57).

ದೇವಿಕುಳಂ ಉಪಚುನಾವಣೆಯಲ್ಲಿ ಕಮ್ಯುನಿಸ್ಟರ ಗೆಲುವು ಒಂದು ಹೊಸ ಜನಾದೇಶ ಎಂದು ಮುಖ್ಯಮಂತ್ರಿ ನಂಬೂದಿರಿಪಾಡ್ ಹೇಳಿಕೊಂಡರು. ಪ್ರತಿಪಕ್ಷಗಳು ಮತ್ತು ಪ್ರತಿಗಾಮಿಗಳು ಹಿಂಸಾತ್ಮಕ ಹೋರಾಟವನ್ನು ಹೀಗೆಯೇ ಮುಂದುವರೆಸಿದರೆ, ಅದು ಜನರನ್ನು ವಿಭಜಿಸುವುದಲ್ಲದೆ, ಚೀನಾದಲ್ಲಿ ನಡೆದಂಥ ಒಂದು ಅಂತರ್ಯುದ್ಧಕ್ಕೆ ಕಾರಣವಾಗಲಿದೆಯೆಂದು ಅವರು ಅಭಿಪ್ರಾಯಪಟ್ಟರು. ಕಾಂಗ್ರೆಸ್‌ಗೆ ಚಿಯಾಂಗ್ ಕೈ–ಶೇಕ್‌ನ ಗತಿ ಬಂದುಬಿಡಬಹುದು ಎಂದು ನಂಬೂದಿರಿಪಾಡ್ ಹೇಳಿದರು(86:16.08.58p1075). ಈ ಭಾಷಣದ ಬಗ್ಗೆ ನೆಹರೂ ಇಎಂಎಸ್‌ರಿಂದ ವಿವರಣೆ ಕೇಳಿದ್ದರು. ಕೇರಳದ ಮುಖ್ಯಮಂತ್ರಿಗಳ 'ಅಂತರ್ಯುದ್ಧ ಭಾಷಣ'ಕ್ಕೆ ದೊಡ್ಡಮಟ್ಟದ ಪ್ರಚಾರ ನೀಡಿದ ವಿರೋಧಪಕ್ಷವು, ರಾಜ್ಯದ ಒಳಗೂ ಹೊರಗೂ ಅದನ್ನೊಂದು ವಿವಾದಾತ್ಮಕ ವಿಷಯವನ್ನಾಗಿ ಮಾಡಿ ಬೆಳೆಸಿಕೊಂಡು ಬಂದರು. ಸಂಸದೀಯ ವ್ಯವಸ್ಥೆಗಾಗಿ ಮೊದಲು ಕಮ್ಯುನಿಸ್ಟರ ಧೋರಣೆಯ ಬಗ್ಗೆ ಇದ್ದಂಥ ಒಳ್ಳೆಯ ಮನೋಭಾವನೆಯನ್ನು ಕೈಬಿಟ್ಟ ನೆಹರೂ, ಕೇರಳ ಸರ್ಕಾರವನ್ನು ಸಾರ್ವಜನಿಕವಾಗಿ ತಿರಸ್ಕರಿಸಿ, ಟೀಕಿಸತೊಡಗಿದರು(127:p59). ವಿದೇಶಿ ಪತ್ರಕರ್ತರೊಂದಿಗಿನ ಸಂದರ್ಶನದಲ್ಲಿ ಅವರು ಕಮ್ಯುನಿಸ್ಟ್ ಸರ್ಕಾರದ ದಿನಗಳು ಎಣಿಸತೊಡಗಿದೆ ಎಂದೂ ಅವರು ಸೂಚಿಸಿದರು.*(127:)

ಕಮ್ಯುನಿಸ್ಟ್ ದೇಶಗಳ ಬೆಳವಣಿಗೆಗಳು ನೆಹರೂವಿನ ಕೇರಳದ ಬಗೆಗಿನ ದೃಷ್ಟಿಕೋನದಲ್ಲಿ ಸಂಗತವಾಗಿತ್ತು. ಟಿಟೊವಿನೊಂದಿಗೆ ಸೋವಿಯತ್ ಧೋರಣೆಯು ಅವರನ್ನು ಅಸಮಾಧಾನಗೊಳಿಸಿತ್ತು. ಹಂಗೇರಿಯಲ್ಲಿ ಇಮ್ರೆನಾಗಿಯ ಹತ್ಯೆಯ ಬಗ್ಗೆ

---

* Nehru said : 'So far as the near future is concerned, the Communists in my opinion, will be lucky if they manage to hang on to Kerala, let alone expand their hold anywhere else.' Interview in Daily Telegraph (London), 10th May 1958. 'None of us can see very far into the future, but in my opinion the Communists have to have a great deal of luck to be able to stay in power in Kerala much longer.' Nehru to Ralph Oppenheim, reported in Politiken (Copenhagen), 16th June 1958. Quoted by S.Gopal.

ನೆಹರೂ ಅವರ ಪ್ರತಿಕ್ರಿಯೆಯು ತೀವ್ರವಾಗಿತ್ತು.* ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾದ ಪ್ರಥಮನಿಷ್ಠೆ ಸೋವಿಯತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷದ ಕಡೆಗಿದೆ, ಎಂದು ಅವರು ಆರೋಪಿಸಿದರು. 'ನೀತಿಗಳಿಗೆ ವಿರುದ್ಧವಾಗಿ, ಕಮ್ಯುನಿಸ್ಟ್ ಪಕ್ಷದ ಪ್ರಾಮಾಣಿಕತೆಯಲ್ಲಿ ವ್ಯಾಪಕ ಅಪನಂಬಿಕೆ ಇತ್ತು.' 'ಭಾರತಕ್ಕೆ ಮೂಲಭೂತ ಸಾಮರ್ಥ್ಯವಿದ್ದರೂ ಅದು ಪ್ರತಿಗಾಮಿ ಶಕ್ತಿಗಳ ಕಾರ್ಯ ಚಟುವಟಿಕೆಗಳಿಂದಾಗಿ, ಪ್ರಗತಿ ಅಷ್ಟು ವೇಗವಾಗಿ ಸಾಗುರುತ್ತಿರಲಿಲ್ಲ. ಈ ಸಂದರ್ಭದಲ್ಲಿ, "ಕಮ್ಯುನಿಸ್ಟ್ ಪಕ್ಷವು ತನ್ನ ಭರವಸೆಗಳನ್ನು ನಿರ್ಲಕ್ಷಿಸುವ ಮೂಲಕ ಪ್ರತಿಗಾಮಿ ಪಾತ್ರವನ್ನು ನಿರ್ವಹಿಸುತ್ತಿದೆ" ಎಂದು ಸಹ ನೆಹರೂ ಹೇಳಿದರು. ಪಕ್ಷವು ಬಾಹ್ಯಶಕ್ತಿಯ ಆದೇಶದಂತೆ ನಡೆದುಕೊಳ್ಳುತ್ತಿದೆ ಎಂಬ ಭಯ ಬೇರೂರಿದೆ. ಯುಗೊಸ್ಲಾವಿಯಾದ ವಿಚಾರದಲ್ಲಿ ಕಮ್ಯುನಿಸ್ಟ್ ಪಕ್ಷದ ನಿಲುವಿನಲ್ಲಾದ ಬದಲಾವಣೆಯು ಈ ಭಯವನ್ನು ಬಲಪಡಿಸುವಂತಿತ್ತು.

1958ರ ಪೂರ್ವರ್ಧದಲ್ಲಿ ಸೋವಿಯತ್-ಚೀನೀ ನೀತಿಗಳಲ್ಲಿ ಹೆಚ್ಚಿದ ಕಠಿಣತೆ, ವಿಶೇಷವಾಗಿ ಹಂಗೇರಿ ಮತ್ತು ಯುಗೊಸ್ಲಾವಿಯಾಗಳಲ್ಲಿ, ಸೋವಿಯತ್ ರಷ್ಯಾದ ಹಸ್ತಕ್ಷೇಪ,ಮುಂತಾದವು ಕಮ್ಯುನಿಸ್ಟರ ಬಗೆಗಿನ ನೆಹರೂ ಅವರ ಮನೋಭಾವವನ್ನು ಗಮನಾರ್ಹವಾಗಿ ಪ್ರಭಾವಿಸಿತು. ಕಮ್ಯುನಿಸ್ಟ್ ತಂತ್ರಗಳ ಮತ್ತು ಅವರ ಕಾರ್ಯಶೈಲಿಗಳ ಬಗ್ಗೆನೆಹರೂ ಕೂಡ ತಮ್ಮ ನಂಬಿಕೆ ಕಳೆದುಕೊಂಡರು. ಮುಖ್ಯಮಂತ್ರಿ ನಂಬೂದಿರಿಪಾಡ್‌ರವರೊಂದಿಗಿನ ಆರೋಗ್ಯಕರ ಸಂವಹನದ ಹೊರತಾಗಿಯೂ, ನೆಹರೂ ತಮ್ಮಹಿಂದಿನ ಲೆಕ್ಕಾಚಾರವನ್ನು ಪರಿಗಣಿಸಿರಲಿಲ್ಲ. ಮಾತ್ರವಲ್ಲ, ಮುಖ್ಯಮಂತ್ರಿಯ ವಿರುದ್ಧ ಒಂದು ದೋಷಾರೋಪ ಪಟ್ಟಿಯನ್ನೂ ತಂದರು. ಮತ್ತು ವಿರೋಧಪಕ್ಷಗಳು, ಜಾತಿ/ಸಮುದಾಯ/ಕೋಮು ಸಂಘಟನೆಗಳು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಎತ್ತಿದ ದೂರುಗಳ ಆಧಾರದ ಮೇಲೆ ರಾಜ್ಯದಲ್ಲಿ ಹಿಂಸಾತ್ಮಕ ಮತ್ತು ಅನಪೇಕ್ಷಿತವಾದ ಪರಿಸ್ಥಿತಿ ಉದ್ಭವಿಸಿರುವುದಾಗಿ ನೆಹರೂ ನಂಬಿದ್ದರು. ರಾಜ್ಯ ಸರ್ಕಾರವು ಕಮ್ಯುನಿಸ್ಟರಿಗೆ ಆದ್ಯತೆ ನೀಡುವ ಮೂಲಕ ಪರಿಸ್ಥಿತಿಯನ್ನು ಉಲ್ಬಣಗೊಳಿಸುತ್ತಿದೆ, ಎಂದು ಅವರು ಭಾವಿಸಿದರು. ವಾಸ್ತವವಾಗಿ ಕಮ್ಯುನಿಸ್ಟ್ ಸರ್ಕಾರ ಮೂಲತಃ ಕಮ್ಯುನಿಸ್ಟರ ಬಗ್ಗೆ ಯಾವುದೇ ವಿಶೇಷ

---

* Nehru said: 'I am afraid that it will be very difficult for the Soviet Government to outlive this black mark... Many people who believed in the bonafides of the Soviet Union for peace rather doubt them now. Because we restrain ourselves in our utterances, it should not be thought that we do not feel strongly on these subjects. All our moral sense has been deeply shocked.' (127:p60). This execution had almost put an end to the idea of real peace for a generation; and Nehru turned away mentally not only from the Soviet Union, which he held responsible for this cold-blooded act, but generally from Communist Parties, including that of India, which supported the Soviet Government and their policies in Hungary and towards Yugoslavia

ಪ್ರೀತಿಯನ್ನು ತೋರಿಸಿರಲಿಲ್ಲ.* ಕಮ್ಯುನಿಸ್ಟರು ಮತ್ತು ಕಮ್ಯುನಿಸ್ಟೇತರರ ನಡುವೆ ಸ್ಪಷ್ಟವಾದ ತಾರತಮ್ಯ ಇರಲಿಲ್ಲ.** ಜೈಲು ಶಿಕ್ಷೆ ಅನುಭವಿಸುತ್ತಿರುವ ಕಮ್ಯುನಿಸ್ಟರನ್ನು, ಅವಧಿ ಮುಗಿಯುವ ಮೊದಲೇ ಅವರನ್ನು ಬಿಡುಗಡೆ ಮಾಡಲಾಯಿತೆಂದೂ ಬೇರೆಯವರ ಹೆಸರಿನಲ್ಲಿರುವ ಪ್ರಕರಣಗಳನ್ನು ವಾಪಸ್ ಪಡೆಯಲಾಯಿತೆಂದೂ ಎನ್ನುವುದು ಅವರ ಮೇಲಿನ ಮತ್ತೊಂದು ಪ್ರಮುಖ ಆರೋಪ. ರಾಜಕೀಯ ಕೈದಿಗಳ ಬಿಡುಗಡೆ ಮತ್ತು ರಾಜಕೀಯ ಪ್ರಕರಣಗಳನ್ನು ಹಿಂತೆಗೆದುಕೊಳ್ಳುವುದೆಲ್ಲವೂ ಆ ಸಮಯಗಳಲ್ಲಿ ಕಾಂಗ್ರೆಸ್ ಆಡಳಿತವಿರುವ ಅನೇಕ ರಾಜ್ಯಗಳಲ್ಲಿ, ವಾಸ್ತವವಾಗಿ ಹೀಗೆ ಮಾಡುವುದು ರೂಢಿಯಲ್ಲಿದ್ದ ಸಾಮಾನ್ಯ ವಿಷಯವಾಗಿತ್ತು.*** ಇನ್ನುಳಿದ ಕೆಲವು ಆರೋಪಗಳನ್ನು ಈ ಕೆಳಗೆ ನೀಡಲಾಗಿವೆ.

1) ಒಬ್ಬ ಕಮ್ಯುನಿಸ್ಟ್‌ನ ವಿರುದ್ಧದ ಪ್ರಕರಣವನ್ನು ನಿರಾಕರಿಸಲು ಸಮ್ಮತಿಸದ ಮ್ಯಾಜಿಸ್ಟ್ರೇಟ್‌ರ ಅಧಿಕಾರವನ್ನು ಸರ್ಕಾರ ಮೊಟಕುಗೊಳಿಸಿದೆ.
2) ಕಮ್ಯುನಿಸ್ಟರ ಬಗ್ಗೆ ಹಗೆತನವಿರುವ ಕೆಲವು ಪೊಲೀಸ್ ಅಧಿಕಾರಿಗಳನ್ನು ಸರ್ಕಾರ ಅಮಾನತು ಮಾಡಿದೆ.

ವಿರೋಧ ಪಕ್ಷಗಳು, ಕಮ್ಯುನಿಸ್ಟ್ ವಿರುದ್ಧ ಸಂಘಟನೆಗಳು, ಕೇರಳದಲ್ಲಿರುವ ಅವುಗಳ ಮಾಧ್ಯಮಗಳು ಆರೋಪಗಳನ್ನು ಮಾಡಿ, ಅವುಗಳನ್ನು ಪ್ರಚಾರ ಮಾಡುತ್ತಿರುವುದರಿಂದ,ಈ ಆರೋಪಗಳೆಲ್ಲವೂ ಈ ಹಿಂದೆಯೇ ರಾಜ್ಯದ ಗಾಳಿಯಲ್ಲಿ ತೇಲಾಡುತ್ತಿದ್ದವು. ನೆಹರೂ ಈ ರೀತಿ ಅಭಿಪ್ರಾಯಪಟ್ಟರು: 'ರಾಜಕೀಯ ಪಕ್ಷಗಳು ಕೆಲವೊಮ್ಮೆ ಆಗಾಗ್ಗೆ ಸಂಘರ್ಷದಲ್ಲಿ ತೊಡಗಿಕೊಂಡಿರುತ್ತವೆ. ಆದರೆ ಕೇರಳದ ಪರಿಸ್ಥಿತಿ ಕೆಟ್ಟದಾಗಿದೆ. ವಿರೋಧಪಕ್ಷಗಳು ಭಾಗಶಃ ಸರಕಾರವನ್ನು ದೂಷಿಸಿದರೂ ಅಂತಿಮ ಹೊಣೆಗಾರಿಕೆಯಿಂದ ಸರ್ಕಾರ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ' ಎಂದು ಹೇಳಿದರು(127:p63).

ಕಮ್ಯುನಿಸ್ಟ್ ಪಕ್ಷವನ್ನು ಟೀಕಿಸುವವರಿಗೆ ಯಾವುದೇ ರಕ್ಷಣೆ ಇಲ್ಲ ಎನ್ನುವ

---

* ನ್ಯಾಯಮೂರ್ತಿ ವಿ.ಆರ್. ಕೃಷ್ಣಯ್ಯರ್ ಅವರೊಂದಿಗೆ 23 ಮೇ 2010ರಂದು ಸಂದರ್ಶನ.

** ಶ್ರೀಮತಿ ಕೆ.ಆರ್. ಗೌರಿಯಮ್ಮರೊಂದಿಗೆ 8, 2011ರಂದು ಸಂದರ್ಶನ. ಮೂಲ ಜನವಿಭಾಗದ ವಿಷಯಗಳಲ್ಲಿ ಆದ್ಯತೆಯ ವಿಧಾನವಿತ್ತು. ಕಮ್ಯುನಿಸ್ಟ್ ಸರ್ಕಾರವು ದಬ್ಬಾಳಿಕೆ ಮತ್ತು ಶೋಷಣೆ ನಡೆಸುತ್ತಿದ್ದ ಭೂಮಾಲೀಕರ ಬಗ್ಗೆ ಕಠಿಣ ವಿಧಾನವನ್ನು ಹೊಂದಿತ್ತು. (ಶ್ರೀ. ಜೋಸೆಫ್ ಪುಲಿಕುನ್ನೆಲ್ ಅವರೊಂದಿಗೆ ಜನವರಿ 2010 25ರಂದು ಓಶಾನಮೌಂಟ್ ನಲ್ಲಿ ಸಂದರ್ಶನ ನಡೆಸಲಾಗಿತ್ತು.

*** The inauguration of the newly formed state of Andhra, in the year 1954 was marked by the govt. of Andhra by the total clearance of every jail in Andhra. In the former state of Travancore-Cochin, the then Chief Minister Sri Pattom Thani Pillai ordered the release of prisoners convicted in the group of cases known as Punnapra Vayalar cases . Travancore Cochin Chief Minister Panampilly also withdrawn the cases in connection with Tamil Nadu – Travancore agitation of 1955.100:p8-17),102:09.05.57

ವಾತಾವರಣ ಕೇರಳದಲ್ಲಿ ಕಮ್ಯುನಿಸ್ಟ್ ಸರ್ಕಾರ ನಿರ್ಮಾಣ ಮಾಡಿದೆ ಎಂದು ಪ್ರಧಾನಿ ಅಭಿಪ್ರಾಯಪಟ್ಟರು. ಎಲ್ಲಾ ಪಕ್ಷಗಳು ಮತ್ತು ಗುಂಪುಗಳೊಂದಿಗಿನ ಸರ್ಕಾರದ ಕಾರ್ಯವಿಧಾನವು ನಿಷ್ಪಕ್ಷಪಾತವಾಗಿಲ್ಲ ಎನ್ನುವ ಧೋರಣೆಯನ್ನು ಅವರು ಹೊಂದಿದ್ದರು(137:p22). ಕಾಂಗ್ರೆಸ್ ಹೈಕಮಾಂಡ್‌ನ ಕೆಲವು ಹಿರಿಯ ನಾಯಕರ ಬೆಂಬಲದೊಂದಿಗೆ ಕೇರಳದ ಪ್ರಮುಖ ವಿರೋಧ ಪಕ್ಷವಾದ ಕಾಂಗ್ರೆಸ್ಸಿನ ಅಸಹಿಷ್ಣುತೆಯ ಧೋರಣೆ, ನಿರಂತರ ಆಂದೋಲನ, ಕಟುವಾದ ವಾಕ್ಚಾತುರ್ಯ ಮುಂತಾದವುಗಳ್ಯಾವುವು ನೆಹರೂರವರನ್ನು ಸ್ವಲ್ಪವೂ ಅಸಮಾಧಾನಗೊಳಿಸಿರಲಿಲ್ಲ. ಅಭದ್ರತೆಯ ಕೂಗು ಅವರನ್ನು ಪ್ರಭಾವಿಸಿತು.*ಆಲೋಚನೆಗಳಲ್ಲಿ, ಮಾತುಗಳಲ್ಲಿ ಮತ್ತು ನಡೆಸುವ ಕಾರ್ಯಗಳಲ್ಲಿ, ಕಮ್ಯುನಿಸ್ಟರು ಉದ್ದೇಶಪೂರ್ವಕವಾಗಿ ಹಿಂಸೆಯನ್ನು ಉತ್ತೇಜಿಸುತ್ತಿದ್ದಾರೆ ಎಂದು ಅವರು ನಂಬಿದರು(115:27.12.58). ಅದೇ ಸಮಯದಲ್ಲಿ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ನೆಹರೂ ಅವರ ಟೀಕೆಗಳು ಸೌಮ್ಯ ಮತ್ತು ಜಾಗರೂಕತೆಯಿಂದ ಕೂಡಿದ್ದವು. ಕೇಂದ್ರ ಸರ್ಕಾರದ ಹಸ್ತಕ್ಷೇಪದ ಎನ್ನುವ ವಿಚಾರ ಅವರಿಗೆ ಇಷ್ಟವಾಗದೆ, ಪೂರ್ಣವಾಗಿ ತಿರಸ್ಕರಿಸಿದರು(84:28.07.58). ಅವರು ಹೇಳಿದರು: "ಕೇವಲ ಪೋಲಿಸ್ ಫೈರಿಂಗ್ ಘಟನೆಯಂತಹ ವಿಚಾರಗಳನ್ನಿಟ್ಟುಕೊಂಡು ಹಸ್ತಕ್ಷೇಪವನ್ನು ಮಾಡುವುದು ಸಮರ್ಥನೀಯವಲ್ಲ(109:28.07.58).

ಆದರೆ ಈ ಪರಿಸ್ಥಿತಿ ಹೆಚ್ಚು ಕಾಲ ಉಳಿಯಲಿಲ್ಲ. ಆಗಸ್ಟ್ 1958, 7ರಂದು ದೆಹಲಿಯಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ಕೇರಳ ಸರ್ಕಾರವನ್ನು ಪ್ರಧಾನಿ ನೆಹರೂ ಅವರು ಮೊದಲ ಬಾರಿಗೆ ಸಾರ್ವಜನಿಕವಾಗಿ ಟೀಕಿಸುತ್ತಾ ಮಾತನಾಡಿದರು. ಆರೋಪಗಳಿಗೆ ರಾಜ್ಯ ಸರ್ಕಾರ ನೀಡಿದ ಪ್ರತಿಕ್ರಿಯೆಯಿಂದ ಅವರು ತೃಪ್ತರಾಗಿರಲಿಲ್ಲ(50:08.08.58). ಜನರಲ್ಲಿ ಭಯ ಭೀತಿಗಳನ್ನು ಸೃಷ್ಟಿಸಿದ್ದಕ್ಕಾಗಿ, ಅವರು ಸರ್ಕಾರವನ್ನು ದೂಷಿಸಿದರು. ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ಸೇನೆಗಳಾದ ಕ್ರಿಸ್ಟೋಫರ್ ಮೂವ್ಮೆಂಟ್, ಶಾಂತಿಸೇನೆ ಮತ್ತು ಕುರುವಡಿ/ಕೋಲುಸೇನೆ ಮುಂತಾದ ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ಸೇನೆಗಳ ಚಟುವಟಿಕೆಗಳನ್ನು ಗಣನೆಗೆ ತೆಗೆದುಕೊಳ್ಳದೆ, ಅನುಕೂಲಕರ ರೀತಿಯಲ್ಲಿ ನಿರ್ಲಕ್ಷಿಸಿದರು. ಆಗಿನ ಕಾಂಗ್ರೆಸ್ ಅಧ್ಯಕ್ಷ ಯು.ಎನ್. ಧೇಬಾರ್ ಕೇರಳದ ವಿವಿಧೆಡೆ ಪ್ರವಾಸ ಮಾಡಿದ್ದಲ್ಲದೆ, ರಾಜ್ಯದ ಆಂತರಿಕ ರಾಜಕೀಯ ಪರಿಸ್ಥಿತಿಯ ಕುರಿತು ಸ್ಥಳೀಯ ಕಾಂಗ್ರೆಸ್ ನಾಯಕರು ಮತ್ತು ಪಟ್ಟಭದ್ರ ಹಿತಾಸಕ್ತಿ ಗುಂಪುಗಳ ವಕ್ತಾರರೊಂದಿಗೆ ಚರ್ಚಿಸಿದರು. ಕಮ್ಯುನಿಸ್ಟ್ ಪಕ್ಷದ ಹಿತಾಸಕ್ತಿಗಳಿಗನುಗುಣವಾಗಿ, ಕೇರಳ ಸರ್ಕಾರವು ಕಾರ್ಯನಿರ್ವಹಿಸುತ್ತಿದೆ, ಎಂದೆನ್ನುವ ವಿಕೃತ ಚಿತ್ರಣಗಳ ವರದಿಯೊಂದಿಗೆ ದೆಹಲಿಗೆ ಹಿಂತಿರುಗಿದರು. ರಾಜ್ಯದಲ್ಲಿ ಅರಾಜಕತೆ ತಾಂಡವವಾಡುತ್ತಿದೆ ಎಂದು

---

* ಸಮುದಾಯ ಸಂಘಟನೆಗಳು, ಸ್ಥಾಪಿತ ಹಿತಾಸಕ್ತಿ ಗುಂಪುಗಳು, ಒತ್ತಡ ಗುಂಪುಗಳು, ವಿರೋಧಪಕ್ಷದ ನಾಯಕರು ಮತ್ತು ಹೆಚ್ಚಿನ ಮಾಧ್ಯಮಗಳು 'ಕೇರಳ ಅಸುರಕ್ಷಿತಾವಸ್ಥೆಯಲ್ಲಿದೆ ಎನ್ನುವ ಕೂಗನ್ನು ನಿರಂತರವಾಗಿ ಮೊಳಗಿಸುತ್ತಿದ್ದವು. ಅದರ ಅನುರಣನಗಳು ಸ್ವಾಭಾವಿಕವಾಗಿ, ಪಿ.ಎಸ್‌ಪಿ ಮತ್ತು ಕಾಂಗ್ರೆಸ್‌ನ ಕೇಂದ್ರ ನಾಯಕರ ಮೂಲಕ ದೆಹಲಿಯಲ್ಲೂ ಪ್ರತಿಧ್ವನಿಸಿದವು.

ಅವರು ಮೌಲ್ಯಮಾಪನ ಮಾಡಿದರು(128:p3). ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಕೇರಳದ ಕುರಿತ ಧೇಬಾರ್ ಅವರ ವರದಿಯನ್ನು ವಿವರವಾಗಿ ಚರ್ಚಿಸಿದ್ದಲ್ಲದೆ,ಕಿರು ನಿರ್ಣಯವನ್ನು ಅಂಗೀಕರಿಸಿತು. ರಾಜ್ಯದಲ್ಲಿ ಅರಾಜಕತೆ, ಹಿಂಸಾಚಾರ, ಹೋರಾಟ ಮುಂದುವರೆಸುವಲ್ಲಿಯು, ಸರ್ಕಾರ ತಾರತಮ್ಯ ಮತ್ತು ಕಾನೂನುಬಾಹಿರ ನೀತಿಯನ್ನು ಅನುಸರಿಸುತ್ತಿದೆ ಎನ್ನುವುದು ನಿರ್ಣಯದ ಕಳವಳಕಾರಿ ವಿಷಯವಾಗಿತ್ತು(128:p3). ಕೇರಳದ ವಿಷಯದಲ್ಲಿ ಒಂದು ಸಂಪೂರ್ಣ ತನಿಖೆಯಾಗಲೀ ಇತರ ಯಾವುದೇ ನಿಷ್ಪಕ್ಷಪಾತ ಮತ್ತು ಸಾಂವಿಧಾನಿಕವಾದ ಕ್ರಮವಾಗಲೀ ಅಗತ್ಯವಿರಬಹುದೆಂದು, ಕಾಂಗ್ರೆಸ್ ಸಂಸದೀಯ ಪಕ್ಷದ ಸಮಾವೇಶವನ್ನು ಉದ್ದೇಶಿಸಿ, ಪ್ರಧಾನಮಂತ್ರಿಗಳು ಸೂಚಿಸಿದರು(127:p64).

## ಮುಖ್ಯಮಂತ್ರಿಯವರ ವಿವರಣೆ

ಕೇರಳದ ಬಗ್ಗೆ ಪ್ರಧಾನಿ ನೆಹರೂ ಅವರ ಹೇಳಿಕೆಗೆ ಪ್ರತಿಕ್ರಿಯೆಯಾಗಿ ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಅವರು ಎಲ್ಲಾ ಆರೋಪಗಳನ್ನು ತಾರ್ಕಿಕವಾಗಿ ನಿರಾಕರಿಸಿ, ಜೊತೆಗೆ ಕೆಲವು ವಿವರಣೆಗಳನ್ನೂ ತಮ್ಮ ಹೇಳಿಕೆಯಲ್ಲಿ ಸೇರಿಸಿರುತ್ತಾರೆ. "ಆಗಸ್ಟ್ 7ರಂದು ದೆಹಲಿಯ ಪತ್ರಿಕಾಗೋಷ್ಠಿಯಲ್ಲಿ ಕೇರಳದ ಪರಿಸ್ಥಿತಿ ಕುರಿತು ಪ್ರಧಾನಮಂತ್ರಿ ನೆಹರೂರವರ ಹೇಳಿಕೆಯಿಂದ ನಾನು ಎದೆಗುಂದಿದ್ದೇನೆ. ಕಳೆದ ಕೆಲವು ವಾರಗಳಲ್ಲಿ ಕೇರಳದಲ್ಲಿ ಸಂಭವಿಸಿದ ಕೆಲವು ಘಟನೆಗಳು ದುರದೃಷ್ಟಕರ ಮತ್ತು ವಿಷಾಧಕರ ಸಂಗತಿಗಳಾಗಿವೆ. ಆದರೆ ಅದರಲ್ಲಿ ಪ್ರಧಾನ ಮಂತ್ರಿ ಮಾಡಿದ ಉಲ್ಲೇಖಗಳು ಉತ್ಪ್ರೇಕ್ಷಿತ ಮತ್ತು ಅರ್ಧ-ಸತ್ಯಗಳನ್ನು ಆಧರಿಸಿದ್ದು, ಅವುಗಳೆಲ್ಲವೂ ಸಂಪೂರ್ಣವಾಗಿ ಸುಳ್ಳು ವರದಿಗಳು. ಕೇರಳದಲ್ಲಿ ಪರಿಸ್ಥಿತಿ ಭೀಕರವಾಗಿದೆ ಮತ್ತು ಅದನ್ನು ದೋಷರಹಿತವಾಗಿಸಲು ಕೇಂದ್ರದ ಮಧ್ಯಸ್ಥಿಕೆ ಅಗತ್ಯ ಎಂಬ ಅನಿಸಿಕೆ ಮೂಡಿಸಲು ಮೇಲಿನ ವರದಿಗಳನ್ನು ಸಂಬಂಧಪಟ್ಟ ಪಕ್ಷಗಳು ತಾವೇ ರೂಪಿಸಿಕೊಂಡಿರುವಂಥವು.

ಕಳೆದ ಹದಿನಾರು ತಿಂಗಳಲ್ಲಿ ಕೇರಳದ ಬೆಳವಣಿಗೆಗಳನ್ನು ಪ್ರಧಾನಮಂತ್ರಿಗಳು ವಸ್ತುನಿಷ್ಠವಾಗಿ ಮತ್ತು ಎಚ್ಚರಿಕೆಯಿಂದ ಅಧ್ಯಯನ ಮಾಡುವುದಾದರೆ, ಕೇರಳದಲ್ಲಿ ಪ್ರಸ್ತುತ ಅವಸ್ಥೆಗಳ ವಿಷಾದಕರ ಸಂಗತಿಗಳಿಗೆ ಕಮ್ಯುನಿಸ್ಟ್ ಪಕ್ಷವು ಜವಾಬ್ದಾರರಲ್ಲ (ಎಂದು ನಂಬಿಸಲು ಹಲವು ಕೋನಗಳಿಂದ ಪ್ರಯತ್ನಿಸಲಾಗುತ್ತಿದೆ) ಎಂದು ಪ್ರಧಾನಿಯವರಿಗೆ ಮನದಟ್ಟಾಗುತ್ತದೆ. ಪ್ರಸ್ತುತ ಪರಿಸ್ಥಿತಿಗಳ ಜವಾಬ್ದಾರಿಯನ್ನು ಕಾಂಗ್ರೆಸ್‌ಪಕ್ಷ ಮತ್ತು ಇತರ ವಿರೋಧಪಕ್ಷಗಳಿಗೆ ಸಮರ್ಪಿಸಲಾಗಿದೆ. ಕಮ್ಯುನಿಸ್ಟ್ ಪಕ್ಷವು ಮತಪೆಟ್ಟಿಗೆಯ ಮೂಲಕ ಅಧಿಕಾರಕ್ಕೆ ಬಂದಾಗಿನಿಂದ, ಅವರು ಪಕ್ಷವನ್ನು ನ್ಯಾಯೋಚಿತವಾಗಿಯೋ ಅನ್ಯಾಯದ ಮಾರ್ಗಗಳಲ್ಲೋ ತೊಡೆದುಹಾಕಲು ಒಟ್ಟಾಗಿ ಶ್ರಮಿಸುತ್ತಿದ್ದಾರೆ(75:11.08.58p11).

## ಸಿಪಿಐ ಕೇಂದ್ರ ಸಮಿತಿಯ ವಿವರಣೆ

ಸಿಪಿಐನ ಕೇಂದ್ರ ಕಾರ್ಯಕಾರಿ ಸಮಿತಿ, ಕೇರಳವನ್ನು ಮಾತ್ರ ಪ್ರತ್ಯೇಕಿಸಿಕೊಂಡು ತನಿಖೆ ನಡೆಸುತ್ತಿರುವ ಕೇಂದ್ರ ಸರ್ಕಾರದ ವಿರುದ್ಧ ಪ್ರತಿಭಟಿಸಿದರು (84:13.08.58;40:24.08.58p8-11). ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಅವರು ಪ್ರಧಾನಿಯವರನ್ನು ಭೇಟಿಯಾಗಿ ಕೇರಳ ಸರ್ಕಾರದ ಪ್ರಕರಣವನ್ನು ಮಂಡಿಸಿದರು. ಈ ಕುರಿತು ಸಿಪಿಐ ಕೇಂದ್ರ ಸಮಿತಿಯು ನೀಡಿರುವ ಹೇಳಿಕೆಗಳ ಜೊತೆಗೆ ಈ ಕೆಳಗಿನ ವಾಸ್ತವ ಸಂಗತಿಗಳನ್ನೂ ಸೇರಿಸಲಾಗಿದೆ:

> ಕೇರಳದಲ್ಲಿ ಮೊದಲಿನಿಂದಲೂ ಕಾಂಗ್ರೆಸ್ ಪಕ್ಷವು ಕೇಂದ್ರ ಸರ್ಕಾರದ ಮಧ್ಯಪ್ರವೇಶದ ಗುರಿಯನ್ನಿಟ್ಟುಕೊಂಡೇ ಕಾರ್ಯನಿರ್ವಹಿಸುತ್ತಾ ಬಂದಿದೆ. ಮತ್ತು ಅಂತಹ ಹಸ್ತಕ್ಷೇಪವನ್ನು ಸಾಧ್ಯವಾಗಿಸಲು ಅನುಕೂಲಕರ ಪರಿಸ್ಥಿತಿಗಳನ್ನು ಸೃಷ್ಟಿಸಲು ಅದು ಯೋಜಿತ ರೂಪದಲ್ಲಿ ಸರಿಯಾಗಿಯೇ ಕಾರ್ಯನಿರ್ವಹಿಸುತ್ತಾ ಬಂದಿದೆ. ಜನರ ಮೇಲೆ ಪ್ರಭಾವ ಬೀರಿ, ದಿಕ್ಕು ತಪ್ಪಿಸುವ ಮೂಲಕ ಇದನ್ನು ತ್ವರಿತವಾಗಿ ಮಾಡಬಹುದು ಎಂಬುದು ಕಾಂಗ್ರೆಸ್ ಲೆಕ್ಕಾಚಾರ. ಆದರೆ ಕೇರಳ ಸರ್ಕಾರದ ನೀತಿಗಳು ಮತ್ತು ಕಾರ್ಯಕ್ರಮಗಳು, ಸರ್ಕಾರ ಮತ್ತು ಕಮ್ಯುನಿಸ್ಟ್ ಪಕ್ಷ ಜನಬೆಂಬಲ ಗಳಿಸುತ್ತಿರುವುದನ್ನು ಅದು ಕಾಣಬೇಕಾಯಿತು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿರೋಧ ಪಕ್ಷಗಳು ಪಾಲಿಸಬೇಕಾದ ಮಾನದಂಡಗಳೆಲ್ಲವನ್ನೂ ಭ್ರಮನಿರಸನಗೊಂಡ ಕಾಂಗ್ರೆಸ್ ಸಂಪೂರ್ಣವಾಗಿ ಗಾಳಿಗೆ ತೂರಿಬಿಟ್ಟಿದೆ.
>
> ಕೇಂದ್ರದಲ್ಲಿ ಅಧಿಕಾರ ಹೊಂದಿದ್ದೇವೆ ಎನ್ನುವ ಸಂಗತಿಯಿಂದಾಗಿ, ಕಾಂಗ್ರೆಸ್ ಮೊದಲಿನಿಂದಲೂ ಅನ್ಯಾಯದ ವಿಧಾನ ಮತ್ತು ತಂತ್ರಗಳನ್ನು ಅಳವಡಿಸಿಕೊಂಡೇ ಕಾರ್ಯನಿರ್ವಹಿಸುತ್ತಾ ಬಂದಿತು. ರಾಜ್ಯ ಕಾಂಗ್ರೆಸ್ ನಾಯಕರ ಇಂತಹ ಹೇಯ ಕೃತ್ಯಗಳನ್ನು ತಡೆಯುವುದರ ಬದಲು, ಕಾಂಗ್ರೆಸ್‌ನ ಕೇಂದ್ರ ನಾಯಕತ್ವ ಸಹ ಇವುಗಳಿಗೆ ಪ್ರೋತ್ಸಾಹಿಸುವ ಕಾರ್ಯವನ್ನೇ ಮಾಡಿತು.
>
> ರಾಜ್ಯ ಕಾಂಗ್ರೆಸ್‌ನ ಇಂತಹ ಅಸಭ್ಯ ಕ್ರಮಗಳ ವಿರುದ್ಧ ಕಾಂಗ್ರೆಸ್ ಪಕ್ಷದ ನಾಯಕರಾಗಿ ಜವಾಹರಲಾಲ್ ನೆಹರೂರವರು ಒಂದು ಮಾತನ್ನೂ ಹೇಳಲಿಲ್ಲ. ಅವರ ಇತ್ತೀಚಿನ ಹೇಳಿಕೆಗಳು, ಇಂತಹ ಆಕ್ಷೇಪಾರ್ಹ ಆಚರಣೆಗಳಿಗೆ ಕಾಂಗ್ರೆಸ್ ಬೆಂಬಲಿಸುತ್ತಿದೆ ಎಂದು ಅರ್ಥೈಸಬಹುದಾಗಿದೆ.
>
> ಏಕಪಕ್ಷೀಯ ವ್ಯಾಖ್ಯಾನದ ಆಧಾರದ ಮೇಲೆ, ಪಂಡಿತ್ ನೆಹರೂ ಇಂತಹ ಹೇಳಿಕೆಗಳನ್ನು ನೀಡುವಲ್ಲಿ ಪಕ್ಷಪಾತದ ಧೋರಣೆಯನ್ನು ಹೊಂದಿದ್ದಾರೆಂದೂ ಈ ನಿಟ್ಟಿನಲ್ಲಿ ತಾನು ಪ್ರಧಾನಿಯಾಗಿ ಅಲ್ಲ, ಬದಲಿಗೆ ಕಾಂಗ್ರೆಸ್ ಪಕ್ಷದ ನಾಯಕನಾಗಿ ಈ ವಿಚಾರದಲ್ಲಿ ಅವರು ಕಾರ್ಯನಿರ್ವಹಿಸುತ್ತಿದ್ದಾರೆಂದೂ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಕಾರ್ಯನಿರ್ವಹಣಾ ಸಮಿತಿಯು ನಿಸ್ಸಂದಿಗ್ಧವಾಗಿ ಹೇಳುತ್ತದೆ(40:24.08.58p8-11).

ಕೇರಳಕ್ಕೆ ಭೇಟಿ ನೀಡಿದ ನಂತರ, ವಿ.ಕೆ. ಕೃಷ್ಣ ಮೆನನ್ ಸಿದ್ಧಪಡಿಸಿದ ವರದಿಯು ನೆಹರೂರವರ ಮನೋಭಾವವನ್ನು ದೃಢಪಡಿಸುವಂತಿತ್ತು. ಕೇರಳ ಸರ್ಕಾರ ಈ ಭೇಟಿಯನ್ನು 'ನಡೆಸಲಾದ ಪ್ರವಾಸ' (Conducted Tour) ಎಂದು ಹೇಯವಾಗಿ ಬಣ್ಣಿಸಿತ್ತು. ಪಠ್ಯಪುಸ್ತಕ ವಿವಾದಗಳು, ವರಂತರಪಿಳ್ಳಿ ಹತ್ಯೆಗಳು, ಚಂದನತೋಪು ಗುಂಡಿನ ದಾಳಿ ಮುಂತಾದ ನಡೆದ ಬೆಳವಣಿಗೆಗಳುನೆಹರೂರವರ ದೃಷ್ಟಿಕೋನವನ್ನು ಬಲಪಡಿಸಿತು. ವಿರೋಧ ಪಕ್ಷದ ಕಾರ್ಯಕರ್ತರು ಮತ್ತು ಕಮ್ಯುನಿಸ್ಟ್ ವಿರೋಧಿ ಸುದ್ದಿಪತ್ರಿಕೆಗಳಿಂದ ಧೇಬಾರ್ ಸಂಗ್ರಹಿಸಿದ ಮಾಹಿತಿಗಳು ಪ್ರಧಾನಿಯವರ ಅಭಿಪ್ರಾಯವನ್ನು ಬಲಪಡಿಸಿತು(40:14.09.58). ಕೇರಳದ ಜನರ ಗಣನೀಯವಾದ ಒಂದು ವರ್ಗ ರಾಜಕೀಯ ಅಭದ್ರತೆ ಅನುಭವಿಸುತ್ತಿರುವುದಾಗಿ ನೆಹರೂ ಪ್ರತಿಕ್ರಿಯಿಸಿದರು. ಕೆಲವು ರಾಜಕೀಯ ಪಕ್ಷಗಳನ್ನು ಕಿರುಕುಳಕ್ಕೊಳಪಡಿಸುತ್ತಿರುವುದಾಗಿಯೂ ಉಳಿದ ಕೆಲವರಿಗೆ ರಕ್ಷಣೆ ನೀಡುತ್ತಿರುವುದಾಗಿಯೂ ಕಮ್ಯುನಿಸ್ಟ್ ಪಕ್ಷ ಮತ್ತು ಸರ್ಕಾರದ ಮೇಲೆ ಗೂಬೆ ಕೂರಿಸಲಾಯಿತು(127:). ವಿರೋಧಪಕ್ಷಕ್ಕೆ ಸೇರಿದ ರಾಜಕೀಯ ಪಕ್ಷಗಳ, ಪಟ್ಟಭದ್ರ ಹಿತಾಸಕ್ತಿಯ ಸಂಘಟನೆಗಳ ಗ್ಯಾಂಗ್ ನೇತೃತ್ವದಲ್ಲಿ ಸರ್ಕಾರದ ವಿರುದ್ಧ ನಡೆದ ಬಹು ಹಂತದ ಪ್ರತಿಭಟನೆಗಳು, ಅಪಪ್ರಚಾರಗಳ ಪ್ರಚಾರ ಆಂದೋಲನಗಳು ರಾಜ್ಯದಲ್ಲಿ ಅಶಾಂತಿಯನ್ನು ಸೃಷ್ಟಿಸಿದವು. ಅಸ್ತಿತ್ವದಲ್ಲೇ ಇಲ್ಲದ 'ಅಭದ್ರತಾವಸ್ಥೆ'ಯ ಬಗ್ಗೆ ನೆಪಮಾಡಿಕೊಂಡು, ತಾವಾಗಿಯೇ ಸೃಷ್ಟಿಸಿಕೊಂಡ ಇಲ್ಲದ ವಿಚಾರಗಳ ಬಗ್ಗೆ ಅಪಪ್ರಚಾರ ಮಾಡಿ, ಕೇಂದ್ರದ ಹಸ್ತಕ್ಷೇಪದ ಅಗತ್ಯವನ್ನು ಪೂರೈಸಲು ಅನುಕೂಲಕರ ಪರಿಸ್ಥಿತಿಯನ್ನು ಸೃಷ್ಟಿಸಿದವು.

### ಅಶೋಕ್ ಮೆಹ್ತಾ ಮತ್ತು ಕೆ.ಬಿ. ಮೇನನ್

ಲೋಕಸಭೆಯನ್ನು ಸದ್ಯಕ್ಕೆ ಮುಂದೂಡಬೇಕು ಮತ್ತು ಕೇರಳದ ಕಾನೂನು ಸುವ್ಯವಸ್ಥೆ ಹದಗೆಟ್ಟ ಆರೋಪದ ಬಗ್ಗೆ ಚರ್ಚೆ ನಡೆಸಬೇಕು ಎಂದು ಪಿಎಸ್‌ಪಿ ಮುಖಂಡ ಅಶೋಕ್ ಮೆಹ್ತಾ (ಎಂಪಿ) ಸೆಪ್ಟೆಂಬರ್ 12, 1958ರಂದು ತುರ್ತು ಮನವಿಯ ನೋಟಿಸ್ ಸಲ್ಲಿಸಿದರು(84:13.09.59). ಲೋಕಸಭಾ ಸ್ಪೀಕರ್ ಮೊದಲ ಹಂತದಲ್ಲಿ, ಈ ತುರ್ತು ಮನವಿಗೆ ಅನುಮತಿಯನ್ನು ನಿರಾಕರಿಸಿದರು. ಈ ಸಂಬಂಧ ಕೇಂದ್ರ ಗೃಹ ಸಚಿವರು ಸತ್ಯವನ್ನು ಪರಿಶೋಧಿಸಿ ದೃಢಪಡಿಸಿಕೊಳ್ಳಬೇಕು ಎಂದು ಸಲಹೆ ನೀಡಿದರು. ಮೆಹ್ತಾ ಉಲ್ಲೇಖಿಸಿದಂತೆ ಹತ್ಯೆಗಳು, ದಾಳಿಗಳು, ಜೀವ ಬೆದರಿಕೆ ಹೀಗೆ ಮುಂದುವರಿಯುವುದಾದರೆ, ಲೋಕಸಭೆಯ ಅಧಿಕಾರವನ್ನು ಚಲಾಯಿಸುವ ಮೂಲಕ ಈ ಬಗ್ಗೆ ವಿಸ್ತೃತ ಚರ್ಚೆಗೆ ಹಿಂಜರಿಯುವುದಿಲ್ಲ ಎಂದು ಸ್ಪೀಕರ್ ಸ್ಪಷ್ಟಪಡಿದರು(84:20.09.59). ಸದ್ಯಕ್ಕೆ ಸದನದ ಇತರ ಕಲಾಪಗಳನ್ನು ಸ್ಥಗಿತಗೊಳಿಸಿ. ಲೋಕಸಭೆಯಲ್ಲಿ ಕೇರಳದ ಸಮಸ್ಯೆಯನ್ನು ಚರ್ಚಿಸಲು ಅವರು ತುರ್ತು ನಿರ್ಣಯವನ್ನು ಮಂಡಿಸುವುದಕ್ಕೆ ಅನುಮತಿ ಕೋರಿ, ಡಾ.ಕೆ.ಬಿ.ಮೇನನ್ ನೀಡಿರುವ ನೋಟಿಸ್ ಬಗ್ಗೆ

ಸೆಪ್ಟಂಬರ್ 19ರಂದು ಜೆ.ಬಿ.ಕೃಪಲಾನಿ, ಸಭೆಯಲ್ಲಿ ಸಮಸ್ಯೆಯ ಬಗ್ಗೆ ಪ್ರಸ್ತಾಪಿದರು. ಪ್ರಸ್ತುತ ನಿರ್ಣಯವು ಗಂಭೀರವಾದ ಆರೋಪಗಳನ್ನು ಹೊಂದಿದೆ ಮತ್ತು ಅವುಗಳನ್ನು ದೃಢೀಕರಿಸುವ ಅಗತ್ಯವಿದೆ ಎಂದು ಹೇಳಿದ ಸ್ಪೀಕರ್, ಅವುಗಳನ್ನು ಸಮರ್ಥಿಸುವಂಥ ದಾಖಲೆಗಳನ್ನು ಹಾಜರುಪಡಿಸಲು ಕೇಳಿಕೊಂಡರು. ನ್ಯಾಯಾಲಯದ ತೀರ್ಪುಗಳು, ಅಧಿಸೂಚನೆಗಳು, ಪತ್ರಿಕಾ ವರದಿಗಳು ಮತ್ತು ಅಫಿಡವಿಟ್‌ಗಳನ್ನು ಒಳಗೊಂಡಿರುವ ಹಲವಾರು ದಾಖಲೆಗಳನ್ನು ಡಾ.ಮೆನನ್ ಕೂಡಲೇ ಸಲ್ಲಿಸಿದರು. ಸಲ್ಲಿಸಲಾದ ದಾಖಲೆಗಳ ಬಗ್ಗೆ ಸ್ಪೀಕರ್ ತೃಪ್ತಿ ವ್ಯಕ್ತಪಡಿಸಿದರು. ಮೂಲಭೂತ ಹಕ್ಕುಗಳು ನಿರಂತರವಾಗಿ ಉಲ್ಲಂಘನೆ ಮಾಡಿದ್ದರ ಪರಿಣಾಮವಾಗಿ ಕೇರಳದಲ್ಲಿ ಉದ್ಭವಿಸಿರುವ ಗಂಭೀರ ಪರಿಸ್ಥಿತಿಯು ಸಂವಿಧಾನದ ನಿಬಂಧನೆಗಳಿಗೆ ಅನುಗುಣವಾಗಿ, ಕೇರಳ ಸರ್ಕಾರ ಕ್ರಮ ಕೈಗೊಳ್ಳದಿರುವ ಬಗ್ಗೆಯೂ ಚರ್ಚೆಯಾಗಬೇಕು ಎಂದು ಅವರು ಪ್ರಸ್ತಾಪಿಸಿದರು(84:20.09.59).

ಕೇರಳದ ಕಾನೂನು ಸುವ್ಯವಸ್ಥೆ ಕುರಿತು ಚರ್ಚಿಸಲು ಅಶೋಕ್ ಮೆಹ್ತಾ ಅವರು ಲೋಕಸಭೆಯಲ್ಲಿ ಮಂಡಿಸಿದ ತುರ್ತು ನಿರ್ಣಯದ ಆಧಾರದ ಮೇಲೆ ಕೇಂದ್ರ ಸರ್ಕಾರವು, ಕೇರಳ ಸರ್ಕಾರದಿಂದ ಸ್ಪಷ್ಟನೆ ಕೇಳಲಾಯಿತು. ನಂತರ ಕೇರಳ ಸರ್ಕಾರವು ಕೇಂದ್ರ ಗೃಹ ಸಚಿವಾಲಯಕ್ಕೆ ವಿವರವಾದ ಉತ್ತರವನ್ನು ಕಳುಹಿಸಿಕೊಟ್ಟಿತು(107:20.09.59). ಕೇರಳ ಸರ್ಕಾರದಿಂದ ಕಳುಹಿಸಲಾದ ಉತ್ತರದಲ್ಲಿ ರಾಜ್ಯದ ಪರಿಸ್ಥಿತಿಯ ಬಗ್ಗೆ ತನ್ನ ಅಭಿಪ್ರಾಯಗಳನ್ನೂ ಸೇರಿಸಿದ್ದಲ್ಲದೆ, ಬೃಹತ್ ದಾಖಲೆಗಳು, ಪತ್ರಿಕಾ ಪ್ರಕಟಣೆಗಳು, ಹಿಂಸಾಚಾರಗಳಗೆ ಬಲಿಯಾದ ಸಂಬಂಧಿಕರ ಹೇಳಿಕೆಗಳು, ಮತ್ತಿತ್ತರ ಸಾಕ್ಷ್ಯ ಮುಂತಾದವುಗಳನ್ನು ಆ ಉತ್ತರದೊಂದಿಗೆ ಲಗತ್ತಿಸಿ ಕಳುಹಿ ಸಿಕೊಡಲಾಯಿತು(107:20.09.59). ಇದರ ಹೊರತಾಗಿ, ಸಂಸತ್ತಿನಲ್ಲಿ ಕೇರಳದ ಕಾನೂನು ಮತ್ತು ಸುವ್ಯವಸ್ಥೆಯ ಪರಿಸ್ಥಿತಿಯನ್ನು ಚರ್ಚಿಸುವುದರ ಔಚಿತ್ಯವನ್ನು ಬೆಟ್ಟುಮಾಡಿ ತೋರಿಸುತ್ತಾ ಕೇರಳದ ಮುಖ್ಯಮಂತ್ರಿಗಳು, ಒಂದು ಟೆಲಿಗ್ರಾಂ ಸಂದೇಶವನ್ನೂ ಕಳುಹಿಸಿಕೊಟ್ಟರು. ಅದರಲ್ಲಿ, ತನಿಖೆ ಮತ್ತು ವಿಚಾರಣೆಗಳು ಪೂರ್ಣಗೊಳಿಸದ ಪ್ರಕರಣಗಳಿಗೆ ಸಂಬಂಧಿಸಿದಂತೆ ಚರ್ಚೆ ನಡೆಸುವುದರ ಅಸಂಗತತೆಯನ್ನು ಸೂಚಿಸುವ ಉದ್ದೇಶವಿತ್ತು. ಒಂದು ರಾಜ್ಯದ ವಿಷಯವನ್ನು ವಿವರಿಸಲು ಸಂಬಂಧಪಟ್ಟ ರಾಜ್ಯಕ್ಕೆ ಅವಕಾಶ ನೀಡದೆ ಸಂಸತ್ತಿನಲ್ಲಿ ಚರ್ಚಿಸುವುದು ಸರಿಯಾದ ಕ್ರಮವಲ್ಲ ಎಂದು ರಾಜ್ಯ ಸರ್ಕಾರ ಆ ಟೆಲಿಗ್ರಾಮ್‌ನಲ್ಲಿ ಸೂಚಿಸಲಾಗಿತ್ತು. ಕೇರಳದಲ್ಲಿ ಅಭದ್ರತೆಯ ವಿಷಯವನ್ನು ಪ್ರಸ್ತಾಪಿಸಿದ ಕೆಲವು ಸಂಸತ್ ಸದಸ್ಯರು,

> "ವಿವರಣೆಗಳನ್ನು ಮುಚ್ಚಿಟ್ಟುಕೊಂಡು, ರಾಜ್ಯ ಸರ್ಕಾರದ ಮಾನಹಾನಿ ಮಾಡಲು ಪ್ರಯತ್ನಿಸಿದ್ದು"

ಆ ಟೆಲಿಗ್ರಾಂನಲ್ಲಿ ಒಳಗೊಳಿಸಲಾಗಿತ್ತು.

"ಆಧಾರರಹಿತವಾದ ಆರೋಪಗಳನ್ನು ಎತ್ತಲು ಅನುಮತಿಸುವುದು ತುಂಬಾ ಹಾನಿಕಾರಕವಾದ ಸಂಗತಿಯಾಗಿರುತ್ತದೆ. ಅವುಗಳ ಪ್ರಾಮುಖ್ಯತೆಯನ್ನು ಕಡಿಮೆ ಗೊಳಿಸಬಾರದು"(193:21.09.59)

ಎನ್ನುವುದನ್ನೂ ಮುಖ್ಯಮಂತ್ರಿಗಳು ಸೂಚಿಸಿದ್ದರು.

ಕೇಂದ್ರ ಗೃಹ ಸಚಿವಾಲಯದ ಮೂಲಕ ಕೇರಳ ಸರ್ಕಾರ ನೀಡಿದ ಮನವಿಯನ್ನು ಲೋಕಸಭೆ ಸ್ಪೀಕರ್ ಅಂಗೀಕರಿಸಿದ್ದಲ್ಲದೆ, ನಿರ್ಣಯದ ವಿಚಾರದಲ್ಲಿ ಸ್ಪಷ್ಟೀಕರಣ ನೀಡುವುದಕ್ಕೆ ಅವಕಾಶವನ್ನೂ ನೀಡಿದರು(193:23.09.59).

"ಮೂಲಭೂತ ಹಕ್ಕುಗಳ ನಿರಂತರ ಉಲ್ಲಂಘನೆಗಳಿಂದಾಗಿ, ಕೇರಳದಲ್ಲಿ ಗಂಭೀರ ಪರಿಸ್ಥಿತಿ ನಿರ್ಮಾಣವಾಗಿದ್ದು, ಸಂವಿಧಾನದ ನಿಬಂಧನೆಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸಲು ಕೇರಳ ಸರ್ಕಾರದ ವೈಫಲ್ಯವನ್ನು ಸಹ ಪರಿಗಣಿಸಬೇಕು"*(84:23.09.59)

ಎನ್ನುವುದು ಡಾ.ಮೆನನ್ ಅವರ ನಿರ್ಣಯದ ಒಳಾಂಶಗಳು. ದಿನಾಂಕ 27 ಸೆಪ್ಟೆಂಬರ್ 1959ರಂದು ಮಿನೂ ಮಸಾನಿ ಅವರು ಕೇರಳ ಮುಖ್ಯಮಂತ್ರಿ ವಿರುದ್ಧ ಲೋಕಸಭೆಯಲ್ಲಿ ಹಕ್ಕುಗಳ ಉಲ್ಲಂಘನೆಯ ಪ್ರಸ್ತಾಪವನ್ನು ಮಂಡಿಸಿದರು.**(85:p7)

ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಕಾಂಗ್ರೆಸ್ ಹೈಕಮಾಂಡ್‌ನಲ್ಲಿ ಪ್ರಬಲ ಬಣದ ವಿರೋಧ, ಅಸಹಿಷ್ಣುತೆಗಳಲ್ಲದೆ, ಅಶೋಕ್ ಮೆಹ್ತಾ, ಜೆ.ಬಿ. ಕೃಪಲಾನಿ, ಮಿನೂ ಮಸಾನಿ, ಕೆ.ಬಿ.ಮೆನನ್ ರಂತಹ ಪಿಎಸ್‌ಪಿಯ ಹಿರಿಯ ನಾಯಕರು ಶಕ್ತವಾಗಿ ನಿಲುವನ್ನು ಪ್ರತಿಪಾದಿಸುತ್ತಾ ಮುಂದುವರಿದರು. ಹೀಗೆ, ಕೇರಳದ ಸಿ.ಪಿ.ಐ. ಸರ್ಕಾರದ ವಿರುದ್ಧ ಸಂಘಟಿತವಾದ ಮತ್ತು ಶಕ್ತವಾದ ನಡೆಗಳು ಈ ಕಲಾವಧಿಯಲ್ಲಿ ದೆಹಲಿಯಲ್ಲಿ ಬಹಳ ಸಕ್ರಿಯವಾಗಿತ್ತು.

---

* K.B.Menon's allegation stated: 'the conditions that have developed in Kerala State since the Communists formed their government are fundamentally different from other states in the Union.

These conditions have steadily worsened and it is now obvious that they formed part of a calculated design of administration wholly incapable with our democratic constitution'.

** The text of Masani's motion was : 'The attention of the House having been drawn by a member on September 23 to the telegram sent by Mr. E. M. S. Namboodiripad, Chief Minister of Kerala, to Pandit G. B. Pant, Home Minister, extracts from which are contained in a report based allegedly on official sources issued by the Press Trust ofIndia from Trivandrum on September 20 and published in the 193:and the Amrita Bazar Patrika, Calcutta on September 21 in the course of which, Mr. Namboodiripad has attributed the motive of slander to some members of the House'. (84:28.11.59)

## ತೋಟದ/ಎಸ್ಟೇಟ್ ಕಾರ್ಮಿಕರ ಮುಷ್ಕರ ಮತ್ತು ಕಾನೂನು ಮತ್ತು ಸುವ್ಯವಸ್ಥೆ

ತೋಟದ/ಎಸ್ಟೇಟ್ ಕಾರ್ಮಿಕರ ಕೂಲಿಯನ್ನು ಹೆಚ್ಚಿಸಲು ರಾಜ್ಯ ಸರ್ಕಾರ ವಿವಿಧ ರೀತಿಯಲ್ಲಿ ಕೆಲವು ಕ್ರಮಗಳನ್ನು ಕೈಗೊಂಡಿದ್ದಲ್ಲದೆ,* ಕಾರ್ಮಿಕರ ಕಲ್ಯಾಣ ಯೋಜನೆಗಳನ್ನೂ ಜಾರಿಗೊಳಿಸಿತು. ಆದರೂ ಹೈ-ರೇಂಜ್ ಪ್ರದೇಶದ ಪ್ಲಾಂಟೇಶನ್ ಉದ್ಯೋಗ ವಲಯದ ಶೋಷಣೆ, ಅನ್ಯಾಯಗಳನ್ನು ನಿರ್ಮೂಲನೆ ಮಾಡುವಲ್ಲಿ ಸರ್ಕಾರವು ಭಾಗಶಃ ಯಶಸ್ವಿ ಮಾಡಲು ಮಾತ್ರವೇ ಸಾಧ್ಯವಾಗಿದ್ದು. ಅಕ್ಟೋಬರ್ 1958ರಲ್ಲಿ ಮುನ್ನಾರ್ ಪ್ಲಾಂಟೇಶನ್ ಪ್ರದೇಶದಲ್ಲಿ ನಡೆದ ಕಾರ್ಮಿಕ ಮುಷ್ಕರಗಳು ಕಾನೂನು ಮತ್ತು ಸುವ್ಯವಸ್ಥೆಯ ಸಮಸ್ಯೆಯಾಗಿ ಪರಿಣಮಿಸಿತು. ತೋಟ/ಎಸ್ಟೇಟ್‌ಗಳಲ್ಲಿ ಪ್ರತಿಭಟನಾ ನಿರತ ಕಾರ್ಮಿಕರ ಮೇಲೆ ಪೊಲೀಸರು ಮೂರು ಸಂದರ್ಭಗಳಲ್ಲಿ ಗುಂಡು ಹಾರಿಸಿದರು. ಕಮ್ಯುನಿಸ್ಟ್ ಸರ್ಕಾರದೊಂದಿಗೆ ಸಹಾನುಭೂತಿ ಹೊಂದಿರುವ ಈ ಕಾರ್ಯಕರ್ತರ ಮೇಲೆ ಗುಂಡು ಹಾರಿಸಿದ್ದು, ಪಕ್ಷದ ಕಾರ್ಯಕರ್ತರಿಗೆ ಅಷ್ಟೇನು ಸಮರ್ಥನೀಯವೆನಿಸಲಿಲ್ಲ ಆದರೆ ಕಾನೂನು ಸುವ್ಯವಸ್ಥೆ ಕಾಪಾಡುವ ವಿಚಾರದಲ್ಲಿ ಪಕ್ಷದ ಪರಿಗಣನೆಯ ಬಗ್ಗೆ ಸರ್ಕಾರದ ಮೇಲೆ ಪ್ರಭಾವ ಬೀರಿರಲಿಲ್ಲ ಮತ್ತು ಸರ್ಕಾರ ತಲೆ ಕೆಡಿಸಿಕೊಂಡಿರಲಿಲ್ಲ ಎಂಬುದನ್ನು ಈ ಘಟನೆ ಸಾಬೀತುಪಡಿಸುತ್ತದೆ. ಹಾಗೆಯೇ ಕೆಲವು ಸಂದರ್ಭಗಳಲ್ಲಂತು ಪರಿಸ್ಥಿತಿಗಳು ಸರ್ಕಾರದ ನಿಯಂತ್ರಣದಲ್ಲಿರಲಿಲ್ಲ. ಆದ್ದರಿಂದ ಸ್ಥಳೀಯ ಅಧಿಕಾರಿಗಳಿಂದ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸುವುದಕ್ಕೂ ಸೇನೆಯನ್ನು ನಿಯೋಜಿಸುವ ವಿಚಾರವನ್ನು ಪರಿಗಣಿಸಿದಕ್ಕೂಪ್ರಧಾನಿ ನೆಹರೂರವರು ಕೇಂದ್ರ ಗೃಹ ಸಚಿವರಾದ ಜಿ.ಬಿ. ಪಂತ್‌ರವರನ್ನು ಕೇಳಿಕೊಂಡರು.**(127:p65) ಕೆಲವು ಬ್ರಿಟಿಷ್ ಪ್ಲಾಂಟರ್ಸ್‌ಗಳ ಪರವಾಗಿ, ಬ್ರಿಟಿಷ್ ಹೈಕಮಿಷನ್ ಸಲ್ಲಿಸಿದ ಮನವಿಯ ಲಾಭವನ್ನು ಪಡೆದುಕೊಂಡು,***(127:p65) ಪಂತ್ ಕಾನೂನು ಮತ್ತು ಸುವ್ಯವಸ್ಥೆಯನ್ನು ಪುನಃಸ್ಥಾಪನೆಗಾಗಿ ಕೇರಳ ಸರ್ಕಾರಕ್ಕೆ ಸಹಾಯದ ಬಗ್ಗೆ ವಾಗ್ದಾನ

---

* ಕೇರಳದ ವಿಶಾಲವಾದ ತೋಟದ/ಎಸ್ಟೇಟ್ ವಲಯದ ಕಾರ್ಮಿಕರಿಗೆ ನ್ಯಾಯಯುತವಾದ ಕೂಲಿಯನ್ನು ನಿರ್ಧರಿಸಲು ಕಾರ್ಮಿಕರು ಮತ್ತು ತೋಟಗಾರರ/ಎಸ್ಟೇಟ್‌ನವರ ಪ್ರತಿನಿಧಿಗಳ ಸಮಿತಿಯನ್ನು ನೇಮಿಸಲಾಯಿತು. ಜನವರಿ 1958ರಲ್ಲಿ ಕೊಟ್ಟಾಯಂನಲ್ಲಿ ರೂಪಿಸಿದ ಒಪ್ಪಂದದ ಪ್ರಕಾರ, ಪ್ಲಾಂಟೇಶನ್ ವಲಯದಲ್ಲಿ ಹೆಚ್ಚಾದ ವೇತನ ವ್ಯವಸ್ಥೆ ಜಾರಿಗೆ ಬಂದಿತು.

** ಕೇಂದ್ರ ಗುಪ್ತಚರ ಬ್ಯೂರೋ, ರಾಜ್ಯ ಗವರ್ನರ್, ರಾಜ್ಯ ಪೊಲೀಸ್ ಉನ್ನತ ಅಧಿಕಾರಿಗಳು, ರಾಜ್ಯ ಕಾಂಗ್ರೆಸ್ ಪಕ್ಷದ ನಾಯಕರು ಮತ್ತು ಪತ್ರಿಕೆಗಳಂತಹ ವಿವಿಧ ಮೂಲಗಳ ಮೂಲಕ ಕೇಂದ್ರ ಗೃಹ ಸಚಿವರಾದ ಕೆ.ಸಿ.ಪಂತು ಅವರು ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ನಿಯಮಿತವಾಗಿ ಮಾಹಿತಿಯನ್ನು ಸಂಗ್ರಹಿಸುತ್ತಿದ್ದರು.

*** ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್ ಆಫ್ ಸೌತ್ ಇಂಡಿಯಾ (ಯುಪಿಎಸಿಐ) ಕಾರ್ಮಿಕ ವಿವಾದಗಳನ್ನು ಪರಿಹರಿಸಲು ಕೇಂದ್ರದ ನೆರವು ಕೋರುವ ಮೂಲಕ ಕೇಂದ್ರ ಸರ್ಕಾರಕ್ಕೆ ಜ್ಞಾಪಕ ಪತ್ರ ನೀಡಲಾಯಿತು. ಅವರು ರಾಜ್ಯ ಸರ್ಕಾರದ ವಿಧಾನವನ್ನು ಟೀಕಿಸುವ ಮತ್ತು ತೀರ್ಪುಗಾಗಿ ವಾದಿಸುವ ಕೆಲಸಗಳನ್ನು ಮಾಡುತ್ತಿದ್ದರು.

ನೀಡಲಾಯಿತು. ಕೇರಳ ಸರ್ಕಾರವು ಮುಷ್ಕರವನ್ನು ಸಮರ್ಥಿಸುವ ಬದಲು, ತೋಟದ/ಎಸ್ಟೇಟ್ ಕಾರ್ಮಿಕರ ಬೇಡಿಕೆಗಳನ್ನು ನ್ಯಾಯತೀರ್ಮಾನಕ್ಕೆ ಬಿಟ್ಟಿದ್ದರೆ ಪರಿಸ್ಥಿತಿ ಇಷ್ಟು ಹದಗೆಡುತ್ತಿರಲಿಲ್ಲ ಎಂದು ಅವರು ಹೇಳಿದರು.*(107:20.10.58) ಮುಖ್ಯಮಂತ್ರಿ ನಂಬೂದಿರಿಪಾಡ್ ಅವರು, ಕೇಂದ್ರದ ಮಧ್ಯಸ್ಥಿಕೆಯ ಸಲಹೆಯನ್ನು ಸಾರಾಸಗಟಾಗಿ ತಿರಸ್ಕರಿಸಿದರು ಮತ್ತು ಪರಿಸ್ಥಿತಿ ನಿಯಂತ್ರಣದಲ್ಲಿದೆ ಎಂದು ಹೇಳಿ, ಸಮಾಲೋಚನೆಗಳ ಮೂಲಕ ಇತ್ಯರ್ಥಗೊಳಿಸಿಕೊಳ್ಳಲು ತೋಟದ/ಎಸ್ಟೇಟ್ ಮಾಲೀಕರಿಗೆ ಉಪದೇಶಿಸಿಬೇಕೆಂದು ಪಂತ್‌ಗೆ ಮುಖ್ಯಮಂತ್ರಿಗಳು ನಿರ್ದೇಶಿಸಿದರು. ನವೆಂಬರ್ 1958ರಲ್ಲಿ, ಪ್ರಧಾನ ಮಂತ್ರಿ ರಾಜ್ಯಪಾಲರೊಂದಿಗೆ ಚರ್ಚಿಸಿದರು. ಒಂದು ತಿಂಗಳ ಹಿಂದೆ ಪತ್ರಿಕಾಗೋಷ್ಠಿಯನ್ನು ಉದ್ದೇಶಿಸಿ ಮಾತನಾಡುವಾಗ ಇದ್ದ ಅದೇ ಪರಿಸ್ಥಿತಿ ಕೇರಳದಲ್ಲಿ ಮುಂದುವರಿದಂತೆ ಕಾಣುತ್ತಿದೆ ಎಂಬುದು ತಮ್ಮ ಅಭಿಪ್ರಾಯ ಎನ್ನುವ ಸಂಗತಿಯನ್ನು ನೆಹರೂ ಪತ್ರಕರ್ತರೊಂದಿಗೆ ಹಂಚಿಕೊಂಡರು(84:01.11.58). ಕಾಂಗ್ರೆಸ್ ಪಕ್ಷದ ನಿಯಂತ್ರಣದಲ್ಲಿರುವ ಯೂನಿಯನ್‌ಗಳ ವಿರುದ್ಧ ಕಮ್ಯುನಿಸ್ಟ್ ಟ್ರೇಡ್ ಯೂನಿಯನ್‌ಗಳನ್ನು ಬಳಸಿಕೊಳ್ಳಲಾಗುತ್ತಿದೆ ಎಂದೂ ಅವುಗಳನ್ನೇ ಉಪಯೋಗಿಸಿಕೊಂಡು ರಾಜ್ಯದ ಆಡಳಿತ ವ್ಯವಸ್ಥೆಯನ್ನು ಬಲಪಡಿಸಲು ಪ್ರಯತ್ನಿಸುತ್ತಿದ್ದಾರೆಂದೂ ಕಾರ್ಮಿಕ ವಿವಾದಗಳಿಗೆ ಸಂಬಂಧಿಸಿದ ಹಿಂಸೆಗಳನ್ನು ನಿಯಂತ್ರಿಸಲು ಶ್ರಮಿಸುವ ಪೊಲೀಸ್ ಅಧಿಕಾರಿಗಳಿಗೆ ಕಠಿಣವಾಗಿ ದಂಡಿಸಲಾಗುತ್ತಿದೆ ಎಂದೂ ರಾಜ್ಯಪಾಲರು ವರದಿ ನೀಡಿದರು.**(84:09.11.58) ಆದರೆ, ಕೇರಳದ ಇಎಂಎಸ್ ಸರ್ಕಾರದ ವಿರುದ್ಧ ಕೇಂದ್ರದ ಮಧ್ಯಪ್ರವೇಶಕ್ಕೆ ಇನ್ನೂ ಕಾಲ ಪಕ್ವವಾಗಿಲ್ಲ ಎಂದು ಕೇಂದ್ರ ಗೃಹ ಸಚಿವ ಜಿ.ಬಿ.ಪಂತ್ ಭಾವಿಸಿದರು. ಕೇಂದ್ರದ ಮಧ್ಯಪ್ರವೇಶಕ್ಕಾಗಿ, ಕೇರಳದಲ್ಲಿ ಅತ್ಯಂತ ಸಂಕೀರ್ಣವಾದ ಪರಿಸ್ಥಿತಿ ಸೃಷ್ಟಿಗೊಳ್ಳುವುದಕ್ಕಾಗಿ ಅವರು ಕಾಯುತ್ತಿದ್ದರು.

ಕಮ್ಯುನಿಸ್ಟ್ ಸರ್ಕಾರವನ್ನು ಕಟುವಾದ ಭಾಷೆಯಲ್ಲಿ ಟೀಕಿಸುವ ಒಂದು ಪತ್ರ,

---

* The Association of Planters in Kerala had reiterated that adjudication was the only 'inescapable' means for settling the state wide labour dispute in the plantations in Kerala

ಬಂಡವಾಳಶಾಹಿಗಳು ಮುಖ್ಯವಾಗಿ ಎರಡು ಪ್ರಯೋಜನಗಳನ್ನು ಗುರಿಯಾಗಿಟ್ಟುಕೊಂಡು ತೀರ್ಪುಗಾಗಿ ವಾದಿಸಿದರು. 1. ನಾಲ್ಕು ವರ್ಷಗಳ ಅವಧಿಗೆ ಕಾರ್ಮಿಕರ ಅತ್ಯಂತ ಮೂಲಭೂತ ಅಗತ್ಯಗಳನ್ನು ಮುಂದೂಡುವುದು. ಎರಡು ತೀರ್ಪು ಪ್ರಕಟಿಸಿದರೆ, ಅನಿವಾರ್ಯವಾದ ಮುಷ್ಕರವನ್ನು ತಪ್ಪಿಸಬೇಕು, ಏಕೆಂದರೆ ಅದು ಕಾನೂನುಬಾಹಿರವಾಗಿರುತ್ತದೆ.

** The words and deeds of the State Governor B. Ramakrishna Rao were more like the spokesman and agent of opposition parties in Kerala than as a constitutional institution. The communist attempt to weaken the non-communist trade unions was a usual cacophony of opposition parties. There might be a bit of truth behind it. 171: presented an exaggerated and distorted picture of the so called Communist attempt to destroy the non-Communist trade unions in Kerala.

ನವೆಂಬರ್ 25ರಂದು ಕಾಂಗ್ರೆಸ್ ಅಧ್ಯಕ್ಷರಾದ ಯು.ಎನ್.ಧೇಬಾರ್ ಪ್ರಕಟಿಸಿದರು.

> "ನಿರಂಕುಶ ಆಡಳಿತದ ಅಡಿಯಲ್ಲಿ, ಸಕಲ ರಾಜಕೀಯ ಮತ್ತು ಸಾಂವಿಧಾನಿಕ ಅಂಶಗಳನ್ನು ಅಧೀನಗೊಳಿಸಿಕೊಳ್ಳುವುದರಲ್ಲಿ ಕೊನೆಗೊಳ್ಳುವ ಒಂದು ಕಾರ್ಯ ಯೋಜನೆಯನ್ನು, ಕಮ್ಯುನಿಸ್ಟ್ ಪಕ್ಷ ಮತ್ತು ಅದರ ಸರ್ಕಾರ, ಅನುಸರಿಸುತ್ತಿದೆ, ಎಂದು ಆ ಪತ್ರದಲ್ಲಿ ಆರೋಪಿಸಲಾಗಿತ್ತು. ಈ ಯೋಜನೆಯು ಅಂತ್ಯವಿಲ್ಲದೆ ಸಾಗುವ ಶೀತಲಸಮರದಂತೆ ದೇಶವನ್ನು ದುರ್ಬಲಗೊಳಿಸಲು ಕಾರಣವಾಗುತ್ತದೆ"

ಎಂದೂ ಪತ್ರದಲ್ಲಿ ಸೂಚಿಸಲಾಗಿತ್ತು(84:27.11.58). ಇದಕ್ಕೆ ಪ್ರತಿಯಾಗಿ, ಸಂವಿಧಾನದ ಮೂಲ ತತ್ವಗಳನ್ನು ಕಾಂಗ್ರೆಸ್ ಉಲ್ಲಂಘಿಸುತ್ತಿದೆ, ಎಂದು ಮುಖ್ಯಮಂತ್ರಿಗಳು ಪ್ರತ್ಯಾರೋಪವನ್ನು ದಾಖಲಿಸಿದರು.

> "ಏಕೆಂದರೆ, ನೀವು (ಕಾಂಗ್ರೆಸ್ ಪಕ್ಷ) ಒಂದು ಪಕ್ಷದ ಆಳ್ವಿಕೆ, ಅಂದರೆ ನಿಮ್ಮ ಪಕ್ಷದ ಆಳ್ವಿಕೆಯನ್ನು ಕಾಪಾಡಿಕೊಳ್ಳಲು ಬೇಕಾದ ಎಲ್ಲಾ ವಿಧಾನಗಳನ್ನು ಅನುಸರಿಸುತ್ತೀರಿ"(84:27.11.58).

ಇದು ಮುಖ್ಯಮಂತ್ರಿಯವರ ಮುಖ್ಯ ಪ್ರತ್ಯಾರೋಪವಾಗಿತ್ತು.

ಕಮ್ಯುನಿಸಂ ವಿರುದ್ಧ ಭಾರತದ ಹೋರಾಟವನ್ನು ಶ್ಲಾಘಿಸಿ ಅಮೇರಿಕಾದ ವಿದೇಶಾಂಗ ಕಾರ್ಯದರ್ಶಿ ಡಲ್ಲೆಸ್ ನೀಡಿದ ಹೇಳಿಕೆ, ಸಂಸತ್ತಿನಲ್ಲಿ ಚರ್ಚೆಯಾಯಿತು. ಕಮ್ಯುನಿಸ್ಟ್ ನಾಯಕ ಭೂಪೇಶ್ ಗುಪ್ತಾ* ಕೇಂದ್ರ ಹಣಕಾಸು ಸಚಿವ ಮೊರಾರ್ಜಿ ದೇಸಾಯಿ, ಕಮ್ಯುನಿಸ್ಟ್ ಪಕ್ಷದ ವಿರುದ್ಧ ನೀಡಿರುವ ಹೇಳಿಕೆ**ಯನ್ನು ಟೀಕಿಸಿದರು. ಡಲ್ಲೆಸ್ ಹೇಳಿಕೆಗೂ ಮೊರಾರ್ಜಿ ದೇಸಾಯಿ ಅವರ ಅಭಿಪ್ರಾಯಗಳಿಗೂ ಇರುವ ಸಂಬಂಧದ ಕುರಿತು ಪ್ರಧಾನಿ ನೆಹರೂ ಅವರಲ್ಲಿ ಭೂಪೇಶ್ ಗುಪ್ತಾ ಸ್ಪಷ್ಟನೆಯನ್ನು ಕೇಳಿದರು. ಬಂಡವಾಳಶಾಹಿಯ ವಿರುದ್ಧವೋ ಕಮ್ಯುನಿಸಂ ವಿರುದ್ಧವೋ ಇತರ ಸೈದ್ಧಾಂತಿಕ ಯೋಜನೆಗಳ ವಿರುದ್ಧವೋ ಭಾರತ ಹೋರಾಡುತ್ತಿಲ್ಲ; ಅದರ ಬದಲಿಗೆ,

> "ನಾವು ನಮ್ಮ ಗುರಿಗಳನ್ನು ಸಾಧಿಸಲು ನಾವು ಶ್ರಮಿಸುತ್ತಿದ್ದೇವೆ"(84:05.12.58)

ಎನ್ನುವುದು ಪ್ರಧಾನಿಯವರ ಉತ್ತರವಾಗಿತ್ತು.

## ಕಾಂಗ್ರೆಸ್ ಪಕ್ಷದಲ್ಲಿ ನಾಯಕತ್ವ ಬದಲಾವಣೆ

ಅಖಿಲ ಭಾರತ ಕಾಂಗ್ರೆಸ್‌ನ ನಾಯಕತ್ವದಲ್ಲಿನ ಬದಲಾವಣೆಗಳು ಕೇರಳದ ಕಮ್ಯುನಿಸ್ಟ್ ಸರ್ಕಾರಕ್ಕೆ ಮಾರಕವಾಗಿ ಪರಿಣಮಿಸಿತು. 1957–58ರಲ್ಲಿ ಎಐಸಿಸಿಯ

---

* ರಾಜ್ಯಸಭೆಯಲ್ಲಿ ಭೂಪೇಶ್ ಗುಪ್ತಾರವರು ಕಮ್ಯುನಿಸ್ಟ್ ನಾಯಕರಾಗಿದ್ದರು.

** ಮೊರಾರ್ಜಿ ದೇಸಾಯಿ, ನವೆಂಬರ್ 195 ರಲ್ಲಿ ಮಾಂಟ್ರಿಯಲ್‌ಗೆ ಭೇಟಿ ನೀಡಿದ ಸಂದರ್ಭದಲ್ಲಿ ಕಮ್ಯೂನಿಸ್ಟರ ವಿರುದ್ಧ ಆಕ್ರಮಣಕಾರಿ ಹೇಳಿಕೆಗಳನ್ನು ನೀಡಿದ್ದರು.

ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದ ಇಂದಿರಾಗಾಂಧಿ, ನಂಬೂದಿರಿಪಾಡ್‌ರ ಸರ್ಕಾರದ ವಿರುದ್ಧ ಪ್ರಬಲವಾಗಿ ವಾದಿಸಿದ್ದರು. ದಿನಾಂಕ ಫೆಬ್ರವರಿ 2, 1959ರಂದು ಅವರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದರು(69:p212). ಕೇರಳದ ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯುವುದು ಎಐಸಿಸಿ ಅಧ್ಯಕ್ಷರೆನ್ನುವ ನೆಲೆಯಲ್ಲಿ ಇಂದಿರಾ ಗಾಂಧಿಯವರ ಮುಖ್ಯ ಕಾರ್ಯಸೂಚಿಯಾಗಿತ್ತು(69:). ಅಲ್ಲಿಯವರೆಗೆ, ಕಾಂಗ್ರೆಸ್ ಹೈಕಮಾಂಡ್, ವಿಶೇಷವಾಗಿ ನೆಹರೂ, ಕೇರಳದ ಕಾಂಗ್ರೆಸ್ ಘಟಕವನ್ನು, ರಾಜ್ಯ ಸರ್ಕಾರದ ವಿರುದ್ಧದ ಹೋರಾಟದಲ್ಲಿ ಜಾತಿ/ಸಮುದಾಯ ಸಂಘಗಳೊಂದಿಗೆ ಸೇರಿ ಕೆಲಸ ಮಾಡಲು ಅವಕಾಶ ನೀಡಿರಲಿಲ್ಲ. ಇಂದಿರಾಗಾಂಧಿ ನೇತೃತ್ವ, ಕಾಂಗ್ರೆಸ್ ಪಕ್ಷ ತೆಗೆದುಕೊಳ್ಳುವ ನಿರ್ಧಾರದ ಮೇಲಿನ ಅವರ ಪ್ರಭಾವಗಳಿಂದಾಗಿ, ಆರ್.ಶಂಕರ್ ಕೆಪಿಸಿಸಿ ಅಧ್ಯಕ್ಷರಾಗಿ ಆಯ್ಕೆಯಾದದ್ದು(84:11.05.59), ಪ್ರತಿಭಟನಕಾರರಿಗೆ ಅನುಕೂಲಕರವಾಗಿ ಪರಿಣಮಿಸಿತು. ಕೇಂದ್ರ ಸರ್ಕಾರದಲ್ಲಿ ಇಂದಿರಾ ಗಾಂಧಿಯವರ ಪ್ರಭಾವದಿಂದಾಗಿ, ಕೇಂದ್ರ ಹಸ್ತಕ್ಷೇಪದ ಪ್ರಕ್ರಿಯೆಯನ್ನು ಸುಗಮಗೊಳಿಸಿತು.

ಟಿಬೆಟ್‌ನಲ್ಲಿನ ಬೆಳವಣಿಗೆಗಳು, ಚೀನಾ ಸರ್ಕಾರದಿಂದ ದಲೈ ಲಾಮಾರವರ ಅನುಯಾಯಿಗಳ ದಮನ, ಮತ್ತು ದಲೈ ಲಾಮಾ ಅವರು ಭಾರತಕ್ಕೆ ಪಲಾಯನ ಮಾಡಿದ್ದು,(40:31.05.59p9) ಕಮ್ಯುನಿಸ್ಟರ ಬಗ್ಗೆ ನೆಹರೂ ಅವರ ಮನೋಭಾವವನ್ನು ಪ್ರಭಾವಿಸಿತು. ಮೇ 10ರಂದು ದೆಹಲಿಯ ಎಐಸಿಸಿ ಸಮಾವೇಶದಲ್ಲಿ ಇಂದಿರಾ ಗಾಂಧಿಯವರು ಮಾಡಿದ ಭಾಷಣದಲ್ಲಿ, ಕೇರಳದ ಕಮ್ಯುನಿಸ್ಟ್ ಸರ್ಕಾರವು ತಮ್ಮ ಪಕ್ಷದ ಹಿತಾಸಕ್ತಿಗಳನ್ನು ಸಾಧ್ಯವಾದ ಎಲ್ಲ ರೀತಿಯಿಂದಲೂ ರಕ್ಷಿಸಲು ಪ್ರಯತ್ನಿಸುತ್ತಿದೆ, ಎಂದು ಸೂಚಿಸಿದರು(40:17.05.59p1). ಕಮ್ಯುನಿಸ್ಟ್ ಸರ್ಕಾರವು ರಾಜಕೀಯ ಉದ್ದೇಶಗಳನ್ನು ಸಾಧಿಸಲು ಕೋಮು ಭಾವನೆಗಳನ್ನು ಬಳಸಿಕೊಳ್ಳುತ್ತಿದೆ ಎಂದು ಅವರು ಆರೋಪಿಸಿಧರು. ತಿರುವನಂತಪುರದಲ್ಲಿ ಮೇ 12ರಂದು, ಕಾಂಗ್ರೆಸ್ ಅಧ್ಯಕ್ಷೆಯನ್ನು ಉದ್ದೇಶಿಸಿ ಮುಖ್ಯಮಂತ್ರಿ ಇಎಂಎಸ್ ಪ್ರತಿವಾದ ಭಾಷಣದಲ್ಲಿ ಹೀಗೆ ಹೇಳಿದರು:

> "ಕಮ್ಯುನಿಸ್ಟರಲ್ಲ, ಬದಲಿಗೆ ತಮ್ಮದೇ ಕಾಂಗ್ರೆಸ್ ಪಕ್ಷದ ಕೆಲವು ಹಿರಿಯ ಸದಸ್ಯರು, ತಮ್ಮದೇ ಕಾಂಗ್ರೆಸ್ ಪಕ್ಷದ ಹಿತಾಸಕ್ತಿಗಳಿಗಾಗಿ ಜಾತಿ/ಸಮುದಾಯದ ಕೋಮುಭಾವನೆಗಳನ್ನು ಬಳಸಿ ಶೋಷಣೆ ಮಾಡುತ್ತಿದ್ದಾರೆ."

ಆ ನಂತರದ ವಾರದಲ್ಲೊಂದು ದಿನ ಕಲ್ಕತ್ತಾದಲ್ಲಿ ಇಂದಿರಾಗಾಂಧಿಯವರು ಮಾತನಾಡುತ್ತಾ,

> "ರಾಜ್ಯ ಸರ್ಕಾರವು ಜಾರಿಗೊಳಿಸಿದ ಶಿಕ್ಷಣ ಮಸೂದೆಯಲ್ಲಿರುವ ಯಾವುದೇ ವಿಚಾರಗಳಿಗೆ ವಿರುದ್ಧವಾಗಿಯಲ್ಲ, ಕೇರಳದಲ್ಲಿ ನಡೆಯುತ್ತಿರುವ ಆಂದೋಲನ. ವಾಸ್ತವದಲ್ಲಿ, ಕೇರಳದ ಕಮ್ಯುನಿಸ್ಟ್ ಸರ್ಕಾರವು ಮಸೂದೆಗಳನ್ನು ಮಂಡಿಸಲು ತೆಗೆದುಕೊಂಡ ಪ್ರಜಾಪ್ರಭುತ್ವ ವಿರೋಧಿ ರೀತಿಗಳ ವಿರುದ್ಧದ, ದಮನಿತ ಭಾವನೆಗಳ ಒಂದು ಜನಪರ ಅಭಿವ್ಯಕ್ತಿಯಾಗಿತ್ತದು..."(40:31.05.59p9)

ಎಂದರು. ಇದು ಮೇಲಿನ ಇಎಂಎಸ್ ಅವರ ಹೇಳಿಕೆ ಸರಿಯೆಂದು ಸಾಬೀತು ಪಡಿಸಿತು.

ಕಾಂಗ್ರೆಸ್ ಪಕ್ಷದ ಕೇಂದ್ರ ನಾಯಕರ ಒಂದು ವಿಭಾಗವು, ರಾಜ್ಯ ಸರ್ಕಾರದ ವಿರುದ್ಧ ಹಲವು ಆರೋಪಗಳನ್ನು ಮಾಡುತ್ತಿತ್ತು. ಅವುಗಳಲ್ಲಿ ಹೆಚ್ಚಿನವು ಈಗಾಗಲೇ ಕೇರಳದಲ್ಲಿ ವಿವರವಾದ ಚರ್ಚೆಗೆ ಒಳಪಟ್ಟವುಗಳೇ ಆಗಿವೆ.

> ಆಡಳಿತ ಮತ್ತು ನ್ಯಾಯಾಂಗದಲ್ಲಿ ಅನಧಿಕೃತ ಹಸ್ತಕ್ಷೇಪ, ರಾಜ್ಯದಲ್ಲಿ ವ್ಯಾಪಕ ಅಭದ್ರತೆ, ರಾಜಕೀಯ ಹತ್ಯೆಗಳು, ಪಕ್ಷದ ಉದ್ದೇಶಗಳಿಗಾಗಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿ ಕೊಳ್ಳುವುದು, ಶಾಲಾ ವಿದ್ಯಾರ್ಥಿಗಳಿಗೆ ಕಮ್ಯುನಿಸ್ಟ್ ಸಿದ್ಧಾಂತವನ್ನು ಅಳವಡಿಸುವುದು ಮುಂತಾದವು ಪ್ರಮುಖವಾದ ಆರೋಪಗಳಾಗಿದ್ದವು(128:p4). ಇದರ ಜೊತೆಗೆ ಆಂಧ್ರದ ಅಕ್ಕಿ ವ್ಯವಹಾರದ ತನಿಖೆಯ ವಿವಿಧ ವ್ಯಾಖ್ಯಾನಗಳು, ಪತ್ರಿಕೆಗಳ ಹೇಳಿಕೆಗಳು, ಸುಳ್ಳಿನ ಕಥೆಗಳು ಇತ್ಯಾದಿಗಳನ್ನು ಗರಿಷ್ಠವಾಗಿ ಬಳಸಿಕೊಳ್ಳಲಾಯಿತು. ಕೇರಳದ ಕಮ್ಯುನಿಸ್ಟ್ ಸರ್ಕಾರದ ಬಗ್ಗೆ ಸಾರ್ವಜನಿಕರಂಗದಲ್ಲಿ ವಿಕೃತ ಚಿತ್ರವನ್ನು ಪ್ರಸ್ತುತಪಡಿಸುವುದೇ ಇದರ ಹಿಂದಿನ ಗುರಿ. ಕೇರಳದಲ್ಲಿ ಕಮ್ಯುನಿಸ್ಟರಿಗೆ ಒಂದು ಕಾನೂನು ಮತ್ತು ಇತರರಿಗೆ ಇನ್ನೊಂದು ಕಾನೂನು ಎಂದು ಅಪಪ್ರಚಾರ ಮಾಡುವ ಉದ್ದೇಶಪೂರ್ವಕವಾದ ಪ್ರಯತ್ನವೂ ನಡೆಯಿತು.*

'ಸಾರ್ವಜನಿಕ ಸೇವಾ ಆಯೋಗವು ಸಿದ್ಧಪಡಿಸಿದ ಪ್ಯಾನಲುಗಳಿಂದ ಎಲ್ಲ ಶಿಕ್ಷಣ ಸಂಸ್ಥೆಗಳು, ಶಿಕ್ಷಕರನ್ನು ಆಯ್ಕೆ ಮಾಡಬೇಕು' ಎನ್ನುವ ಕೇರಳ ಶಿಕ್ಷಣ ಕಾಯ್ದೆಯ ಕಲಂ 11 ಅನ್ನು ವಿಧಾನಸಭೆಯಲ್ಲಿ ಎಲ್ಲಾ ಪಕ್ಷಗಳು ಬೆಂಬಲಿಸಿದ್ದವು. ಆದರೂ ಜಾತಿ/ಸಮುದಾಯ ಸಂಘಗಳು, ಮತ್ತು ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ಇದಕ್ಕೆ ವಿರುದ್ಧವಾಗಿ ತಮ್ಮ ಆಂದೋಲನವನ್ನು ತೀವ್ರಗೊಳಿಸಿದವು. ಯಾವುದೇ ರಾಜಿಯಾಗುವ ನಿರೀಕ್ಷೆಯಿಲ್ಲದೆ, ಮುಖ್ಯಮಂತ್ರಿಗಳು ಈ ವಿರೋಧಕ್ಕೆ ಕಠಿಣವಾಗಿ ಎದುರಿಸಲು ನಿರ್ಧರಿಸಿದರು. ಅವರು ಹೇಳಿದರು:

> "ನಾವು ಬಯಸಿದರೂ ಈ ಕಾನೂನನ್ನು ಹಿಂಪಡೆಯಲು ಸಾಧ್ಯವಿಲ್ಲ. ಬಹುಪಾಲು ಜನರು ಇದನ್ನು ಉತ್ತಮ ಶಾಸನವೆಂದು ಈಗಾಗಲೇ ಪರಿಗಣಿಸಿದ್ದಾರೆ. ಎಲ್ಲಾ ಅರ್ಥದಲ್ಲೂ ಈ ಕಾನೂನು ತಾಂತ್ರಿಕವಾಗಿ ಜೂನ್ 10ಂದ ಜಾರಿಗೆ ಬರಲು ನಾವು ಎಲ್ಲಾ ಅಗತ್ಯವಾದ ನಿಯಮಗಳು ಮತ್ತು ಅಧಿಸೂಚನೆಗಳನ್ನು ಅಂಗೀಕರಿಸಬೇಕು"(40:24.05.59).

ಆದರೆ, ಯಾವುದೇ ಸಮಸ್ಯೆಗಳಿಲ್ಲದೆ ಪರಿಹಾರ ಕಂಡುಕೊಳ್ಳುವ ಪ್ರಯತ್ನದ ಭಾಗವಾಗಿ,

---

* ಎಐಸಿಸಿ ಕಾರ್ಯದರ್ಶಿ ಶ್ರೀ. ಸಾದಿಕ್ ಅಲಿ 1959, ಜುಲೈ 17, ಒಂದು ಅಧಿಸೂಚನೆ ಪ್ರಕಟಿಸಿದರು. ಕೇರಳದ ನಂಬೂದಿರಿಪಾಡ್ ಸರ್ಕಾರದೊಂದಿಗೆ ಮತ್ತು ಅದರ ವಿರುದ್ಧದ ಕಾಂಗ್ರೆಸ್‌ನ ಬಹಿರಂಗ ಹೋರಾಟದೊಂದಿಗಿನ ಧೋರಣೆಯನ್ನು ಸ್ಪಷ್ಟಪಡಿಸಲಾಗಿತ್ತು.

ಅವರು ಪ್ರಧಾನ ಮಂತ್ರಿಯ ಸಂದರ್ಶನವನ್ನು ಕೋರಿದರು.

### ಕಾಂಗ್ರೆಸ್‌ನ ದ್ವಿಮುಖ ತಂತ್ರ

ಕೇರಳದಲ್ಲಿ ಶಿಕ್ಷಣ ಕಾಯ್ದೆ ವಿರುದ್ಧದ ಆಂದೋಲನದಲ್ಲಿ ಕಾಂಗ್ರೆಸ್ ಪಕ್ಷವು ಜಾತಿ/ಸಮುದಾಯದ ಗುಂಪುಗಳೊಂದಿಗೆ ಸಹಕರಿಸುತ್ತಿದೆ ಎನ್ನುವ ವಿಚಾರ ರಾಷ್ಟ್ರೀಯ ಮಾಧ್ಯಮಗಳಲ್ಲಿ ಸುದ್ದಿ ಮತ್ತು ಟೀಕೆಗಳು ಕಾಣಿಸಿಕೊಂಡಿದ್ದವು.*(109:14.05.59) ಆಗ, ಕೇರಳದಲ್ಲಿ ವಿರೋಧ ಪಕ್ಷಗಳ ಸಂಯುಕ್ತರಂಗದ ಉಪಸ್ಥಿತಿಯನ್ನು ಪ್ರಧಾನಿ ನಿರಾಕರಿಸಿದರು. ಕೆಲವು ವ್ಯಕ್ತಿಗಳ ಶಾಂತಿಯುತ ಪ್ರತಿಭಟನೆ ಎನ್ನುವ ನೆಲೆಯಲ್ಲಿ ಕಾಂಗ್ರೆಸ್‌ನ ಪಾಲ್ಗೊಳ್ಳುವಿಕೆಯ ಗಂಭೀರ ವಿಚಾರದ ಮೌಲ್ಯವನ್ನು ಕಡಿಮೆ ಮಾಡುವ ಕೆಲಸವನ್ನೇ ಅವರು ಮಾಡಿದ್ದು(193:15.05.59). ಆದರೆ, ಅವರು ಹೀಗೂ ಹೇಳಿದರು:

> "ಈ ನಿರ್ದಿಷ್ಟ ಚಳುವಳಿಗೆ (ನಾಯರುಗಳು ಮತ್ತು ಕ್ರಿಶ್ಚಿಯನ್ ಸಮುದಾಯದ ಮುಖಂಡರು ನೇತೃತ್ವದ) ಕಾಂಗ್ರೆಸ್‌ನೊಂದಿಗೆ ಯಾವುದೇ ಸಂಬಂಧವಿಲ್ಲ.... ಕಾಂಗ್ರೆಸ್ ಸದಸ್ಯರು ತಮ್ಮ ವೈಯಕ್ತಿಕ ನೆಲೆಯಲ್ಲಿ, ಅಲ್ಲೋ ಇಲ್ಲೋ ನಡೆದ ಕೆಲವು ಒಂಟಿಯಾದ ಪ್ರಕರಣಗಳು ಅದರಲ್ಲಿ ಒಳಗೊಂಡಿರಬಹುದು."
> (40:24.05.59p10).

ಆದಾಗ್ಯೂ, ಕೇರಳದಲ್ಲಿ ಕಾಂಗ್ರೆಸ್ ಪಕ್ಷ ಆಂದೋಲನದಲ್ಲಿ ತನ್ನ ಭಾಗವಹಿಸುವಿಕೆಯನ್ನು ಹೆಚ್ಚಿಸಿಕೊಂಡಿತು. ಏಕೆಂದರೆ, ಪಕ್ಷದ ಕೇಂದ್ರದ ಅಧಿಕಾರಿಗಳು ಈ ಚಳವಳಿಯೊಂದಿಗೆ ಯಾವುದೇ ಸಂಬಂಧವನ್ನು ಹೊಂದಿರಬಾರದು ಎಂದು ಯಾವುದೇ ಸೂಚನೆ ಅವರಿಗೆ ನೀಡಿರಲಿಲ್ಲ(84:24.05.59). ಮೇಲಾಗಿ, ಎಐಸಿಸಿ ಅಧ್ಯಕ್ಷೆಯಾದ ಇಂದಿರಾ ಗಾಂಧಿ ಮೇ ತಿಂಗಳ ಆರಂಭದಲ್ಲಿ, ಕೇರಳಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಈ ವಿಷಯದಲ್ಲಿ ಪರೋಕ್ಷ ಅನುಮತಿಯನ್ನು ನೀಡಿಯೂ ಇದ್ದರು. ಎರ್ನಾಕುಲಂನಲ್ಲಿ

---

* "... what is most distressing in this political gamesmanship is that Communalism is being used to fight Communism. In the present context, many people will view with suspicion a Congress alliance with Catholic Clergy, not to speak of the Muslim League... . Opportunistic alliances will not help Congress..." .'The Free Press journal'(May 14), was more outspoken : "the opposition campaign as it has developed in Kerala during the last few months is sordidly communal. Platforms and newspaper columns spite out unabashed communal sentiments openly and without even the restraint of maturity. The Congress Party has toed this line and bowed before the leadership of Sri Padmanabhan the idol of the reactionary Nair Service Society..."

"Smt. Indira Gandhi's recent tour of Kerala and the week-end meeting of the AICC have both been a waste from the standpoint of raising the Congress Party in the State from out of its communal quagmire". The Hindustan Times, The Bharat Jyothi, the Times of India etc also wrote reports and published columns criticizing the Congress tie up with the communal organizations in Kerala.

ಪ್ರಜಾಪ್ರಭುತ್ವದ
ಕೊಂಬೆಯನ್ನು
ಕಡಿಯುವವರು
ಕಾಂಡದ
ನಾಶಕ್ಕೂ
ಕಾರಣರಾಗುತ್ತಾರೆ

ವ್ಯಂಗ್ಯಚಿತ್ರ: ಥ್ಯಾಕರೆ



ಇಎಂಎಸ್ ಸರ್ಕಾರದ ವಿರುದ್ಧದ
ಚಳುವಳಿಯ ಸಮಯಾವಧಿಯಲ್ಲಿ
ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ
ವ್ಯಂಗ್ಯಚಿತ್ರಗಳಲ್ಲೊಂದು

ನಡೆದ ಪತ್ರಿಕಾಗೋಷ್ಠಿಯಲ್ಲಿ ಅವರು ಹೀಗೆ ಹೇಳಿದರು:

> "ಕಾನೂನಿಗೆ ವಿರುದ್ಧವಾಗಿ ಜಾರಿಗೊಳಿಸಲಾದ ನಿಯಮದ ಬಗ್ಗೆ ಒಂದು ಆಂದೋಲನವನ್ನು ಆಯೋಜಿಸುವುದರಲ್ಲಿ ತಪ್ಪೇನೂ ಇರುವುದಿಲ್ಲ."(40:31.05.59p9).

ಹೀಗೆ ಕಾಂಗ್ರೆಸ್‌ನವರು ಮೂರು ರೀತಿಯಲ್ಲಿ ಮಾತನಾಡುತ್ತಿದ್ದರು: ಹಿಂಸಾತ್ಮಕವಾದ ಆಂದೋಲನದಲ್ಲಿ ಕೇರಳದ ಕಾಂಗ್ರೆಸ್ಸಿಗರು ಸಕ್ರಿಯವಾಗಿ ಭಾಗವಹಿಸಿದರು; ಕೇಂದ್ರ ನಾಯಕತ್ವವು ನೇರವಾಗಿ ಒಪ್ಪಿಕೊಳ್ಳದೆ, ಅದರ ಬಗ್ಗೆ ಮೌನ ಸಮ್ಮತಿಯನ್ನು ನೀಡಲಾಗಿದೆ; ನೆಹರು ಸ್ಪಷ್ಟವಾಗಿ ವಿರೋಧಿಸಿದರೂ ಅದನ್ನು ತಡೆಯಲು ಯಾವುದೇ ಕ್ರಮ ಕೈಗೊಳ್ಳಲಿಲ್ಲ.

ಕೇರಳ ಸರ್ಕಾರವನ್ನು ಐದು ವರ್ಷಗಳ ಅವಧಿಗೆ ಮುಂದುವರಿಸಲು ಅವಕಾಶ ನೀಡಿದರೆ, ಅದು ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಇನ್ನೂ ಹೆಚ್ಚು ಶಕ್ತಿಯುತವಾಗಿ ಬೆಳೆಯಲು ಅವಕಾಶ ಮಾಡಿಕೊಟ್ಟಂತಾಗುತ್ತದೆ ಎಂದೂ ದೇಶದ ಇತರ ಭಾಗಗಳಲ್ಲಿ ಕಾಂಗ್ರೆಸ್‌ನ ಗೆಲುವಿನ ಸಾಧ್ಯತೆಗೆ ಧಕ್ಕೆ ಬರಲಿದೆ ಎಂದೂ ಕಾಂಗ್ರೆಸ್ ಹೈಕಮಾಂಡ್‌ನ ಒಂದು ವಿಭಾಗವೂ ನಂಬಿತ್ತು(33:09.08.50). ಆದ್ದರಿಂದಾಗಿಯೇ ನಂಬೂದಿರಿಪಾಡ್ ಸರ್ಕಾರದ ಪ್ರಗತಿಪರ ಕಾನೂನುಗಳ ರಚನೆಗೆ ಜನರ ಅನುಮೋದನೆಯಿಂದಾಗಿ, ಅದು ದೇಶದ ಇತರ ಭಾಗಗಳಿಗೆ ವ್ಯಾಪಿಸುವುದಕ್ಕೆ ಅವರು ತಮ್ಮ ಅಸಹನೆಯನ್ನು ಹೊರಹಾಕಿದರು(40:02.08.59p7). ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ಆಡಳಿತಾತ್ಮಕ ಕ್ರಮಗಳು, ಸಾಮಾಜಿಕ ಅನ್ಯಾಯ ನಿವಾರಣೆಗೂ ಕೆಳಸ್ತರದ ಜನರ ಸಬಲೀಕರಣಕ್ಕೂ ಸಹಕಾರಿಯಾಗಿತ್ತು(86:--.07.59p892). ಸರ್ಕಾರದ ಕೆಲವು ಶಾಸನಾತ್ಮಕ ಕ್ರಮಗಳ ಉದ್ದೇಶಗಳು ಪರೋಕ್ಷವಾಗಿ ಕಾಂಗ್ರೆಸ್ ಪಕ್ಷ ಮತ್ತು ಬಹಿರಂಗವಾಗಿ

ಪಟ್ಟಭದ್ರ ಹಿತಾಸಕ್ತಿ ಗುಂಪುಗಳ ಮೇಲೆ ಪ್ರತಿಕೂಲ ಪರಿಣಾಮ ಬೀರಿತು. ಕಾಂಗ್ರೆಸ್ ಅಂಥ ಗುಂಪುಗಳ ಬೆಂಬಲವನ್ನು ಅವಲಂಬಿಸಿತ್ತು. ಆದ್ದರಿಂದ, ಕೇರಳದ ಹಿಂಸಾತ್ಮಕ ಆಂದೋಲನದ ಹಿಂದಿರುವ ನೈಜ ಕಾರಣ, ಶಿಕ್ಷಣ ಕಾಯಿದೆ ಅಥವಾ ಕೃಷಿ ಸಂಬಂಧ ಮಸೂದೆಯನ್ನು ರದ್ದುಗೊಳಿಸುವುದಾಗಿರಲಿಲ್ಲ. ಬದಲಿಗೆ, ರಾಜ್ಯದಿಂದ ಕಮ್ಯುನಿಸ್ಟ್ ಆಡಳಿತವನ್ನು ನಿರ್ಮೂಲನೆ ಮಾಡುವುದೇ ಅವರ ಏಕೈಕ ಉದ್ದೇಶವಾಗಿತ್ತು(86:30.05.59p711).

ಎಐಸಿಸಿ ಅಧಿಸೂಚನೆಯಲ್ಲಿ(128:p5) ಈ ಕೆಳಗಿನಂತೆ ತಿಳಿಸಲಾಗಿದೆ:

"ಕೇರಳದಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ಕಮ್ಯುನಿಸ್ಟರು ತಮ್ಮ ಪಕ್ಷದ ಗುರಿಗಳನ್ನು ಸಾಧಿಸಲು ಪ್ರಜಾಪ್ರಭುತ್ವವನ್ನು ವಿಕೃತಗೊಳಿಸಿ ಅದನ್ನು ಬಳಸಿಕೊಳ್ಳುತ್ತಿದ್ದಾರೆ. ಪ್ರಜಾಪ್ರಭುತ್ವದ ಬಾಹ್ಯರೂಪವನ್ನು ಜಾಣತನದಿಂದ ಸಂರಕ್ಷಿಸುತ್ತಿದ್ದರೂ ಅದರ ಸತ್ವ ಮತ್ತು ಸಾರಾಂಶವನ್ನು ನಾಶಗೊಳಿಸಲಾಗುತ್ತಿದೆ. ಕೇರಳದಲ್ಲಿ ಪ್ರಜಾಪ್ರಭುತ್ವ ಅಂಥ ಬಿಕ್ಕಟ್ಟನ್ನು ಎದುರಿಸುತ್ತಿದೆ. ಸಂವಿಧಾನದ ಅಡಿಯಲ್ಲಿ ಮಂತ್ರಿಮಂಡಲವನ್ನು ಅಧಿಕಾರದಿಂದ ತೆಗೆದುಹಾಕಲು ಅಥವಾ ವಜಾಗೊಳಿಸಲು ಒತ್ತಾಯಿಸುವ ಹಕ್ಕು ಮತ್ತು ಕರ್ತವ್ಯವಿದೆ ಎಂದು ಪ್ರತಿಭಟನಾಕಾರರು ಭಾವಿಸಿದರು. ಇದು ಅವರ ಸದ್ಯದ ಅಗತ್ಯವೆಂದು ಒತ್ತಾಯಿಸುತ್ತಿದ್ದಾರೆ...."(128:p5).

ಮೇ ತಿಂಗಳ ಕೊನೆಯಲ್ಲಿ ಮತ್ತು ಜೂನ್ ಆರಂಭದಲ್ಲಿ,ಊಟಿಯಲ್ಲಿ ಕೆಪಿಸಿಸಿ ನಾಯಕರ ಮತ್ತು ಕಾಂಗ್ರೆಸ್ ಹೈಕಮಾಂಡ್‌ನ ಕೆಲವು ಸದಸ್ಯರ ನಡುವಿನ ಮಾತುಕತೆಯ ನಂತರ ಆಂದೋಲನದ ವೇಗತೆ ಹೆಚ್ಚಿತು(121:p12).

ಪ್ರಧಾನಿ ನೆಹರು, ಇಂದಿರಾ ಗಾಂಧಿ, ಮೊರಾರ್ಜಿ ದೇಸಾಯಿ, ವಿ.ಕೆ. ಕೃಷ್ಣ ಮೆನನ್, ಕೇಂದ್ರ ಸರ್ಕಾರದ ಕೆಲವು ಹಿರಿಯ ಸದಸ್ಯರು, ಎಐಸಿಸಿಯ ಪದಾಧಿಕಾರಿಗಳು ಯೋಜನಾ ವಿಚಾರ ಸಂಕಿರಣದಲ್ಲಿ ಪಾಲ್ಗೊಳ್ಳಲು ಜೂನ್ ಮೊದಲ ವಾರದಲ್ಲಿ ಊಟಿಗೆ ಬಂದರು(84:03.06.59). ಕೇರಳದಲ್ಲಿ ರಕ್ತಸಿಕ್ತ ರಾಜಕೀಯ ಸಂಘರ್ಷಗಳು ಹೆಚ್ಚುತ್ತಿವೆ ಎಂದು ಅಲ್ಲಿಗೆ ಬಂದ ನೆಹರೂರವರಿಗೆ ಮನವರಿಕೆಯಾಯಿತು. ಧಾರ್ಮಿಕ, ಕೋಮು ಮತ್ತು ಜಾತಿ ರಾಜಕೀಯ ಸ್ಪರ್ಧೆಗೆ ಕೋಮುಭಾವನೆಗಳೇ ಇಂಧನವಾಗಿ ಕಾರ್ಯನಿರ್ವಹಿಸುತ್ತಿರುವುದೆಂದು ಅವರು ಅರ್ಥ ಮಾಡಿಕೊಂಡರು. ರಾಜ್ಯ ಸರ್ಕಾರರ ವಿರುದ್ಧ ಎಐಸಿಸಿ ಅಧ್ಯಕ್ಷರ ಬೆಂಬಲದೊಂದಿಗೆ ಪ್ರದೇಶ ಕಾಂಗ್ರೆಸ್ ಪಕ್ಷ ನಡೆಸುತ್ತಿರುವ ಹಿಂಸಾಚಾರದ ಬಗ್ಗೆ ಪ್ರಧಾನಿಗೆ ಮನವರಿಕೆ ಮಾಡಿಕೊಡಲು ರಾಜ್ಯದ ಕಾನೂನು ಸಚಿವರಾದ ವಿ.ಆರ್.ಕೃಷ್ಣಯ್ಯರ್‌ರವರನ್ನು ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಊಟಿಗೆ ಕಳುಹಿಸಿಕೊಟ್ಟರು*(34:p179;84:04.06.59). ಕೃಷ್ಣಯ್ಯರ್

* "Krishna Iyer characterised the proposed agitation against the Government as an attack on the constitution of India and democracy, because the Congress Party leaders did not seem to care for the ballot box or the majority party in the

ನೆಹರೂ ಅವರ ಮುಂದೆ ವಿವರಗಳನ್ನು ಬಹಿರಂಗಪಡಿಸಿದರು. ನೆಹರೂ ಅವರ ಸಲಹೆಯ ಮೇರೆಗೆ ಅವರು ಇಂದಿರಾ ಗಾಂಧಿಯವರೊಂದಿಗೆ ಚರ್ಚಿಸಿದರು.* ಆದರೆ ಕಾಂಗ್ರೆಸ್ ಅಧ್ಯಕ್ಷ ಅವರ ನಿಲುವು, ಸಹಾನುಭೂತಿಯಿಂದ ಕೂಡಿರಲಿಲ್ಲ. ಆದ್ದರಿಂದ ಈ ನಿಟ್ಟಿನಲ್ಲಿ ಕೃಷ್ಣಯ್ಯರ್ ನೆಹರೂರವರನ್ನು ಮಧ್ಯಪ್ರವೇಶಿಸಲು ಕೇರಳಕ್ಕೆ ಆಹ್ವಾನಿಸಿದರು(34:p179). ಆದ್ದರಿಂದ, ಜೂನ್ 6ರಂದು ಕೊಯಮತ್ತೂರಿನಲ್ಲಿ ನೆಹರೂ ಪತ್ರಿಕಾ ಹೇಳಿಕೆ ನೀಡಿದರು. ಇದು ಎರಡೂ ಕಡೆಯವರಿಗೆ ವಿನಂತಿಯ ರೂಪದಲ್ಲಿತ್ತು.

> "ಸರ್ಕಾರದ ಪ್ರಾಮಾಣಿಕತೆಯ ಬಗ್ಗೆ ಇಷ್ಟೊಂದು ಆಳವಾದ ಮತ್ತು ವ್ಯಾಪಕವಾದ ನಂಬಿಕೆಯ ಕುಸಿತವು ಹೇಗೆ ಸಾಧ್ಯವಾಯಿತು, ಎಂದು ಸರ್ಕಾರ ಮೌಲ್ಯಮಾಪನ ಮಾಡಬೇಕು. ವಿರೋಧಪಕ್ಷವು ತನ್ನ ವಿಧಾನಗಳನ್ನು ಪರಿತ್ಯಜಿಸುವ ವಿಷಯವನ್ನು ಪರಿಗಣಿಸಬೇಕು."

ಎಂದು ಅವರು ಹೇಳಿದರು:

> "...ರಾಜ್ಯದಲ್ಲಿ ಗಂಭೀರವಾದ ಪರಿಸ್ಥಿತಿ ಉದ್ಭವಿಸುತ್ತಿದ್ದು, ದೊಡ್ಡ ಮಟ್ಟದ ಸಂಘರ್ಷದ ಸಾಧ್ಯತೆಯಿದೆ... ...ಸರ್ಕಾರದ ವಿರುದ್ಧ ಜನಗಳ ನಡುವೆ ಪ್ರಬಲವಾದ ಮುನ್ನಡೆ ಸಾಧ್ಯವಾಗುತ್ತಿದೆ...(84:07.06.59). ...ಸರ್ಕಾರ ಎದುರಾಳಿಗಳನ್ನು ಪರಿಗಣಿಸಿ ಸಹಕಾರ ಮತ್ತು ಒಮ್ಮತದ ಮಾರ್ಗವನ್ನು ಆರಿಸಿಕೊಳ್ಳಬೇಕು... ...ಕಾಂಗ್ರೆಸ್ ಸಹ ಪ್ರಜಾಪ್ರಭುತ್ವದ ಆಚರಣೆಗಳ ಮಿತಿಯಲ್ಲಿ ಕೆಲಸ ಮಾಡಬೇಕು... ...ಎದುರಿಸುವವರ ಕರ್ತವ್ಯವೆನ್ನುವುದು, ಶಾಂತಿಯುತವಾದ ಮತ್ತು ಪ್ರಜಾಸತ್ತಾತ್ಮಕವಾದ ವಿಧಾನಗಳನ್ನು ಅಳವಡಿಸಿಕೊಳ್ಳಬೇಕಾಗಿದೆ...(84:07.06.59). ...ಖಂಡಿತವಾಗಿಯೂ, ಭಾರತ ಸರಕಾರವು ಪಂಥೀಯ ಬೇಡಿಕೆಗಳನ್ನು ಅಥವಾ ಹಿಂಸೆಯನ್ನು ಬೆಂಬಲಿಸುವುದಿಲ್ಲ"(84:07.06.59).

ನೆಹರೂ ಅವರ ಈ ಹೇಳಿಕೆಗಳು ಕಮ್ಯುನಿಸ್ಟ್ ಪಕ್ಷಕ್ಕಾಗಲೀ ಕಾಂಗ್ರೆಸ್ ಪಕ್ಷಕ್ಕಾಗಲೀ ತೃಪ್ತಿ ತರಲಿಲ್ಲ. ಕೇರಳದಲ್ಲಿ ಕಾಂಗ್ರೆಸ್ಸಿಗರ ಹಿಂಸಾಚಾರದ ಚಟುವಟಿಕೆಗಳನ್ನು ನೆಹರೂ ಹೆಚ್ಚು ಸ್ಪಷ್ಟವಾಗಿ ಖಂಡಿಸಲಿಲ್ಲ ಎಂದು ಕಮ್ಯುನಿಸ್ಟರು ಅವರನ್ನು ಟೀಕಿಸಿದರು(84:09.06.59). ಕೇರಳ ಸರ್ಕಾರದ ವಿರುದ್ಧದ ಹೋರಾಟವನ್ನು ಬೇಷರತ್ತಾಗಿ ಮತ್ತು ತಕ್ಷಣ ಹಿಂಪಡೆಯಲು ಕಮ್ಯುನಿಸ್ಟರು ಒತ್ತಾಯಿಸಿದರು.**(40:14.06.59) ಇನ್ನೊಂದೆಡೆ ನೆಹರೂ ಅವರ ವಾಗ್ದಂಡನೆಯಿಂದ ಕೇರಳದ ಕಾಂಗ್ರೆಸ್ಸಿಗರು ಕಂಗಾಲಾಗಿದ್ದರು. ಆದರೂ ಅವರ ಪ್ರಜಾಪ್ರಭುತ್ವ ವಿರೋಧಿ ಮತ್ತು ಸಂವಿಧಾನ ವಿರೋಧಿ ರಚನೆ ಆಂದೋಲನದ

---

Assembly. The Kerala government felt confident, he said, that they would be able to meet violence with their own machinery and resources. "

* 23 ಮೇ 2010 ರಂದು. ನ್ಯಾಯಮೂರ್ತಿ ವಿ.ಆರ್. ಕೃಷ್ಣ ಅಯ್ಯರ್ ಅವರೊಂದಿಗೆ ಸಂದರ್ಶನ.

** The statement of Ajoy Ghosh, general Secretary of C.P.I.

ವಿಧಾನಗಳನ್ನು ಬದಲಾಯಿಸಲು ಸಿದ್ಧರಿರಲಿಲ್ಲ. ಅದೇಸಮಯದಲ್ಲಿ, ಜನರ ಮುನ್ನಡೆಗೆ, ನೆಹರೂರವರ ಪರೋಕ್ಷ ಅನುಮೋದನೆಯು ಅವರಿಗೆ ಸಂತೃಪ್ತಿ ನೀಡಿತು. ವಾಸ್ತವವಾಗಿ ಅವರು ಇಂದಿರಾ ಗಾಂಧಿಯವರಿಂದ ಬೆಂಬಲ ಮತ್ತು ಪ್ರೋತ್ಸಾಹವನ್ನು ಪಡೆದರು. ಕಾಂಗ್ರೆಸ್ಸೇತರ ಸರ್ಕಾರ ಭಾರತದಲ್ಲಿ ಅಧಿಕಾರದಲ್ಲಿದ್ದ ಏಕೈಕ ರಾಜ್ಯ ಕೇರಳ. ಕೇರಳದ ಇಎಂಎಸ್ ಸರ್ಕಾರವನ್ನು ಕಿತ್ತೊಗೆಯುವ ಚಟುವಟಿಕೆಗಳಿಗೆ ಇಂದಿರಾ ಗಾಂಧಿಯವರ ಬೆಂಬಲ, ಕೇರಳದಬಿಕ್ಕಟ್ಟಿನಲ್ಲಿ ನಿರ್ಣಾಯಕವಾಗಿತ್ತು.

ಆಂದಿನ ಕೇಂದ್ರ ಗುಪ್ತಚರ ಬ್ಯೂರೋ ಮುಖ್ಯಸ್ಥ ಬಿ.ಎನ್. ಮಲಿಕ್ ಹೀಗೆ ಸಾಕ್ಷ್ಯವನ್ನೊದಗಿಸುತ್ತಾರೆ.

> "ಕೇರಳದಲ್ಲಿ ಗುರುತಿಸಲಾದ ಕೆಂಪು ಚಿಹ್ನೆಯನ್ನು ಮೊದಲು ಕಂಡವರು ಅಂದಿನ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಇಂದಿರಾ ಗಾಂಧಿಯವರು. ಕೊಯಮತ್ತೂರಿನಲ್ಲಿ ನಡೆದ ಎಐಸಿಸಿ ಸಮಾವೇಶದಲ್ಲಿ, ಕೇರಳದ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲು ಕೇಂದ್ರಕ್ಕೆ ಮನವಿ ಸಲ್ಲಿಸಿದರು"

ಎಂದರು(123:p348). ದೆಹಲಿಯಲ್ಲಿ 10ನೇ ಜೂನ್ 1959ರಂದು ಪತ್ರಿಕಾಗೋಷ್ಠಿಯಲ್ಲಿ, ಪ್ರಧಾನಿ ಹೇಳಿದರು:

> "ಪ್ರಜಾಪ್ರಭುತ್ವವಿರುದ್ಧದ ಪ್ರಕ್ರಿಯೆಗಳ ಮೂಲಕವೋ ಅಸಂವಿಧಾನಿಕ ವಿಧಾನಗಳ ಮೂಲಕವೋ ನ್ಯಾಯಸಮ್ಮತವಾಗಿ ರಚನೆಯಾದ ಸರ್ಕಾರವನ್ನು ಉರುಳಿಸುವುದು ಎಂದಿಗೂ ಬಯಸುವುದಿಲ್ಲ"(84:11.06.59).

ಸಂಪೂರ್ಣವಾಗಿ ರಾಜಕೀಯ ಸಂಘರ್ಷವಾಗಿ ಬದಲಾಗಬೇಕಾಗಿದ್ದ ಕೇರಳದ ಪರಿಸ್ಥಿತಿಯಲ್ಲಿ ಜಾತಿವಾದ/ಕೋಮುವಾದ ಅಂಶವನ್ನು ತಂದದ್ದಕ್ಕೆ ಅವರಿಗೆ ಅಸಮಾಧಾನದೊಂದಿಗೆ ಬೇಸರವೂ ಆಯಿತು(50:11.06.59). ಕೇರಳದಲ್ಲಿ ಉಂಟಾಗಿರುವ ಅಸಾಧಾರಣ ಪರಿಸ್ಥಿತಿಯ ಬಗ್ಗೆ ನೆಹರೂಗೆ ಅರಿವಿತ್ತು.

> "ಇಷ್ಟಪಡದಿರುವುದರೊಂದಿಗಿನ ಹೊಂದಾಣಿಕೆಯ ಪ್ರಯತ್ನಗಳಲ್ಲೇ ಸಹಿಷ್ಣುತೆ ಸರಿಯಾದ ವಿಧದಲ್ಲಿ ಪರಿಶೋಧನೆಗೊಳಪಡುವುದು"

ಎಂದು ಅವರು ಒತ್ತಿ ಹೇಳಿದರು ಇಎಂಎಸ್ ಸರ್ಕಾರವನ್ನು ಟೀಕಿಸುವ ಸಲುವಾಗಿಯೇ ಈ ಹೇಳಿಕೆಯನ್ನು ಅವರು ನೀಡಿದ್ದರು. ಅವರು ಹೇಳಿದರು:

> "ಕಾಂಗ್ರೆಸ್ ಖಂಡಿತವಾಗಿಯೂ ಜಾತಿವಾದಿ/ಕೋಮುವಾದಿ ಶಕ್ತಿಗಳ ಪರವಾಗಿ ಕೆಲಸ ಮಾಡುವುದಿಲ್ಲ."

> "ಕಾಂಗ್ರೆಸ್ ನಾಯಕರು ಜಾತಿ/ಕೋಮುವಾದಿ ಸಂಘಟನೆಗಳಿಗೆ ಸೇರುವಾಗ, ಕಾಂಗ್ರೆಸ್‌ಗೆ ರಾಜೀನಾಮೆ ನೀಡುವಂತೆ ಕೇಳಿಕೊಂಡಿದ್ದ ನೆಹರೂ, ಕೇರಳದ ವಿಷಯದಲ್ಲಿ ಅದೇ ನಿಲುವನ್ನು ಏಕೆ ತೆಗೆದುಕೊಳ್ಳುವುದಿಲ್ಲ?"

ಎಂದು ಪತ್ರಕರ್ತರೊಬ್ಬರು ಕೇಳಿದ ಪ್ರಶ್ನೆಗೆ ಉತ್ತರವಾಗಿ,

> "ಯಾವ ಸಮುದಾಯ/ಕೋಮು ಗುಂಪನ್ನು ಉಲ್ಲೇಖಿಸುತ್ತಿದ್ದಾರೆ, ಎನ್ನುವ ವಿಚಾರ ತನಗೆ ಗೊತ್ತಿಲ್ಲ"

ಎಂದಿದ್ದರು ನೆಹರೂ (84:11.06.59). ಹೀಗೆ ನೆಹರೂರವರು ಪ್ರಜ್ಞಾಪೂರ್ವಕವಾಗಿಯೋ ಇಲ್ಲವೋ ಒಟ್ಟಿನಲ್ಲಿ ರಾಜ್ಯ ಕಾಂಗ್ರೆಸ್‌ನ ಕಾರ್ಯವೈಖರಿಯ ಬಗ್ಗೆ ಅಸ್ಪಷ್ಟವಾಗಿ ಮತ್ತು ಅಜ್ಞಾನಿಯಾಗಿಯೇ ಉಳಿದರು. ಅವರ ಅಭಿಪ್ರಾಯದಂತೆ,

> "ಕೆಲ ಕಾಂಗ್ರೆಸಿಗರು ಧರಣಿಯಲ್ಲಿ ಪಾಲ್ಗೊಂಡರೆ, ಅವರನ್ನು ಕೇವಲ ಕ್ಯಾಥೋಲಿಕ್ ಧರ್ಮದವರೆಂದು ಪರಿಗಣಿಸುತ್ತೇವೆಯೇ ಹೊರತು, ಪಕ್ಷದ ಸದಸ್ಯರೆಂದು ಅಲ್ಲ" *(84:11.06.59)

ಆಂದೋಲನವನ್ನು ಹತ್ತಿಕ್ಕಲು ರಾಜ್ಯ ಸರ್ಕಾರಕ್ಕೆ ಸಂಪೂರ್ಣ ಅಧಿಕಾರವಿದೆ ಎಂದು ನೆಹರೂ ಅವರು ಎನ್‌ಎಸ್‌ಎಸ್‌ನ ಮುಖಂಡ ಮನ್ನತ್ ಪದ್ಮನಾಭನ್ ಮತ್ತು ಕೇರಳ ರಾಜ್ಯಪಾಲರಿಗೆ ಎಚ್ಚರಿಕೆ ನೀಡಿದರು. ಮತ್ತು ಅಗತ್ಯವಿದ್ದಲ್ಲಿ ಕೇಂದ್ರ ಸರ್ಕಾರವು ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಕ್ಕೆ ಸಹಾಯ ಮಾಡುವುದಾಗಿ, ಅವರು ಸ್ಪಷ್ಟಪಡಿಸಿದರು(127:p67). ಚಳವಳಿಗಾರರ ಚಟುವಟಿಕೆಗಳಿಗೆ ಸಹಕರಿಸದಂತೆ ಕೇರಳದ ಕಾಂಗ್ರೆಸ್ ಘಟಕಕ್ಕೆ ಸಲಹೆ ನೀಡಿದರು. ಇದು 'ಪಕ್ಷದ ತತ್ವಗಳು ಮತ್ತು ಪ್ರಜಾಸತ್ತಾತ್ಮಕ ನೀತಿಗಳನ್ನು ತ್ಯಜಿಸಿದ್ದಕ್ಕೆ ಸಮಾನವಾಗಿರುತ್ತದೆ. ಇದು ಕೇರಳ ಮತ್ತು ಭಾರತದ ಇತರ ಭಾಗಗಳಲ್ಲಿ ಪ್ರತಿಕೂಲ ಪ್ರತಿಕ್ರಿಯೆಗಳನ್ನು ಸೃಷ್ಟಿಸುತ್ತದೆ. ಆಯ್ಕೆ ಮಾಡಿದ ಸರ್ಕಾರವನ್ನು ಕಿತ್ತೊಗೆಯುವ ಬಗ್ಗೆ ಮಾತನಾಡುವುದೆಂದರೆ, ಆಂತರಿಕ ಕಲಹವನ್ನು ಪ್ರೋತ್ಸಾಹಿಸುವುದಕ್ಕೆ ಮತ್ತು ಸಂವಿಧಾನದ ಆಶಯಗಳಿಗೆ ಸವಾಲೆಸೆಯುವುದಕ್ಕೆ ಸಮಾನವಾಗಿರುತ್ತದೆ. ಅಂತಿಮ ವಿಶ್ಲೇಷಣೆಯಲ್ಲಿ, ಭಾರತದ ಆಡಳಿತವು, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿದ್ದು, ನೇರ ಹೋರಾಟವನ್ನು ಹತ್ತಿಕ್ಕಬೇಕಾಗಬಹುದು' ಎಂದು ಎಚ್ಚರಿಸಿದರು(127:p67).

ಕೇರಳದಲ್ಲಿ ಹಿಂಸಾತ್ಮಕ ಮತ್ತು ಸುಸಂಘಟಿತ 'ನೇರ ಹೋರಾಟ' ಜೂನ್ 12ರಂದು ರಾಜ್ಯಾದ್ಯಂತ ಹರತಾಳದ ಘೋಷಣೆಯೊಂದಿಗೆ, ಪ್ರಾರಂಭವಾಯಿತು. ಈ ಸುದ್ದಿ ಹಬ್ಬಿದಾಗ ಕಾನೂನು ಸುವ್ಯವಸ್ಥೆ ಕಾಪಾಡಲು ಅಗತ್ಯ ಕ್ರಮ ಕೈಗೊಳ್ಳಬೇಕು ಎಂದು ರಕ್ಷಣಾ ಸಚಿವ ವಿ.ಕೆ. ಕೃಷ್ಣ ಮೆನನ್ ಬಾಂಬೆಯಿಂದ, ರಾಜ್ಯ ಸರ್ಕಾರಕ್ಕೆ ಸೂಚನೆ ನೀಡಿದರು.

> "ಪ್ರಜಾಪ್ರಭುತ್ವದಲ್ಲಿ ಸರ್ಕಾರವನ್ನು ಬದಲಾಯಿಸುವುದು, ಅವಿಶ್ವಾಸ ಗೊತ್ತುವಳಿ ಮಂಡನೆ ಮೂಲಕವಾಗಿರಬೇಕು, ಇಲ್ಲದಿದ್ದರೆ. ಆಡಳಿತ ವ್ಯವಸ್ಥೆ ಸಂಪೂರ್ಣವಾಗಿ

---

* Nehru said : '... That a number of congress who are Catholics also are pulled in two directions, i.e., as individuals and not as an organization'.

ಕುಸಿದಿರಬೇಕಾಗುತ್ತದೆ. ಆಗ ಈ ಬಗ್ಗೆ ಕ್ರಮ ತೆಗೆದುಕೊಳ್ಳಬಹುದಾಗಿರುತ್ತದೆ. ಕೇವಲ, ಸಭೆಗಳಲ್ಲಿ ಭಾಷಣ ಮಾಡಿ ಬೇಡಿಕೆ ಮಂಡಿಸಿ ಮಾತ್ರಕ್ಕೋ ಆಡಳಿತದ ವಿರುದ್ಧ ಪ್ರತಿಭಟನೆಗಳನ್ನು ಸಂಘಟಿಸಿದ ಮಾತ್ರಕ್ಕೋ ಯಾವುದೇ ಸರ್ಕಾರ ಅಧಿಕಾರವನ್ನು ತ್ಯಜಿಸುವುದಿಲ್ಲ"(84:13.06.59).

ಕಾನೂನು ಮತ್ತು ಸುವ್ಯವಸ್ಥೆಯ ನಿರ್ವಹಣೆಗೆ ಸಂಬಂಧಿಸಿದಂತೆ ಯಾವುದೇ ರಾಜ್ಯವನ್ನು ವಿಭಿನ್ನವಾಗಿ ಪರಿಗಣಿಸಲು ಸಾಧ್ಯವಿಲ್ಲ(84:13.06.59)

ಎಂದು ಅವರು ಪ್ರತಿಪಾದಿಸಿದರು. ರಾಜ್ಯ ಸರ್ಕಾರದೊಂದಿಗೆ ಅಸಹಿಷ್ಣುತೆ ಸೃಷ್ಟಿಸಿಕೊಂಡು, ಕೇರಳದ ಆಂದೋಲನಗಳಿಗೆ ಕುರುಡಾಗಿ ಬೆಂಬಲ ನೀಡಿದ್ದ ಇಂದಿರಾ ಗಾಂಧಿ ಹೀಗೆ ಹೇಳಿದರು:

"ಕೇರಳದ ಕಮ್ಯುನಿಸ್ಟರು, ಅಲ್ಲಿ ನಡೆಯುತ್ತಿರುವ ಹಿಂಸಾಚಾರವನ್ನು ಕೊನೆಗೊಳಿಸದಿದ್ದರೆ ಮತ್ತು ವಿರೋಧ ಪಕ್ಷದ ಕಾರ್ಮಿಕರನ್ನು ಹಿಂಸಿಸುವುದನ್ನು ನಿಲ್ಲಿಸದಿದ್ದರೆ, ಸಮಸ್ಯೆಗೆ ಪರಿಹಾರ ಸಾಧ್ಯವಾಗುವುದಿಲ್ಲ"(84:13.06.59).

ಕೇರಳದ ಪರಿಸ್ಥಿತಿ ಇದ್ದಕ್ಕಿದ್ದಂತೆ ತುಂಬಾ ಗಂಭೀರ ಸ್ಥಿತಿಯನ್ನು ತಲುಪಿತು. ಅಂಗಮಾಲಿಯಲ್ಲಿ ಆಕ್ರೋಶಗೊಂಡ ಪ್ರತಿಭಟನಾಕಾರರು ಪೊಲೀಸ್ ಠಾಣೆ ಮೇಲೆ ದಾಳಿ ನಡೆಸಿದರು. ಪರಿಣಾಮವಾಗಿ ಏಳು ಮಂದಿ ಪ್ರಾಣ ಕಳೆದುಕೊಂಡರು ಮತ್ತು ಹಲವರು ಗಾಯಗೊಂಡರು. ಇನ್ನು ಕೆಲವೆಡೆ ಗುಂಡಿನ ದಾಳಿ ನಡೆದವು. ಚಳವಳಿಗಾರರ ವಿಧ್ವಂಸಕ ಚಟುವಟಿಕೆಗಳಿಗೆ ಈ ದಿನಗಳು ಸಾಕ್ಷಿಯಾದವು. ಕೇರಳಕ್ಕೆ ಭೇಟಿ ನೀಡಿ, ಆಂದೋಲನ ಮತ್ತು ಇತರ ವಿಷಯಗಳ ಬಗ್ಗೆ ಅಲ್ಲಿಯ ಈಗಿನ ಪರಿಸ್ಥಿತಿಯನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಬೇಕು, ಎಂದು ಇಂದಿರಾಗಾಂಧಿಯವರು ಎಐಸಿಸಿ ಕಾರ್ಯದರ್ಶಿ ಸಾದಿಕ್ ಅಲಿ ಅವರಿಗೆ ಜವಾಬ್ದಾರಿಯನ್ನು ವಹಿಸಿದರು(128:p8). ಕೇರಳದ ಬೆಳವಣಿಗೆಗಳ ಬಗ್ಗೆ ತಿಳಿದುಕೊಳ್ಳಲು, ಪ್ರತಿಭಟನೆ ನಡೆಸುತ್ತಿರುವ ವಿರೋಧಪಕ್ಷಗಳನ್ನು ಬೆಂಬಲಿಸಲು, ಶ್ರೀಮತಿ ಗಾಂಧಿಯವರ ಸೂಚನೆಯಂತೆ ಯು. ಎನ್. ಧೇಬಾರ್ ಕೂಡ ಕೇರಳಕ್ಕೆ ಬಂದರು. ಈ ನಾಯಕರು ಸಂಘರ್ಷ ಪೀಡಿತ ಪ್ರದೇಶಗಳಿಗೆ ಭೇಟಿ ನೀಡಿದರು ಮತ್ತು ಕಾಂಗ್ರೆಸ್‌ನ ಸ್ಥಳೀಯ ಮುಖಂಡರ ಮತ್ತು ಸಮುದಾಯ/ಕೋಮು ಸಂಘಟನೆಗಳ ಪ್ರತಿನಿಧಿಗಳ ಜೊತೆ ಚರ್ಚೆ ನಡೆಸಿದರು. ಆನಂತರ ಅವರು, ಪತ್ರಿಕೆಗಳಿಗೆ ಮತ್ತು ಕಾಂಗ್ರೆಸ್ ಸಂಸದೀಯ ಮಂಡಳಿಗೆ ಏಕಪಕ್ಷೀಯವಾದ ವರದಿಯನ್ನು ನೀಡಿದರು. ಕ್ರಿಶ್ಚಿಯನ್ನರನ್ನು ಮಾತ್ರ ಗುಂಡಿನ ದಾಳಿಗೆ ಬಲಿಪಶುಗಳನ್ನಾಗಿ ಮಾಡಿತ್ತು, ಎನ್ನುವ ಕ್ರಿಶ್ಚಿಯನ್ ಕೋಮು ಅಭಿಯಾನಕ್ಕೆ ಈ ನಾಯಕರು ತಮ್ಮ ಪ್ರವಾಸದ ಸಮಯದಲ್ಲಿ, ಬೆಂಬಲ ವ್ಯಕ್ತಪಡಿಸಿದರು.*(128:) ಹಾಗೆ ಅವರು, ಕೋಮು ದ್ವೇಷ ಮತ್ತು ಆಂದೋಲನದ ಪ್ರಕ್ರಿಯೆಗಳಿಗೆ ಆವೇಶವನ್ನು

* They asked: 'Why only Christians were chosen for this special treatment is for the state government is to explain'.

ಹೆಚ್ಚಿಸಿದರು. ರಾಜ್ಯ ಸರ್ಕಾರವು ಸರ್ಕಾರಿ ಕಚೇರಿಗಳನ್ನು ರಕ್ಷಿಸಲು ಮತ್ತು ವಿಧ್ವಂಸಕ ಚಟುವಟಿಕೆಗಳನ್ನು ನಿಗ್ರಹಿಸಲು ರಾಜ್ಯ ಸರ್ಕಾರ ಅಪೇಕ್ಷಿಸಿದರೆ, ಕೇಂದ್ರ ಸರ್ಕಾರ ಸೇನಾ ನೆರವು ನೀಡಲು ಸಿದ್ಧವಾಗಿತ್ತು(84:16.06.59). ಸೇನಾ ಸಹಾಯವಿಲ್ಲದೆ ವಿಷಯಗಳು ಇತ್ಯರ್ಥಪಡಿಸಬೇಕು ಎಂದು ಮುಖ್ಯಮಂತ್ರಿ ಆಶಿಸಿದರು. ಮೇಲಾಗಿ ನೆಹರೂರವರ ಪ್ರಜಾಪ್ರಭುತ್ವವನ್ನು ದೃಢವಾಗಿ ನಂಬಿದ್ದ ಅವರು, ಕೇರಳಕ್ಕೆ ಭೇಟಿ ನೀಡುವಂತೆ ಪ್ರಧಾನಿಯನ್ನು ಆಹ್ವಾನಿಸಿದರು. ಪ್ರಧಾನಿಯವರ ಮನೋಭಾವ ಸಕಾರಾತ್ಮಕವಾಗಿತ್ತು. ಜಾತಿ/ಕೋಮುವಾದದ ಸ್ವಭಾವವಿರುವ ಯಾವುದೇ ಸಂಘಟನೆ/ ಚಳುವಳಿಯ ಪರ ನೆಹರೂ ಇರಲಿಲ್ಲ. ವಿವಾದಗಳನ್ನು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳಬೇಕೆನ್ನುವುದು ಒತ್ತಾಯಪೂರ್ವಕವಾದ ಮನವಿಯಾಗಿತ್ತು. ಆದರೆ ನೆಹರೂರವರ 'ಜನತಾ ಆಂದೋಲನೆ'ದ ಉಲ್ಲೇಖವು ಅರ್ಹತೆಯಿಲ್ಲದ ಪ್ರಾಮುಖ್ಯತೆ ಪಡೆದುಕೊಂಡಿತು. ನಂಬೂದಿರಿಪಾಡ್ ಪ್ರಕಾರ ಅದು ವಾಸ್ತವವಾಗಿ ಜನತೆಯ ದಂಗೆಯಾಗಿರದೆ ಬರಿಯ ನಾಯರುಗಳ ಮತ್ತು ಕ್ಯಾಥೋಲಿಕರ ದಂಗೆಯಾಗಿತ್ತು.*(84:14.06.59;33:08.06.59)

## ಪ್ರಧಾನಿಯವರ ಕೇರಳ ಭೇಟಿ

ಪ್ರಧಾನ ಮಂತ್ರಿ ಮೂರು ದಿನಗಳ ಕಾಲ ಕೇರಳಕ್ಕೆ ಭೇಟಿ ನೀಡುತ್ತಾರೆ, ಅಂದರೆ ಜೂನ್ 22ರಿಂದ 24ರವರೆಗೆ, ಎಂದು 1959ರ ಜೂನ್ 19ರಂದು ತಿರುವನಂತಪುರದಲ್ಲಿ ಅಧಿಕೃತವಾಗಿ ಘೋಷಿಸಲಾಯಿತು. ರಾಜ್ಯ ಸರ್ಕಾರದ ವಿರುದ್ಧ ಹೋರಾಟದ ಜನಪರ ಸ್ವರೂಪವನ್ನು ನೆಹರೂಗೆ ಮನಗಾಣಿಸಲು, ಪ್ರತಿಭಟನಾಕಾರರು ತರಾತುರಿಯಲ್ಲಿ ಸಿದ್ಧತೆ ನಡೆಸಿದರು. ಇಂದಿರಾ ಗಾಂಧಿಯವರ ಆದೇಶದ ಮೇರೆಗೆ ಸಾದಿಕ್ ಅಲಿ ಮತ್ತು ಧೇಬಾರ್‌ರವರು ಕೈಗೊಂಡ 'ಸತ್ಯಶೋಧನಾ ಪ್ರವಾಸ'ದ ಉದ್ದೇಶವೂ ಇದೇ ಆಗಿತ್ತು. ಆಂದೋಲನ ಪ್ರಧಾನ ಮಂತ್ರಿಯವರ ಮುಂದೆ ಪ್ರತಿಭಟನೆ ನಡೆಸುವ ಸಂಘಟನೆ/ಗುಂಪುಗಳ ಪ್ರತಿನಿಧಿಗಳು ತಮ್ಮ ಕುಂದುಕೊರತೆಗಳು ಮತ್ತು ಬೇಡಿಕೆಗಳನ್ನು ಪ್ರಸ್ತುತಪಡಿಸಲು ಸರಿಯಾದ ಮಾರ್ಗಸೂಚಿಗಳನ್ನು ಒದಗಿಸಲಾಯಿತು. ಪ್ರವಾಸದ ನಂತರ ಧೇಬಾರ್‌ರವರು ಕಾಂಗ್ರೆಸ್ ಅಧ್ಯಕ್ಷರು ಮತ್ತು ಪ್ರಧಾನ ಮಂತ್ರಿಗಳಿಗೆ ಕೇರಳದ ಪರಿಸ್ಥಿತಿಯ ಬಗ್ಗೆ ವಿವರಣೆಗಳನ್ನು ನೀಡಿದರು(84:21,22.06.59). ನೆಹರೂ ಭೇಟಿಯ ದಿನ ಸುಮಾರು ಮೂರು ಲಕ್ಷ ಜನರನ್ನು ತಿರುವನಂತಪುರಕ್ಕೆ ಕರೆತರಲು ಸಿದ್ಧತೆ ನಡೆದಿದೆ ಎಂದು ಕೆಲವು ಮಲಯಾಳಂ ಪತ್ರಿಕೆಗಳು ವರದಿ ಮಾಡಿದವು( 143:21.06.59; 108:21,22.06.59;180:21.06.59). ಆದರೆ, ಸರ್ಕಾರ ಮತ್ತು ಪ್ರತಿಭಟನಾಕಾರರ ನಡುವೆ ಇರುವ ವಿವಾದಗಳನ್ನು ಇತ್ಯರ್ಥಗೊಳಿಸಲು ಪ್ರಧಾನಿಯವರು ತಮ್ಮ

---

* 'ಪಳ್ಳಿಯಚ್ಚನ್ ಮತ್ತು ಪಿಳ್ಳೈಅಚ್ಚನ್' (ಕ್ರೈಸ್ತರು ಮತ್ತು ನಾಯರುಗಳು) ಹೋರಾಟ ನಡೆಯುತ್ತಿದೆ ಎಂದು ಇಎಂಎಸ್ ಲೇವಡಿ ಮಾಡಿದರು.

ಅಧಿಕೃತ ಹುದ್ದೆಯನ್ನು ಸರಿಯಾಗಿ ಚಲಾಯಿಸುತ್ತಾರೆಂದು ಮುಖ್ಯಮಂತ್ರಿಗಳು ನಿರೀಕ್ಷಿಸಿದರು(84:20.06.59).

ಪ್ರಧಾನಿ ಜೂನ್ 22ರಂದು ಎರಡು ಗಂಟೆಗೆ ತಿರುವನಂತಪುರಕ್ಕೆ ಆಗಮಿಸಿದರು. ಆಗ ಅಲ್ಲಿ, ರಾಜ್ಯ ಸರ್ಕಾರದ ವಿರುದ್ಧ ಪ್ರತಿಭಟನಾ ಪ್ರದರ್ಶನಗಳು ನಡೆಯುತ್ತಿದ್ದವು. ಕೇರಳ ಅಥವಾ ಬೇರೆ ರಾಜ್ಯ ಸರ್ಕಾರಗಳ ವಿರುದ್ಧ ನಡೆಯುವ ನೇರ ಹೋರಾಟದ ಸಂದರ್ಭಗಳಲ್ಲೂ, ಭಾರತ ಸರ್ಕಾರವು ಇದೇ ವಿಧಾನವನ್ನು ಅಳವಡಿಸಿಕೊಳ್ಳುತ್ತದೆ ಎಂದು ನೆಹರೂ ಸ್ಪಷ್ಟಪಡಿಸಬೇಕೆಂದು ಇಎಂಎಸ್ ಬಯಸಿದ್ದರು. ಅದೇ ಸಮಯದಲ್ಲಿ, ಕಮ್ಯುನಿಸ್ಟ್ ಸರ್ಕಾರವು ವಿರೋಧಪಕ್ಷಗಳೊಂದಿಗೆ ಸಾರ್ಥಕವಾಗುವ ಸಮಾಲೋಚನೆಯ ಮೂಲಕ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಗರಿಷ್ಠ ಪ್ರಮಾಣದಲ್ಲಿ ಪ್ರಯತ್ನಿಸುವುದಾಗಿ ಮುಖ್ಯಮಂತ್ರಿ ಹೇಳಿದರು(127:p68). ರಾಜ್ಯಪಾಲರೊಂದಿಗೆ ಮತ್ತು ಸಚಿವರುಗಳೊಂದಿಗೆ ನೆಹರೂರವರು ಮೂರು ದಿನಗಳ ಸುದೀರ್ಘ ಮಾತುಕತೆ ನಡೆಸಿದರು. ರಾಜಕೀಯ ಪಕ್ಷಗಳು, ಕಾರ್ಮಿಕ ಸಂಘಗಳು, ಜಾತಿ ಸಂಘಟನೆಗಳು/ಗುಂಪುಗಳು ಮತ್ತು ಸಮುದಾಯ ಸಂಘಟನೆಗಳ ಪ್ರತಿನಿಧಿಗಳೊಂದಿಗೆ ಶಾಲಾ ಮೇನೆಜರು, ಬಿಷಪ್‌ಗಳು, ಎಸ್ಟೇಟ್/ತೋಟಗಾರರು, ಭೂಮಾಲೀಕರು, ವಕೀಲರು, ಪತ್ರಕರ್ತರು ಮುಂತಾದ ವಿವಿಧ ಹಿತಾಸಕ್ತಿಗಳ ವಕ್ತಾರರೊಂದಿಗೆ,ಈ ಮೂರೂ ದಿನಗಳಲ್ಲಿ ಪ್ರಧಾನ ಮಂತ್ರಿ ಸಭೆ ನಡೆಸಿದರು. ನೆಹರೂರವರು ಕೇರಳದ ಪರಿಸ್ಥಿತಿಯು ತಾನು ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚು ಹದಗೆಟ್ಟಿದೆ ಎಂದು ನಂತರ ಪ್ರತಿಕ್ರಿಯಿಸಿದರು. ರಾಜಿಯಾಗುವ ಯಾವ ಸಾಧ್ಯತೆಯೂ ಇಲ್ಲದ, ಆದರೆ 'ದ್ವೇಷದ ಬಲವಾದ ಗೋಡೆಗಳಿರುವ' ಉನ್ಮಾದದ ಪರಿಸ್ಥಿತಿ ರಾಜ್ಯದಲ್ಲಿದೆ ಎಂದರು(127:p68). ಅವರು ಅಲ್ಲಿಯವರೆಗೆ ಎಲ್ಲಿಯೂ ಕಾಣದ ಸಂಘರ್ಷ ಕೇರಳದಲ್ಲಿ ನಡೆದಿದೆ, ಎಂದು ಮನವರಿಕೆಯಾದಂತಿದ್ದ ಅವರಿಗೆ, ಮೊದಲು ದೊರಕಿದ್ದ ವರದಿಗಳ ಪ್ರಕಾರ, ಈಗಿನ ಪರಿಸ್ಥಿತಿಯನ್ನು ಎದುರಿಸಲು ಅವರು ಸಜ್ಜಾಗಿರಲಿಲ್ಲ. ಅವರು ಆಂದೋಲನವನ್ನು ತಿರಸ್ಕರಿಸಲು ಸಿದ್ಧರಿರಲಿಲ್ಲ. ನೆಹರೂರವರು, ಕಾಂಗ್ರೆಸ್ಸಿಗರು ಮತ್ತು ಇತರ ವಿರೋಧ ಪಕ್ಷಗಳಿಗೆ ಪ್ರತಿಭಟಿಸುವ ಹಕ್ಕು ಹೊಂದಿದ್ದರೂ, ಅವರು ಸಾರ್ವಜನಿಕ ನಡವಳಿಕೆಯ ಗುಣಮಟ್ಟವನ್ನು ಅನುಸರಿಸಬೇಕು, ಹಿಂಸಾತ್ಮಕ ಮತ್ತು ಅತಿರಂಜಿತವಾದ ಅಥವಾ ಆಭಾಸಕರವಾದ ಚಟುವಟಿಕೆಗಳನ್ನು ಪ್ರೋತ್ಸಾಹಿಸಬಾರದು ಎಂದು ಕಾಂಗ್ರೆಸ್ ಮತ್ತು ಇತರ ವಿರೋಧಪಕ್ಷಗಳಿಗೆ ನೆಹರೂ ಹೇಳಿದರು. ಪಿಕೆಟಿಂಗ್, ವಿಶೇಷವಾಗಿ ವಿದ್ಯಾರ್ಥಿಗಳು ನಡೆಸುವುದನ್ನು ಅವರು ಅನುಮೋದಿಸಲಿಲ್ಲ. ಅವರು ಹೇಳಿದರು:

> "ನಾನು ಈ ಪಿಕೆಟಿಂಗ್ ವಿಧಾನ ಇಷ್ಟಪಡುವುದಿಲ್ಲ. ವಿಶೇಷವಾಗಿ ಶಾಲೆಗಳಲ್ಲಿ ನಡೆಸುವಂಥವು. ಹುಡುಗ ಹುಡುಗಿಯರು ಪಿಕೆಟಿಂಗ್‌ಗಳಲ್ಲಿ ತೊಡಗಿಸಿಕೊಳ್ಳುವುದನ್ನು ನಾನು ಇಷ್ಟಪಡುವುದಿಲ್ಲ(84:26.06.59).

ಕೇರಳದ ಪತ್ರಿಕೆಗಳು ಬಳಸುವ ಭಾಷೆಯನ್ನು ನೆಹರೂ ತಿರಸ್ಕರಿಸಿದರು.

> "ಕೇರಳದ ಪತ್ರಿಕೆಗಳು ನಿಂದನೆಯ ಭಾಷೆಯನ್ನು ಬೆಳೆಸಿಕೊಂಡಂತಿದೆ. ಮಿತವಾದ ಮತ್ತು ಸೌಮ್ಯವಾದ ಭಾಷೆಯಲ್ಲಿ ತಮ್ಮ ಭಾವನೆಗಳನ್ನು ಬಲವಾಗಿ ವ್ಯಕ್ತಪಡಿಸಲು ನಾನು ಅವರನ್ನು ಪ್ರಾಮಾಣಿಕವಾಗಿ ವಿನಂತಿಸುತ್ತೇನೆ*".

ಕೇರಳದಿಂದ ಹಿಂದಿರುಗಿದ ನಂತರ, ನೆಹರೂರವರ ಉಪಸ್ಥಿತಿಯಲ್ಲಿ ಸೇರಿದ, ಕಾಂಗ್ರೆಸ್ ಸಂಸದೀಯ ಮಂಡಳಿಯು ಸಾಂಕೇತಿಕ ಪಿಕೆಟಿಂಗ್‌ಗೆ ಅನುಮತಿ ನೀಡಿತು.** ಕ್ರಮೇಣ ಅದನ್ನು ಹಿಂತೆಗೆದುಕೊಳ್ಳುವ ಭರವಸೆಯಲ್ಲಿ ಹೀಗೆ ಮಾಡಲಾಗಿತ್ತು.

ಪ್ರಧಾನಿ ತಮ್ಮ ಭೇಟಿಯ ಕೊನೆಯಲ್ಲಿ ಮೂರು ನಿರ್ದೇಶಗಳನ್ನು ಅಥವಾ ಸಲಹೆಗಳನ್ನು ಮುಂದಿಟ್ಟರು:

ಅ) ಕೇರಳ ಶಿಕ್ಷಣ ಕಾಯಿದೆ, 1959 ರದ್ದುಗೊಸಬೇಕು ಮತ್ತು ಅದರ ವಿವಾದಾತ್ಮಕ ನಿಬಂಧನೆಗಳನ್ನುವಿಮರ್ಶಕರೊಂದಿಗೆ ಚರ್ಚಿಸಬೇಕು.

ಆ) ದುಂಡು ಮೇಜಿನ ಸಭೆಯನ್ನು ಕರೆದು ವಿರೋಧಪಕ್ಷಗಳ ಆರೋಪಗಳಿಗೆ ತಕ್ಕ ಉತ್ತರ ನೀಡಬೇಕು.

ಇ) ಇತ್ತೀಚೆಗೆ ನಡೆದ ಪೊಲೀಸ್ ಫೈರಿಂಗ್ ಬಗ್ಗೆ ನ್ಯಾಯಾಂಗ ತನಿಖೆ ಕೈಗೊಳ್ಳಬೇಕು(129:26.06.59).

ರಾಜ್ಯದಲ್ಲಿ ಈಗ ನೆಲೆಗೊಂಡಿರುವ ಅಶಾಂತಿಯು ಒಂದು 'ಜನತಾ ಮುನ್ನಡೆ'ಯೆಂದು ನೆಹರೂ ಪುನರುಚ್ಚಿಸಿದರು. ಹೊಸ ಚುನಾವಣೆಗಳನ್ನು ಎದುರಿಸುವುದರಿಂದ ಸಂಘರ್ಷವನ್ನು ಶಮನಗೊಳಿಸುವುದಕ್ಕಿರುವ ಸ್ಪಷ್ಟ ಮಾರ್ಗ, ಎಂದು ಅವರು ಅಭಿಪ್ರಾಯಪಟ್ಟರು. 'ಜನತಾ ಮುನ್ನಡೆ' ಕುರಿತು ನೆಹರೂ ಅವರ ಅವಲೋಕನಕ್ಕೆ ಮುಖ್ಯಮಂತ್ರಿ ಪ್ರತಿಕ್ರಿಯಿಸಿದ್ದು ಹೀಗೆ:

> "ಕೇಂದ್ರದ ಮಧ್ಯಪ್ರವೇಶ ಎನ್ನುವ ಬೆದರಿಕೆಯನ್ನು ತೆಗೆದುಹಾಕಿದರೆ, ಅದು ಕೇವಲ ಒಂದು ನೀರಿನ ಗುಳ್ಳೆಯಂತೆ ಒಡೆಬುಹೋಗುತ್ತದೆ(40:12.07.59).

ಸಾರ್ವಜನಿಕ ಪ್ರತಿಭಟನೆಯು ಮುಂದುವರಿಯುತ್ತಲೇ ಇರುವ ಕಾರಣ ಪೊಲೀಸರು ಫೈರಿಂಗ್ ಪ್ರಕರಣದ ನ್ಯಾಯಾಂಗ ತನಿಖೆಯನ್ನು ಮೊದಲ ಹಂತದಲ್ಲಿ ನಡೆಸುವ ಬಗ್ಗೆ ಮುಖ್ಯಮಂತ್ರಿ ಇಎಂಎಸ್ ಒಪ್ಪಲಿಲ್ಲ.

---

* He had only seen some translations of Malayalam news papers. Malayala Manorama ("Kerala Agitation and Constitution"), Kerala Bhooshanam("We appeal to Pandit Nehru"), etc. wrote editorials in English.

** ಕಾಂಗ್ರೆಸ್ ಸಂಸದೀಯ ಮಂಡಳಿಯ ಹೇಳಿಕೆ. 29 ಜೂನ್ 1959. ಎಐಸಿಸಿ ಅಧಿಸೂಚನೆಯಲ್ಲಿ ಈ ರೀತಿ ತಿಳಿಸಲಾಗಿದೆ. "ಸಂಸದೀಯ ಮಂಡಳಿಯ ಹೇಳಿಕೆಯ ಮೂಲಕ ಕೇಂದ್ರ ನಾಯಕತ್ವವೂ ಪಿಕೆಟಿಂಗ್ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿತ್ತು. ಈ ಸಾಂಕೇತಿಕ ಪಿಕೆಟಿಂಗ್ ಅನ್ನು ಹಿಂಪಡೆಯಲು ಸಲಹೆ ನೀಡುತ್ತಿತ್ತು. ಆದರೆ ಶಾಂತಿಯುತ ಪ್ರತಿಭಟನೆಯ ರೂಪವಾಗಿ ಪಿಕೆಟಿಂಗ್ ಇದ್ದಕ್ಕಿದ್ದಂತೆ ನಿಲ್ಲಿಸಿದರೆ, ಸಾರ್ವಜನಿಕರ ಶಕ್ತಿ ಮತ್ತು ಉತ್ಸಾಹ ಪ್ರತಿಪಕ್ಷಗಳ ಭಾವನೆಗಳು ಅಪಾಯಕಾರಿ ಹಾದಿಯಲ್ಲಿ ಸಾಗುತ್ತದೆ ಎಂದು ಕೇಂದ್ರದ ನಾಯಕ್ವ ಭಾವಿಸಿತು.

> "ನೆಹರೂ ಇಲ್ಲಿದ್ದಾರೆ ಎಂದು ಭಾವಿಸುವ ಅವಿಶ್ವಾಸದ ಮತ್ತು ಅಸಂತೃಪ್ತಿಯ ಭಾವನೆಗಳನ್ನು ಶಮನಗೊಳಿಸಲು ಏನು ಬೇಕಾದರೂ ಮಾಡಲು ತಾನು ಸಿದ್ಧ"

ಎಂದು ಇಎಂಎಸ್ ಸ್ಪಷ್ಟಪಡಿಸಿದರು(40:05.07.59). ಶಿಕ್ಷಣ ಕಾಯಿದೆಯಲ್ಲಿ ಅತ್ಯಂತ ವಿವಾದಾತ್ಮಕ 11ನೆಯ ಸೆಕ್ಷನ್ ರದ್ದುಪಡಿಸಲು ತಮ್ಮ ಸರ್ಕಾರ ಸಿದ್ಧವಿದೆ ಎಂದು ಮುಖ್ಯಮಂತ್ರಿ ಘೋಷಿಸಿದರು. ಈ ಸೆಕ್ಷನ್ ಶಿಕ್ಷಕರ ನೇಮಕಾತಿಗೆ ಸಂಬಂಧಿಸಿದ್ದಾಗಿತ್ತು. ಎಲ್ಲಾ ಸಂಬಂಧಪಟ್ಟ ಗುಂಪು ಮತ್ತು ಸಂಘಟನೆಗಳೊಂದಿಗೆ ಶಿಕ್ಷಣ ಕಾಯ್ದೆಯನ್ನು ಚರ್ಚಿಸಲು ಮುಖ್ಯಮಂತ್ರಿ ಸಿದ್ಧರಾದರು. ವಿರೋಧ ಪಕ್ಷಗಳ ಪ್ರತಿನಿಧಿಗಳನ್ನು ಒಳಗೊಂಡ ದುಂಡು ಮೇಜಿನ ಸಭೆಯಲ್ಲಿ ಚಾರ್ಜ್ ಶೀಟ್/ಆರೋಪಣಾಪಟ್ಟಿಯನ್ನು ಪರಿಶೀಲಿಸಬಹುದೆಂದು ಮತ್ತು ಚರ್ಚೆಯಿಂದ ಬಂದ ತೀರ್ಮಾನಗಳನ್ನು ಸಲಹೆಗಾಗಿ ಅದನ್ನು ನೆಹರೂ ಅವರ ಪರಿಗಣನೆಗೆ ಬಿಡಲಾಗುವುದು ಎಂದು ಇಎಂಎಸ್ ಹೇಳಿದರು. ಪ್ರತಿಪಕ್ಷಗಳು ಪ್ರತಿಭಟನೆಯನ್ನು ಹಿಂಪಡೆದರೆ, ಪೊಲೀಸರು ಫೈರಿಂಗ್ ಬಗ್ಗೆ ನ್ಯಾಯಾಂಗ ತನಿಖೆ ನಡೆಸಬಹುದು ಎಂದೂ ಮುಖ್ಯಮಂತ್ರಿ ಹೇಳಿದರು(84:26.06.59;40:05.07.59).

ಆದರೆ ವಿರೋಧ ಪಕ್ಷದ ನಾಯಕರಿಂದಾಗಲೀ ಜಾತಿ/ಸಮುದಾಯ ಸಂಘಟನೆಗಳ ನಾಯಕರಿಂದಾಗಲೀ ಬಿಷಪ್‌ಗಳನ್ನು ಒಳಗೊಂಡಂಥ ಪಟ್ಟಭದ್ರ ಹಿತಾಸಕ್ತಿಗಳ ಗುಂಪುಗಳಿಂದಾಗಲೀ ನೆಹರೂ ಅವರ ಪ್ರಸ್ತಾವನೆಗಳನ್ನು ಅನುಷ್ಠಾನಗೊಳಿಸುವ ಮುಖ್ಯಮಂತ್ರಿಯವರ ಪ್ರಯತ್ನಗಳಿಗೆ ಯಾವುದೇ ಬೆಂಬಲ ದೊರೆಯಲಿಲ್ಲ.

> "ಸ್ವಲ್ಪ ಸಮಯದವರೆಗೆ ಅಧಿಕಾರದಲ್ಲಿ ಉಳಿಯುವ ಹತಾಶ ಪ್ರಯತ್ನವಾಗಿದೆ ಇದು,"(143:26.06.59)

ಎಂದು ಮುಖ್ಯಮಂತ್ರಿಗಳ ಈ ಪ್ರಯತ್ನವನ್ನು ವಿಮೋಚನಾ ಸಮರ ಸಮಿತಿಯ ಪ್ರಧಾನ ಕಮಾಂಡರ್ ಮನ್ನತ್ ಪದ್ಮನಾಭನ್ ಬಣ್ಣಿಸಿದರು. ಈ ನಿಟ್ಟಿನಲ್ಲಿ ಮುಖ್ಯಮಂತ್ರಿಗಳ ಆಹ್ವಾನವನ್ನು ಸಂಪೂರ್ಣವಾಗಿ ತಿರಸ್ಕರಿಸಿದರು. ಸಚಿವ ಸಂಪುಟವನ್ನು ವಿಸರ್ಜಿಸಿ, ಹೊಸ ಚುನಾವಣೆ ನಡೆಸುವುದೊಂದೇ ಅವರಿಗೆ ಸ್ವೀಕಾರಾರ್ಹ ಪರಿಹಾರವಾಗಿತ್ತು.

ಸರ್ಕಾರ ಮತ್ತು ಇತರ ಪಕ್ಷಗಳಿಗೆ ಕೇರಳದಲ್ಲಿ ಸಮನ್ವಯದ ಒಂದು ಸಾರ್ವಜನಿಕ ವಲಯ ಇರಲಿಲ್ಲ. ಇದು ರಾಜ್ಯದ ರಾಜಕೀಯ ಸಂಬಂಧದ ಕುಸಿತಗಳ ಪರಿಣಾಮವಾಗಿತ್ತು. ವಿರೋಧ ಪಕ್ಷಗಳು ಹಠಮಾರಿ ಧೋರಣೆಯನ್ನು ತನ್ನ ನಿಲುವನ್ನಾಗಿ ಮಾಡಿಕೊಂಡಿತ್ತು. ಹೀಗಾಗಿ ರಾಜ್ಯದಲ್ಲಿ ರಾಜಿ ಪಂಚಾಯತಿಗಾಗಲೀ ರಾಜಿಸೂತ್ರಗಳಿಗಾಗಲೀ ಸಾಧ್ಯತೆಗಳು ಇಲ್ಲದೆ ಹೋದವು. ನೆಹರೂರವರ ಕೇರಳ ಭೇಟಿಯ ನಂತರ ದೆಹಲಿಯಲ್ಲಿ ನಡೆದ ಮೂರು ದಿನಗಳ(ಜೂನ್ 27–29) ಕಾಂಗ್ರೆಸ್ ಸಂಸದೀಯ ಮಂಡಳಿ ಸಭೆಯಲ್ಲೂ ಅದೇ ನಿರ್ಧಾರವನ್ನು ತೆಗೆದುಕೊಳ್ಳಲಾಯಿತು. ಜೂನ್ 29ನೇ ದಿನಾಂಕದಂದು ಅಂಗೀಕರಿಸಿದ ಕಾಂಗ್ರೆಸ್‌ನ ಸಂಸದೀಯ ಪಕ್ಷದ ನಿರ್ಣಯ ಏಕ ಪರಿಹಾರ ಮಾರ್ಗ ಎನ್ನುವ ನೆಲೆಯಲ್ಲಿ, ಹೊಸ ಚುನಾವಣೆಗೂ

ಶಿಕ್ಷಣ ಕಾಯಿದೆಯನ್ನು ಸಂಪೂರ್ಣವಾಗಿ ರದ್ದುಗೊಳಿಸುವುದಕ್ಕೂ ಅಪೇಕ್ಷಿಸಲಾಯಿತು. ಏಕೆಂದರೆ,

> "ಅಂತಹ ಒಂದು ಕಾರ್ಯನಿರ್ವಹಣಾ ಯೋಜನೆಯಿಂದ ಮಾತ್ರವೇ ಜನತಾಶಕ್ತಿಯನ್ನು ಪ್ರಜಾಪ್ರಭುತ್ವ ವ್ಯವಸ್ಥೆಯ ಮೂಲಕ ತಿರುಗಿಸಿಬಿಡಲು ಸಾಧ್ಯ."

ಜುಲೈ 1ರ ಸಂಪಾದಕೀಯದಲ್ಲಿ ಸ್ಟೇಟ್ಸ್‌ಮನ್ ಹೀಗೆ ಬರೆದಿದ್ದಾರೆ:

> ಕಾಂಗ್ರೆಸ್ ಸಂಸದೀಯ ಮಂಡಳಿಯು ಮುಖ್ಯ ಸಮಸ್ಯೆಯನ್ನೇ ಕೈಬಿಟ್ಟು, ಅಂದರೆ ನಿಯಮಾನುಸಾರವಾಗಿ ರೂಪುಗೊಂಡ ಸರ್ಕಾರವನ್ನು, ಬಹಿರಂಗ ಹೋರಾಟದ ಮೂಲಕ ಉರುಳಿಸಲು ಪ್ರಯತ್ನಿಸುವುದು ಸಮರ್ಥನೀಯವೇ? ಮಾತು ಮತ್ತು ನಡತೆಯಲ್ಲಿ ಶಾಂತಿಯನ್ನು ಕಾಪಾಡಿಕೊಂಡು ಕಾಂಗ್ರೆಸ್ ಪಕ್ಷವು ಆಂದೋಲನವನ್ನು ಮುಂದುವರಿಸುತ್ತದೆಯೇ? ಶಾಂತಿಯನ್ನು ಕಾಪಾಡದೆ, ಇತರರು ನಡೆಸುವ ಆಂದೋಲನಕ್ಕೆ ನೀವು ಬೆಂಬಲಿಸಬಹುದಾ?
>
> ಮಂತ್ರಿಮಂಡಲದ ವಿರುದ್ಧ ಹೊರಿಸಲಾದ ಕೆಲವು ನಿಶ್ಚಿತ ಆರೋಪಗಳ ಕುರಿತು ಮತ್ತು ಶಿಕ್ಷಣ ಕಾಯ್ದೆಯಲ್ಲಿ ಮಾಡಬೇಕಾದ ತಿದ್ದುಪಡಿಗಳ ಕುರಿತು, ಇತರ ಪಕ್ಷಗಳೊಂದಿಗೆ, ಹಿತಾಸಕ್ತಿ ಗುಂಪುಗಳೊಂದಿಗೆ ಕೇರಳ ಸರ್ಕಾರ ಮಾತುಕತೆ ನಡೆಸಬೇಕೆಂಬ ಪ್ರಧಾನಿಯ ಪ್ರಸ್ತಾಪವನ್ನು, ಸೂಚನೆಯನ್ನು ನಂಬೂದಿರಿಪಾಡ್‌ರವರ ಸರ್ಕಾರ ಅಂಗೀಕರಿಸಿದ್ದನ್ನು ಕಡೆಗಣಿಸಿತ್ತು. ಆಂದೋಲನದಲ್ಲಿ ಭಾಗವಹಿಸಿದ್ದ ಇತರ ಪಕ್ಷಗಳು ಅದರ ಬಗ್ಗೆ ಗಮನ ಹರಿಸದಿದ್ದರೂ ಕಾಂಗ್ರೆಸ್ ಆ ರೀತಿ ಮಾಡಬಾರದಾಗಿತ್ತು. ಇಲ್ಲದಿದ್ದರೆ ಪ್ರಧಾನಿಯವರ ಪ್ರಸ್ತಾವನೆಗೆ ಔಚಿತ್ಯವೇನು?"

ಎಂದು ಪ್ರಶ್ನಿಸಲಾಯಿತು(109:01.06.59).

ವಾಸ್ತವವಾಗಿ, ಕೇಂದ್ರ ಸರ್ಕಾರ ಮತ್ತು ಕಾಂಗ್ರೆಸ್ ಹೈಕಮಾಂಡ್ ಕೇರಳದ ಆಂದೋಲನವನ್ನು ತಣ್ಣಗಾಗಿಸಲು ಏನನ್ನೂ ಮಾಡಲಿಲ್ಲ(169:p101). ನಿರ್ಣಯ ಅಂಗೀಕರಿಸಿದ ತಕ್ಷಣ ಕೇರಳದಲ್ಲಿ, ಪ್ರತಿಪಕ್ಷಗಳ ಹಿಂಸಾಚಾರಗಳು ದ್ವಿಗುಣಿಸಿದವು. (40:12.07.59) ಕೆಪಿಸಿಸಿ ಅಧ್ಯಕ್ಷ ಶಂಕರ್ ಹೀಗೆ ಪ್ರಸ್ತಾಪಿಸಿದರು,

> "ಕೇರಳದ ಪರಿಸ್ಥಿತಿ ಕುರಿತು ಕಾಂಗ್ರೆಸ್ ಸಂಸದೀಯ ಮಂಡಳಿ ಯಥಾಸ್ಥಿತಿಯನ್ನು ಅರ್ಥಮಾಡಿಕೊಂಡಿರುವುದರ ಬಗ್ಗೆ ನಮಗೆ ತುಂಬಾ ಸಂತೃಪ್ತಿ ಇದೆ."(193:07.07.59)

ಕೇರಳದಲ್ಲಿ ಹೊಸ ಚುನಾವಣೆಯನ್ನು ನಡೆಸಬೇಕೆನ್ನುವ ಕಾಂಗ್ರೆಸ್ ಸಂಸದೀಯ ಮಂಡಳಿಯ ಬೇಡಿಕೆಯನ್ನು ಕಮ್ಯುನಿಸ್ಟ್ ಪಕ್ಷ ಪ್ರಾಥಮಿಕ ನೋಟದಲ್ಲೇ ತಿರಸ್ಕರಿಸಿತು.

> ವಿರೋಧ ಪಕ್ಷಗಳು ಅನ್ಯಾಯದ ವಿಧಾನಗಳ ಮೂಲಕ ಜಾರಿಗೊಳಿಸಲು ಪ್ರಯತ್ನಿಸುವ ತಾರತಮ್ಯದ ಒಂದು ಅಗತ್ಯಕ್ಕಾಗಿ, ಪ್ರಜಾಪ್ರಭುತ್ವದ ಪ್ರಭಾವಲಯದ

ತೊಡಿಸುವಿಕೆ ಮಾತ್ರವೇ ಹೊಸ ಚುನಾವಣೆಗಾಗಿ ಮಾಡುತ್ತಿರುವ ಕೂಗುವಿಕೆಯ ಉದ್ದೇಶ

ಎಂದು ಸಿಪಿಐನ ಕೇಂದ್ರ ಕಾರ್ಯಕಾರಿ ಸಮಿತಿಯು ಜೂನ್ 27ರಂದು ಅಂಗೀಕರಿಸಿದ ನಿರ್ಣಯದಲ್ಲಿ ಎತ್ತಿ ತೋರಿಸಿತು. ಜುಲೈ 13ರಂದು ತಿರುವನಂತಪುರದಲ್ಲಿ ಸಿಪಿಐ ರಾಷ್ಟ್ರೀಯ ಕೌನ್ಸಿಲ್ ಮತ್ತು ಕೇರಳ ರಾಜ್ಯ ಸಮಿತಿಯ ಜಂಟಿ ಸಭೆಯಲ್ಲಿ ಈ ಕೆಳಗಿನ ವಿಚಾರಗಳ ಆಧಾರದ ಮೇಲೆ ಹೊಸ ಚುನಾವಣೆಯ ಕರೆಯನ್ನು ಪಕ್ಷವು ವಿರೋಧಿಸುತ್ತದೆ, ಎಂದು ಸ್ಪಷ್ಟಪಡಿಸಿತು:

1) ಮೇಲ್ನೋಟಕ್ಕೆ ಪ್ರಜಾಪ್ರಭುತ್ವ ಪರವಾಗಿದೆಯೆಂದನಿಸಿದರೂ ಅದು ವಾಸ್ತವವಾಗಿ ತಾರತಮ್ಯದ ಪರವಾಗಿರುವುದರಿಂದ, ಪ್ರಜಾಪ್ರಭುತ್ವ ವಿರೋಧಿಯೂ ಆಗಿದೆ.
2) ಶಾಸಕಾಂಗದಲ್ಲಿ ಬಹುಮತ ಹೊಂದಿರುವ ಸರ್ಕಾರಕ್ಕೆ ಅದರ ಕಾರ್ಯಕ್ರಮವನ್ನು ಕಾರ್ಯಗತಗೊಳಿಸಲು ಸಾಕಷ್ಟು ಸಮಯವನ್ನು ನೀಡಬೇಕಾಗುತ್ತದೆ. ಹಾಗೆ ಮಾಡಲು ಎರಡು ವರ್ಷಗಳ ಕಾಲವೆನ್ನುವುದು, ಬಹಳವೇ ಕಡಿಮೆಯಾಗುತ್ತದೆ. ಈ ಅಲ್ಪಾವಧಿಯಲ್ಲಿ ಸರ್ಕಾರದ ಚಟುವಟಿಕೆಗಳ ಬಗ್ಗೆ ಮೌಲ್ಯಮಾಪನ ಮಾಡಲು ಜನರಿಂದ ಸಾಧ್ಯವಿಲ್ಲ.
3) ಸುಸ್ಥಿರವಾದ ಸರ್ಕಾರವೊಂದನ್ನು ನೀಡಲು ಖಾತ್ರಿಪಡಿಸುತ್ತೇವೆ ಎಂದು ಜನರಲ್ಲಿ ಹೇಳಿಕೊಂಡಿದ್ದೇವೆ.

ಪಕ್ಷವು ಸ್ವಯಂಪ್ರೇರಿತವಾಗಿ ಅಧಿಕಾರವನ್ನು ತೊರೆದು ಹೋದರೆ, ಕಮ್ಯುನಿಸ್ಟ್ ಪಕ್ಷಕ್ಕೆ ಮತ ಹಾಕಿದ್ದರಿಂದ, ಯಾವುದೇ ಪ್ರಯೋಜನವಾಗಲಿಲ್ಲ, ಎನ್ನುವ ಧೋರಣೆ ಗಣನೀಯವಾದ ಜನವಿಭಾಗದ ಮನಸ್ಸಿನಲ್ಲಿ ಮೂಡುತ್ತದೆ. ಏಕೆಂದರೆ ಪ್ರತಿಪಕ್ಷಗಳು ಸಮಸ್ಯೆಗಳನ್ನು ಸೃಷ್ಟಿಸುತ್ತಿರುವಾಗ, ಕೇಂದ್ರ ಸರ್ಕಾರವು ಅವರಿಗೆ ಬೆಂಬಲ ನೀಡಿದಾಗ, ಕಮ್ಯುನಿಸ್ಟ್ ಪಕ್ಷವು ಸ್ವಯಂಪ್ರೇರಿತವಾಗಿ ನಿರ್ಗಮಿಸುತ್ತದೆ(40:19.07.59).

ಕೇಂದ್ರ ಸರ್ಕಾರದ ಹಸ್ತಕ್ಷೇಪದ ಸನ್ನಿಹಿತ ಸ್ವರೂಪದ ಕುರಿತು ಸಿಪಿಐ ದೀರ್ಘ ದೃಷ್ಟಿಯನ್ನು ಹೊಂದಿತ್ತು. ಆದ್ದರಿಂದ ಕೇಂದ್ರದ ಹಸ್ತಕ್ಷೇಪದ ಒಂದು ರೂಪವಾಗಿದೆ, ಈ ಹೊಸ ಚುನಾವಣೆಯ ಕರೆ ಎಂದು ಪಕ್ಷವು ವಿವರಿಸಿತು. ಅಜಯಘೋಷ್ ಹೇಳಿದರು:

> "ಕಾಂಗ್ರೆಸ್ ಹೈಕಮಾಂಡ್‌ನ್ನು ಅಂದರೆ ಕೇಂದ್ರ ನಾಯಕತ್ವವನ್ನು ಮುಖ್ಯ ಅಪರಾಧಿ ಎಂದು ಅಂಗೀಕರಿಸಬೇಕಾಗಿದೆ. ವಾಸ್ತವವಾಗಿ ಸಂಸದೀಯ ಮಂಡಳಿಯ ನಿರ್ಣಯವೇ ಕೇಂದ್ರೀಯ ಹಸ್ತಕ್ಷೇಪದ ಒಂದು ರೂಪವಾಗಿದೆ. ಕೇರಳದಲ್ಲಿ ನಡೆಯುತ್ತಿರುವ ಹೋರಾಟಕ್ಕೆ ಇದು ಬಹಿರಂಗವಾಗಿಯೂ ಪಕ್ಷಪಾತಪರವಾದ ಒಳನುಸುಳುವಿಕೆಯಾಗಿದೆ. ಸರ್ಕಾರವನ್ನು ಕಿತ್ತುಹಾಕುವ ಚಟುವಟಿಕೆಗಳನ್ನು ವಿಭಜಿಸುವಿಕೆ ಎನ್ನುವ ಅವರ ಕಾರ್ಯತಂತ್ರ ಹೆಚ್ಚುಕಡಿಮೆ ಸ್ಪಷ್ಟವಾಗಿದೆ. ಯಾವುದೇ ಕ್ಷಣದಲ್ಲಿ ಬೇಕಾದರೂ ಸಚಿವ ಸಂಪುಟ ವಜಾಗೊಳಿಸುವ ಬೆದರಿಕೆಯನ್ನು ಕೇಂದ್ರ ಸರ್ಕಾರ ಯಾವಾಗಲೂ ಸಕ್ರಿಯವಾಗಿರಿಸಿಕೊಳ್ಳುತ್ತದೆ. ವಿಮೋಚನಾ

ಹೋರಾಟ ಸಮಿತಿಯಿಂದ ಪಿಕೆಟಿಂಗ್ ಕಾರ್ಯವನ್ನು ಕೈಗೊಳ್ಳಲಾಗುವುದು. ವಿದ್ಯಾರ್ಥಿಗಳನ್ನು ಬಸ್ಸಿನ ಮೇಲೆ ಕಲ್ಲು ತೂರಾಟ ಮಾಡುವ ಕಾರ್ಯವನ್ನು ವಹಿಸಿಕೊಡಲಾಗುವುದು. ಚಾರ್ಜ್ ಶೀಟ್/ಆರೋಪಪಟ್ಟಿಯ ವಿರುದ್ಧ ಕಾಂಗ್ರೆಸ್ ಮುಖಂಡರು ಸಾರ್ವಜನಿಕವಾಗಿ ಪ್ರತಿಭಟನೆ ನಡೆಸುವುದನ್ನು, ಪೊಲೀಸ್ ಮತ್ತು ಆಡಳಿತ ಅಧಿಕಾರಿಗಳಿಗೆ ಸರ್ಕಾರದ ವಿರುದ್ಧ ಅಸಹಕಾರ ತೋರಿಸಲು ವಿನಂತಿಸಲಾಗುವುದು(40:12.07.59).

ವಿಮೋಚನಾ ಹೋರಾಟ ನಿಧಾನಗೊಂಡಾಗಲೆಲ್ಲಾ ಚಳವಳಿಗಾರರು, ಭವಿಷ್ಯದಲ್ಲಿ ಪ್ರಮುಖ ಘಟನೆಗಳನ್ನು ಆಯೋಜಿಸಿಕೊಂಡು ಕೃತಕ ಆವೇಶದಲ್ಲಿ ತೊಡಗುತ್ತಿದ್ದರು. ಆಂದೋಲನವನ್ನು ನಿರ್ಣಾಯಕ ಹಂತಕ್ಕೆ ತರುವುದು ಅವುಗಳ ಉದ್ದೇಶವಾಗಿತ್ತು(113:p110). ಆಂದೋಲನದ ಚೈತನ್ಯ ಮತ್ತು ತೀವ್ರತೆಯನ್ನು ಕಾಪಾಡಿಕೊಳ್ಳಲು, ಕೇಂದ್ರದ ಹಸ್ತಕ್ಷೇಪವು ಖಂಡಿತವಾಗಿಯೂ ನಡೆಯುತ್ತದೆ ಎನ್ನುವ ವಿಚಾರವನ್ನು,ಆಸಕ್ತ ಪಕ್ಷಗಳು ಹರಡಿದವು(169:p101). ಅಧ್ಯಕ್ಷರ ಅಧಿಕಾರ ಸ್ವೀಕಾರದ ಬಗ್ಗೆ ಪ್ರಧಾನಿಯವರು ಪತ್ರಕರ್ತರಿಗೆ ಕೆಲವು ಅಸ್ಪಷ್ಟ ಹೇಳಿಕೆಗಳನ್ನು ನೀಡಿದರು. ಆಂದೋಲನದ ಫಲಕಾರಿಯ ಬಗ್ಗೆ ಆತಂಕವಿರುವವರಿಗೆ, ಇವುಗಳು ಉತ್ತೇಜನ ನೀಡಿದವು. ರಾಷ್ಟ್ರಪತಿ ಆಳ್ವಿಕೆ ಕೂಡಲೇ ಅಲ್ಲದಿದ್ದರೂ ಆದಷ್ಟು ಬೇಗ ಆಗುತ್ತದೆ ಎಂಬ ಭಾವನೆ ಅವರಲ್ಲಿ ಬಲವಾಗಿ ಮೂಡಿತು(84:08.07.59). ಮುಖ್ಯಮಂತ್ರಿ ಇಎಂಎಸ್ ಹೇಳಿದರು:

> "ಕೇಂದ್ರದ ಮಧ್ಯಪ್ರವೇಶ ಅಥವಾ ಹಸ್ತಕ್ಷೇಪಗಳ ಬಗ್ಗೆ ಸಾಕಷ್ಟು ಚರ್ಚೆಗಳಾಗಿವೆ. ಕನಿಷ್ಠ ಪಕ್ಷ, ಕೇರಳದ ಕಾಂಗ್ರೆಸ್ಸಿಗರ ವಿಚಾರದಲ್ಲಾದರೂ ಕಾಂಗ್ರೆಸ್ ಹೈಕಮಾಂಡ್ ಯಾಕೆ ಮಧ್ಯಪ್ರವೇಶ ಮಾಡುತ್ತಿಲ್ಲ?"(40:12.07.59).

ಇದರ ನಡುವೆ, ಕಮ್ಯುನಿಸ್ಟ್ ಸರಕಾರವನ್ನು ಕೂಡಲೇ ವಿಸರ್ಜಿಸಬೇಕು ಎಂದು ಆಗ್ರಹಿಸಿ ಜುಲೈ 8ರಂದು ವಿಮೋಚನಾ ಹೋರಾಟ ಸಮಿತಿ ಭಾರತದ ರಾಷ್ಟ್ರಪತಿಗಳಿಗೆ ಮನವಿ ಸಲ್ಲಿಸಿತು(143:10.07.59). ಜಾತಿ/ಸಮುದಾಯ ಸಂಘಟನೆ, ವಿಮೋಚನಾ ಹೋರಾಟ ಸಮಿತಿ, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ಅಲ್ಲದೆ, ವಿರೋಧ ಪಕ್ಷಗಳು, ವಿಶೇಷವಾಗಿ ಕಾಂಗ್ರೆಸ್ ಪಕ್ಷ, ಕೇರಳದ ಕಮ್ಯುನಿಸ್ಟ್ ಆಡಳಿತವನ್ನು ಕೊನೆಗೊಳಿಸಲು ಕೇಂದ್ರದ ಮಧ್ಯಪ್ರವೇಶವನ್ನು ನಿರಂತರವಾಗಿ ಒತ್ತಾಯಿಸುತ್ತಲೇ ಇದ್ದವು.

### ಕೆಪಿಸಿಸಿ ಜ್ಞಾಪಕ ಪತ್ರ/ಮೆಮೊರ್ಯಾಂಡಮ್

ರಾಜ್ಯ ಸರ್ಕಾರದ ವಿರುದ್ಧ ಪ್ರತಿಪಕ್ಷಗಳ ಆರೋಪಗಳನ್ನೆಲ್ಲ ಒಂದೊಂದಾಗಿ ಕ್ರಮಬದ್ಧವಾಗಿ ಸಿದ್ಧಗೊಳಿಸಿಕೊಂಡು, ಕೆಪಿಸಿಸಿ ಅಧ್ಯಕ್ಷರಾದ ಆರ್.ಶಂಕರ್‌ರವರು ಜುಲೈ 10ರಂದು ಭಾರತದ ರಾಷ್ಟ್ರಪತಿಗಳಿಗೆ ಜ್ಞಾಪಕ ಪತ್ರವನ್ನು ಸಲ್ಲಿಸಿ, ಕೇರಳದ

ಸದ್ಯದ ಗಂಭೀರವಾದ ಬಿಕ್ಕಟ್ಟನ್ನು ಕೊನೆಗೊಳಿಸಲು ಹೊಸ ಚುನಾವಣೆ ನಡೆಸಲು ಒತ್ತಾಯಿಸಿದರು(84:12.07.59). ಜ್ಞಾಪಕ ಪತ್ರದಲ್ಲಿ ಉಲ್ಲೇಖಿಸಲಾದ ಆರೋಪಗಳಲ್ಲಿ ಮುಖ್ಯವಾದವುಗಳು:

"ಕೇರಳ ಸರ್ಕಾರ ಪ್ರಜಾಪ್ರಭುತ್ವವನ್ನು ಬುಡಮೇಲು ಮಾಡುತ್ತಿದೆ; ಸಂವಿಧಾನದ ಮೂಲಕ ಖಾತರಿಪಡಿಸಲಾದ ಜನರ ಮೂಲಭೂತ ಹಕ್ಕುಗಳನ್ನು ನಿರಾಕರಿಸುವ ನೀತಿಗಳನ್ನು ಅವರು ನಿರಂತರವಾಗಿ ಜಾರಿ ಮಾಡುತ್ತಿದ್ದು, ಕಾನೂನು ಮತ್ತು ಸುವ್ಯವಸ್ಥೆ ವ್ಯವಸ್ಥೆ ಉದ್ದೇಶಪೂರ್ವಕವಾಗಿ ಬುಡಮೇಲು ಮಾಡಲಾಗುತ್ತಿದೆ; ನಾಗರಿಕ ಸೇವೆ ಮತ್ತು ಪೊಲೀಸ್ ವ್ಯವಸ್ಥೆಯನ್ನು ಕಮ್ಯುನಿಸ್ಟ್ ಪಕ್ಷದ ಆದೇಶದ ಮೇರೆಗೆ ನಿಷ್ಕ್ರಿಯಗೊಳಿಸಲಾಗಿದೆ; ಕಮ್ಯುನಿಸ್ಟ್ ಪಕ್ಷದ ಆದೇಶಗಳನ್ನು ಮಾತ್ರ ಜಾರಿಗೊಳಿಸುವ ವಿಧದಲ್ಲಿ, ಅವರು ಪರಿಸ್ಥಿತಿಗಳನ್ನು ಸಿದ್ಧಪಡಿಸಿಟ್ಟುಕೊಳ್ಳುತ್ತಾರೆ; ಸರ್ಕಾರ ಮತ್ತು ಪಕ್ಷ ಒಂದೇ ಎಂಬ ತಿಳುವಳಿಕೆಯಲ್ಲಿ ಅವರು ಕೆಲಸ ಮಾಡುತ್ತಾರೆ; ಅವರು ಭ್ರಷ್ಟಾಚಾರವನ್ನು ಸಾಂಸ್ಥಿಕಗೊಳಿಸಿರುವುದರಿಂದ, ಕಮ್ಯುನಿಸ್ಟರನ್ನು ಹೊರತುಪಡಿಸಿ, ಉಳಿದವರೆಲ್ಲರ ಜೀವ ಮತ್ತು ಆಸ್ತಿಗಳು ಅಸುರಕ್ಷಿತಾವಸ್ಥೆಯಲ್ಲಿದೆ; ಸಾಂವಿಧಾನಿಕತ್ವದ ಸರ್ಕಾರ ಕಣ್ಮರೆಯಾಗಿದೆ; ಹಾಗೆ, ಅವರ ಕುಟಿಲ ನೀತಿಗಳ ಮತ್ತು ಕಾರ್ಯಗಳ ಕಾರಣಗಳಿಂದಾಗಿ ಬಹುಪಾಲು ಜನರು ಅವರ ವಿರುದ್ಧ ತಿರುಗಿ ಬಿದ್ದಿದ್ದಾರೆ"(137:p43-50;100:).

ವಿರೋಧಪಕ್ಷಗಳ ಪ್ರಜಾಪ್ರಭುತ್ವ ವಿರೋಧಿ ಚಟುವಟಿಕೆಗಳ ಬಗ್ಗೆ ಕಮ್ಯುನಿಸ್ಟ್




ಕೇರಳದ ಸಮಸ್ಯೆಯು
ನಿರುದ್ಯೋಗಿ
ಮಾಜಿ ಮಂತ್ರಿಗಳ
ಒಂದು ಸಮಸ್ಯೆ

'ಮದ್ರಾಸ್ ಮೇಲ್' ನಲ್ಲಿ
ಒಂದು ವ್ಯಂಗ್ಯ

ಇಎಂಎಸ್ ಸರ್ಕಾರದ ವಿರುದ್ಧದ
ಚಳುವಳಿಯ ಸಮಯಾವಧಿಯಲ್ಲಿ
ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ
ವ್ಯಂಗ್ಯಚಿತ್ರಗಳಲ್ಲೊಂದು

ಪಕ್ಷವು ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡುವುದನ್ನು ನಿರಂತರ ಪ್ರಯತ್ನಗಳ ಮೂಲಕ ನಡೆಸುತ್ತಿತ್ತು. ಜುಲೈ 10, 1959ರಂದು ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್‌ರವರು ದೆಹಲಿಯಲ್ಲಿ ಭಾರತದ ರಾಷ್ಟ್ರಪತಿಗಳನ್ನು ಭೇಟಿ ಮಾಡಿ, ಒಂದು ಗಂಟೆ ಕಾಲ ಚರ್ಚೆ ನಡೆಸಿದರು. ಕೇರಳದ ಪರಿಸ್ಥಿತಿಯ ಕುರಿತು ರಾಷ್ಟ್ರಪತಿಗೆ ಮಾಹಿತಿ ನೀಡಿದ ಮುಖ್ಯಮಂತ್ರಿ "ಕೇಂದ್ರ ಹಸ್ತಕ್ಷೇಪವನ್ನು ಸಮರ್ಥಿಸುವ ಯಾವುದೇ ಪರಿಸ್ಥಿತಿ ಅಲ್ಲಿ ಇಲ್ಲ" ಎಂದು ಮನವರಿಕೆ ಮಾಡಲು ಪ್ರಯತ್ನಿಸಿದರು.'(84:10.07.59)

ಮುಖ್ಯಮಂತ್ರಿ ಇಎಂಎಸ್ ನಂಬೂದಿರಿಪಾಡ್ ಭಾರತದ ರಾಷ್ಟ್ರಪತಿಗಳನ್ನು ಭೇಟಿ ಮಾಡುವ ಮೊದಲು, ನೆಹರೂ, ಜಿ.ಬಿ.ಪಂತ್, ವಿ.ಕೆ.ಕೃಷ್ಣ ಮೆನನ್, ಮೊರಾರ್ಜಿ ದೇಸಾಯಿ, ಲಾಲ್ ಬಹದ್ದೂರ್ ಶಾಸ್ತ್ರಿ, ಹಫೀಜ್ ಮುಹಮ್ಮದ್ ಇಬ್ರಾಹಿಂ ಜೊತೆಗಳಲ್ಲೂ ಚರ್ಚೆ ನಡೆಸಿದ್ದರು. ಪ್ರಧಾನ ಮಂತ್ರಿಯೊಂದಿಗಿನ ಭೇಟಿಯ ನಂತರ, 11 ಜುಲೈ 1959ರಂದು ಮುಖ್ಯಮಂತ್ರಿಯವರು ತಿರುವನಂತಪುರಂನಲ್ಲಿ ನಡೆದ ಸಿಪಿಐ ರಾಷ್ಟ್ರೀಯ ಮಂಡಳಿಯ ಸಭೆಯಲ್ಲಿ ಅವರು ತಮ್ಮ ರಾಯಭಾರದ ಕುರಿತ ವರದಿಯನ್ನು ಮಂಡಿಸಿದರು.

## ಕೆ.ಎಂ.ಮುನ್ಷಿ ಆರೋಪ

ಸಂವಿಧಾನ ರಚನಾ ಸಮಿತಿಯ ಮಾಜಿ ಸದಸ್ಯ ಕೆ.ಎಂ.ಮುನ್ಷಿ* ಜುಲೈ 8ರಿಂದ 12ರವರೆಗೆ ಕೇರಳಕ್ಕೆ ಭೇಟಿ ನೀಡಿದ್ದರು. ಕೋಮು ಸಂಘಟನೆಗಳ ನಾಯಕರು, ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳು, ಕಮ್ಯುನಿಸ್ಟೇತರ ವಿದ್ಯಾರ್ಥಿ–ಮಹಿಳಾ–ಟ್ರೇಡ್ ಯೂನಿಯನ್ ನಾಯಕರು, ಕಮ್ಯುನಿಸ್ಟ್ ಸರ್ಕಾರವನ್ನು ವಿರೋಧಿಸುವ ವಕೀಲರು/ಪತ್ರಕರ್ತರು, ಸರ್ವೋದಯ ಮುಖಂಡರು, ಪಾದ್ರಿಗಳು ಮುಂತಾದವರಗಳೊಂದಿಗೆ, ಕೇರಳದಲ್ಲಿ ಅವರು ತಂಗಿದ್ದ ಸಂದರ್ಭದಲ್ಲಿ, ರಾಜ್ಯದ ಪರಿಸ್ಥಿತಿಯ ಕುರಿತು ಚರ್ಚಿಸಿದರು(69:p253). ನಾಲ್ಕು ದಿನಗಳ ಕಾಲ ತಂಗಿದ್ದ ಸಂದರ್ಭದಲ್ಲಿ, ಕೇರಳದಲ್ಲಿ ಆಂದೋಲನಾ ಕೇಂದ್ರಗಳಿಗೆ ಭೇಟಿ ನೀಡಿದ ನಂತರ, ಕೆ.ಪಿ.ಸಿ.ಸಿ ಕಾರ್ಯದರ್ಶಿ ಹೆಂಟಿ ಆಸ್ಟ್ ಅವರೊಂದಿಗೆ ಮುನ್ಷಿಯವರು ಬೆಂಗಳೂರಿಗೆ ಹೋದರು ಮತ್ತು ಕೇರಳದ ಪರಿಸ್ಥಿತಿಯ ಬಗ್ಗೆ ತನಗೆ ತೋಚಿದ ವಿಚಾರಗಳ ಬಗ್ಗೆ ಒಂದು ವಿಸ್ತೃತ ವರದಿಯನ್ನೂ ಮಂಡಿಸಿದರು. ಕೆ.ಎಂ.ಮುನ್ಶಿಯವರ ವರದಿಯು ವಾಸ್ತವವಾಗಿ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ದೋಷಾರೋಪಣೆಯ ಪಟ್ಟಿಯಾಗಿತ್ತು. ವರಡಿಯ ಪ್ರಕಟಣೆಯ ನಂತರ, ಸಂವಿಧಾನ ಸೆಕ್ಷನ್ 356ರ ಅಡಿಯಲ್ಲಿ ಕೇರಳದಲ್ಲಿ ಕೇಂದ್ರ ಹಸ್ತಕ್ಷೇಪಕ್ಕಾಗಿ ಮುನ್ಷಿ ವಿನಂತಿಯನ್ನು ಮಾಡಿದರ

* ಕೆ.ಎಂ. ಮುನ್ಷಿ ಮಾಜಿ ಕಾಂಗ್ರೆಸ್ ನಾಯಕ, ಕೇಂದ್ರ ಆಹಾರ ಸಚಿವ ಮತ್ತು ಉತ್ತರ ಪ್ರದೇಶದ ಮಾಜಿ ರಾಜ್ಯಪಾಲರಾಗಿದ್ದರು. 1959ರಲ್ಲಿ ಮಸಾನಿ, ರಾಜಾಜಿ, ಎನ್.ಜಿ. ರಂಗ ಮುಂತಾದ ನಾಯಕರೊಂದಿಗೆ ಸ್ವತಂತ್ರ ಪಕ್ಷ ಸೇರಿದರು.

ು(84:15.07.59,17.07.59). ಈ ಸಂದರ್ಭದಲ್ಲಿ ಕ್ಯಾಥೋಲಿಕ್ ಬಿಷಪ್‌ಗಳು ಕೇರಳದ ಮೂವರು ವಕೀಲರ ತಂಡವನ್ನು ಸ್ವಂತ ಖರ್ಚಿನಲ್ಲಿ ನವದೆಹಲಿಗೆ ಕಳುಹಿಸಿದರು. ರಾಷ್ಟ್ರಪತಿಗಳಿಗೆ ಸಮರ್ಪಿಸಬೇಕಾದ ಮೆಮೊರಾಂಡಮ್ ತಯಾರಿಯಲ್ಲಿ ಕೆ.ಎಂ.ಮುನ್ಷಿ, ವಕೀಲರಿಗೆ ಸಹಕರಿಸಿದರು. ಈ ದೋಷಾರೋಪಣಾ ಪಟ್ಟಿಯು ಸಂಚಿನ/ಕುಟಿಲದ ಕಾನೂನು ಭಾಷೆಯಲ್ಲಿ ತಯಾರಿಸಲ್ಪಟ್ಟಿದ್ದು, ಇದು ವಾಸ್ತವವಾಗಿ ಕಮ್ಯುನಿಸ್ಟ್ ವಿರುದ್ಧದ ಕ್ಷುದ್ರ/ನೀಚ ರಾಜಕೀಯ ಚಟುವಟಿಕೆಯ ಕಚ್ಚಾ/ಒರಟು ಉದಾಹರಣೆಯಾಗಿದೆ. ಆ ಕಾಲದಲ್ಲಿ ಮುನ್ಷಿ ಕಮ್ಯುನಿಸಂ ವಿರುದ್ಧದ ವಿಚಾರದಲ್ಲಿ ಪ್ರಭಾವಿತರಾಗಿದ್ದರು. ಕಮ್ಯುನಿಸ್ಟ್ ವಿರೋಧಿ ಹೋರಾಟದಲ್ಲಿ ಕೇರಳದ ವಿರೋಧ ಪಕ್ಷದ ನಾಯಕರಿಗೆ ಅವರು ಹೊಸ ಸಂಪರ್ಕಗಳನ್ನು ಮತ್ತು ಕುಟಿಲತೆಯ ಸಲಹೆಗಳನ್ನು ನೀಡಿದರು.

ಹತ್ತೊಂಬತ್ತು ನೂರಾ ಮೂವತ್ತರ ದಶಕದ ಆರಂಭದಲ್ಲಿ ಬ್ರಿಟನ್ ಸರ್ಕಾರದ ವಿರುದ್ಧ ನಡೆದ ಚಳವಳಿಗಿಂತ ಹೆಚ್ಚಿನ ರೀತಿಯ 'ಗಾಂಧಿ ಶೈಲಿಯ ಚಳವಳಿ'ಯನ್ನು ಆಯೋಜಿಸಿದ್ದಕ್ಕಾಗಿ ಕೆ.ಎಂ.ಮುನ್ಷಿ ಕೇರಳದ ವಿರೋಧಪಕ್ಷವನ್ನು ವೈಭವೀಕರಿಸಿದರು (84:18.07.59). ಕೇರಳದಲ್ಲಿ ಸಂವಿಧಾನ ಕುಸಿಯುತ್ತಿದೆ ಮತ್ತು ಕಮ್ಯುನಿಸಂ ಹರಡುವುದನ್ನು ತಡೆಯಲು ಇದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ ಎಂದೂ ಅವರು ಹೇಳಿದರು. ಬೆಂಗಳೂರಿನಲ್ಲಿರುವಾಗ ಮುನ್ಷಿ, ಅವರ ಹಳೆಯ ಸ್ನೇಹಿತ ಮತ್ತು ಸ್ವತಂತ್ರ ಭಾರತದ ಮೊದಲ ಗೃಹ ಕಾರ್ಯದರ್ಶಿ ವಿ.ಪಿ.ಮೆನನ್, ಕೇರಳದ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಕೆಲಸ ಮಾಡುವುದಕ್ಕಾಗಿ ಶಕ್ತಿ ತುಂಬಿ,* ಮದ್ರಾಸಿನಲ್ಲಿ ಭಾಷಣ ಮಾಡುವಾಗ ಅವರು ಕೇಂದ್ರ ಸರ್ಕಾರಕ್ಕೆ ಎಚ್ಚರಿಕೆ ನೀಡಿದರು,

> "ರಾಜ್ಯದಲ್ಲಿ ಜನಾಂದೋಲನವನ್ನು ಹತ್ತಿಕ್ಕಿ, ಕಮ್ಯುನಿಸ್ಟರು ಗೆದ್ದರೆ, ಕೇರಳಕ್ಕೆ ಮಾತ್ರವಲ್ಲ ಇಡೀ ದೇಶಕ್ಕೆ ಹಾನಿಯಾಗುತ್ತದೆ." (84:20.07.59).

## ಕೃಪಲಾನಿ ಅವರ ಆರೋಪ ಪಟ್ಟಿ

ಕೇರಳದ ವಿಚಾರದಲ್ಲಿ, ಕೇಂದ್ರ ಗೃಹ ಸಚಿವರ ವಿರುದ್ಧ ಆಚಾರ್ಯ ಕೃಪಲಾನಿ 'ದುಷ್ಕೃತ್ಯಗಳು' ಎಂದು ಆರೋಪಿಸುತ್ತಾ, ಅಖಾಡಕ್ಕೆ ಬಂದರು(193:12.07.59). ಕೃಪಲಾನಿ ಅವರು ಜುಲೈ 1959ರಲ್ಲಿ ಈ ಬಗ್ಗೆ ಒಂದು ಕಿರುಪುಸ್ತಕವನ್ನು ಪ್ರಕಟಿಸಿದರು. 'ಕೇರಳದ ಕಮ್ಯುನಿಸ್ಟರು–ಸರ್ಕಾರದ ವಿರುದ್ಧದ ಆರೋಪಗಳು–ಮಧ್ಯಪ್ರವೇಶಿಸುವುಕ್ಕೆ ಕೇಂದ್ರದ ಹಕ್ಕು' (Communist in Kerala-Charges against Government-Centre's Right to intervene) ಎಂಬುದು ಅದರ ಶೀರ್ಷಿಕೆಯಾಗಿತ್ತು. ಕೇರಳದ ಪರಿಸ್ಥಿತಿಯ ಕುರಿತು,

---

* ವಿ.ಪಿ. ಮೆನನ್ ಲಾರ್ಡ್ ಮೌಂಟ್ ಬ್ಯಾಟನ್‌ರ ಆಪ್ತ ಕಾರ್ಯದರ್ಶಿಯಾಗಿದ್ದರು. ಸರ್ದಾರ್ ಪಟೇಲರಿಂದಾಗಿ ಭಾರತ ವಿಭಜನೆಯನ್ನು ಅನುಮೋದಿಸಿದವರು ಅವರೇ ಆಗಿದ್ದರು ಎಂದು ಹೇಳಲಾಗುತ್ತದೆ. ಸ್ವಾತಂತ್ರ್ಯದ ನಂತರ ಅವರು 'ಕಾರ್ಯದರ್ಶಿಯಾಗಿ ರಾಜ್ಯಗಳಲ್ಲಿ ಸೇವೆ' ಸಲ್ಲಿಸಿದ್ದಾರೆ.

ಕಾಂಗ್ರೆಸ್ ಸಂಸದರ ನಡುವೆ ಭಿನ್ನಾಭಿಪ್ರಾಯವನ್ನು ಮತ್ತು ಕೇರಳದ ಕಮ್ಯುನಿಸ್ಟ್ ಸರ್ಕಾರದ ಕಾರ್ಯಶೈಲಿಯನ್ನು ಈ ಪುಸ್ತಕದಲ್ಲಿ ಅವರು ವಿಮರ್ಶಿಸಿದ್ದಾರೆ(138:p1-7). ಹಿಂಸಾತ್ಮಕ ಆಂದೋಲನದ ಸ್ವರೂಪದ ಬಗ್ಗೆ ಕೇರಳದಲ್ಲಿ ಕಾಂಗ್ರೆಸ್ ಸಮುದಾಯದ ಗುಂಪುಗಳ ಜೊತೆ ಮೈತ್ರಿ ಹೊಂದಿರುವ ಬಗ್ಗೆ ಸ್ಪಷ್ಟ ತಿಳುವಳಿಕೆ ಇಲ್ಲದ ಕೃಪಲಾನಿ, ಕೇಂದ್ರದ ಮಧ್ಯಪ್ರವೇಶಕ್ಕೆ ಮನವಿ ಮಾಡಿದ್ದರು(138:p1-7).

**ವಿಮೋಚನಾ ಹೋರಾಟ ಸಮಿತಿಯ "ಭಾರತವನ್ನು ಉಳಿಸಿ"!**

ಆಗಸ್ಟ್ 9, 1959ರ ನಂತರವೂ ಕೇರಳದ ಬಗ್ಗೆ ಕೇಂದ್ರವು ಯಾವುದೇ ಕ್ರಮ ತೆಗೆದುಕೊಂಡಿರಲಿಲ್ಲ. ಮನ್ನತ್ ಪದ್ಮನಾಭನ್ ನೇತೃತ್ವದಲ್ಲಿ ವಿಮೋಚನಾ ಹೋರಾಟ ಸಮಿತಿಯ ತುರ್ತುಸಭೆ ಜುಲೈ 25ರಂದು ನಡೆಯಿತು. 1959 ಆಗಸ್ಟ್ 9ರಿಂದ ಮುಷ್ಕರವನ್ನು ಹೆಚ್ಚು ತೀವ್ರಗೊಳಿಸಲು ಸಭೆ ನಿರ್ಧರಿಸಿತು(84:26.07.59). ಸಂಪೂರ್ಣ ಅಧಿಕಾರಗಳನ್ನೂ ಪದ್ಮನಾಭನ್‌ರಿಗೆ ಅರ್ಪಿಸಲಾಯಿತು. ರಾಜ್ಯ ಸರ್ಕಾರದ ಎಲ್ಲಾ ಚಟುವಟಿಕೆಗಳನ್ನು ಸ್ತಬ್ದಗೊಳಿಸಿಕೊಂಡು, 'ಭಾರತವನ್ನು ಉಳಿಸಿ' (Save India) ಎಂಬ ಕಾರ್ಯಕ್ರಮದ ಬಗ್ಗೆ ನಿರ್ಣಯವನ್ನೂ ಸಭೆಯಲ್ಲಿ ಕೈಗೊಳ್ಳಲಾಯಿತು. ಕಮ್ಯುನಿಸ್ಟ್ ಮಂತ್ರಿಮಂಡಲ ರಾಜೀನಾಮೆ ನೀಡಿದ ನಂತರವೇ ಈ ಆಂದೋಲನ ಕೊನೆಗೊಳಿಸಲಾಗುವುದು ಎಂದು ನಿರ್ಧರಿಸಿಕೊಂಡು, ಪ್ರತಿಪಕ್ಷಗಳು ಎಲ್ಲಾ ಸಿದ್ದತೆಗಳೊಂದಿಗೆ ಹಿಂಸಾತ್ಮಕವಾದ ಸಾರ್ವತ್ರಿಕ ಮುಷ್ಕರ ಪ್ರಾರಂಭ ಮಾಡಿತು. ಇದರ ಭಾಗವಾಗಿ ಆಗಸ್ಟ್ 9, 1959ರಿಂದ ರಾಜ್ಯ ಸೆಕ್ರೆಟರಿಯೇಟ್‌ನ್ನು ಮುತ್ತಿಗೆ ಹಾಕಲು



'ನೇರಕಾರ್ಯಾಚರಣೆ' – ಕೇರಳ ಸರಕಾರ ರಾಜ್ಯದಲ್ಲಿ ನಿರ್ಮಿಸಿದ ಸನ್ನಿವೇಶಕ್ಕೆ ಸಂವಿಧಾನದಲ್ಲಿ ಪರಿಹಾರ ಒದಗಿಸಿಲ್ಲವಾದರೆ, ಅದನ್ನು ಬದಲಿಸಬೇಕು ಎಂದು ಕಾಂಗ್ರೆಸ್ ಅಧ್ಯಕ್ಷರು ಹೇಳಿದ್ದಾರೆ – ವರದಿ
*ಶಂಕರ್ಸ್ ವೀಕ್ಲಿಯಲ್ಲಿ ಶಂಕರ್ ವ್ಯಂಗ್ಯ*

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಮತ್ತು ತೆರಿಗೆ ಬಹಿಷ್ಕಾರದ ಅಭಿಯಾನವನ್ನು ನಡೆಸಲು ನಿರ್ಧರಿಸಲಾಯಿತು (143: 28.07.59). ಆಗಸ್ಟ್ 9ರಂದು ತಿರುವನಂತಪುರಂನಲ್ಲಿ ಬೃಹತ್ ಪ್ರದರ್ಶನಕ್ಕೆ ಸಾವಿರಾರು ಜನರು ರಾಜಧಾನಿಯನ್ನು ತಲುಪಲು (ಜುಲೈ 25 ರಂದು) ಜಂಟಿ ಹೋರಾಟ ಸಮಿತಿ ಕರೆ ನೀಡಿತು. ಸಾಕಷ್ಟು ಬೆಂಬಲವನ್ನು ಪಡೆಯುವುದಕ್ಕಾಗಿ, ಕಮ್ಯುನಿಸ್ಟರ ವಿರುದ್ಧದ ಹೋರಾಟಕ್ಕೆ ಅಗತ್ಯವಾದ ಹಣವನ್ನು ಸಂಗ್ರಹಿಸಲು, ವಿಮೋಚನಾ ಹೋರಾಟ ಸಮಿತಿಯ ನಿರ್ಧಾರದಂತೆ ಮನ್ನತ್ ಪದ್ಮನಾಭನ್ 17 ಮತ್ತು 20 ಜುಲೈ 1959ರ ನಡುವೆ, ಬೆಂಗಳೂರು, ಮದ್ರಾಸ್, ಬಾಂಬೆ, ಕಲ್ಕತ್ತಾ ಮತ್ತು ನವದೆಹಲಿಗೆ ಭೇಟಿ ನೀಡಿದರು. ಕಾಂಗ್ರೆಸ್ ಅಧ್ಯಕ್ಷೆ ಇಂದಿರಾ ಗಾಂಧಿ, ಕೇಂದ್ರ ಗೃಹ ಸಚಿವ ಜಿ.ಬಿ. ಪಂತ್, ಹಣಕಾಸು ಸಚಿವ ಮೊರಾರ್ಜಿ ದೇಸಾಯಿ, ಆಹಾರ/ಸಾರಿಗೆ ಸಚಿವ ಎಸ್ ಕೆ. ಪಾಟೀಲ್, ಯು.ಎನ್. ಧೇಬಾರ್ ಮುಂತಾದವರನ್ನು, 1959 ಜುಲೈ 20ರಂದು ಮನ್ನತ್ ಪದ್ಮನಾಭನ್ ಬೇಟಿಮಾಡಿ, ಮಾತುಕತೆ ನಡೆಸಿದರು. ಕೇಂದ್ರದ ಮಧ್ಯಪ್ರವೇಶ ಆದಷ್ಟೂ ತ್ವರಿತಗತಿಯಲ್ಲಿ ಆಗಬೇಕೆಂದು ಅವರಲ್ಲಿ ಕೇಳಿಕೊಂಡರು(84:21.07.59). ಅದೇ ದಿನ ಅವರು ನವದೆಹಲಿಯಲ್ಲಿ ಪ್ರಧಾನಿಯನ್ನೂ ಭೇಟಿ ಮಾಡಿ, ಅವರು ಹೀಗೆ ಹೇಳಿದರು:

> "ಕಮ್ಯುನಿಸ್ಟ್ ಆಡಳಿತವನ್ನು ಕಿತ್ತೊಗೆಯಲು ನಡೆಸುತ್ತಿರುವ ಜನಾಂದೋಲನವು, ಕೇರಳದ ವಿಚಾರದಲ್ಲಿ ಕೇಂದ್ರ ಸರಕಾರ ಮಧ್ಯಪ್ರವೇಶವಿಲ್ಲದೆ ಎಷ್ಟು ದಿನ ಅಹಿಂಸಾತ್ಮಕವಾಗಿ ಉಳಿಯುತ್ತದೆ ಎಂದು ಹೇಳಲು ಸಾಧ್ಯವಿಲ್ಲ"(84:21.07.59).

ಮನ್ನತ್ ಪದ್ಮನಾಭನ್ ಜೊತೆಗೆ, ಅನೇಕ ಇತರ ಕೋಮು/ಜಾತಿವಾದಿ ನಾಯಕರು, ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳಿಗೆ ಸೇರಿದವರು, ಕ್ಯಾಥೋಲಿಕ್ ಕಾಂಗ್ರೆಸ್ ಆಫ್ ಇಂಡಿಯಾದ ನಾಯಕರು ಮತ್ತು ಪ್ರತಿನಿಧಿಗಳು, ರಾಷ್ಟ್ರಪತಿ, ಪ್ರಧಾನಿ, ಕೇಂದ್ರದ ಪ್ರಭಾವಿ ಸಚಿವರು ಹಾಗೂ ಕಾಂಗ್ರೆಸ್ ಹೈಕಮಾಂಡ್ ಮುಂತಾದವರನ್ನು ಭೇಟಿ ಮಾಡಿ ರಾಜ್ಯದ ಕಮ್ಯುನಿಸ್ಟ್ ಸರ್ಕಾರದ ವಿಸರ್ಜನೆಗೆ ಮನವಿಯನ್ನು ಸಲ್ಲಿಸಲಾಯಿತು(84:26.07.59). ಕೇರಳದ ವಕೀಲರು ಆಂದೋಲನವನ್ನು ಬೆಂಬಲಿಸಿ, ನಿಯೋಗದೊಂದಿಗೆ ಪ್ರಧಾನಿ ಮತ್ತು ಇತರರನ್ನು ಭೇಟಿ ಮಾಡಿ ಮನವಿ ಸಲ್ಲಿಸಿದರು(84:26.07.59).

ವಿಮೋಚನಾ ಹೋರಾಟ ಸಮಿತಿ ನೇತೃತ್ವದಲ್ಲಿ, ಕಾಂಗ್ರೆಸ್ ಸೇರಿದಂತೆ ರಾಜಕೀಯ ಪಕ್ಷಗಳು ಭಾಗವಹಿಸಿದ್ದ "ವಿಮೋಚನಾ ಹೋರಾಟ ಕಳೆದ ಕೆಲವು ದಿನಗಳಿಂದ ನಿರ್ಣಾಯಕ ಹಂತ ತಲುಪಿದ ವಿಷಯ," ಜುಲೈ 25ರಂದು ಮುಖ್ಯಮಂತ್ರಿ ನಂಬೂದಿರಿಪಾಡ್, ಪ್ರಧಾನ ಮಂತ್ರಿ, ಇತರ ಪ್ರಭಾವಿ ಕೇಂದ್ರ ಸಚಿವರು ಮತ್ತು ಕಾಂಗ್ರೆಸ್ ಹೈಕಮಾಂಡ್ ಗಮನಕ್ಕೆ ತರಲಾಯಿತು(84:26.07.59). ಕೇರಳವನ್ನು ಕಾಂಗ್ರೆಸ್ಸೇತರ ಪಕ್ಷ ಆಳುತ್ತಿದ್ದರೂ ಪ್ರತಿಪಕ್ಷಗಳು ಹಿಂಸಾಚಾರದಲ್ಲಿ ತೊಡಗಿಕೊಂಡಾಗ ಕೇಂದ್ರದ ರಕ್ಷಣೆ ಪಡೆಯಲು ರಾಜ್ಯ ಅರ್ಹವಾಗಿದೆ ಎಂದು ಮುಖ್ಯಮಂತ್ರಿಗಳು

ನೆನಪಿಸಿದರು.*(84:26.07.59)

ಭಾರತದ ರಾಷ್ಟ್ರಪತಿಗಳೊಂದಿಗೆ ಪಕ್ಷದ ಅಧ್ಯಕ್ಷೆ ಇಂದಿರಾ ಗಾಂಧಿ ಜುಲೈ 25ರಂದು ಸಭೆ ನಡೆಸಿದರು. ನಂತರ ಕಾಂಗ್ರೆಸ್ ಹೈಕಮಾಂಡ್ ಕೇಂದ್ರದ ಹಸ್ತಕ್ಷೇಪಕ್ಕೆ ರಾಷ್ಟ್ರಪತಿಗಳ ಮೇಲೆ ಅಂತಿಮ ಒತ್ತಡ ಹಾಕಿದರು. ಈ ನಿಟ್ಟಿನಲ್ಲಿ ಕಾರ್ಯನಿರ್ವಹಿಸಲು ಈಗಾಗಲೇ ಸಮಯ ಕಳೆದಿದೆ ಎಂದು ಅವರು ಒತ್ತಿ ಹೇಳಿದರು. ತ್ವರಿತ ಮತ್ತು ಕಠಿಣ ಕ್ರಮ ತೆಗೆದುಕೊಳ್ಳಲು, ನವದೆಹಲಿಯ ಸರ್ಕಾರದ ಮುಂದೆ ಎಲ್ಲಾ ಅಗತ್ಯ ದಾಖಲೆಗಳನ್ನೂ ಪ್ರಸ್ತುತಪಡಿಸಲಾಗಿದೆ, ಎಂದು ಅವರು ವಾದಿಸಿದರು(84:26.07.59). ಕೇರಳ ಪ್ರವಾಸದ ನಂತರ ಸುಚೇತ ಕೃಪಲಾನಿ ಅವರು ಸಲ್ಲಿಸಿದ ವರದಿಯನ್ನು ಆಧರಿಸಿ ಇಂದಿರಾ ಗಾಂಧಿಯವರು ಜುಲೈ 26ರಂದು ರಾಷ್ಟ್ರಪತಿ ರಾಜೇಂದ್ರ ಪ್ರಸಾದ್ ಅವರನ್ನು ಮತ್ತೆ ಭೇಟಿಯಾದರು(137:p110). ಆಗ ಅವರು ಘೋಷಿಸಿದರು: "ಕೇರಳದಲ್ಲಿ ಕೆಂಪುಮಂದಿಗಳು (ಕಮ್ಯುನಿಸ್ಟರು) ಅಧಿಕಾರದಲ್ಲಿ ಮುಂದುವರಿದರೆ, ಅವರು ಬಿತ್ತುವ ಬೀಜಗಳು ಭಾರತದಲ್ಲಿ ಪ್ರಜಾಪ್ರಭುತ್ವವನ್ನು ನಿರ್ಮೂಲನೆ ಮಾಡುತ್ತದೆ... ರಾಜ್ಯ ಸರ್ಕಾರವು ಸೃಷ್ಟಿಸಿದ ಕೆಟ್ಟಪರಿಸ್ಥಿತಿಗೆ ಸಂವಿಧಾನವು ಪರಿಹಾರವನ್ನು ಒದಗಿಸದಿದ್ದರೆ ಆ ಸಂವಿಧಾನವನ್ನೇ ಪರಿವರ್ತನೆ ಮಾಡಬೇಕಾಗುತ್ತದೆ... ಕೇಂದ್ರದ ಕ್ರಮಗಳಲ್ಲುಂಟಾಗುವ ಕಾಲವಿಳಂಬದಿಂದಾಗಿ, ಪರಿಸ್ಥಿತಿ ಹತೋಟಿಗೆ ಬಾರದಂತಾಗುವ ಸಾಧ್ಯತೆಯಿದೆ..."(109:26.07.59). ಕಮ್ಯುನಿಸ್ಟ್ ಪಕ್ಷವು ಹೀಗೆ ಹೇಳಿತು: "ಕೇಂದ್ರ ಸರ್ಕಾರವು ಮಧ್ಯಪ್ರವೇಶಿಸುವುದಿಲ್ಲ ಎಂದು ಭರವಸೆ ನೀಡಿದರೆ, ಕೇರಳದ ಆಂದೋಲನವು 24 ಗಂಟೆಗಳ ಒಳಗೆ ಕೊನೆಗೊಳ್ಳುತ್ತದೆ"(107:27.07.59). ಜುಲೈ 26ರಂದು ನವದೆಹಲಿಯಲ್ಲಿ ಸಾರ್ವಜನಿಕ ಸಭೆಯನ್ನುದ್ದೇಶಿಸಿ ಇಂದಿರಾ ಗಾಂಧಿ ಹೀಗೆ ಹೇಳಿದರು: "ಸಂವಿಧಾನ ಇರುವುದು ಜನರಿಗಾಗಿಯಷ್ಟೆ ಹೊರತು, ಜನರು ಸಂವಿಧಾನಕ್ಕಾಗಿ ಇರುವುದಲ್ಲ. ಕೇರಳದ ಜನರ ಪರಿಹಾರಕ್ಕೆ ಸಂವಿಧಾನ ಅಡ್ಡಿಯಾಗುತ್ತಿದ್ದರೆ ಅದನ್ನು ಬದಲಾಯಿಸಬೇಕಾಗುತ್ತದೆ", ಎಂದು ಹೇಳಿದರು(107:27.07.59).

ಎಐಸಿಸಿ ಪ್ರಧಾನ ಕಾರ್ಯದರ್ಶಿ ಸುಚೇತ ಕೃಪಲಾನಿಯವರ ಅಧ್ಯಕ್ಷತೆಯಲ್ಲಿ ಜುಲೈ 28ರಂದು ಮದ್ರಾಸಿನಲ್ಲಿ ನಡೆದ ಸಾಮಾನ್ಯ ಸಭೆಯಲ್ಲಿ ಮನ್ನತ್ ಪದ್ಮನಾಭನ್ 'ಭಾರತ ಉಳಿಸಿ' ಕಾರ್ಯಕ್ರಮ ಕಾರ್ಯಕ್ರಮವನ್ನು ವಿವರಿಸಿದರು. ರಾಜ್ಯದ ವಿವಿಧ ಭಾಗಗಳಿಂದ ವಿಮೋಚನಾ ಹೋರಾಟ ಸಮಿತಿಯಿಂದ 25,000 ಸ್ವಯಂಸೇವಕರನ್ನು ಸಜ್ಜುಗೊಳಿಸಲಾಗುವುದು ಮತ್ತು ಅವರು ಆಗಸ್ಟ್ 9, 1959ರಂದು ಮಧ್ಯಾಹ್ನ ಮೂರು ಗಂಟೆಗೆ ತಿರುವನಂತಪುರಂಗೆ ಪಾದಯಾತ್ರೆಯ ಮೂಲಕ ಬರುವರೆಂದೂ

---

* ಇಎಂಎಸ್ ಕೇಳಿದರು. 'ಬೇರೆ ರಾಜ್ಯ ಸರ್ಕಾರಗಳು ಕಾನೂನು ಸುವ್ಯವಸ್ಥೆ ಸಮಸ್ಯೆ ಎದುರಿಸಿದಾಗ, ನೀವು ಕೊಟ್ಟಿದ್ದ ರಕ್ಷಣೆಗೆ ಕೇರಳ ರಾಜ್ಯ ಸರ್ಕಾರವು ಅರ್ಹವಾಗಿಲ್ಲವೇ? ವಿಶೇಷವಾಗಿ ಕಾನೂನು ಉಲ್ಲಂಘನೆ, ಹಿಂಸಾಚಾರ, ಮತ್ತು ಉಗ್ರವಾದದ ಪ್ರಚೋದಕರ ಬೆದರಿಕೆಯೊಡ್ಡುತ್ತಿರುವ ಪರಿಸ್ಥಿತಿಯಲ್ಲಿ ನಿಮ್ಮ ಪಕ್ಷದಿಂದ ಭಿನ್ನವಾದ, ಅಂದರೆ ಮತ್ತೊಂದು ಪಕ್ಷ ಇಲ್ಲಿ ಸರ್ಕಾರ ರಚಿಸಿದ್ದರಿಂದ ನಿಮ್ಮ ರಕ್ಷಣೆಯನ್ನು ನಿರಾಕರಿಸಬಹುದೇ?"

ರಾಜ್ಯ ಸಚಿವಾಲಯ, ಸಚಿವರ ನಿವಾಸ ಮತ್ತು ಇತರ ಕಟ್ಟಡಗಳ ಆವರಣಗಳಲ್ಲಿ ಕುಳಿತುಕೊಳ್ಳುತ್ತಾರೆಂದೂ ಪದ್ಮನಾಭನ್ ಹೇಳಿದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, 'ಭಾರತ ಉಳಿಸಿ' (Save India proclamation) ಎನ್ನುವ ಘೋಷಣೆಯಡಿ ನೇರವಾಗಿ ಪಾಲ್ಗೊಂಡಿತ್ತು. ಬಾಂಬೆಯಲ್ಲಿ ಆರ್. ಶಂಕರ್ ಹೀಗೆ ಹೇಳಿದರು: "ಆಗಸ್ಟ್ 9ರಂದು ಕೇರಳದ ಜನರು 'ಭಾರತ ಉಳಿಸಿ' ದಿನವನ್ನು ಆಚರಿಸುತ್ತಾರೆ. ಅಂದು ರಾಜ್ಯದ ಪ್ರತಿಯೊಬ್ಬ ವ್ಯಕ್ತಿಯೂ ತಿರುವನಂತಪುರಂ ಸೆಕ್ರೆಟರಿಯೇಟ್‌ನತ್ತ ಹೆಜ್ಜೆ ಹಾಕುತ್ತಾರೆ. "ಕಮ್ಯುನಿಸ್ಟ್ ಸರ್ಕಾರವನ್ನು ಕಿತ್ತೊಗೆಯುವವರೆಗೂ ನಾವು ಮನೆಗೆ ಹಿಂತಿರುಗುವುದಿಲ್ಲ.*(193:28.07.59) ರಾಜ್ಯದ ರಾಜಧಾನಿ ಮೇಲೆ ದಾಳಿ ನಡೆಯಲಿದೆ ಎಂದು, ಸರ್ಕಾರ ನಿರ್ಗಮಿಸುವುದೆಂದು, ಅದು 'ಸಾಮೂಹಿಕ ಹತ್ಯಾಕಾಂಡ'ಕ್ಕೆ ಕಾರಣವಾಗುತ್ತದೆ ಎನ್ನುವ ಅನ್ವಯಸಾಧ್ಯತೆ ಬಗ್ಗೆ, ದೆಹಲಿಯ ಗೃಹ ಸಚಿವಾಲಯಕ್ಕೆ, ಕೇಂದ್ರ ಮಧ್ಯಪ್ರವೇಶದ ಬಗ್ಗೆ ಗಟ್ಟಿಯಾಗಿ ಯೋಚಿಸಲು ಸಾಕಷ್ಟು ಕಾರಣಗಳು ದೊರೆತವು.

## ಸಮಾಲೋಚನೆಗಳು ಮತ್ತು ರಾಜ್ಯಪಾಲರ ಚಾರ್ಜ್ ಶೀಟ್

ಜುಲೈ 20ರ ಹೊತ್ತಿಗೆ ಕೇಂದ್ರ ಮಧ್ಯಪ್ರವೇಶಕ್ಕೆ ವೇಗವಾಗಿ ಸಿದ್ಧಗೊಳಿಸಲಾಯಿತು. ಈ ದಿನಗಳಲ್ಲಿ ಹೊಸದಿಲ್ಲಿಯಲ್ಲಿ ಉನ್ನತ ಮಟ್ಟದ ಮಾತುಕತೆಗಳು ನಡೆದವು. ಕೇರಳದ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ಎಐಸಿಸಿ ಕಾರ್ಯದರ್ಶಿಗಳಲ್ಲೊಬ್ಬರಾದ ಸುಚೇತಾ ಕೃಪಲಾನಿ ಅವರನ್ನು ಕಾಂಗ್ರೆಸ್ ಅಧ್ಯಕ್ಷರು ನೇಮಿಸಿದರು. ಪ್ರಧಾನ ಮಂತ್ರಿ ಅದನ್ನು ಅಪೇಕ್ಷಿಸಲಿಲ್ಲ ಎನ್ನುವ ಕಾರಣಕ್ಕೆ, ರಾಷ್ಟ್ರಪತಿಗಳಿಗೆ ರಾಜ್ಯದ ಪರಿಸ್ಥಿತಿಯ ಬಗ್ಗೆ ವರದಿ ಮಾಡಲು ಹಿಂಜರಿಕೆ ತೋರಿದ ರಾಜ್ಯದ ಗವರ್ನರ್ ಮೇಲೆ,1959, ಜುಲೈ 25, 28ರ ನಡುವೆ ಅವರು ಸಾಕಷ್ಟು ಒತ್ತಡ ಹೇರಿದ್ದರು ಎನ್ನಲಾಗಿದೆ. ರಾಜ್ಯಪಾಲರ ವರದಿ ದೊರಕದೆಯೇ ಅವರು ಕೇರಳದಿಂದ ಹಿಂತಿರುಗಿ ಹೋಗುವುದಾಗಿ ಅವರಿಗೆ ಹೇಳಿದರು. ಕೇಂದ್ರ ಸರ್ಕಾರದ ಮಧ್ಯಪ್ರವೇಶ ಅನಿವಾರ್ಯವಾಗುವ ವಿಧದಲ್ಲಿ,ರಾಜ್ಯದಲ್ಲಿ ಸಾಂವಿಧಾನಿಕ ವ್ಯವಸ್ಥೆ ಸಂಪೂರ್ಣ ಕುಸಿದಿದೆ ಎಂಬುದು ತಮ್ಮ ಅಭಿಪ್ರಾಯ, ಎಂದು ಸುಚೇತಾ ಕೃಪಲಾನಿ ರಾಜ್ಯಪಾಲರಿಗೆ ಸೂಚಿಸಿದರು(165:p185).

ಜುಲೈ 25ರಂದು ಪ್ರಧಾನಿ ನೆಹರೂರವರು, ರಾಷ್ಟ್ರಪತಿಗಳೊಂದಿಗೆ ಒಂದು ಗಂಟೆ ಕಾಲ ಚರ್ಚಿಸಿದ ನಂತರ, ಗೃಹ ಸಚಿವ ಜಿ.ಬಿ. ಪಂತ್ ಜೊತೆ ಕೇರಳದ ಪರಿಸ್ಥಿತಿಯ ಬಗ್ಗೆ ಸಮಾಲೋಚನೆ ನಡೆಸಿದರು(137:p110). ಕೇಂದ್ರ ಹಣಕಾಸು ಸಚಿವ ಮೊರಾರ್ಜಿ ದೇಸಾಯಿ, ಗೃಹ ಸಚಿವ ಪಂತ್, ಕಾಂಗ್ರೆಸ್ ಅಧ್ಯಕ್ಷೆ ಇಂದಿರಾಗಾಂಧಿ, ರಾಷ್ಟ್ರಪತಿ ರಾಜೇಂದ್ರ ಪ್ರಸಾದ್ ಮತ್ತು ಪ್ರಧಾನಿ ನಡುವೆ ಕೇರಳದ ವಿಶೇಷ ಸನ್ನಿವೇಶಗಳ ಕುರಿತು

* ಚೌಪತಿ ಸ್ಯಾಂಡ್ಸ್, ಬಾಂಬೆಯಲ್ಲಿ. ಬಾಂಬೆ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಆಶ್ರಯದಲ್ಲಿ ನಡೆಯಿತು ಶಂಕರ್ ಸಾರ್ವಜನಿಕ ಸಭೆಯೊಂದರಲ್ಲಿ ಘೋಷಿಸಿದರು.

ಚರ್ಚಿಸಲಾಯಿತು(107:26.07.59). ಕೇರಳ ಸರ್ಕಾರದ ವಿರುದ್ಧ ಚಾರ್ಜ್ ಶೀಟ್ ತಯಾರಿಸಲು, ಕೇಂದ್ರ ಗೃಹ ಸಚಿವ ಜಿ.ಬಿ. ಪಂತ್‌ರವರು, ಕೇಂದ್ರ ಗುಪ್ತಚರ ಬ್ಯೂರೋ ಮುಖ್ಯಸ್ಥ ಮತ್ತು ಕಾನೂನು ಸಚಿವ ಎ.ಕೆ. ಸೇನ್‌ರನ್ನು ಕೇಳಿಕೊಂಡರು(118:06.01.79p150). ಮೂವತ್ತಾರು ಪುಟಗಳ ಚಾರ್ಜ್ ಶೀಟ್‌ನ್ನು ಜುಲೈ 23ರಂದು ಪಂತ್‌ರವರು ಕೇರಳದ ರಾಜ್ಯಪಾಲರಿಗೆ ಕಳುಹಿಸಿಕೊಟ್ಟರು. "ವಾಸ್ತವಾಂಶಗಳನ್ನು ಮೌಲ್ಯಮಾಪನಮಾಡಿ, ಕೇಂದ್ರ ಸರ್ಕಾರದ ಕ್ರಮದ ಅಗತ್ಯವಿದೆಯೇ ಎಂದು ಸ್ವತಃನೀವೇ ನಿರ್ಣಯಿಸಿ ನಿರ್ಧಾರ ತೆಗೆದುಕೊಳ್ಳುವ ಸಲುವಾಗಿ ರಾಜ್ಯಪಾಲರಿಗೆ ಸಹಾಯ ಮಾಡಲು ಪಂತ್ ಹೀಗೆ ಮಾಡಿದ್ದರು. ಆದರೆ, ರಾಜ್ಯಪಾಲರು ವಾಸ್ತವ ಸಂಗತಿಗಳಿಗಾಗಿ ಕೇರಳ ಪೋಲೀಸ್ ಮತ್ತು ರಾಜ್ಯದ ಮಂತ್ರಿಗಳನ್ನು ಅವಲಂಬಿಸಬೇಕಾಯಿತು. ವಾಸ್ತವವಾಗಿ ಕೆಲವು ಸಂಗತಿಗಳನ್ನು ರಾಜ್ಯಪಾಲರಿಂದ ಮರೆಮಾಚಲಾಗಿತ್ತು(224:p355). ಮೂರು ದಿನಗಳವರೆಗೆ ರಾಜ್ಯಪಾಲರು ಉತ್ತರ ನೀಡಲಿಲ್ಲ. ಕೇಂದ್ರದ ಮಧ್ಯಪ್ರವೇಶಕ್ಕೆ ಒಲವು ತೋರಿದ್ದ ಗುಪ್ತಚರ ದಳದ ಮುಖ್ಯಸ್ಥ ಬಿ.ಎನ್.ಮಲ್ಲಿಕ್‌ರ ಉಪಸ್ಥಿತಿಯಲ್ಲಿ ರಾಜ್ಯಪಾಲರನ್ನು ದೂರವಾಣಿಯಲ್ಲಿ ಸಂಪರ್ಕಿಸಲು ಕೇಂದ್ರದ ಮಧ್ಯಸ್ಥಿಕೆಗೆ ಒಲವಿಲ್ಲದ, ಗೃಹ ಕಾರ್ಯದರ್ಶಿ ಬಿ.ಎನ್.ಝಾ ಅವರನ್ನು ಜುಲೈ 26ರಂದು ಕೇಂದ್ರ ಗೃಹ ಸಚಿವರು ಕೇಳಿದಾಗ(118:06.01.79p150) ಬಿ.ಎನ್.ಮಲ್ಲಿಕ್ ಹೀಗೆ ಹೇಳಿದ್ದರು:

> "ಝಾರವರು ಕೇಂದ್ರದ ಹಸ್ತಕ್ಷೇಪಕ್ಕೆ ವಿರುದ್ಧವಾಗಿದ್ದರಿಂದ, ಗವರ್ನರ್‌ಗೆ ಕಳುಹಿಸುವ ಸಂದೇಶವನ್ನು ನನ್ನ ಉಪಸ್ಥಿತಿಯಲ್ಲೇ ತಲುಪಿಸಬೇಕೆಂದು ಪಂಡಿತ್ ಪಂತ್‌ರಿಗೆ ನಿರ್ಬಂಧವಿತ್ತು. ಏನೆಂದರೆ, ಝಾ ಸಂದೇಹಕ್ಕೆ ಆಸ್ಪದ ಕೊಡದ ರೀತಿಯಲ್ಲಿ ವರ್ತಿಸಬೇಕಾಗಿತ್ತು. ಅಂದು ಸಂಜೆ ಪಂಡಿತ್ ಪಂತ್ ನನ್ನಲ್ಲಿ ವಿಚಾರಿಸಿಕೊಂಡಿದ್ದರು. ಅದೇನೆಂದರೆ, ಝಾ ಅವರು ರಾಜ್ಯಪಾಲರೊಂದಿಗೆ ಮಾತನಾಡುವಾಗ ನಾನು ಹಾಜರಿದ್ದೆನೋ ರಾಜ್ಯಪಾಲರಿಗೆ ಸಂಭಾಷಣೆಯ ಸಾರಾಂಶ ಅರ್ಥವಾಗಿದೆಯೇ ಎನ್ನುವುದು ತಿಳಿದುಕೊಳ್ಳಬೇಕಾಗಿತ್ತು. ನಾನು ಪರವಾಗಿಯೇ ಉತ್ತರಿಸಿದ್ದೆ"(224:p355-356).

ಅಂದು ಸಂಜೆಯೇ ಬಿ.ಎನ್. ಝಾಗೆ ಸಂತೃಪ್ತಿಯಾಗುವ ವಿಧದಲ್ಲಿ, ಪ್ರಧಾನ ಮಂತ್ರಿ, ಕೇಂದ್ರದ ಕ್ರಮಕ್ಕೆ ಒಲವು ತೋರುವವರನ್ನು ವಿರೋಧಿಸುವ ಕಾರ್ಯವಿಧಾನವನ್ನು ಕೈಗೊಳ್ಳಲಾಯಿತು. ತನಗೆ ಸಿಕ್ಕಿದ್ದಾಗಿ ಅವರು ಹೇಳಿಕೊಂಡ, ಗುಪ್ತ ವಿವರಗಳಾಧಾರದ ಮೇಲೆ, ನಂಬೂದಿರಿಪಾಡ್‌ರವರೆ, ಕೇಂದ್ರ ವಹಿಸಿಕೊಳ್ಳಲು ಅಪೇಕ್ಷಿಸುತ್ತಿರುವುದಾಗಿ, ಮಾರನೆಯ ದಿನವೇ ಬಿ.ಎನ್.ಮಲಿಕ್ ನೆಹರೂರವರಿಗೆ ಮನವರಿಕೆ ಮಾಡಿಕೊಟ್ಟರು. *(224:p355-356;40:09.08.59). ಹಾಗೆ ಕೇಂದ್ರ ಮಧ್ಯಪ್ರವೇಶದ ಪರವಾಗಿ ನೆಹರೂ ಅವರ ಒಪ್ಪಿಗೆ ಪಡೆಯುವಲ್ಲಿ ಕೇಂದ್ರೀಯ ಗುಪ್ತಚರ ಬ್ಯೂರೋ ಮುಖ್ಯಸ್ಥರು ಪ್ರಮುಖ ಪಾತ್ರ ವಹಿಸಿದ್ದರು.

---

* ವಾಸವವಾಗಿ, 'ಗೌಪ್ಯ ಮಾಹಿತಿ' ಎಂದು ಕರೆಯಲ್ಪಡುವದನ್ನು ಇಎಂಎಸ್ ತಾವೇ ಅದನ್ನು ತಿರಸ್ಕರಿಸಿದ್ದರು. ಅವರು ಎಂದಿಗೂ ಕೇಂದ್ರದ ಹಸ್ತಕ್ಷೇಪವನ್ನು ಬಯಸಲಿಲ್ಲ



ಕೇರಳ ಚಳುವಳಿ, 'ಉಗುಳಲಾರದಷ್ಟು ಸಿಹಿ, ನುಂಗಲಾರದಷ್ಟು ಕಹಿ' -ಮಲೆಯಾಳಂ ಗಾದೆ
ವ್ಯಂಗ್ಯಚಿತ್ರ: ಕುಟ್ಟಿ, ಹಿಂದುಸ್ತಾನ್ ಸ್ಟಾಂಡರ್ಡ್
ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

"ಪ್ರತಿಭಟನೆಕಾರರು ಸೃಷ್ಟಿಸಿರುವ ಆಂತರಿಕ ಅವ್ಯವಸ್ಥೆ, ಕೇಂದ್ರದ ಮಧ್ಯಪ್ರವೇಶಕ್ಕೆ ಸಾಕಾಗುವಷ್ಟು ಕಾರಣವಲ್ಲವೆಂದು, ಕೇಂದ್ರ ಸರ್ಕಾರಕ್ಕೆ ಮನವರಿಕೆಯಾಗಿದೆ, ಎನ್ನುವ ರೀತಿಯಲ್ಲಿರುವ ಒಂದು ಸ್ಪಷ್ಟವಾದ ಪ್ರಸ್ತಾವನೆ ಕೇಂದ್ರದಿಂದ ಬಂದಿದ್ದರೆ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿರುತ್ತಿತ್ತು."(106:p102)

ಎಂಬುದು ಕಮ್ಯುನಿಸ್ಟ್ ಪಕ್ಷ ಮತ್ತು ಅದರ ರಾಜ್ಯ ಸರ್ಕಾರದ ನಂಬಿಕೆಯಾಗಿತ್ತು.

ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ಅಜಯ್ ಘೋಷ್ ಮತ್ತು ಪಕ್ಷದ ಹಿರಿಯ ನಾಯಕರಲ್ಲಿ ಒಬ್ಬರಾದ ಎ.ಕೆ.ಗೋಪಾಲನ್ ಜುಲೈ 28ರಂದು ರಾಜ್ಯದ ಪರಿಸ್ಥಿತಿಗಳ ಕುರಿತು ನೆಹರೂರವರೊಂದಿಗೆ ನವದೆಹಲಿಯಲ್ಲಿ ಚರ್ಚೆ ನಡೆಸಿದರು ಎನ್ನುವ ಸುದ್ದಿಯೊಂದು ಪತ್ರಿಕೆಯಲ್ಲಿ ಬಂದಿತ್ತು(84:29.07.59). ಅವರ ಪ್ರಕಾರ, ಈ ಇಬ್ಬರು,

> "ಕೇಂದ್ರ ಸರ್ಕಾರ ಏನು ಮಾಡಲು ಹೊರಟಿದೆ" ಎನ್ನುವ ವಿಷಯದ ಬಗ್ಗೆ ನೆಹರೂರವರಲ್ಲಿ ಕೇಳಿದಾಗ, "ಯಾವುದೇ ನಿರ್ಧಾರವನ್ನು ಇದುವರೆಗೂ ತೆಗೆದುಕೊಂಡಿಲ್ಲ" ಎನ್ನುವ ಉತ್ತರ ನೆಹರೂನಿಂದ ಪಡೆದರು. ಆಗ ಇವರು, "ಈ ಪ್ರತಿಭಟನೆಗಳನ್ನು ನಿಲ್ಲಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು, ಸಾಧ್ಯವಾಗದಿದ್ದರೆ, ಕೊನೆಯ ಪಕ್ಷ ಸಂಪೂರ್ಣ ಹೋರಾಟವಾಗಿ ಆಗಸ್ಟ್ 9ರಂದು ನಡೆಯಲಿರುವ ಬೃಹತ್ ಪ್ರದರ್ಶನವನ್ನು ನಿಲ್ಲಿಸುವುದಕ್ಕಾದರೂ ನೆಹರೂ ತಮ್ಮ ಪ್ರಭಾವವನ್ನು ಬಳಸಬೇಕು" ಎಂಬ ಮನವಿ ಮಾಡಿದರು(127:p71). ಅದಕ್ಕೆ ನೆಹರೂರವರು "ಅದು ತಮ್ಮಿಂದಾಗದು" ಎಂದಾಗ ಅಜಯಘೋಷ್ ಮತ್ತು ಎ.ಕೆ.ಗೋಪಾಲನ್ ಅವರು ನೆಹರೂಗೆ, "ಹಾಗಾದರೆ, ಬೇಗ ಏನಾದರೂ ಮಾಡಲೇಬೇಕು' ಎಂದು ಒತ್ತಾಯಮಾಡಿದರು. (ಇದೊಂದು ಸುಳ್ಳುಕತೆಯೆಂದು ಸಿಪಿಐ ನಂತರದಲ್ಲಿ ಹೇಳಿಕೆ ನೀಡಿತು) (84:28.07.59;191:29.07.59))

ಆಂದೋಲನವನ್ನು ಮುಂದುವರಿಸುವುದು ಕಾಂಗ್ರೆಸ್‌ನ ಹಿತಾಸಕ್ತಿಯಾಗಿತ್ತು. ಏಕೆಂದರೆ, ಅದು ಕೇರಳದಲ್ಲಿ ಅವ್ಯವಸ್ಥೆಯನ್ನು ಹೆಚ್ಚಿಸುತ್ತಾ, ರಾಜ್ಯ ಸರ್ಕಾರದ ಅಸಹಾಯಕತೆಯನ್ನು ಬಯಲಿಗೆಳೆಯುವಂತೆ ಮಾಡುತ್ತಿತ್ತು.

"ಕೇಂದ್ರ ಸರ್ಕಾರವು ಕೇರಳ ಸರ್ಕಾರಕ್ಕೆ ಎಲ್ಲ ರೀತಿಯ ನೆರವು ನೀಡಿದೆ" ಎನ್ನುವ ಕಥೆ, ಜುಲೈ 28 ಮತ್ತು 29ರಂದು ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಯಿತು (84:28.07.59;191:29.07.59). ಸಿಪಿಐ ಕಾರ್ಯದರ್ಶಿ ಇದನ್ನು ನಿರಾಕರಿಸಿ, ಹೀಗೆ ಪ್ರತಿಕ್ರಿಯಿಸಿದ್ದಾರೆ:

> "ಪ್ರತಿಗಾಮಿ ಪ್ರತಿಪಕ್ಷಗಳ ಒಕ್ಕೂಟಕ್ಕೆ ನೆರವು ನೀಡುವ ಬದಲು, ಕಾಂಗ್ರೆಸ್ ಹೈಕಮಾಂಡ್ ಮತ್ತು ಕೇಂದ್ರ ಸರ್ಕಾರವು ಅವರ ಕಾನೂನು ವಿರುದ್ಧವಾದ ಹಿಂಸಾಚಾರ ಚಟುವಟಿಕೆಗಳಿಗೆ, ಬಹಿರಂಗವಾಗಿ ಆಕ್ಷೇಪಿಸಿದ್ದರೆ, ಎಲ್ಲಾ ರೀತಿಯ ಪ್ರತಿಭಟನೆಗಳು ಮತ್ತು ತಿರುವನಂತಪುರಂ ಸೆಕ್ರೆಟರಿಯೇಟ್ ದಿಗ್ಬಂಧನ ಕಾರ್ಯಕ್ರಮಗಳೆಲ್ಲವೂ ಒಂದು ರಟ್ಟಿನ ಅರಮನೆಯಂತೆ ಕುಸಿದು, ಶಾಂತಿಯನ್ನು ಮರುಸ್ಥಾಪಿಸಬಹುದಾಗಿತ್ತು" (40:09.08.59)

ಎರಡನೇ ಕಥೆಯೆಂದರೆ

"ಕಮ್ಯುನಿಸ್ಟ್ ನಾಯಕರು ಕೇಂದ್ರ ಮಧ್ಯಸ್ಥಿಕೆಗೆ ಒತ್ತಾಯಿಸಿದ್ದರು"

ಎನ್ನುವುದು. ಸಿಪಿಐ ಪ್ರಧಾನ ಕಾರ್ಯದರ್ಶಿಯವರು ಈ ಕಥೆಯನ್ನು ಸಹ ಸಾರ್ವಜನಿಕ ಸಭೆಯಲ್ಲಿ ತಮ್ಮ ಪತ್ರಿಕಾ ಗೋಷ್ಠಿಯಲ್ಲಿ ಸಂಪೂರ್ಣವಾಗಿ ನಿರಾಕರಿಸಿದರು(84:28.07.59).

"ಕೇಂದ್ರದ ಮಧ್ಯಸ್ಥಿಕೆಗೆ ರಾಜ್ಯ ಸರ್ಕಾರ ಒಲವು ತೋರಿತು"

ಎನ್ನುವುದು ಮೇಲಿನವುಗಳಿಂದ ರೂಪಾಂತರಗೊಂಡ ಇನ್ನೊಂದು ಕಥೆಯಾಗಿದೆ. ಇಂತಹ 'ಸುಳ್ಳು ಪ್ರಚಾರ'ದ ವಿರುದ್ಧ ನಂಬೂದಿರಿಪಾಡ್ ಸಾರ್ವಜನಿಕವಾಗಿ ಪ್ರತಿಭಟಿಸಿದರು(40:09.08.59).

ಜುಲೈ 29ರಂದು ಕೇಂದ್ರ ಗೃಹ ಸಚಿವರು,

> "ಇಂಟೆಲಿಜೆನ್ಸ್ ಬ್ಯೂರೋ ಮುಖ್ಯಸ್ಥ ಬಿ.ಎನ್.ಮಲ್ಲಿಕ್‌ರೊಂದಿಗೆ ರಾಜ್ಯಪಾಲರು ವರದಿ ಕಳುಹಿಸುತ್ತಿದ್ದಾರಾ ಎಂದು ಖಾತ್ರಿಗೊಳಿಸಿಕೊಳ್ಳಬೇಕು"

ಎಂದು ಕೋರಿದರು. ವಿಮಾನದಲ್ಲಿ ಮದ್ರಾಸ್‌ನಿಂದ ಮಧ್ಯಾಹ್ನದ ನಂತರ ವರದಿ ಕಳುಹಿಸುತ್ತಿರುವುದಾಗಿ ಪರಿಶೀಲನೆಯ ಮೂಲಕ ಮನವರಿಕೆಯಾಯಿತು. ಮರುದಿನ ಬೆಳಗ್ಗೆ ನವದೆಹಲಿಗೆ ವರದಿ ಬರಲಿದೆ ಎಂಬುದು ಸ್ಪಷ್ಟವಾಯಿತು. ಆ ರಾತ್ರಿಯೇ ವರದಿಯ ಅಕ್ಷರಶಃ ಅನುವಾದವನ್ನು ಪಡೆಯಬೇಕೆಂದು ಪಂಡಿತ್ ಪಂತ್ ಒತ್ತಾಯಿಸಿದರು. ವಿಮಾನದಿಂದ ವರದಿಯನ್ನು ಪಡೆದುಕೊಳ್ಳಲು ಮತ್ತು ಅದರ ಒಳಾಂಶಗಳನ್ನು ಟೆಲಿಫೋನ್ ಮೂಲಕ ನವದೆಹಲಿಗೆ ತಿಳಿಸಲು, ಮಾರನೇ ದಿನ ವಿಮಾನದ ಮೂಲಕ ಅದನ್ನು ಕಳುಹಿಸಿಕೊಡಲು ಅವರು ಮದ್ರಾಸಿನಲ್ಲಿರುವ ಗುಪ್ತಚರ ಬ್ಯೂರೋ ಮುಖ್ಯಸ್ಥರಿಗೆ ಜವಾಬ್ದಾರಿ ವಹಿಸಿಕೊಟ್ಟರು. ಹಾಗೆ, ಕೇರಳ ಸರ್ಕಾರವನ್ನು ಅಸಿಂಧುಗೊಳಿಸುವುದಕ್ಕೆ ಶಿಫಾರಸು ಮಾಡಿದ ಸುಮಾರು ಮೂವತ್ತು ಪುಟಗಳ ವರದಿ ಲಭ್ಯವಾಯಿತು(224:p356;84:31.07.59). ಜುಲೈ 30, 1959ರಂದು, ಕೇಂದ್ರ ಸಚಿವ




'ಮರ್ಡರ್ ಇನ್ ದಿ ಕೆಥೆಡ್ರಲ್' ಸಂವಿಧಾನದ ಮಂದಿರದಲ್ಲಿ ಕೇರಳ ಮಂತ್ರಿಮಂಡಲದ ಕೊಲೆ – ವ್ಯಂಗ್ಯಚಿತ್ರ, ಅಕ್ಕ

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಸಂಪುಟವು ಕೇರಳದ ಪರಿಸ್ಥಿತಿಯ ಬಗ್ಗೆ ಮೂರೂವರೆ ಗಂಟೆಗಳ ಮ್ಯಾರಥಾನ್ ಚರ್ಚೆಯನ್ನು ನಡೆಸಿ, ರಾಜ್ಯ ಸರ್ಕಾರವನ್ನು ವಿಸರ್ಜಿಸಿ, 356ನೇ ವಿಧಿ ಅಡಿಯಲ್ಲಿ ಕೇರಳದ ಆಡಳಿತವನ್ನು ವಹಿಸಿಕೊಳ್ಳುವಂತೆ ರಾಷ್ಟ್ರಪತಿಗಳಿಗೆ ಸಲಹೆ ನೀಡಲು ನಿರ್ಧರಿಸಿತು (84:31.07.59). ಆ ಸಂಜೆಯೇ ನಿರ್ಧಾರ ಕೈಗೊಂಡು, ಮರುದಿನ ಬೆಳಿಗ್ಗೆ, ವರದಿ ತಲುಪಿದ ಕೂಡಲೇ, ಜುಲೈ 31ರಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಯಿತು (118:06.01.79p150).

ಈ ಕ್ರಮಗಳಿಗೆ ಸಂಪೂರ್ಣವಾಗಿ ಕೆಲವು ಅನಾರೋಗ್ಯಕರವಾದ ವಿಶೇಷತೆಗಳಿದ್ದವು. ಮೊದಲನೆಯದು, ರಾಜ್ಯಪಾಲರ ವರದಿಗಳಿಗೆ ಸಂಬಂಧಿಸಿದ್ದು(118:06.01.79p150). ಅದರ ಬಗ್ಗೆ ಸಿಪಿಐ, ಪ್ರತಿಪಾದಿಸುತ್ತಿರುವುದೇನೆಂದರೆ, ಮಧ್ಯಪ್ರವೇಶಿಸುವ ನಿರ್ಧಾರವನ್ನು ತೆಗೆದುಕೊಂಡ ನಂತರ ನಡೆದ ವಿದ್ಯಮಾನವು, 'ಆಜ್ಞಾನುಸಾರದ ಪ್ರದರ್ಶನವೆಂದೋ', ತಪ್ಪು ನಡೆದದ್ದಕ್ಕೆ ಒಂದು ರೀತಿಯ ಕ್ಷಮಾಪಣೆಯೆಂದೋ, ನಂತರದ ಚಿಂತನೆ ಯಾಗಿತ್ತೆಂದೋ,*(40:09.08.59) ವಿಶಿಷ್ಟಗೊಳಿಸಿ ಹೇಳಬಹುದಾಗಿದೆ. ವರದಿಯನ್ನು

---

* The CPI sources pointed out : "On Wednesday (29th July) morning, the Cabinet met for just over two hours and discussed Kerala issues. The press next morning splashed the report that the Kerala Governor's report had come, and some even went to the extent of saying that it had actually been discussed in the Cabinet on Wednesday morning. But a careful study of the reports the day after – and just a little careful listening-in in New Delhi with one's ears to the ground – made it clear that when the cabinet was to discuss the all-important question of intervening in Kerala, it did not have even the Governor's report before it."

ಒಮ್ಮೆಯೂ ಪ್ರಕಟಿಸಿರಲಿಲ್ಲ. ರಾಜ್ಯಪಾಲರೇ ಸ್ವತಃ ಸಿದ್ಧಪಡಿಸಿದ*(84:18.08.59) 4000 ಪದಗಳಲ್ಲಡಗಿದ ಅತಿ ಸಂಕ್ಷಿಪ್ತವಾದ ವರದಿ ಮೂರು ವಾರಗಳ ಕಾಲದ ನಂತರ ಕಾಣಿಸಿಕೊಂಡಿತು. ಆಗಸ್ಟ್ 15ರಂದು ಕೇಂದ್ರ ಸರ್ಕಾರ ಸ್ವೀಕರಿಸಿದ ಸಾರಾಂಶವನ್ನು, ಆಗಸ್ಟ್ 17ರಂದು ಗೃಹ ಸಚಿವರು ಲೋಕಸಭೆಯ ಮೇಜಿನ ಮೇಲಿರಿಸಿದರು.**(84:18.08.59) ಈ ಸಾರಾಂಶದಲ್ಲಿ ಬಳಸಲಾದ ಪದಗಳೂ ವಾಕ್ಯಗಳೂ ಹೊರಿಸಲಾದ ಆರೋಪಗಳೂ ರಾಷ್ಟ್ರಪತಿಗಳಿಗೆ ಕೆಪಿಸಿಸಿ ಅಧ್ಯಕ್ಷರು ಮೊದಲು ಸಲ್ಲಿಸಿದ ಜ್ಞಾಪಕಪತ್ರದಂತೆಯೇ ಇತ್ತು(118:06.01.79p150; 84:12.07.59;100:). ಲೋಕಸಭೆಯ ಮೇಜಿನ ಮೇಲೆ ರಾಜ್ಯಪಾಲರದ್ದೆಂದು ಹೇಳಲ್ಪಡುವ ವರದಿಯ ಸಾರಾಂಶವು ಹೀಗೆ ಪ್ರಾರಂಭವಾಗುತ್ತದೆ:

> "ನಾನು ಸಮಗ್ರವಾಗಿ ಸಲ್ಲಿಸುವ ವರದಿಯಲ್ಲಿ, ನನ್ನ ಹಿಂದಿನ ಹಲವು ವರದಿಗಳಲ್ಲಿ ಒಳಗೊಂಡಿರುವ ಹಲವು ವಿಚಾರಗಳು ಒಂದೊಮ್ಮೆ ಪುನರಾವರ್ತನೆಗೊಂಡಿರಬಹುದು. ಆದರೂ ಇದು ಪ್ರಸ್ತುತ ಪರಿಸ್ಥಿತಿಯ ವಾಸ್ತವತೆಯನ್ನು ನಿಮಗೆ ಸ್ಪಷ್ಟಪಡಿಸುತ್ತದೆ. ನಾನು ಈ ವರದಿಯಲ್ಲಿ, ಈ ಪ್ರಕಾರ ಶಿಫಾರಸು ಮಾಡುತ್ತೇನೆ, ಏನೆಂದರೆ, ಈಗ ಕೇರಳದಲ್ಲಿ ಗಂಭೀರ ಬಿಕ್ಕಟ್ಟನ್ನು ಪರಿಹರಿಸಲು ನನಗೆ ಲಭ್ಯವಿರುವ ಏಕೈಕ ದಾರಿಯೆಂದರೆ, ಸಂವಿಧಾನದ 356ನೇ ವಿಧಿಯ ಅಡಿಯಲ್ಲಿ ಕ್ರಮ ಕೈಗೊಳ್ಳುವುದು, ನಂತರ ಮರುಚುನಾವಣೆ ಮಾಡುವುದು."

ಆಧಾರರಹಿತವೆಂದು ಸ್ಪಷ್ಟಪಡಿಸುವುದನ್ನೋ ಕಮ್ಯುನಿಸ್ಟ್ ಸರ್ಕಾರವು ಪರಿಗಣಿಸುವುದನ್ನೋ ಮಾಡಲಾದ, ಕೆಲವು ಆರೋಪಗಳ ಕೊನೆಯಲ್ಲಿ, ಪ್ರಸ್ತುತ ಸಾರಾಂಶದಲ್ಲಿ ಈ ಪ್ರಕಾರ ಬರೆದು ಸೇರಿಸಲಾಗಿದೆ:

> "ರಾಜ್ಯದಲ್ಲಿ ನಿಷ್ಪಕ್ಷರೇ ಇಲ್ಲದ ವಿಧದಲ್ಲಿ ವಿರೋಧಪಕ್ಷದ ವ್ಯಾಪಕ ಉಪಸ್ಥಿತಿಯಿತ್ತು. ಸಂಪೂರ್ಣವಾಗಿ ದಣಿಯದಿದ್ದರೂ ಸರ್ಕಾರ ಎಂದಿನಂತೆ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಏಳು ವಾರಗಳ ಕಾಲ ದೀರ್ಘಗೊಂಡ ಆಂದೋಲನ, ಸರ್ಕಾರ ನಿರೀಕ್ಷಿಸಿದಷ್ಟು ಕಡಿಮೆಯಾಗುವ ಲಕ್ಷಣ ಕಂಡುಬರಲಿಲ್ಲ. ಕೇಂದ್ರ ನಾಯಕರು ನೀಡುತ್ತಾರೆನ್ನುವ 'ಮಧ್ಯಸ್ಥಿಕೆ'ಯ ನಿರೀಕ್ಷೆಯಲ್ಲಿಯೇ ಆಂದೋಲನ ಮುಂದುವರೆಯಿತು, ಎನ್ನುವ ವಾದದಲ್ಲಿ ಯಾವುದೇ ಹುರುಳಿಲ್ಲ. ಮತ್ತೊಂದೆಡೆ ಪ್ರತಿಪಕ್ಷದ ನಾಯಕರು ದೆಹಲಿಗೆ ಬಂದಾಗಲೆಲ್ಲಾ ನಿರಾಶೆಗೊಂಡಿದ್ದರು. ಅವರು ತಮ್ಮ ಅಗತ್ಯಗಳನ್ನು ಕೇಂದ್ರ ಸರ್ಕಾರದ ಪರಿಗಣನೆಗೆ ಮಂಡಿಸಲಾಗಿತ್ತು. ಆದರೆ, ಪ್ರಸ್ತುತ ಪರಿಸ್ಥಿತಿಗಳನ್ನು ಮೌಲ್ಯಮಾಪನ ಮಾಡಿದ ನಾನು, ಸಾಂವಿಧಾನಿಕವಾಗಿ ರಾಜ್ಯದ ಆಡಳಿತ ಮುಂದುವರಿಸಲು ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದು, ಸರ್ಕಾರದ ಬದಲಾವಣೆಯನ್ನು ಸಮರ್ಥಿಸಲು ಶಾಸಕಾಂಗದಲ್ಲೋ

---

* ರಾಜ್ಯಪಾಲರೇ ಸಂಕ್ಷಿಪ್ತವಾಗಿ ಸಿದ್ಧಪಡಿಸಿದರೆಂದು ಕೇಂದ್ರ ಗೃಹ ಎಂದು ಸಚಿವ ಜಿ.ಬಿ.ಪಂತ್ ತಿಳಿಸಿದ್ದಾರೆ.

** ಸಂಕ್ಷಿಪ್ತವಾಬದ್ದನ್ನು ಪೂರ್ಣವಾಗಿ ಪ್ರಕಟಿಸಲಾಯಿತು

ಸಂಸತ್ತಿನಲ್ಲೋ ಒಂದು ಅವಿಶ್ವಾಸ ಗೊತ್ತುವಳಿ ಮಂಡನೆ ಮಾಡುವ ಅಗತ್ಯವಿರುವುದಿಲ್ಲ".

ಕಮ್ಯುನಿಸ್ಟರು ಮತ್ತು ಇತರ ವಿಮರ್ಶಕರು ಯಾವಾಗಲೂ ಏನು ವಾದಿಸುತ್ತಾರೆಂದರೆ, ದುರಾಡಳಿತದ ಉಪಸ್ಥಿತಿ, ಪಕ್ಷದಿಂದ ಹಸ್ತಕ್ಷೇಪ, ಸ್ವಂತ ಪಕ್ಷದ ಸದಸ್ಯರಿಗೆ ಮಾತ್ರ ಲಾಭವನ್ನು ನೀಡುವುದು ಇವೇ ಮುಂತಾದವುಗಳು, ಇತರ ಕಾಂಗ್ರೆಸ್-ಆಡಳಿತ ರಾಜ್ಯಗಳಲ್ಲಿ ಕಂಡುಬರುತ್ತವೆಯಾದರೂ ಅಂತಹ ಸಂದರ್ಭಗಳಲ್ಲಿ, ಕೇಂದ್ರದ ಹಸ್ತಕ್ಷೇಪವನ್ನು ಸಮರ್ಥಿಸುವುದಿಲ್ಲ. ಇತರ ರಾಜ್ಯಗಳಲ್ಲಿಯೂ ಇಂತಹ ಒಂಟಿಯಾದ ಕ್ರಮಭಂಗ ಮತ್ತು ಪಕ್ಷಪಾತಗಳು ಕಂಡುಬರುತ್ತವೆ ಎಂಬುದು ನಿಜ. ಆದರೆ ಆಚಾರ್ಯ ಕೃಪಲಾನಿ ಸೂಚಿಸುವಂತೆ, ಇತರ ರಾಜ್ಯಗಳಲ್ಲಿ ಕಂಡುಬರುವ ವೈಫಲ್ಯಗಳು, ನ್ಯೂನತೆಗಳೆಲ್ಲವೂ ವೈಯಕ್ತಿಕ ಚಾಪಲ್ಯದ, ಪೂರ್ವಾಗ್ರಹ ಮತ್ತು ಅನುಚಿತ ವರ್ತನೆಯ ಪರಿಣಾಮವಾಗಿರುತ್ತದೆ. ಸರ್ಕಾರದೊಂದಿಗಿನ ಜನರ ವಿರೋಧದ ತೀವ್ರತೆ ಮತ್ತು ವ್ಯಾಪ್ತಿ ಎಷ್ಟೇ ಆಗಿದ್ದರೂ ಕೇಂದ್ರದ ಮಧ್ಯಪ್ರವೇಶವೆನ್ನುವುದು ಅಸಾಂವಿಧಾನಿಕ ಎಂದು ವಾದಿಸದೇ ನಿರ್ವಾಹವಿಲ್ಲ*(84:18.08.59). ಲಭ್ಯವಿರುವ ಏಕೈಕ ವರದಿ ಇದೊಂದು ಮಾತ್ರ. ಸಂಸತ್ತಿನಲ್ಲಿ ಕಮ್ಯುನಿಸ್ಟ್ ವಿರೋಧಪಕ್ಷವು ನ್ಯಾಯೋಚಿತ ವರದಿಗಾಗಿ ಒತ್ತಾಯಿಸಿದರೂ ರಾಜ್ಯಪಾಲರ ಹಿಂದಿನ ವರದಿಗಳನ್ನು ಸಾರ್ವಜನಿಕಗೊಳಿಸಲಾಗಿಲ್ಲ.

### ವಿಸರ್ಜನೆ – ರಾಷ್ಟ್ರಪತಿಗಳ ಘೋಷಣೆ

ಕೇರಳದಲ್ಲಿ ಮೊದಲ ಕಮ್ಯುನಿಸ್ಟ್ ಸರ್ಕಾರವನ್ನು ವಜಾಗೊಳಿಸಿದ್ದರ ಬಗ್ಗೆ, ಆಗಸ್ಟ್ 1, 1959ರಂದು ಹಿಂದೂ ಪತ್ರಿಕೆ ಹೀಗೆ ವರದಿ ಮಾಡಿತು:

> 'ಕೇರಳದಲ್ಲಿ ಕಮ್ಯುನಿಸ್ಟ್ ಆಳ್ವಿಕೆ ಕೊನೆಗೊಳ್ಳುತ್ತಿದೆ. ರಾಷ್ಟ್ರಪತಿ ಆಡಳಿತ ವಹಿಸಿಕೊಳ್ಳುತ್ತಿದೆ. ರಾಜ್ಯಪಾಲರ ವರದಿಯ ಮೇಲೆ ತೆಗೆದುಕೊಂಡ ಕ್ರಮ. ("COMMUNIST RULE ENDS IN KERALA. PRESIDENT TAKES OVER ADMINISTRATION. ACTION ON REPORT OF GOVERNOR)'
>
> ಹೊಸದಿಲ್ಲಿ, ಜುಲೈ 31: ಕೇರಳ ಸರಕಾರದ ಎಲ್ಲಾ ಜವಾಬ್ದಾರಿಗಳನ್ನೂ ವಹಿಸಿಕೊಂಡು ರಾಜ್ಯ ಶಾಸಕಾಂಗವನ್ನು ವಿಸರ್ಜಿಸುವ ಮೂಲಕ ಹೊಸ ಶಾಸಕಾಂಗ ರಚನೆಗೆ ಸಾರ್ವತ್ರಿಕ ಚುನಾವಣೆಯನ್ನು ಆದಷ್ಟು ಬೇಗ ನಡೆಸಲು ನಿರ್ದೇಶಿಸುತ್ತಾ, ಈ ಸಂಜೆ ಭಾರತದ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ್ ಒಂದು ಪ್ರಕಟನೆ ಹೊರಡಿಸಿದರು.
>
> "ಕೇರಳ ರಾಜ್ಯದ ರಾಜ್ಯಪಾಲರ ವರದಿ ಲಭ್ಯವಾಗಿದೆ. ಅದರ ಜೊತೆಗೆ ಇತರ ಮೂಲಗಳಿಂದ ಪಡೆದ ಮಾಹಿತಿಯ ಆಧಾರದ ಮೇಲೆ ನನಗೆ ಒಂದು ವಿಷಯ ಖಚಿತವಾಗಿದೆ. ಅದೇನೆಂದರೆ, ಭಾರತದ ಸಂವಿಧಾನದ ನಿಯಮಗಳು ಮತ್ತು

* Summary of the Governor's Report to the President of India.



ಕೆಪಿಸಿಸಿ ಚಾರ್ಜ್‌ಶೀಟ್–
"ನಿಮ್ಮಲ್ಲಿ ಕಣ್ಣೀರಿದ್ದರೆ
ಈಗ ಸುರಿಸಿ"
–ಶಂಕರ್ಸ್ ವೀಕ್ಲಿಯಲ್ಲಿ
ವ್ಯಂಗ್ಯ

ಇಎಂಎಸ್ ಸರ್ಕಾರದ ವಿರುದ್ಧದ
ಚಳುವಳಿಯ ಸಮಯಾವಧಿಯಲ್ಲಿ
ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ
ವ್ಯಂಗ್ಯಚಿತ್ರಗಳಲ್ಲೊಂದು

ನಿಬಂಧನೆಗಳಿಗೆ ಅನುಸಾರವಾಗಿ, ಕೇರಳದಲ್ಲಿ ಆಡಳಿತ ಮುಂದುವರಿಸಲಾಗದ ಪರಿಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದ, ಸಂವಿಧಾನದ 356ನೇ ವಿಧಿಯ ಮೂಲಕ ಭಾರತದ ರಾಷ್ಟ್ರಪತಿಗಳಿಗೆ ನೀಡಲಾದ ಅಧಿಕಾರವನ್ನು ಉಪಯೋಗಿಸಿಕೊಂಡು, ಈ ಪ್ರಕಟಣೆಯನ್ನು ನಾನು ಹೊರಡಿಸುತ್ತಿದ್ದೇನೆ."*(84:01.08.59)

ಶ್ರೀಮನ್ನಾರಾಯಣನ್, ಯು.ಎನ್. ಧೇಬಾರ್, ಸಾದಿಕ್ ಅಲಿ, ಸುಚೇತಾ ಕೃಪಲಾನಿ, ಇಂದಿರಾ ಗಾಂಧಿ ಮುಂತಾದ ಕಾಂಗ್ರೆಸ್‌ನ ಕೇಂದ್ರ ನಾಯಕತ್ವದ ಪ್ರಮುಖರು, ಕೇಂದ್ರದ ಹಸ್ತಕ್ಷೇಪ ಪ್ರಕ್ರಿಯೆಯಲ್ಲಿ ಗಣ್ಯರು ನಿರ್ಣಾಯಕ ಪಾತ್ರ ವಹಿಸಿದ್ದರು. ಆರ್ಥಿಕ ಸಂಪನ್ಮೂಲಗಳನ್ನು ಒದಗಿಸುವ ಕಮ್ಯುನಿಸ್ಟ್ ವಿರೋಧಿ ಸಾಮ್ರಾಜ್ಯಶಾಹಿ ಶಕ್ತಿಗಳ ಮತ್ತು ವಿಮೋಚನಾ ಪ್ರತಿಭಟನಾಕಾರರ ನಡುವೆ ಸಾರ್ಥಕವಾದ ಒಂದು ಕೊಂಡಿಯಾಗಿ ಕೇಂದ್ರ ಆಹಾರ ಸಚಿವ ಎಸ್.ಕೆ.ಪಾಟೀಲ್ ಕಾರ್ಯನಿರ್ವಹಿಸಿದರು(200:p250). ಕೇಂದ್ರ ಗೃಹ ಸಚಿವ ಜಿ.ಬಿ.ಪಂತ್ ಮತ್ತು ಕೇಂದ್ರ ಗುಪ್ತಚರ ದಳದ ಮುಖ್ಯಸ್ಥ ಬಿ.ಎನ್.ಮಲಿಕ್ ಕೂಡ, ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಆಡಳಿತ ಬದಲಾವಣೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದರು.

ನೆಹರೂರವರು ಕೇರಳದ ಕಮ್ಯುನಿಸ್ಟ್ ಸರ್ಕಾರವನ್ನು ವಿಸರ್ಜನೆಗೊಳಿಸಿದ್ದರ ಬಗ್ಗೆ "ಪರಿಸ್ಥಿತಿಗಳು ನಮ್ಮ ಮೇಲೆ ಬಲವಂತವಾಗಿ ಹೊರಿಸಿದ ನಿರ್ಧಾರವಾಗಿತ್ತದು" ಎಂದು ಸಮರ್ಥಿಸಿಕೊಂಡರು(50:08.08.59). ಭಾರತದ ಪ್ರಜಾಪ್ರಭುತ್ವದ ಶಿಷ್ಟಾಚಾರಕ್ಕೆ

* The full text of President's proclamation cited in the Appendix.

ಹೊಂದದ ಕೆಟ್ಟ ಸಂಪ್ರದಾಯವನ್ನು ನೆಹರೂರವರು ಪ್ರಸ್ತುತ ಮಂತ್ರಿಮಂಡಲದ ವಿಸರ್ಜನೆಯ ಬಗ್ಗೆ ಸ್ವತಃ ಅವಲೋಕನಗೈದಿದ್ದರು(127:p72). ಚುನಾವಣೆಯಲ್ಲಿ ಜನರ ತೀರ್ಪಿಗೆ ಹೊಂದಿಕೆಯಾಗದ ಕ್ರಮ ತೆಗೆದುಕೊಂಡಿದ್ದರೂ ಪ್ರತಿಪಕ್ಷಗಳಿಗೆ ಸಹಾನುಭೂತಿಯನ್ನು ವ್ಯಕ್ತಪಡಿಸಿ ರಾಜ್ಯಪಾಲ ರಾಮಕೃಷ್ಣರಾವ್ ವಜಾಗೊಳಿಸುವಿಕೆಯ ವಿವರಗಳನ್ನು ನೀಡಿದರು. 1958ರ ದೇವಿಕುಳಂ ಉಪಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷದ ಗೆಲುವಿನಿಂದ ವಿಚಲಿತರಾದ ಕಾಂಗ್ರೆಸ್, ಸಚಿವ ಸಂಪುಟ ವಿಸರ್ಜನೆಗೆ ಕಾರಣ ಎಂದು ಭಾವಿಸಲಾಯಿತು. ನೆಹರೂರವರ ಮುಂದೆ ಪ್ರತಿಪಕ್ಷಗಳು ಮಂಡಿಸಿದ ಹೋರಾಟದ ವಿಧಾನಗಳನ್ನಲ್ಲ ಅವರು ವಾಸ್ತವವಾಗಿ ಅಳವಡಿಸಿಕೊಂಡಿದ್ದು. ಕೋಮುವಾದಿ/ಜಾತಿವಾದಿ/ಸಾಮುದಾಯಿಕ ಪ್ರತಿಗಾಮಿ ಘಟಕಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು ಮತ್ತು ಗುಂಪುಗಳು ಹಿಂಸಾತ್ಮಕ ಆಂದೋಲನವನ್ನು ನಡೆಸಿದರು ಮತ್ತು ಅದರಲ್ಲಿ ಕಾಂಗ್ರೆಸ್‌ನ್ನು ತೊಡಗಿಸಿಕೊಳ್ಳುವಂತೆ ಮಾಡುವ ಅವರ ಪ್ರಯತ್ನಕ್ಕೆ ಯಶಸ್ಸೂ ದೊರೆಯಿತು. ವಾಸ್ತವವಾಗಿ, ಆ ಕಾಲಘಟ್ಟಲ್ಲಿ ಕೇರಳದ ಕಾಂಗ್ರೆಸ್ ಮತ್ತು ಇತರ ವಿರೋಧಪಕ್ಷಗಳು, ಕಮ್ಯುನಿಸ್ಟ್ ವಿರೋಧಿ ಕೋಮುವಾದಿ ಒಲವು ಹೊಂದಿರುವ ನಾಯಕರ ಮತ್ತು ಗುಂಪುಗಳಿಂದ ನಿಯಂತ್ರಿಸಲ್ಪಡುತ್ತಿದ್ದವು. ನೆಹರೂ ಅವರ ಮಿತ್ರತ್ವದ ಮನವಿಯನ್ನು ಅವರದೇ ಪಕ್ಷವೂ ಕ್ರಮೇಣ ನಿರ್ಲಕ್ಷಿಸಿತು. ಅಂತಹ ಆಂದೋಲನವನ್ನು ಮಿತ್ರತ್ವದ ಮತ್ತು ಸಂವಿಧಾನದ ಪರಿಮಿತಿಯೊಳಗೆ ಸೀಮಿತಗೊಳಿಸಬೇಕು ಎಂದು ಒತ್ತಾಯಿಸುವಲ್ಲಿ ಅವರು ಒಂದೋ ಅಸಮರ್ಥರಾಗಿದ್ದರು ಅಥವಾ ನಿರಾಸಕ್ತಿ ಹೊಂದಿದ್ದರು. ಆಗಸ್ಟ್ 22, 1959ರ 'ಎಕನಾಮಿಕ್ ವೀಕ್ಲಿ' ಹೀಗೆ ಗಮನಿಸಿ ಬರೆದಿತ್ತು: "ರಾಜ್ಯದಲ್ಲಿ ಕೋಮು/ಜಾತಿ ಭಾವನೆಗಳನ್ನು ನಾಚಿಕೆಗೇಡಿನ ಮತ್ತು ಪೈಶಾಚಿಕವಾದ ರೀತಿಯಲ್ಲಿ ಶೋಷಣೆ ನಡೆಸಿದ ಕಾಂಗ್ರೆಸ್ ಪಕ್ಷದ ಮೊಂಡು ಮನೋಭಾವವನ್ನು ನಿಯಂತ್ರಿಸುವಲ್ಲಿ ಅವರು ವಿಫಲರಾದುದಾಗಿ ಸ್ವತಃ ನೆಹರೂರವರೇ ಸಮ್ಮತಿಸಿದ್ದಾರೆ. ಸರ್ಕಾರವನ್ನು ಪದಚ್ಯುತಗೊಳಿಸುವಲ್ಲಿ ಅವರಿಗೆ ಏನೂ ಅಡ್ಡಿಯಾಗಲಿಲ್ಲ (86:22.08.59).

●



1959ರ ಜುಲೈ 31ಕ್ಕೆ. ಸೆಕ್ರೆಟರಿಯೇಟ್ ನೌಕರರು ನೀಡಿದ ಬೀಳ್ಕೊಡಿಗೆ ಸಮಾರಂಭದಲ್ಲಿ ಇಂಎಂಎಸ್ ಕೃತಜ್ಞತೆ ಸಲ್ಲಿಸುತ್ತಿರುವುದು...

ಆಗಸ್ಟ್ 3.1959 ರಂದು ಕೇರಳದ ಇಎಂಎಸ್ ಸರ್ಕಾರವನ್ನು ವಜಾಗೊಳಿಸಿದ್ದರ ವಿರುದ್ಧ ಪಾರ್ಲಿಮೆಂಟ್ ಎದುರು ನಡೆಸಿದ ಪ್ರತಿಭಟನೆ...



# 8

# ಕಮ್ಯುನಿಸ್ಟ್ ಹಡಗು ಮತ್ತು ಅದನ್ನು ವಿಧ್ವಂಸಕ್ಕೊಳಪಡಿಸಿದ ಬಿರುಗಾಳಿ

*(ಈ ಅಧ್ಯಾಯದಲ್ಲಿ, ಸಂಶೋಧನೆಯಿಂದ ಕಂಡುಕೊಂಡ ಸತ್ಯಾಸತ್ಯಗಳು ಮತ್ತು ಕೆಲವು ಮೂಲಭೂತ ಅವಲೋಕನಗಳ ಸಾರಾಂಶಗಳನ್ನು ಒಳಗೊಂಡಿರುತ್ತದೆ. ಶೋಷಕವರ್ಗವು ತಲೆಮಾರುಗಳಿಂದ ಅನುಭವಿಸುತ್ತಿರುವ ಪ್ರಾಬಲ್ಯವನ್ನು, ಕಮ್ಯುನಿಸ್ಟ್ ಆಳ್ವಿಕೆಯಿಂದಾಗಿ ಕಳೆದುಕೊಳ್ಳುವ ಪರಿಸ್ಥಿತಿ ಉಂಟಾದಾಗ, ಆ ಶೋಷಕರ ಪ್ರಾಬಲ್ಯವನ್ನು ಉಳಿಸಿಕೊಳ್ಳಲು ನಡೆಸಿದ ಹೋರಾಟದ ವಿರುದ್ಧ ಶೋಷಿತರ ಕಡೆಯಿಂದ ಉಂಟಾದ ಪ್ರತಿರೋಧ ಹೋರಾಟವು, ಐತಿಹಾಸಿಕ ಸಂಶೋಧನಾ ವಿಧಾನದ ಬೆಂಬಲದಿಂದ ವಸ್ತುನಿಷ್ಠವಾಗಿ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.)*

1959ರಲ್ಲಿ ಕೇರಳದಲ್ಲಿದ್ದ ಕಮ್ಯುನಿಸ್ಟ್ ವಿರೋಧಿ ದಂಗೆಯ ನಿರ್ಣಾಯಕ ಕಾರಣವನ್ನು, ಭಾರತೀಯ ಕಮ್ಯೂನಿಸ್ಟ್ ಪಕ್ಷದ ನಿಯಂತ್ರಣದಲ್ಲಿದ್ದ ಕೇರಳ ಸರ್ಕಾರ ಮತ್ತು ರಾಜ್ಯದಲ್ಲಿದ್ದ ಪ್ರಬಲವಾದ ಕಮ್ಯುನಿಸ್ಟ್ ವಿರೋಧಿ ಘಟಕಗಳ ನಡುವಿನ ತೀಕ್ಷ್ಣವಾದ ಹಿತಾಸಕ್ತಿ ಸಂಘರ್ಷದಲ್ಲಿ ಕಾಣಬಹುದಾಗಿದೆ. ಕಮ್ಯುನಿಸ್ಟ್ ಪಕ್ಷ ಸದೃಢವಾಗಿ ರಾಜಕೀಯ ಸಂಘಟನೆಯಾಗಿ ಬೆಳೆಯಲು ಅನುಕೂಲಕರವಾದ ವಾತಾವರಣವು 1957ಕ್ಕಿಂತ ಮೊದಲಿನ ಎರಡು ದಶಕಗಳಲ್ಲಿ ಕೇರಳದಲ್ಲಿ ಇತ್ತು. ಅದೇ ಸಮಯದಲ್ಲಿ, ಕಮ್ಯುನಿಸ್ಟ್ ವಿರೋಧಿ ಶಕ್ತಿಗಳಿಗೂ ತಮ್ಮ ವಿಧ್ವಂಸಕ ಚಟುವಟಿಕೆಗಳಿಗೆ ಫಲವತ್ತಾದ ಮಣ್ಣು ಸಹ ಕೇರಳದಲ್ಲಿ ಕಂಡುಬಂದಿತು. ಇಂದಿನ ದಿನಗಳಲ್ಲಿ ಸಿಪಿಐ ಅಂತಾರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯ ಕಡೆಯಿಂದ ಹೆಚ್ಚಿನ ಬೆಂಬಲ ಪಡೆಯಲೂ ಸಾಧ್ಯವಾಯಿತು. ಯುರೋಪ್ ಮತ್ತು ಅಮೇರಿಕಾದಲ್ಲಿನ ಕಮ್ಯುನಿಸ್ಟ್ ವಿರೋಧಿ ಏಜೆನ್ಸಿಗಳ ಬಹು ಮಟ್ಟದ ಸಹಾಯ ಮತ್ತು ಸಹಕಾರಗಳನ್ನು, ರಾಜ್ಯದಲ್ಲಿರುವ ಕಮ್ಯುನಿಸ್ಟ್ ವಿರೋಧಿ ಘಟಕಗಳಿಗೆ ಅನುಕೂಲವಾಗುವಂತೆ ಮಾಡಲು ಸಾಧ್ಯವಾಯಿತು ಎನ್ನುವುದು ಸಮಾನಾಂತರ ಬೆಳವಣಿಗೆಗಳಾಗಿವೆ.

ಕೇರಳದಲ್ಲಿ ಎಡ ರಾಜಕೀಯ ಚಟುವಟಿಕೆಗಳು 1930ರ ದಶಕದಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಪ್ರಾರಂಭವಾಯಿತು. ಪಿ. ಕೃಷ್ಣಪಿಳ್ಳ, ಇಎಂಎಸ್ ನಂಬೂದಿರಿಪಾಡ್, ಎ.ಕೆ.

ಗೋಪಾಲನ್ ಮುಂತಾದವರು, ಕೇರಳದ ಕಾಂಗ್ರೆಸ್ ಪಕ್ಷದ ಎಡಪಂಥೀಯರನ್ನು ಮುನ್ನಡೆಸಿದರು. ಈ ನಾಯಕರು ಜನಪ್ರಿಯ ವಿಷಯಗಳಲ್ಲಿ ತೊಡಗಿಸಿಕೊಂಡಿದ್ದು, ನಾಗರಿಕ ಅಸಹಕಾರ ಚಳುವಳಿಯಂಥ ಸಾಮ್ರಾಜ್ಯಶಾಹಿ ವಿರೋಧಿ ಆಂದೋಲನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ದೇವಾಲಯ ಪ್ರವೇಶ ಚಳವಳಿ ಮತ್ತು ಉಪವಾಸ ಸತ್ಯಾಗ್ರಹಗಳಲ್ಲಿ ಎ.ಕೆ. ಗೋಪಾಲನ್ ಮುಂಚೂಣಿಯಲ್ಲಿಯೇ ಇದ್ದರು. ಈ ರೀತಿಯ ಪಾಲ್ಗೊಳ್ಳುವಿಕೆಯಿಂದಾಗಿ ಅವರ ಜನತಾಪರ ನೆಲೆಯನ್ನು ವಿಸ್ತರಿಸುವುದಕ್ಕೂ ಕೇರಳದಲ್ಲಿ ಬಲಿಷ್ಠ ಎಡಪಂಥವನ್ನು ರೂಪಿಸುವುದಕ್ಕೂ ಅವರು ತಮ್ಮ ಸಾಮರ್ಥ್ಯವನ್ನು ಧಾರೆಯೆರೆದರು. ಎಡ ಸಿದ್ಧಾಂತಗಳ ಬಗ್ಗೆ ಒಲವಿರುವ ಕಾಂಗ್ರೆಸ್ ನಾಯಕರು ನವೆಂಬರ್ 5, 1933ರಂದು, 'ಕೇರಳ ರೈತ ಸಂಘ' ಎಂಬ ಹೆಸರಿನಲ್ಲಿ ಕೇರಳದಲ್ಲಿ ರೈತ ಚಳವಳಿವನ್ನು ಪ್ರಾರಂಭಿಸಿದರು.

ಮೇ 1935ರಲ್ಲಿ ಕೇರಳದಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷ (ಸಿಎಸ್‌ಪಿ) ರಚನೆಯಾಯಿತು. ನಂತರ ಕೇರಳದ ಸಿಎಸ್‌ಪಿ ನಾಯಕರು ಸಿಪಿಐಯ ಕೇಂದ್ರ ಸಮಿತಿಯ ಸದಸ್ಯರಾಗಿದ್ದ ಪಿ. ಸುಂದರಯ್ಯನವರ ಮೂಲಕ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯೊಂದಿಗೆ ಸಂಪರ್ಕಕ್ಕೆ ಬಂದರು. ಜುಲೈ 1937ರಲ್ಲಿ ಸಿಎಸ್‌ಪಿ ನಾಯಕರು ಇಎಂಎಸ್ ನಂಬೂದಿರಿಪಾಡ್, ಪಿ. ಕೃಷ್ಣಪಿಳ್ಳ, ಎನ್.ಸಿ. ಶೇಖರ್, ಕೆ. ದಾಮೋದರನ್, ಮುಂತಾದವರು ಕಾಂಗ್ರೆಸ್ ಪಕ್ಷದ ರಾಜ್ಯ ಕಾರ್ಯನಿರ್ವಹಣಾ ಸಮಿತಿಯಲ್ಲಿ ಒಂದು ರಹಸ್ಯ ವಿಭಾಗವನ್ನು ರಚಿಸಿಕೊಂಡರು. 1938–40ರ ಅವಧಿಯಲ್ಲಿ ಎಡಪಂಥೀಯ ಸಿದ್ಧಾಂತ ಕಾಂಗ್ರೆಸ್‌ನಲ್ಲಿ ಹಲವರನ್ನು ಪ್ರಭಾವಿಸಿತು. ಬಹುಬೇಗ ಕೇರಳದ ಕಾಂಗ್ರೆಸ್‌ನ ನಾಯಕತ್ವ ಎಡ ಸಿದ್ಧಾಂತದವರ ಕೈಗೆ ಜಾರಿತು. ಅವರ ಸಂಘಟಿತ ಪ್ರಯತ್ನದ ಫಲವಾಗಿ, ಬಹಳ ಬೇಗ, ಅನೇಕ ಕಾರ್ಮಿಕರು, ರೈತರು ಮತ್ತು ವಿದ್ಯಾರ್ಥಿಗಳು ರಾಷ್ಟ್ರೀಯ ಆಂದೋಲನದ ಮುಖ್ಯವಾಹಿನಿಗೆ ಬಂದರು. ಕಟ್ಟಾ ಕಮ್ಯುನಿಸ್ಟ್ ದೃಷ್ಟಿಕೋನವನ್ನು ಅವರಲ್ಲಿ ಮೂಡಿಸುವ ಸಲುವಾಗಿ, ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಆಯೋಜಿಸಲಾದವು. ಸೈದ್ಧಾಂತಿಕ ಪ್ರಚಾರದ ಭಾಗವಾಗಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ವೇದಿಕೆಗಳನ್ನು ಒದಗಿಸಲಾಯಿತು. ರಾಜಕೀಯ–ಆರ್ಥಿಕ ವಿಷಯಗಳ ಬಗ್ಗೆ ಒಳನೋಟವನ್ನು ಒದಗಿಸುವ ಅಧ್ಯಯನ ತರಗತಿಗಳನ್ನೂ ಇದರ ಭಾಗವಾಗಿ ಏರ್ಪಡಿಸಲಾದವು. ಅದೇ ಉದ್ದೇಶದಿಂದ ದೈಹಿಕ ಕ್ಷಮತೆಯ ಶಿಬಿರಗಳು ಮತ್ತು ಕ್ರೀಡಾ–ಸಾಂಸ್ಕೃತಿಕ ಕ್ಲಬ್‌ಗಳನ್ನು ಆಯೋಜಿಸಲಾದವು.

ಕಾಂಗ್ರೆಸ್ ಪಕ್ಷದೊಳಗಿನ ಕಮ್ಯುನಿಸ್ಟ್ ರಹಸ್ಯ ಗುಂಪು ಕಮ್ಯುನಿಸ್ಟರಿಗೆ ವಿಶಾಲವಾದ ವೇದಿಕೆಯನ್ನು ಒದಗಿಸಲು ಕಠಿಣವಾಗಿ ಶ್ರಮಿಸಿತು. ಕೇರಳದ ಉತ್ತರ ಮಲಬಾರ್‌ನ ಪಿಣರಾಯ್ ಎಂಬ ಪುಟ್ಟ ಹಳ್ಳಿಯಲ್ಲಿ 1939ರಲ್ಲಿ ಕಮ್ಯುನಿಸ್ಟ್ ಪಕ್ಷದ ಮೊದಲ ಸಂಘಟಿತ ಸಭೆಯನ್ನು ಕರೆಯುವ ಮೂಲಕ ಅವರು ಈ ದಿಕ್ಕಿನಲ್ಲಿ ಮೊದಲ ಹೆಜ್ಜೆ ಇಟ್ಟು ನಡೆದರು. ನಂತರದ ಕೆಲವೇ ದಿನಗಳಲ್ಲಿ ದ್ವಿವೇಶದಲ್ಲಿ ಚಟುವಟಿಕೆಗಳನ್ನು ನಿರ್ವಹಿಸಿದರು. ಕೆಪಿಸಿಸಿ

ಪದಾಧಿಕಾರಿಗಳಾಗಿ ಅವರು ಶಾಂತಿಯುತ ಪ್ರತಿಭಟನೆಗಳು ಮತ್ತು ಆಂದೋಲನಗಳಿಗೆ ಒಲವು ತೋರುತ್ತಿದ್ದರೆ, ಅದೇ ಸಮಯದಲ್ಲಿ, ಕಮ್ಯುನಿಸ್ಟರಾಗಿ, ಅವರು ಕ್ರಾಂತಿಕಾರಿ ಚಟುವಟಿಕೆಗಳಿಗೆ ಪರಿಸ್ಥಿತಿಗಳನ್ನು ಸೃಷ್ಟಿಸಲು ರಹಸ್ಯವಾಗಿ ದುಡಿಯುವುದನ್ನೂ ಮಾಡಿದರು. ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿದಾಗ ನಾಯಕರು ತಲೆಮರೆಸಿಕೊಂಡು ಪ್ರಚಾರ ಮುಂದುವರಿಸಿದರು. 15 ಸೆಪ್ಟೆಂಬರ್ 1940ರಂದು ಅವರು 'ದಮನ-ವಿರೋಧಿ ದಿನ'ವನ್ನಾಗಿ ಆಚರಿಸಿದ್ದರನ್ವಯ, ಸರ್ಕಾರದ ನಂತರದ ಪ್ರತೀಕಾರದ ಕ್ರಮಗಳಾಗಿ, ಉತ್ತರ ಮಲಬಾರ್‌ನ ಕೆಲವು ಭಾಗಗಳಲ್ಲಿ ಹಿಂಸಾಚಾರದ ಘಟನೆಗಳಿಗೆ ಕಾರಣವಾಯಿತು. ಇವು ಪರೋಕ್ಷವಾಗಿ ಕಮ್ಯುನಿಸ್ಟ್ ಪಕ್ಷವನ್ನು ಬಲಪಡಿಸಿತು.

ರಾಷ್ಟ್ರಮಟ್ಟದಲ್ಲಿ ಕಮ್ಯುನಿಸ್ಟ್ ಪಕ್ಷದ ಹೊಸ ಹೋರಾಟನೀತಿಯನ್ನು ಅಳವಡಿಸಿಕೊಂಡಿದ್ದಕ್ಕೆ 1945-46 ವರ್ಷ ಸಾಕ್ಷ್ಯವಹಿಸಿತು. ಆಲಪ್ಪುಳದ ಪುನ್ನಪ್ರ-ವಯಲಾರ್ ಆಂದೋಲನ ಮತ್ತು ಮಲಬಾರ್‌ನಲ್ಲಿ ನಡೆದ ರೈತ ಹೋರಾಟಗಳು ಕಮ್ಯುನಿಸ್ಟ್ ಪಕ್ಷದ ಜನಪರವಾದ ನೆಲೆಯ ವಿಸ್ತರಣೆಗೆ ಕಾರಣವಾಯಿತು. 1948ರಲ್ಲಿ 'ಕಲ್ಕತ್ತಾ ಪ್ರಬಂಧ/ಥೀಸಿಸ್'ನ್ನು ಅಂಗೀಕರಿಸಿದ್ದರಿಂದಲೂ ಅದು ಹೊಸ ಹೋರಾಟಮಾರ್ಗಕ್ಕೆ ಒಲವು ತೋರಿದ್ದರಿಂದಲೂ ಕಮ್ಯುನಿಸ್ಟ್ ಪಕ್ಷವೂ ಕೆಲವು ಹಿನ್ನಡೆಗಳನ್ನೂ ಎದುರಿಸಬೇಕಾಯಿತು. ಆದ್ದರಿಂದ, ತುಲನಾತ್ಮಕವಾಗಿ ಮಧ್ಯಮ ಮತ್ತು ತಂತ್ರಬದ್ಧವಾದ ಒಂದು ನೀತಿಯನ್ನು ಅನುಸರಿಸುವುದಕ್ಕೆ ಪಕ್ಷವು 1951ರಲ್ಲಿ ಒತ್ತಾಯಕ್ಕೊಳಗಾಯಿತು. ಪಕ್ಷದ ಜನಪ್ರಿಯತೆಯ ತಳಹದಿಯನ್ನು ಬಲಪಡಿಸಲು ಪಕ್ಷದ ಸದಸ್ಯರ, ಹಿಂದುಳಿದವರ, ಕೆಳಸ್ತರದಲ್ಲಿರುವ ಜನರ ಸಮಸ್ಯೆಗಳಲ್ಲಿ ಸಕ್ರಿಯವಾಗಿ ಮಧ್ಯಪ್ರವೇಶಿಸಿದರು. ಆದ್ದರಿಂದ ದೃಢ ಸಂಘಟನಾ ರಚನೆ, ಪರಿಣಾಮಕಾರಿ ನಾಯಕತ್ವ, ಶಿಸ್ತುಬದ್ಧ ಕಾರ್ಯಕರ್ತರ ಅವಿಶ್ರಾಂತ ಪ್ರಯತ್ನ ಮುಂತಾದವು ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆಗೆ ನಾಂದಿ ಹಾಡಿತು. ನವೀಕೃತವಾದ ಆತ್ಮವಿಶ್ವಾಸದೊಂದಿಗೆ ಐಕ್ಯಕೇರಳ ಚಳುವಳಿಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಲು ಪಕ್ಷಕ್ಕೆ ಸಾಧ್ಯವಾಯಿತು.

ಭಾಷಾವಾರು ಆಧಾರದ ಮೇಲೆ ಭಾರತದಲ್ಲಿ ರಾಜ್ಯ ಮರುಸಂಘಟನೆಯ ಭಾಗವಾಗಿ ಕೇರಳ ರಾಜ್ಯವು, ನವೆಂಬರ್ 1, 1956ರಂದು ಅಸ್ತಿತ್ವಕ್ಕೆ ಬಂದಿತು. 1957ರ ಪೂರ್ವದ ಅವಧಿಯಲ್ಲಿ ಕೇರಳದ ಜನರು, ಕಾಂಗ್ರೆಸ್ ಪಕ್ಷದೊಳಗಿನ ಒಳಜಗಳದಿಂದ ಬೇಸತ್ತಿದ್ದರು. ಇದು ರಾಜಕೀಯ ಅಸ್ಥಿರತೆಯನ್ನು ಉಂಟುಮಾಡಿತು. ಒಂದು ಸುಸ್ಥಿರವಾದ ಸರ್ಕಾರಕ್ಕಾಗಿ, ಕಠಿಣ ಆರ್ಥಿಕ ಸಮಸ್ಯೆಗಳನ್ನು ನಿರ್ಲಕ್ಷಿಸಲಾಯಿತು. ಇದು ಕಾಂಗ್ರೆಸ್ ವಿರುದ್ಧ ಸಾರ್ವಜನಿಕರ ಅಸಮಾಧಾನಕ್ಕೆ ಕಾರಣವಾಯಿತು. ಇದರಿಂದಾಗಿ ಜನರು ಭ್ರಮನಿರಸನಗೊಂಡು, ನಿರಾಶರಾದರು.

ಕಮ್ಯುನಿಸ್ಟ್ ಪಕ್ಷವು 1957ರ ಚುನಾವಣೆಯಲ್ಲಿ, ಈ ಅಸಮಾಧಾನವನ್ನು ಧನಾತ್ಮಕವಾಗಿ ಪರಿವರ್ತಿಸುವಲ್ಲಿ ಯಶಸ್ವಿಯಾಯಿತು. ಕಾಂಗ್ರೆಸ್ ಪಕ್ಷ ತನ್ನ ಅಂತರ್ಗತ

ದೌರ್ಬಲ್ಯದಿಂದಾಗಿ ಅವರಿಗೆ ಸ್ಥಿರವಾದ ಆಡಳಿತವನ್ನು ನಡೆಸಲು ಸಾಧ್ಯವಾಗಲಿಲ್ಲ ಎಂದು ಜನರಿಗೆ ಮನವರಿಕೆ ಮಾಡಿಕೊಡಲು ಕಮ್ಯುನಿಸ್ಟ್ ಪಕ್ಷವು ಪ್ರಯತ್ನಿಸಿತು. "ಕಾಂಗ್ರೆಸ್ ಪಕ್ಷಕ್ಕೆ ಸಹಜವಾದ ದೌರ್ಬಲ್ಯಗಳಿದ್ದವು. ಆದರೆ, ಕಮ್ಯುನಿಸ್ಟ್ ಪಕ್ಷವು, ಜನರ ಕಲ್ಯಾಣಕ್ಕಾಗಿ ಅಗತ್ಯವಿರುವ ಮೂರ್ತವಾದ ಗುರಿಗಳ ಸಾಕ್ಷಾತ್ಕಾರಕ್ಕಾಗಿ ಕೆಲಸ ಮಾಡುತ್ತದೆ", ಎನ್ನುವ ಕಮ್ಯುನಿಸ್ಟ್ ಪ್ರಚಾರದ ಘೋಷಣೆಯಲ್ಲಿ ತಮ್ಮ ಅಭಿಲಾಷೆಗಳ ಮೂರ್ತರೂಪವು ದೊರಕಿದ್ದಾಗಿ, ಜನರಿಗೆ ಅನಿಸಿತು. ಕಮ್ಯುನಿಸ್ಟ್ ಪಕ್ಷಕ್ಕಿಂತ ಭಿನ್ನವಾಗಿ, ಪ್ರಜಾ ಸೋಶ್ಯಲಿಸ್ಟ್ ಪಕ್ಷ (ಪಿಎಸ್‌ಪಿ), ಕ್ರಾಂತಿಕಾರಿ ಸಮಾಜವಾದಿ ಪಕ್ಷ (ಆರ್‌ಎಸ್‌ಪಿ) ಮುಂತಾದ ಎಡ ಪಕ್ಷಗಳಿಗೆ ಜನಪ್ರಿಯ ಅಥವಾ ಜನತಾ ನೆಲೆ ಇರಲಿಲ್ಲ. ಆದರೆ, 1957ರ ಚುನಾವಣೆಗೆ ಸ್ಪರ್ಧಿಸಲು ಸಿಪಿಐ ಎಡಪಕ್ಷಗಳ ಒಕ್ಕೂಟಕ್ಕೆ ಪ್ರಯತ್ನಿಸಿತು. ಆದರೆ, ಈ ಪ್ರಯತ್ನ ವಿಫಲವಾಯಿತು. ಏಕೆಂದರೆ ಪಿಎಸ್‌ಪಿ ಮತ್ತು ಮುಸ್ಲಿಂ ಲೀಗ್ ಹೊರತುಪಡಿಸಿ, ಬೇರೆ ಯಾವುದೇ ಪಕ್ಷಗಳು ಉದ್ದೇಶಿತ ಮೈತ್ರಿಯ ಪರವಾಗಿ ಪ್ರತಿಕ್ರಿಯಿಸಲಿಲ್ಲ. ಕಾಂಗ್ರೆಸ್ಸಿನ ನೀತಿಗಳಿಂದ ಅತೃಪ್ತರಾಗಿರುವವರು ಮತ್ತು ಅಲ್ಲಿಯವರೆಗೆ ಯಾವುದಾದರೂ ಪಕ್ಷದೊಂದಿಗೋ ಸಿದ್ಧಾಂತದೊಂದಿಗೋ ಒಲವು ತೋರದ ಕೇರಳದ ಜನರು, ಕಮ್ಯುನಿಸ್ಟ್ ಪಕ್ಷದ ಪರವಾಗಿ ಮತ ಹಾಕಲು ನಿರ್ಧರಿಸಿದರು. ಇತರೆ ಎಡಪಕ್ಷಗಳೊಂದಿಗೆ ತಾರತಮ್ಯ ಮಾಡಿ ನೋಡುವಾಗ, ಕಮ್ಯುನಿಸ್ಟ್ ಪಕ್ಷವು ಸುಸಂಘಟಿತವಾಗಿ ಮತ್ತು ಶಿಸ್ತುಬದ್ಧವಾಗಿದೆ, ಎನ್ನುವ ನಿರ್ಣಯಕ್ಕೆ ಜನರು ಬಂದರು.

ಕಮ್ಯುನಿಸ್ಟ್ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ದುಡಿಯುವ ವರ್ಗಕ್ಕೆ ಎಲ್ಲಾ ರೀತಿಯ ಏಳಿಗೆಯ ಭರವಸೆಯನ್ನು ನೀಡಿತು. ರಾಜ್ಯ ಎದುರಿಸುತ್ತಿರುವ ಎಲ್ಲ ಸಮಸ್ಯೆಗಳನ್ನು ಖಂಡಿತ ಬಗೆಹರಿಸಲಾಗುವುದು ಎನ್ನುವ ನಿರೀಕ್ಷೆ ಸದರಿ ಪ್ರಣಾಳಿಕೆಯಿಂದಾಗಿ ಭರವಸೆ ಮೂಡಿಸಿತು. ಇಂತಹ ಭರವಸೆಗಳು ಅನೇಕ ಹತಾಶ ಜನರನ್ನು ಕಮ್ಯುನಿಸ್ಟ್ ಪಕ್ಷದ ನೀತಿಗಳತ್ತ ಆಕರ್ಷಿಸಿದವು.

ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷ ಸಂಪೂರ್ಣ ಬಹುಮತ ಗಳಿಸಿದ್ದರಿಂದ, ಸರ್ಕಾರ ರಚನೆ ಮಾಡಿತು. ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ನೀಡಿದ್ದ ಭರವಸೆಗಳನ್ನು ಜಾರಿಗೊಳಿಸಲು ಇಎಂಎಸ್ ನಂಬೂದಿರಿಪಾಡ್ ನೇತೃತ್ವದ ಹನ್ನೊಂದು ಸದಸ್ಯರ ಸಂಪುಟ ಗರಿಷ್ಠ ಪ್ರಯತ್ನ ಮಾಡಿತು. ಮುಖ್ಯಮಂತ್ರಿಯಾದ ತಕ್ಷಣ ಇಎಂಎಸ್ ತಮ್ಮ ಸರ್ಕಾರದ ನೀತಿಯ ಪ್ರಸ್ತುತತೆಯನ್ನು ವಿವರಿಸುವ ಹೇಳಿಕೆಯನ್ನು ಬಿಡುಗಡೆ ಮಾಡಲಾಯಿತು. ಅದು ಪ್ರಣಾಳಿಕೆಯ ಸಾರವನ್ನು ಅನಾವರಣಗೊಳಿಸಿತು. ಆದರೆ, ಹಲವು ಸದುದ್ದೇಶದಿಂದ ಕೂಡಿದ್ದ ಈ ಹೇಳಿಕೆಗಳಲ್ಲಿ ಹಲವು ವಿರೋಧಗಳನ್ನು ಎದುರಿಸಬೇಕಾಯಿತು.

ರಾಜ್ಯದಲ್ಲಿ ನಂತರದ ಎಡ ಸರ್ಕಾರಗಳಿಗಿಂತ ಭಿನ್ನವಾದ ಕೆಲವು ವಿಶೇಷತೆಗಳನ್ನು ಇಎಂಎಸ್ ನಾಯಕತ್ವದ ಸರ್ಕಾರ ಹೊಂದಿತ್ತು. ಅನುಭವದ ಕೊರತೆಯಿಂದ

ಸರ್ಕಾರದ ಕಡೆಯಿಂದ ಕೆಲವು ಅನಗತ್ಯ ತಪ್ಪುಗಳು ನಡೆದಿದ್ದವು. ಅಲ್ಲದೆ, ಹೆಚ್ಚಿನ ನಿರೀಕ್ಷೆಗಳನ್ನು ಇಟ್ಟುಕೊಂಡಿದ್ದರಿಂದ, ಎಚ್ಚರಿಕೆ ವಹಿಸಲು ಕೆಲವು ಸಂದರ್ಭಗಳಲ್ಲಿ, ಅನುಸರಣಾ ಸೂಚನೆಗಳನ್ನು ಗಮನಿಸಲಾಗಲಿಲ್ಲ.

ರಾಜಕೀಯ ಕೈದಿಗಳ ಬಿಡುಗಡೆಯು ಸರ್ಕಾರ ತೆಗೆದುಕೊಂಡ ಪ್ರಾಥಮಿಕ ಕ್ರಮಗಳಲ್ಲಿ ಒಂದಾಗಿದೆ. ಅವರಲ್ಲಿ ಗಣನೀಯ ಸಂಖ್ಯೆಯ ಕಮ್ಯುನಿಸ್ಟರಿದ್ದರು. ಮರಣದಂಡನೆಯ ಶಿಕ್ಷೆಯಲ್ಲಿ ಕೆಲವು ರಿಯಾಯಿತಿ ನೀಡಿದ ಬಗ್ಗೆಯೂ ಚರ್ಚೆಗಳು, ವಿಮರ್ಶೆಗಳು ನಡೆದವು. ಈ ಕ್ರಮಗಳ ಜೊತೆಗೆ ಇದೇ ರೀತಿಯಲ್ಲಿ, ಪ್ರಗತಿಪರವಾದ ಪೊಲೀಸ್ ನೀತಿಯು, ಸರ್ಕಾರದ ವಿರೋಧಿಗಳ ಭಯವನ್ನೂ ಹೆಚ್ಚಿಸಿತು. ಹೊಸ ಸರ್ಕಾರವು ಅತ್ಯಂತ ಪಾರದರ್ಶಕ ಪೊಲೀಸ್ ನೀತಿಯನ್ನು ಅನುಸರಿಸಿತು. ಕೇರಳದಲ್ಲಿ ನಂತರದಲ್ಲಿ ಅಧಿಕಾರಕ್ಕೆ ಬಂದ ಸರ್ಕಾರಗಳು ಮತ್ತು ಭಾರತದ ಇತರ ರಾಜ್ಯಗಳಲ್ಲಿ ಕೆಲವು ಸರ್ಕಾರಗಳು, ಅದರ ಅರ್ಹತೆಯನ್ನು ಪರಿಗಣಿಸಿ, ಪೊಲೀಸ್ ನೀತಿಯನ್ನು ಜಾರಿಗೆ ತಂದಿದ್ದಾವೆ. ಸರಕಾರವು ಅತ್ಯಂತ ವೈಜ್ಞಾನಿಕ ರೀತಿಯಲ್ಲಿ ಪೊಲೀಸ್ ಪಡೆಗಳನ್ನು ಮರುಸಂಘಟನೆ ಮಾಡಿತ್ತು. ಕಮ್ಯುನಿಸ್ಟ್ ಸರ್ಕಾರವು ಪೊಲೀಸ್ ಪಡೆಯನ್ನು ಸರ್ಕಾರಿ ಚಿತ್ರಹಿಂಸೆಯ ವ್ಯವಸ್ಥೆಯಿಂದ, ಜನಸ್ನೇಹಿ ಸೈನ್ಯವನ್ನಾಗಿ ಪರಿವರ್ತಿಸಿತು.

ಉದ್ಯೋಗ ಲಭ್ಯತೆಯನ್ನು ಹೆಚ್ಚಿನ ರೀತಿಯಲ್ಲಿ ಖಾತ್ರಿಗೊಳಿಸುವುದು, ವೇಗವರ್ಧಿತ ರೀತಿಯಲ್ಲಿ ಕೈಗಾರಿಕೀಕರಣ, ಶೋಷಿತರಿಗೆ ನ್ಯಾಯಯುತ ಜೀವನ ಸೌಕರ್ಯಗಳನ್ನು ಖಾತರಿಪಡಿಸುವುದು ಮುಂತಾದ ವಿಷಯಗಳನ್ನು ಒಳಗೊಂಡಂತೆ ಕ್ರಿಯಾ ಯೋಜನೆಗಳನ್ನು ರೂಪಿಸಿದರು. ಉದ್ಯೋಗ ಕ್ಷೇತ್ರದಲ್ಲಿ, ಮತ್ತು ಕೈಗಾರಿಕಾ ಕ್ಷೇತ್ರದಲ್ಲಿ ಗಣನೀಯ ಪ್ರಗತಿ ಮತ್ತು ಅಭಿವೃದ್ಧಿ ಉಂಟಾದವು. ಕಾರ್ಮಿಕ ಸಂಘಗಳನ್ನು ಗುರುತಿಸಿ ಕಾರ್ಮಿಕ ವರ್ಗದ ಏಕತೆಯನ್ನು ಉತ್ತೇಜಿಸಲು, ಬಲಪಡಿಸಲು, ಅವರ ಚೌಕಾಶಿ ಶಕ್ತಿಯನ್ನು ಬಲಪಡಿಸಲು ಕೇರಳ ಸರ್ಕಾರ ಬದ್ಧತೆಯನ್ನು ಪ್ರದರ್ಶಿಸಿತು. ದುಡಿಯುವ ವರ್ಗದವರ ಹೋರಾಟಗಳ, ಪ್ರತಿಭಟನೆಗಳ ಕಡೆಗಿನ ವಿಧಾನವು ಮೂಲಭೂತವಾಗಿತ್ತೆನ್ನುವುದು ಮಾತ್ರವಲ್ಲ, ಹಿಂದಿನದಕ್ಕಿಂತಲೂ ಭಿನ್ನ ರೀತಿಯಲ್ಲಿತ್ತು.

ಸರ್ಕಾರದ ಆರ್ಥಿಕ ನೀತಿಯು, ರಾಜ್ಯದ ಆರ್ಥಿಕತೆಯನ್ನು ಬಲಪಡಿಸಲು ಒತ್ತು ನೀಡಿತು. ಪರಸ್ಪರ ಮಾತುಕತೆ, ಒಪ್ಪಂದ ಅಥವಾ ರಾಜಿಯ ಮೂಲಕದ ಮೂಲಕ, ಕೈಗಾರಿಕಾ ವಿವಾದಗಳಿಗೆ ಪರಿಹಾರ ಕಂಡುಕೊಂಡು, ಇತ್ಯರ್ಥಪಡಿಸಲಾಗುವಂತೆ ಆದೇಶ ನೀಡಲಾಗುತ್ತಿತ್ತು. ಕೈಗಾರಿಕೆಗಳಲ್ಲಿ ಕೆಲಸ ಮಾಡುವವರ ವೇತನ ಹೆಚ್ಚಳದಿಂದಾಗಿ, ಕಾರ್ಮಿಕ ವರ್ಗದ ಜೀವನ ಮಟ್ಟ ಗಣನೀಯವಾಗಿ ಹೆಚ್ಚಿತು. ಸಾಧ್ಯವಿರುವ ಎಲ್ಲ ರೀತಿಯಲ್ಲಿ ಜನರಿಗೆ ಸೇವೆ ಸಲ್ಲಿಸಲು ಬದ್ಧವಾಗಿರುವ ಕಮ್ಯುನಿಸ್ಟ್ ಮಂತ್ರಿಮಂಡಲವು ದಕ್ಷತೆಯ ಸರ್ಕಾರವಾಗಿದ್ದು, ಎಲ್ಲಾ ವರ್ಗಗಳ ಜೀವನಮಟ್ಟ ಸುಧಾರಿಸಿ, ಉತ್ತುಂಗಕ್ಕೇರಿಸಲು ಪ್ರಯತ್ನಿಸಿತು. ಈ ಗುರಿಯನ್ನು ಸಾಧಿಸುವುದಕ್ಕಾಗಿ

ಪರಿಣಿತ ವ್ಯಕ್ತಿಗಳನ್ನು ಒಳಗೊಳಿಸಿಕೊಂಡು, ಆಡಳಿತ ಸುಧಾರಣಾ ಸಮಿತಿಯನ್ನು ರಚಿಸಲಾಯಿತು. ಸಮಿತಿಯು ಒಂದು ವರ್ಷದೊಳಗೆ ವರದಿ ಸಲ್ಲಿಸಲು ಬದ್ಧವಾಗಲು ಸೂಚಿಸಲಾಯಿತು. ಆಗಸ್ಟ್ 1958ರಲ್ಲಿ ಸಮರ್ಪಿತವಾದ ವರದಿಯು, ಅಧಿಕಾರದ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣಕ್ಕೆ ಆದ್ಯತೆ ನೀಡಲಾಯಿತು. ಸ್ಥಳೀಯಾಡಳಿತ ಸಂಸ್ಥೆಗಳ ಕಾರ್ಯಾ ಚಟುವಟಿಕೆಗಳನ್ನು ಸುಧಾರಿಸಲು ಎರಡು ಕಾನೂನುಗಳನ್ನು ಅಂಗೀಕರಿಸಲಾಯಿತು.

ರಾಜ್ಯದಲ್ಲಿದ್ದ ಆಹಾರ ಸಮಸ್ಯೆಯ ಬಗ್ಗೆ ಸರ್ಕಾರವು ತುಂಬಾ ಕಾಳಜಿ ವಹಿಸಿತ್ತು. ಈ ಸಮಸ್ಯೆಯನ್ನು ಪರಿಹರಿಸಲು ಸರ್ಕಾರವು ತುರ್ತುಕ್ರಮವಾಗಿ, ಔಪಚಾರಿಕವಾದ ಆಡಳಿತ ಕ್ರಮಗಳನ್ನು ಪಾಲಿಸದೆ, ಆಂಧ್ರದಿಂದ ಅಕ್ಕಿ ಸಂಗ್ರಹಿಸಲು ಅಗತ್ಯವಾದ ವ್ಯವಸ್ಥೆಯನ್ನು ಮಾಡಿತು. ಪರಿಣಾಮವಾಗಿ ಹಗರಣದ ಆರೋಪದಿಂದಾಗಿ, ಸರ್ಕಾರದ ಮೇಲೆ ನಕಾರಾತ್ಮಕ ಪರಿಣಾಮ ಬೀರಿತು. ಸರ್ಕಾರ ತನ್ನ ನಕರಾತ್ಮಕತೆಯ ಆರೋಪದಿಂದ ಹೊರಬರಲು, ಹಗರಣವೆನ್ನಲಾದ ವಿಚಾರದ ಬಗ್ಗೆ ತನಿಖೆಗೆ ಆದೇಶಿಸಲಾಯಿತು. ವಿರೋಧಪಕ್ಷಗಳು ಮತ್ತು ಮಾಧ್ಯಮಗಳು, ತನಿಖಾ ಆಯೋಗದ ಕೆಲವು ಅವಲೋಕನಗಳನ್ನು ಸರ್ಕಾರದ ಮೇಲೆ ದಾಳಿ ಮಾಡಲು ಉಪಯೋಗಿಸಿಕೊಂಡು, ಸಣ್ಣ ವಿಚಾರಗಳನ್ನು ದೊಡ್ಡದಾಗಿ ಬಿಂಬಿಸಿದವು.

ಕೇರಳ ಶಿಕ್ಷಣ ಕಾಯಿದೆ ಕೂಡ ವಿವಾದಕ್ಕೆ ಒಳಗಾಯಿತು. ಇದು ಶಾಲಾ ಶಿಕ್ಷಣ ಕ್ಷೇತ್ರದಲ್ಲಿ ಸಾಮಾಜಿಕ ನ್ಯಾಯವನ್ನು ಖಾತ್ರಿಪಡಿಸುವುದು ಈ ಪ್ರಗತಿಪರ ಕಾನೂನಿನ ಉದ್ದೇಶವಾಗಿತ್ತು. ಆದರೆ ಅನುದಾನಿತ ಶಿಕ್ಷಣ ಸಂಸ್ಥೆಗಳ ಶಾಲೆಗಳಲ್ಲಿ ತಮ್ಮ ಶೋಷಣೆಯನ್ನು ಮುಂದುವರಿಸಲು ತಮಗಿರುವ ಅವಕಾಶ ನಷ್ಟಗೊಳ್ಳುತ್ತದೆಯೆಂದು, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ಭಯಗೊಂಡವು. ಕೋಮುವಾದಿ/ಜಾತಿವಾದಿ



ಹಸ್ತಕ್ಷೇಪ ನಮ್ಮ ಜನ್ಮಸಿದ್ಧ ಹಕ್ಕು – ವ್ಯಂಗ್ಯಚಿತ್ರ: ಕುಟ್ಟಿ. ಹಿಂದುಸ್ತಾನ್ ಸ್ಟಾಂಡರ್ಡ್

ಇಎಂಎಸ್ ಸರ್ಕಾರದ ವಿರುದ್ಧದ ಚಳುವಳಿಯ ಸಮಯಾವಧಿಯಲ್ಲಿ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ವ್ಯಂಗ್ಯಚಿತ್ರಗಳಲ್ಲೊಂದು

ಸಂಸ್ಥೆಗಳು, ಸಾಮಾನ್ಯವಾಗಿ, ಕ್ಯಾಥೋಲಿಕ್ ಚರ್ಚ್‌ಗಳು, ನಿರ್ದಿಷ್ಟವಾಗಿ ಶೈಕ್ಷಣಿಕ ಸುಧಾರಣೆಗಳ ಬಗ್ಗೆ ಶಕ್ತವಾದ ವಿರೋಧವನ್ನು ಪ್ರದರ್ಶಿಸಿದವು. ಶಿಕ್ಷಣಕ್ಷೇತ್ರದ ಈ ಅಸಮಾಧಾನವು, ಕಮ್ಯುನಿಸ್ಟ್ ವಿರೋಧಿ ಆಂದೋಲನ ಪ್ರಕ್ರಿಯೆಗೆ ಉತ್ತೇಜನ ನೀಡಿದ್ದಲ್ಲದೆ, ಬಹಿರಂಗ ಹೋರಾಟಕ್ಕೆ ಕಾರಣವಾಯಿತು.

ಕೃಷಿಕ್ಷೇತ್ರದಲ್ಲಿರುವ ಅನ್ಯಾಯ ಮತ್ತು ಶೋಷಣೆಯನ್ನು ಕೊನೆಗೊಳಿಸಲು ಕಮ್ಯುನಿಸ್ಟ್ ಮಂತ್ರಿಮಂಡಲ ಅದರತ್ತ ಗಮನ ಹರಿಸಿತು. ಆರಂಭಿಕ ಹಂತಗಳಲ್ಲಿ ನಿರ್ದಿಷ್ಟವಾಗಿ ಗಮನಿಸಬೇಕಾದ ಅಂಶವೆಂದರೆ, ಒಕ್ಕಲೆಬ್ಬಿಸುವಿಕೆ ಆರ್ಡಿನೆನ್ಸ್ ಮತ್ತು ಕೇರಳ ಸ್ಟೇ ಆಫ್ ಎವಿಕ್ಷನ್ ಪ್ರೊಸೀಡಿಂಗ್ಸ್ ಕಾನೂನು. ಕೃಷಿ ವ್ಯವಸ್ಥೆಯನ್ನು ಸಮಾಜವಾದಿ ಮರುಸಂಘಟನೆಯನ್ನಾಗಿ ಮಾಡುವುದಕ್ಕಿಂತಲೂ, ಸರ್ಕಾರಕ್ಕೆ ಹೆಚ್ಚು ಸ್ವೀಕಾರಾರ್ಹವಾಗಿದ್ದು, ಫ್ಯುಡಲ್/ಊಳಿಗಮಾನ್ಯ ವಿರೋಧಿ ಕ್ರಮಗಳಾಗಿದ್ದವು. ಜಮೀನುದಾರರಿಗೆ, ಮಧ್ಯವರ್ತಿಗಳಿಗೆ ಮತ್ತು ಹುಂಡಿಕಾ ವ್ಯಾಪಾರಿಗಳಿಗೆ ಭಾರೀ ಹೊಡೆತ ನೀಡುವುದು ಅವುಗಳ ತಕ್ಷಣದ ಉದ್ದೇಶವಾಗಿತ್ತು. ಕೃಷಿಕನನ್ನು ಕೃಷಿ ಭೂಮಿಯ ಒಡೆಯನನ್ನಾಗಿ ಮಾಡುವುದು ಇವುಗಳ ಗುರಿಯಾಗಿತ್ತು. ಸರ್ಕಾರ ಮಂಡಿಸಿದ ಮಸೂದೆಗಳು ರೈತರ ಮತ್ತು ಕಾರ್ಮಿಕರ ಬೆಂಬಲವನ್ನು ಪಡೆಯಲು ಕೇರಳದ ಕಮ್ಯುನಿಸ್ಟರು ಕಠಿಣವಾಗಿ ಶ್ರಮಿಸಿದರು. ಆದರೆ ಪ್ರಬಲ ಭೂಮಾಲೀಕರ





COMMUNISM THE ENEMY OF GOD

ENCYCLICAL LETTER

(DIVINI REDEMPTORIS)

ON

ATHEISTIC COMMUNISM

CATHOLIC TRUTH SOCIETY OF IRELAND

April, 1937.

1937ರ ಏಪ್ರಿಲ್ ತಿಂಗಳನಲ್ಲಿ ಪೋಪ್ ಪಿಯೂಸ್ XI ರ ಚಾಕ್ರಿಕ ಲೇಖನದ (Encyclical) ಮೊದಲ ಎರಡು ಪುಟಗಳು...

ವಿರೋಧದಿಂದಾಗಿಯೂ ಕೇಂದ್ರ ಸರ್ಕಾರವು ಪ್ರಬಲವಾದ ಸಾಂವಿಧಾನಿಕ ಅಸ್ತ್ರಗಳನ್ನು ಬಳಸಿದ್ದರಿಂದಾಗಿಯೂ ಅವರ ಪ್ರಯತ್ನಗಳು ಅಪೇಕ್ಷಿತ ಫಲಿತಾಂಶಗಳನ್ನು ನೀಡಲಿಲ್ಲ.

ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷವು ಬಲಗೊಳ್ಳುವ ಮೊದಲೇ ಕಮ್ಯುನಿಸ್ಟ್ ವಿರೋಧಿ ಪ್ರಚಾರದ ಕಾರ್ಯ ಪ್ರಾರಂಭವಾಗಿತ್ತು. ಕ್ಯಾಥೋಲಿಕ್ ಚರ್ಚ್ ನೇತೃತ್ವದಲ್ಲಿ ಕಮ್ಯುನಿಸ್ಟ್ ವಿರೋಧಿ ಪ್ರಚಾರದ ಚಟುವಟಿಕೆಗಳ ಅಡಿಪದರುಗಳು, ಅಂತರಾಷ್ಟ್ರೀಯಮಟ್ಟದಲ್ಲಿ ಕ್ಯಾಥೋಲಿಕಾ ಚರ್ಚ್‌ನ ಅಧಿಕಾರಶ್ರೇಣಿಯ, ಕಮ್ಯುನಿಸ್ಟ್ ವಿರೋಧಿ ಪ್ರಚಾರ ಚಟುವಟಿಕೆಗಳ ಮೂಲದಿಂದ ಆರಂಭವಾಗುತ್ತದೆ. ವಾಸ್ತವವಾಗಿ ಪಾಶ್ಚಿಮಾತ್ಯ ಜಗತ್ತಿನಲ್ಲಿ ಕಮ್ಯುನಿಸ್ಟ್ ಆಶಯಗಳು ಹುಟ್ಟಿಕೊಂಡು, ವಿಕಸನಗೊಂಡ ಅದೇ ಸಮಯದಲ್ಲಿ, ರೋಮನ್ ಕ್ಯಾಥೋಲಿಕ್ ಚರ್ಚಿನ ನೇತೃತ್ವದಲ್ಲಿ ಕಮ್ಯುನಿಸ್ಟ್ ವಿರೋಧಿ ಪ್ರಚಾರಗಳೂ ಚಟುವಟಿಕೆಗಳೂ ರೂಪುಗೊಂಡಿದ್ದವು. 1848ರಲ್ಲಿ ಮಾರ್ಕ್ಸ್ ಮತ್ತು ಎಂಗೆಲ್ಸ್ ಕಮ್ಯುನಿಸ್ಟ್ ಪ್ರಣಾಳಿಕೆಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವುದಕ್ಕೂ ಮೊದಲಿನ ಸಮೀಪ ವರ್ಷಗಳಲ್ಲಿ ಕಮ್ಯುನಿಸ್ಟ್ ಆಶಯಗಳು/ವಿಚಾರಗಳು ಲೇಖನಗಳಾಗಿ ರ್‍ಯಾಡಿಕಲ್ ಪತ್ರಿಕೆಗಳ ಮೂಲಕ ಮುದ್ರಣಗೊಂಡಿದ್ದು, ಯುರೋಪಿನ ಕೈಗಾರಿಕೋದ್ಯಮಿಗಳ ಗಮನವನ್ನು ಸೆಳೆಯಲ್ಪಟ್ಟಿದ್ದವು. ಕಮ್ಯುನಿಸ್ಟ್ ವಿಚಾರಗಳನ್ನು ಹರಡಿದರೆ ಇದು ಸಾಂಪ್ರದಾಯಿಕ ವ್ಯವಸ್ಥೆಗೂ ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಗಳಿಗೂ ಶ್ರೇಣೀಕೃತವಾದ ಅಧಿಕಾರದ ಸಂರಚನೆಗಳಿಗೂ ಸವಾಲಾಗುತ್ತವೆ ಎಂದು ಭಯಭೀತರಾದ ಕ್ಯಾಥೋಲಿಕ್ ಚರ್ಚ್ ನಾಯಕತ್ವ 1846ರಲ್ಲಿ, (ಪೋಪ್ ಪಯಸ್ 9ನೆಯ) ಚಾಕ್ರಿಕ ಲೇಖನದ (Encyclical)ಮೂಲಕ ಮೊದಲ ದಾಳಿಯನ್ನು ಆರಂಭಿಸಿದ್ದರು. ಕಮ್ಯುನಿಸಂನ ಕುಖ್ಯಾತ ಸಿದ್ಧಾಂತವು ಅಸ್ತಿತ್ವದಲ್ಲಿರುವ ಪ್ರಕೃತಿಯ ಕ್ರಮಕ್ಕೆ ಅಥವಾ ವ್ಯವಸ್ಥೆಗೆ ಸಂಪೂರ್ಣವಾಗಿ ವಿರುದ್ಧವಾಗಿದೆಯೆಂದೂ ಒಮ್ಮೆ ಕಾರ್ಯರೂಪಕ್ಕೆ ಬಂದರೆ, ಎಲ್ಲಾ ಆಸ್ತಿ-ಅಧಿಕಾರದ ಹಕ್ಕು, ಸಂಸ್ಥೆಗಳು, ಹಾಗೂ ಇಡೀ ಸಮಾಜವನ್ನೇ ಸಂಪೂರ್ಣವಾಗಿ ನಾಶಪಡಿಸುತ್ತದೆಯೆಂದೂ ಅವರು ಘೋಷಿಸಿದರು*. ಮನುಕುಲದ ಮಜ್ಜೆಯಲ್ಲಿ ಹರಡಿಕೊಂಡು, ಇಡೀ ಸಮಾಜವನ್ನೇ ನಾಶ ಮಾಡುವ ಪಿಡುಗಾಗಿಬಿಡುತ್ತದೆ ಈ ಕಮ್ಯುನಿಸಂ**, ಎಂದು ಘೋಷಿಸಿದ ಹದಿಮೂರನೇ ಪೋಪ್ ಲಿಯೋ (1878) ಚಾಕ್ರಿಕ ಲೇಖನದ ಜಾಡು ಹಿಡಿದುಕೊಂಡೇ ಚರ್ಚ್ ಅಧಿಕಾರಶ್ರೇಣಿಯ ಇತರ ಪ್ರಮುಖರ ಅಂದರೆ, ಬಿಷಪ್/ಪಾದ್ರಿಗಳ ಕಮ್ಯುನಿಸ್ಟ್ ವಿರೋಧಿ ಪತ್ರಗಳನ್ನು ವ್ಯಾಪಕವಾಗಿ ಪ್ರಸಾರ ಮಾಡಿದ್ದು, ಗಮನಿಸಬೇಕಾದ ಸಂಗತಿ. 1937ರಲ್ಲಿ ಪೋಪ್ ಹದಿಮೂರನೇ ಪಯಸ್‌ರ

* 'Encycl. Que pluribus, Nov. 9, 1846 (Acta Pii IX, vol. I, p. 13). Cf. Syllabus, s IV, (A. A. S., vol. III, p. 170)' Quoted by Pope Pious XI in his Encyclical Letter 'DIVINIREDEMPTORIES - COMMUNISM THE ENEMY OF GOD' , Dublin, April 1937.

** D'Encycl. Quod Apostolici muneris ec.28, 1878 (Acta Leonis XIII, vol. I, p. 46)' Quoted by Pope Pious XI. Op. cit.

ಚಾಕ್ರಿಕ ಲೇಖನಗಳ ಪ್ರಕಟಣೆಯೊಂದಿಗೆ, ಕ್ರಿಶ್ಚಿಯನ್ ಚರ್ಚ್‌ಗಳ ಕಮ್ಯುನಿಸ್ಟರ ಬಗ್ಗೆಯ ಹಗೆತನ ಹೆಚ್ಚು ಗಮನ ಸೆಳೆಯಿತು. 1949ರಲ್ಲಿ, ಹದಿಮೂರನೇ ಪೋಪ್ ಪಯಸ್ 'ಬಹಿಷ್ಕಾರದ ತೀರ್ಪು' (Decree of Excommunication) ಹೊರಡಿಸಿದ ಚರ್ಚಿನ ಕಮ್ಯುನಿಸಂ ವಿರೋಧತ್ವವು, ತನ್ನ ಉತ್ತುಂಗವನ್ನು ತಲುಪಿದ್ದಕ್ಕೆ ಸಾಕ್ಷಿಯಾಗಿದೆ. ಅಂತಹ ಹೇಳಿಕೆಗಳಲ್ಲೂ ಸ್ಪಷ್ಟವಾಗಿ ಬಹಿರಂಗಗೊಳ್ಳುವ ಸತ್ಯವೆಂದರೆ, ಕ್ಯಾಥೋಲಿಕ್ ಚರ್ಚ್‌ಗಳಿಗೆ ಕಮ್ಯುನಿಸ್ಟ್ ಚಳುವಳಿಯೊಂದಿಗೆ ಸಹಜ ದ್ವೇಷ, ಹಗೆತನ ಮತ್ತು ಭಯ, ಇವುಗಳಲ್ಲದೆ, ಮತ್ತೆ ಬೇರೇನೂ ಅಲ್ಲ. ಕಮ್ಯುನಿಸಂ ಅನ್ನು ಅದರ ಭ್ರೂಣದ ಹಂತದಲ್ಲಿ ದಹಿಸಲು ಕರೆ ನೀಡುತ್ತಾ, ಕಮ್ಯುನಿಸಂಗಾಗಿ ಶವಪೆಟ್ಟಿಗೆಯನ್ನು ನಿರ್ಮಿಸಲು, ಬೆದರಿಕೆಯ ಭಾಷೆಯಲ್ಲಿ ಪರಿಣಾಮಕಾರಿ ಪ್ರಚಾರಗಳನ್ನು ಯೋಜಿಸಲು ಪೋಪ್‌ರ ಚಾಕ್ರಿಕ ಲೇಖನಗಳು ಯಶಸ್ವಿಯಾದ ಪ್ರತಿಭಟನಾ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು, ಚರ್ಚಿನ ಅಧಿಕಾರಶ್ರೇಣಿಯ–ಬಿಷಪ್‌ಗಳು ಮತ್ತು ಪ್ಯಾರಿಷ್ ಪಾದ್ರಿಗಳ ಕೆಳಗಿನ ಶ್ರೇಣಿಗಳನ್ನು ಬಳಸಿಕೊಳ್ಳಲಾಯಿತು*.

ಕೇರಳದಲ್ಲಿ ಕಮ್ಯುನಿಸಂ ವಿರುದ್ಧ ಕ್ಯಾಥೋಲಿಕ್ ಚರ್ಚ್ ನೇತೃತ್ವದಲ್ಲಿ ಸೈದ್ಧಾಂತಿಕ ಧರ್ಮಯುದ್ಧವನ್ನು 1930 ಮತ್ತು 40ರ ದಶಕಗಳಲ್ಲಿ ಪ್ರಾರಂಭವಾಯಿತು. ಇದರ ಫಲವಾಗಿ ಅನೇಕ ಕಮ್ಯುನಿಸ್ಟ್ ವಿರೋಧಿ ಸಾಹಿತ್ಯ ಕೃತಿಗಳು 'ಸೇಕ್ರೆಡ್ ಹಾರ್ಟ್ ಲೀಗ್'ನ ಆಶ್ರಯದಲ್ಲಿ ಪ್ರಕಟವಾದವು. ಮೇಲಿನ 'ಸೇಕ್ರೆಡ್ ಹಾರ್ಟ್ ಲೀಗ್', ಕೇರಳದಲ್ಲಿ ಕ್ಯಾಥೋಲಿಕ್ ಚರ್ಚ್‌ನ ಅವಿಭಾಜ್ಯ ಶಾಖೆಯಾಗಿತ್ತು. 1951ರಲ್ಲಿ ಫಾದರ್ ಜೋಸೆಫ್ ವಡಕ್ಕನ್ ರಚಿಸಿದ ಕಮ್ಯುನಿಸ್ಟ್ ವಿರೋಧಿರಂಗ(ಎಸಿಎಫ್)ದೊಂದಿಗೆ ಕ್ಯಾಥೋಲಿಕ್ ಚರ್ಚ್‌ನ ಕಮ್ಯುನಿಸ್ಟ್ ವಿರೋಧಿ ಅಭಿಯಾನವನ್ನು ಸಂಘಟಿಸಲಾಯಿತು. ತ್ರಿಶೂರಿನಲ್ಲಿ ಪಾದ್ರಿ ವಿದ್ಯಾರ್ಥಿಯಾಗಿದ್ದ ಕಾಲಘಟ್ಟದಲ್ಲೇ ಫಾದರ್ ವಡಕ್ಕನ್‌ರವರ ಸಾರ್ವಜನಿಕ ಕಾರ್ಯ ಚಟುವಟಿಕೆಗಳು ಪ್ರಾರಂಭಗೊಳ್ಳುತ್ತದೆ. ಬೆಂಕಿಯುಂಡೆಗಳನ್ನು ಹಾರಿಸುವಂಥ ಅವರ ಉಪನ್ಯಾಸಗಳು, ತೀವ್ರ ಸ್ವರೂಪ ಹೊಂದಿದ ಅಧ್ಯಯನ ತರಗತಿಗಳು, ಕರಪತ್ರಗಳು ಇವೇ ಮುಂತಾದವುಗಳನ್ನು ಕೇರಳದಲ್ಲಿ ಕಮ್ಯುನಿಸ್ಟರನ್ನು ಬಲವಾಗಿ ವಿರೋಧಿಸಲು ಬಳಸಲಾಯಿತು. ಕಮ್ಯುನಿಸ್ಟರ ವಿರುದ್ಧ ಹೋರಾಡಲು ಕಮ್ಯುನಿಸ್ಟ್

---

* The most important item in this regard is the Encyclical Letter "131: COMMUNISM THE ENEMY OF GOD" originally written by Pope Pius XI in latin under the title "ENCYCLICAL : DIVINI REDEMPTORIS" and sent 'To the Patriarchs, Primates, Archbishops, Bishops and other Ordinaries in peace and communion with the Apostolic Sea'. Its English transilation was published in April 1937 at Dublin by the 'Catholic Truth Society of Irland'. Such works from the Popes contain the official attitude of the Catholic Church towards Communism. In this Encyclical Letter the Pope condemned Communists as "the most persistent enemies of the Church." After interpreting the theory and practice of communism in apocalyptically, the Pope suggests various means and methods for eradicating Communism.

ವಿರೋಧಿರಂಗವು ಸಹ ಅದೇ ಕಮ್ಯುನಿಸ್ಟ್ ತಂತ್ರಗಳನ್ನು ಅಳವಡಿಸಿಕೊಂಡಿದ್ದರೂ, ಅದು ಕೇರಳದಲ್ಲಿ ವಿಫಲವಾಗಿ, ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆಯನ್ನು ತಡೆಯಲು ಅವುಗಳಿಂದ ಸಾಧ್ಯವಾಗಲಿಲ್ಲ. ಕಮ್ಯುನಿಸ್ಟ್ ಪಕ್ಷದ ವಿರುದ್ಧ ಕೇರಳದ ಕ್ರಿಶ್ಚಿಯನ್ ಚರ್ಚ್‌ಗಳ ಪ್ರತಿಭಟನೆ ಎನ್ನುವುದು, ಯೂರೋಪಿನ ಕಮ್ಯುನಿಸಂನೊಂದಿಗಿನ, ಕ್ರೈಸ್ತಧರ್ಮಕ್ಕಿದ್ದ ಪರಂಪರಾಗತವಾದ ಹಗೆತನದ ಅವಿಭಾಜ್ಯ ಅಂಗವಾಗಿತ್ತು.

ಕೇರಳದ ಕ್ರಿಶ್ಚಿಯನ್ ಸಮುದಾಯದಲ್ಲಿ ಮುಖ್ಯವಾಗಿ ಎರಡು ಪ್ರಬಲ ಬಣಗಳಿವೆ. ಈ ಎರಡೂ ಬಣಗಳು, ಕಮ್ಯುನಿಸ್ಟ್ ವಿರೋಧಿ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದವು. ಎಲ್ಲಾ ಆರ್ಥಿಕ ಮತ್ತು ಆಡಳಿತ ಕ್ಷೇತ್ರಗಳಲ್ಲಿ ಬೆಳೆಯುತ್ತಿರುವ ಸಿರಿಯನ್ ಕ್ರೈಸ್ತರು, ಮಾರ್ಥೋಮಿಸ್ಟ್‌ಗಳು ಮತ್ತು ಜಾಕೋಬೈಟ್-ಆರ್ಥೊಡಾಕ್ಸ್/ನಾಸ್ತಿಕ ಪಂಥಗಳನ್ನೊಳಗೊಂಡಿರುವುದೇ ಮೊದಲನೆಯ ಬಣ. ಕೇರಳದಲ್ಲಿ ಶ್ರೀಮಂತ ವ್ಯಾಪಾರಿಗಳು ಮತ್ತು ರೈತರು ಈ ವರ್ಗಕ್ಕೆ ಸೇರುತ್ತಾರೆ. ರಬ್ಬರ್, ಚಹಾ, ಕಾಫಿ ಎಸ್ಟೇಟ್‌ಗಳಲ್ಲಿ ಇವರು ಪ್ರಾಬಲ್ಯ ಹೊಂದಿದ್ದಾರೆ. ಕಮ್ಯುನಿಸ್ಟ್ ಸರ್ಕಾರದ ಕೃಷಿ ವಲಯದಲ್ಲಿ ತಂದಂಥ ಬದಲಾವಣೆಗಳು, ಚಟುವಟಿಕೆಗಳು, ಉದ್ದೇಶಗಳು ಅವರಲ್ಲಿ ಭಯ, ಆತಂಕಗಳನ್ನು ಹುಟ್ಟುಹಾಕಿದವು. ಸಮಾಜದಲ್ಲಿ ಅವರ ಉನ್ನತ ಸ್ಥಾನಮಾನ ಮತ್ತು ಅಂತರಾಷ್ಟ್ರೀಯ ಕಮ್ಯುನಿಸ್ಟ್ ವಿರೋಧಿ ಕ್ರಿಶ್ಚಿಯನ್ ಸಂಘಟನೆಗಳೊಂದಿಗಿನ ಸಂಬಂದವು, ಸಮಾನ ರೀತಿಯ ಸಾಮಾಜಿಕ ಮತ್ತು ಆರ್ಥಿಕ ಹಿತಾಸಕ್ತಿಗಳೊಂದಿಗೆ ಐಕ್ಯಗೊಳ್ಳಲು ಅವರನ್ನು ಪ್ರೇರೇಪಿಸಿತು. ಈ ಮೈತ್ರಿಯು, ಮೊದಲಿನಿಂದಲೂ 'ಕಮ್ಯುನಿಸ್ಟ್ ವಿರೋಧಿ ಪ್ರತಿರೋಧ'ದ ಸಾರವಾಗಿ ಕಾರ್ಯನಿರ್ವಹಿಸುತ್ತಿತ್ತು(146:--.09.77p17). ಎರಡನೇ ಪ್ರಬಲ ವರ್ಗಕ್ಕೆ ಸೇರಿದವರಲ್ಲಿ ಮುಖ್ಯವಾಗಿ, ಆರ್ಥಿಕವಾಗಿ ಹಿಂದುಳಿದ ಲ್ಯಾಟಿನ್ ಕ್ಯಾಥೋಲಿಕರಾಗಿದ್ದರು. ಅವರಿಗೆ ಸಂಬಂಧಿಸಿದಂತೆ, ಧರ್ಮದ ಬಗ್ಗೆ ಎಂಗೆಲ್ಸ್ ಅವರ ಮಾತುಗಳು ಬಹಳ ಪ್ರಸ್ತುತವಾಗಿವೆ. "ಪ್ರತಿದಿನ ಯಾವುದೇ ಧರ್ಮ ಭೌತಿಕ/ದೈನಂದಿನ ಜೀವನವನ್ನು ನಿಯಂತ್ರಿಸುವ ಬಾಹ್ಯಶಕ್ತಿಗಳ ಬಗ್ಗೆ ಮಾನವ ಮನಸ್ಸಿಗೆ ಮೂಡುವ ಭ್ರಮೆ/ಮೂಢನಂಬಿಕೆಗಳ ಪ್ರತಿಬಿಂಬಗಳಲ್ಲದೆ, ಬೇರೇನೂ ಅಲ್ಲ-ಭೌತಿಕಶಕ್ತಿಗಳು ಅಲೌಕಿಕ ಶಕ್ತಿಗಳಾಗಿ ರೂಪಾಂತರಗೊಳ್ಳುವ ಪ್ರತಿಬಿಂಬ ಮಾತ್ರ."(151:p374;146:--.09.77p17) ಈ ದುಷ್ಟ ಭೌತಿಕಶಕ್ತಿಯೆನ್ನುವುದೇ ನಿರಂತರವಾಗಿ ಮುನ್ನಡೆಯುತ್ತಿರುವ ಕಮ್ಯುನಿಸಂ ಲ್ಯಾಟಿನ್ ಕ್ಯಾಥೋಲಿಕ್ ಪಾದ್ರಿಗಳ ಒಂದು ಸಣ್ಣ ಬಣವು, ಸಾಮಾನ್ಯ ಜನರ ಕೆಲವು ವಿದ್ಯಾವಂತರು ಮತ್ತು ಶ್ರೀಮಂತರಿಗೆ ಮಾತ್ರ, ಸಿರಿಯನ್ ಕ್ರಿಶ್ಚಿಯನ್ನರಿಗಿದ್ದಂತೆ ಹಂಚಿಕೆಯ ಸಮಾನವಾದ ಆಸಕ್ತಿಗಳು ಇದ್ದವು. ಆದರೂ ತಮ್ಮ ಅನುಯಾಯಿಗಳಿಗೆ, 'ಒಳ್ಳೆಯತನವನ್ನೇ ತುಂಬಿಕೊಂಡ ದೈವಿಕ ಶಕ್ತಿಗಳ ವಿರುದ್ಧ, ಕಮ್ಯುನಿಸ್ಟರು ಹಿಂಸಾಚಾರವನ್ನು ಹರಿಯ ಬಿಡುತ್ತಾರೆ, ಎನ್ನುವುದನ್ನು ಮನವರಿಕೆ ಮಾಡಿಕೊಡಲು ಸಾಧ್ಯವಾಯಿತು,' ಎನ್ನುವುದಾಗಿದೆ. "ಪಿಶಾಚಿಗೆ ಬಹಳಷ್ಟು ಪ್ರಲೋಭನೆಗಳನ್ನು ತೋರಿಸಿ ಕೊಡಲು ಸಾಧ್ಯವಾಗಬಹುದು. ಆದರೆ, ಅವನ

ಕಾರ್ಯಗಳ ಅಂತಿಮ ಫಲಿತಾಂಶವೆಂದರೆ, ಸಾವು–ಆತ್ಮದ ಸಾವು"(146:--.09.77p17). ಹಾಗಾಗಿ, (ವಿಮೋಚನೆಯ) ಹೋರಾಟದಲ್ಲಿ ಭಾಗವಹಿಸುವುದು ಒಂದು ಪುಣ್ಯದ ಕೆಲಸವಾಗಿಬಿಟ್ಟಿತು*(84:31.07.59).

1957, 58 ಮತ್ತು 59ರ ವರ್ಷಗಳು ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಕೋಮುವಾದಿ ಶಕ್ತಿಗಳ ಬಲವರ್ಧನೆಗೆ ಸಾಕ್ಷಿಯಾಯಿತು. ಇನ್ನೊಂದು ಸಂಬಂಧಿತ ಬೆಳವಣಿಗೆಯೆಂದರೆ, ಜಾತಿ–ಸುಧಾರಣಾ ಚಳುವಳಿಗಳು, ಪಟ್ಟಭದ್ರ ಹಿತಾಸಕ್ತಿಗಳ ಒತ್ತಡದ ಗುಂಪುಗಳಾಗಿ ವಿಕಸನಗೊಂಡಿದ್ದು. ಪರಿಣಾಮವಾಗಿ, ಇದರ ಹಾನಿಕಾರಕ ಪರಿಣಾಮವೆನ್ನುವುದು, ಕೇರಳದ ಸಾಮಾಜಿಕ–ರಾಜಕೀಯ ಜೀವನದ ಎಲ್ಲಾ ಅಂಶಗಳಲ್ಲಿ ಪ್ರಕಟಗೊಂಡವು.

ಕಮ್ಯುನಿಸ್ಟ್ ವಿರೋಧಿರಂಗವು, ಸೋಶಿಯಲ್ ಸ್ಕೌಟ್ ಮೂವ್ಮೆಂಟ್, ಶಾಂತಿಸೇನಾ, ಕ್ರಿಸ್ಟೋಫರ್ ಮೂವ್ಮೆಂಟ್, ಮರಿಯಾ ಆರ್ಮಿ ಮುಂತಾದ ಕೇರಳದ ಕ್ರಿಶ್ಚಿಯನ್ ಸಮುದಾಯದ ಕೋಮುವಾದಿ ವಿರೋಧಿ ಗುಂಪುಗಳು ಹುಟ್ಟಿಕೊಂಡವು. ಇವುಗಳಲ್ಲಿ ಮೊದಲ ಮೂರೂ ಸಂಘಟನೆಗಳನ್ನು ಕಟ್ಟಿದ ಫಾದರ್ ಜೋಸೆಫ್ ವಡಕ್ಕನ್‌ರವರು, ತಾವೇ ಅವುಗಳನ್ನು ಮುನ್ನಡೆಸುತ್ತಿದ್ದರು. ಸಾಮಾಜಿಕ ಸ್ಕೌಟ್ ಚಳವಳಿ ಮತ್ತು ಶಾಂತಿಸೇನಾ ಕಮ್ಯುನಿಸ್ಟ್ ವಿರೋಧಿರಂಗದ ಶಾಖೆಗಳಾಗಿದ್ದವು. ಅರೆಸೈನಿಕ ಸ್ವಭಾವದ ಈ ಸ್ವಯಂಸೇವಾ ಸಂಘಟನೆಗಳು, ಕಮ್ಯುನಿಸ್ಟರ ಚಟುವಟಿಕೆಗಳನ್ನು ನಿರಂತರವಾಗಿ ವಿರೋಧಿಸುತ್ತಿದ್ದವು. ಮರಿಯಸೈನ್ಯವು, ಕ್ಯಾಥೋಲಿಕ್ ಸಮುದಾಯದ ಕಮ್ಯುನಿಸ್ಟ್ ವಿರೋಧಿರಂಗದ ಮಹಿಳಾ ಗುಂಪು. ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕರಾದ (ಕಮ್ಯುನಿಸ್ಟ್ ವಿರೋಧಿ ಸ್ವಯಂಸೇವಕ ದಳ–ಎ.ಸಿ.ವಿ.ಸಿ.), ಕುರುವಡಿ/ಲಾಠಿ ಸೇನೆ, ನಿರಣಂಪದ, ಕುರೂರು ಸೇನೆ, ಅಡಿಕೆಟೋಪಿ ಸಂಘವು ಕಮ್ಯುನಿಸ್ಟ್ ವಿರೋಧಿಯ ಸ್ಥಳೀಯ ಸ್ವಯಂಸೇವಾ ಸಂಸ್ಥೆಗಳಿಗೆ ಸೇರಿದವರಾಗಿದ್ದರು. ಅವರ ಕಾರ್ಯ ಚಟುವಟಿಕೆಗಳು, ಮುಖ್ಯವಾಗಿ ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರವನ್ನು ಬುಡಮೇಲು ಮಾಡುವ ಉದ್ದೇಶವನ್ನಿಟ್ಟುಕೊಂಡಿತ್ತು.

ಕೇರಳದ ಕ್ಯಾಥೋಲಿಕ್ ಚರ್ಚ್ ಆಯೋಜಿಸಿ, ತರಬೇತಿ ನೀಡಿ ಬೆಳೆಸಿದ್ದ 'ಕ್ರಿಸ್ಟಾಫರ್' ಮೂವ್ಮೆಂಟ್ ಎನ್ನುವುದು, ಕಮ್ಯುನಿಸ್ಟ್ ವಿರೋಧಿಖಾಸಗಿ ಸೈನ್ಯವಾಗಿತ್ತು. ಕೇರಳದ ಕ್ಯಾಥೋಲಿಕಾ ಚರ್ಚ್ ಶ್ರೇಣಿಯ ಪ್ರೋತ್ಸಾಹದಡಿಯಲ್ಲಿ, 1957ರಲ್ಲಿ, ಕ್ರಿಸ್ಟೋಫರ್ಸ್ ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಸಂಧಿಯಿಲ್ಲದಂಥ ಧರ್ಮಯುದ್ಧ/ ರೆಲೆಂಟ್ಲೆಸ್ ಕ್ರುಸೇಡ್ ಪ್ರಾರಂಭಮಾಡಿತು. ಶ್ರೀಮಂತರು ಮತ್ತು ಎಸ್ಟೇಟಿನವರು, ಇದಕ್ಕೆ ಬೇಕಾದ ಆರ್ಥಿಕ ನೆರವು ಒದಗಿಸಿದರು. 'ಧರ್ಮ ಅಪಾಯದಲ್ಲಿದೆ' ಎಂಬ

---

* 'The campaign is no doubt well planned, efficiently organised and adequately financed.. But it is undoubtedly the Christian community which has supplied the bulk of the manpower and material resources for'

ಸಂದೇಹವನ್ನು ಬೃಹದಾಕಾರವಾಗಿ ಮೂಡಿಸಿ, ಆ ಮೂಲಕ ಚರ್ಚ್‌ಗಳು ಕ್ರಿಸ್ಟೋಫರ್ ಭಟರ ಭಾವನೆಗಳನ್ನು ಕೆರಳಿಸಿತು. ಧರ್ಮ ರಕ್ಷಣೆ ಮಾಡುವುದರ ತ್ಯಾಗವನ್ನು ಬಿಷಪ್‌ಗಳು ವೈಭವೀಕರಿಸಿದರು. ಕೂಲಿಪಡೆಯನ್ನು ಸಿದ್ಧವಾಗಿಡಲು ಯುನೈಟೆಡ್ ಸ್ಟೇಟ್ಸ್ ಸೇರಿದಂತೆ, ವಿದೇಶಿ ದೇಶಗಳಿಂದ ಚರ್ಚ್ ಅಧಿಕಾರಿಗಳು ಹಣಕಾಸಿನ ನೆರವು ಪಡೆದರು. ಕೇರಳದ ಧರ್ಮ ಸಂಘಟನೆಯಾದ ಕ್ಯಾಥೋಲಿಕಾ ಚರ್ಚ್‌ರವರ ಅಖಿಲ ಕೇರಳ ಕ್ಯಾಥೋಲಿಕಾ ಕಾಂಗ್ರೆಸ್, ಸರ್ಕಾರದೊಂದಿಗಿನ ರಾಜಕೀಯ ವಿರೋಧವನ್ನು ಕೋಮುವಾದಿ ಶತ್ರುತ್ವವನ್ನು ಬೆಳೆಸುವುದಕ್ಕೆ ಗರಿಷ್ಠಮಟ್ಟದಲ್ಲಿ ಪ್ರಯತ್ನಿಸಿತು. ಕ್ಯಾಥೋಲಿಕಾ ಸಮುದಾಯವು ಇಟ್ಟಂಥ ಹೆಜ್ಜೆಗಳನ್ನನುಸರಿಕೊಂಡು ಕ್ರೈಸ್ತ ಚರ್ಚ್‌ನ ಉಳಿದ ಉಪವಿಭಾಗಗಳು, ಮೊದಲು ಸರ್ಕಾರದ ಸರ್ವವಿಧದ ಪ್ರಗತಿಪರವಾದ ಆಡಳಿತ ಕ್ರಮಗಳನ್ನು ಶಕ್ತವಾಗಿ ವಿರೋಧಿಸಿದವು.

ಹಿಂದೂ ಸಮುದಾಯದ ಜಾತಿ ಸಂಘಟನೆಗಳಿಂದ ಕಮ್ಯುನಿಸ್ಟ್ ಸರ್ಕಾರ ಗಂಭೀರವಾದ ಬೆದರಿಕೆಗಳನ್ನು ಎದುರಿಸಿತು. ಆರಂಭಿಕ ಹಂತದಲ್ಲಿ ಸರಕಾರಕ್ಕೆ ಬೆಂಬಲ ನೀಡಿದ್ದ ಎನ್‌ಎಸ್‌ಎಸ್, ಕ್ರಮೇಣ ಅದರ ಕಾರ್ಯವಿಧಾನ ಬದಲಾಯಿತು. 1957ರ ಕೇರಳದ ಕೃಷಿ ಸಂಬಂಧದ ವಿಧೇಯಕದಲ್ಲಿ, ಎನ್‌ಎಸ್‌ಎಸ್‌ನ ಆರ್ಥಿಕ ಹಿತಾಸಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವುದರಿಂದಾಗಿ, ಸರ್ಕಾರ ವಿರುದ್ಧದ ನಿಲುವು ತಳೆಯಿತು. ಸರ್ಕಾರವು ಅನುಸರಿಸುವ ಮೀಸಲಾತಿಯು, ಎನ್‌ಎಸ್‌ಎಸ್‌ನ್ನು ಶತ್ರುಪಾಳೆಯದ ಕಡೆಗೆ ಕೊಂಡೊಯ್ಯುವಂತೆ ಮಾಡಿತು. ಸರ್ಕಾರದ್ದು 'ಈಟಿವ/ಈಡಿಗ ಹಿತಚಿಂತಕ' ಮತ್ತು 'ನಾಯರ್ ವಿರೋಧಿ'ಯ ಕಾರ್ಯವಿಧಾನ ಎಂದು ಬಣ್ಣಿಸಿತು. ಹಾಗೆ, ಕಮ್ಯುನಿಸ್ಟ್ ಸರ್ಕಾರವನ್ನು ಹೊರಹಾಕಲು, ಕ್ರಿಶ್ಚಿಯನ್ ಮತ್ತು ಮುಸ್ಲಿಂ ಕೋಮುವಾದಿ ಶಕ್ತಿಗಳೊಂದಿಗೆ, ಎನ್‌ಎಸ್‌ಎಸ್ ಸಹ ಮೈತ್ರಿ ಮಾಡಿಕೊಂಡಿತು. ಈಳವ/ಈಡಿಗ ಸಮುದಾಯದ ಜಾತಿ ಸಂಘಟನೆಯಾದ ಎಸ್‌ಎನ್‌ಡಿಪಿ ಕೂಡ ವಿಮೋಚನಾ ಹೋರಾಟಕ್ಕೆ ಬೆಂಬಲ ನೀಡಿತು. ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ವಿಮೋಚನಾ ಹೋರಾಟದಲ್ಲಿ, ವಿರೋಧ ಪಕ್ಷಗಳು, ಕೋಮುವಾದಿಗಳ ಜೊತೆಗೆ, ರಾಜಕೀಯ ಪಕ್ಷವಾದ ಐಯುಎಂಎಲ್ (ಇಂಡಿಯನ್ ಯೂನಿಯನ್ ಮುಸ್ಲೀಮ್ ಲೀಗ್) ಕೂಡ ದನಿಗೂಡಿಸಿತು.

ವಿರೋಧಪಕ್ಷಗಳು, ವಿಶೇಷವಾಗಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಪ್ರಜಾ ಸೋಷಿಯಲಿಸ್ಟ್ ಪಾರ್ಟಿಗಳು, ಕೋಮುವಾದಿ ಶಕ್ತಿಗಳ ಪ್ರತಿಭಟನೆಗಳನ್ನು, ತಮ್ಮ ಸರ್ಕಾರದ ವಿರೋಧಿ ಆಂದೋಲನಕ್ಕೆ ಅನುಕೂಲವಾಗುವ ರೀತಿಯಲ್ಲಿ ಉಪಯೋಗಿಸಿಕೊಂಡರು. ಪಣಂಬಳಿ ಗೋವಿಂದ ಮೆನನ್, ಪಿ.ಟಿ. ಚಾಕೋ, ಆರ್. ಶಂಕರ್ ಅವರಂಥ ನಾಯಕರು, ಹೊಸ ಚೈತನ್ಯ ಉಂಟುಮಾಡುವ ರೀತಿಯಲ್ಲಿ ಆಂದೋಲನವನ್ನು ಮುನ್ನಡೆಸಿದರು. ಯುಎನ್ ಧೇಬಾರ್, ಶ್ರೀಮನ್ನಾರಾಯಣ್, ಸಾದಿಕ್ ಅಲಿ ಮತ್ತು ಇಂದಿರಾ ಗಾಂಧಿಯಂತಹ ಕೇಂದ್ರ ಕಾಂಗ್ರೆಸ್ ನಾಯಕರ

ಸಂಪೂರ್ಣ ಬೆಂಬಲವನ್ನು ಅವರು ಹೊಂದಿದ್ದರು.

ಆ ಕಾಲದ ಕೆಲವು ಪ್ರತಿಭಾನ್ವಿತ ಸಾಂಸ್ಕೃತಿಕ ಕಾರ್ಯಕರ್ತರು ಮತ್ತು ವಿಶೇಷ ಗೌರವವನ್ನು ಸಂಪಾದಿಸಿಕೊಂಡಿರುವ, ಕೆಲವು ಬರಹಗಾರರು ತಮ್ಮ ಸೃಜನಶೀಲತೆಗಳ ಮೂಲಕ, ಕಮ್ಯುನಿಸ್ಟ್ ವಿರೋಧಿ ಏಕೀಕರಣಕ್ಕೆ ಪೂರಕವಾದ ವಾತಾವರಣವನ್ನು ನಿರ್ಮಿಸಿದರು. ಲೇಖನಗಳು, ಪ್ರಬಂಧಗಳು, ನಾಟಕಗಳು, ಕವನಗಳು, ಕರಪತ್ರಗಳು ಮುಂತಾದವುಗಳ ಮೂಲಕ ಸಾರ್ವಜನಿಕರಲ್ಲಿ ಕಮ್ಯುನಿಸಂ ವಿರೋಧಿ ಭಾವನೆಗಳನ್ನು ಸೃಷ್ಟಿಸಲು ಅವರು ಪ್ರಾಮಾಣಿಕವಾಗಿ ಪ್ರಯತ್ನಿಸಿದರು.

ಕಮ್ಯುನಿಸ್ಟ್ ಸರ್ಕಾರವನ್ನು ಹೊರಹಾಕಲು, ಕೋಮು ಶಕ್ತಿಗಳು, ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ಮತ್ತು ವಿರೋಧ ಪಕ್ಷಗಳು ಒಗ್ಗೂಡಿಕೊಂಡು, ಜೂನ್ 12, 1959ರಂದು ಬಹಿರಂಗ ಮುಷ್ಕರ ಪ್ರಾರಂಭಿಸಿದ್ದರೂ ಅದಕ್ಕೂ ಹಿಂದೆಯೇ ಪರೋಕ್ಷವಾಗಿ ಚಳವಳಿ ಶುರುವಾಗಿತ್ತು. ಇಎಂಎಸ್‌ರವರ ಸಚಿವ ಸಂಪುಟ ರಚನೆ ಮಾಡುವಾಗಲೇ ಅದರ ಆರಂಭವನ್ನು ನೋಡಬಹುದು. ಸರ್ಕಾರದ ಆರಂಭಿಕ ಕಾರ್ಯ ಚಟುವಟಿಕೆಗಳೇ ಪಟ್ಟಭದ್ರ ಹಿತಾಸಕ್ತಿ ಗುಂಪುಗಳಿಗೆ ಭಯ, ಆತಂಕಗಳನ್ನು ಹುಟ್ಟುಹಾಕಿದವು. ಅವರು ತಮ್ಮ ಅಭದ್ರತೆಯ ಬಗ್ಗೆ ದೂರು ನೀಡುತ್ತಾ, ಆಡಳಿತಾತ್ಮಕ ಕ್ರಮಗಳಲ್ಲಿ ದೋಷವನ್ನು ಕಂಡುಕೊಂಡರು. ಸಂವಿಧಾನಾತ್ಮಕವಾಗಿ, ಕೆಲಸ ಮಾಡುತ್ತಿದ್ದ ಕಮ್ಯುನಿಸ್ಟ್ ಮಂತ್ರಿಮಂಡಲದ ಕಡೆಗಿನ ಅವರ ಅಸಹಿಷ್ಣುತೆಯು ಸಮರ್ಥನೀಯವಾಗಿರಲಿಲ್ಲ.

ವಿವಿಧ ಹಂತಗಳಲ್ಲಿ, ವಿವಿಧ ಮಟ್ಟಗಳಲ್ಲಿ ನಿಖರವಾದ ಯೋಜನೆಯ ಆಧಾರದ ಮೇಲೆ ಆಯೋಜಿಸಲಾದ ವಿಮೋಚನಾ ಹೋರಾಟಕ್ಕೆ ಹಲವು ಸಂಭನೀಯ ಕಾರಣಗಳಿವೆ. ಅದಕ್ಕೆ ನಂತರ ದೊರಕಿದ ಬೆಂಬಲ, ನಿಸ್ವಾರ್ಥ ನೆರವು, ಎಲ್ಲಕ್ಕಿಂತ ಹೆಚ್ಚಾಗಿ, ಬಲವಾದ ಪೋಷಕತ್ವ ಮುಂತಾದವು ವಿಶೇಷ ಉಲ್ಲೇಖಕಾರ್ಹವಾಗಿವೆ. ಅಂತರರಾಷ್ಟ್ರೀಯ ವ್ಯಾಪ್ತಿ, ಅಧಿಕಾರದ ಕೆಲವು ಬಾಹ್ಯಶಕ್ತಿಗಳ ಬಲವಾದ ಬೆಂಬಲವನ್ನು ಸಹ ಅದು ಹೊಂದಿತ್ತು. ಕ್ಯಾಥೋಲಿಕ್ ಚರ್ಚ್‌ಗೆ ಕಮ್ಯುನಿಸಂ ಕಡೆಗಿನ ಹಗೆತನವೆನ್ನುವುದೇ ಆಂದೋಲನದ ಹಿಂದಿನ ಪ್ರಮುಖ ಪ್ರೇರಕ ಶಕ್ತಿ.

ಶಿಕ್ಷಣ ಕ್ಷೇತ್ರದ ಸುಧಾರಣೆಗಳು ಸಂಪೂರ್ಣವಾಗಿ ಅತ್ಯಂತ ಅಗತ್ಯದ ಸಂಗತಿಯಾಗಿತ್ತು. ಕೇರಳ ಶಿಕ್ಷಣ ಮಸೂದೆಯಲ್ಲಿ ಶೋಷಣೆ ಮುಕ್ತವಾಗಿದ್ದು, ಖಾಸಗಿ ಶಿಕ್ಷಣ ವ್ಯವಸ್ಥಾಪಕ ಸಂಸ್ಥೆಗಳಿಂದ ನಿರಂತರವಾಗಿ ಶೋಷಣೆಗೆ ಒಳಗಾದ ಶಿಕ್ಷಕ ಸಮುದಾಯದ, ಸಾಮಾಜಿಕ ನ್ಯಾಯ ಮತ್ತು ವೃತ್ತಿಪರವಾದ ಹಕ್ಕುಗಳನ್ನು ರಕ್ಷಿಸುವ ಉದ್ದೇಶಗಳನ್ನಿಟ್ಟುಕೊಂಡು, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರುವ ವಿಚಾರಗಳನ್ನು ಅದರಲ್ಲಿ ಅಡಕಗೊಳಿಸಲಾಗಿತ್ತು. ಈ ಸುಧಾರಣೆಗಳಿಗೆ ವಿರೋಧ ವ್ಯಕ್ತವಾಗಿದ್ದು ಶಿಕ್ಷಕರಿಂದಾಗಲೀ ಪೋಷಕರಿಂದಾಗಲೀ ಅಲ್ಲ. ಸುಧಾರಣೆಗಳಿಗೆ ವಿರೋಧವನ್ನು ಮೂಲತಃ ಕ್ಯಾಥೋಲಿಕ್ ಚರ್ಚ್ ನೇತೃತ್ವದ ಖಾಸಗಿ ಶಾಲಾ

ನಿರ್ವಹಣಾ ಸಂಸ್ಥೆಗಳು ಯೋಜಿಸಿ ಅನುಷ್ಠಾನಗೊಳಿಸಿದ್ದವು. ಈ ಶಿಕ್ಷಣ ಸಂಸ್ಥೆಗಳನ್ನು ಹೆಚ್ಚಾಗಿ ಪ್ರಾರಂಭಿಸುವುದು ಮತ್ತು ನಿರ್ವಹಿಸುವುದರಲ್ಲಿ, ಕೇರಳದ ಕ್ರೈಸ್ತ ಚರ್ಚುಗಳು ವಿವಿಧ ಉದ್ದೇಶಗಳನ್ನು ಹೊಂದಿದ್ದವು. ತಮ್ಮ ಆಲೋಚನಾ ಕ್ರಮಕ್ಕೆ ತಕ್ಕಂತೆ ರೂಪಿಸಿ, ಹೊಸ ಪೀಳಿಗೆಯನ್ನು ಕಡೆದು ತೆಗೆಯುವುದು, ಅವರ ಗುರಿಯಾಗಿತ್ತು. ಅವರಿಗೆ ಲಾಭವನ್ನು ಮಾಡಿಕೊಳ್ಳಬೇಕೆನ್ನುವ ವ್ಯಾಪಾರಿ ಹಿತಾಸಕ್ತಿಯೂ ಅಡಗಿತ್ತು. 'ಜನಪ್ರಿಯ/ಜನತಾ ಚಳುವಳಿ' ಎಂದು ಕರೆಯಲ್ಪಡುವ ಹಿಂಸಾತ್ಮಕ ಪ್ರತಿಭಟನೆಯು ಕ್ಯಾಥೋಲಿಕ್ಕರು ಬಹುಸಂಖ್ಯೆಯಲ್ಲಿರುವ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿತ್ತು. ಕೇರಳದ ಕ್ಯಾಥೋಲಿಕ್ ಚರ್ಚ್ ತನ್ನಲ್ಲಿರುವ ವ್ಯಾಪಕ ಸಾಮರ್ಥ್ಯವನ್ನು ಸರ್ಕಾರವನ್ನು ಹೊರಹಾಕಲು ಸಮರ್ಥವಾಗಿ ಬಳಸಿಕೊಂಡಿತು.

1957ರ ಅಕ್ಟೋಬರ್–ನವೆಂಬರ್ ತಿಂಗಳುಗಳಲ್ಲಿ, ಕಟ್ಟಂಪಲ್ಲಿ ಭೂಸ್ವಾಧೀನ ಆಂದೋಲನದೊಂದಿಗೆ ವಿರೋಧಪಕ್ಷವು ತನ್ನ ಬಹಿರಂಗ ಹೋರಾಟವನ್ನು ಪ್ರಾರಂಭಿಸಿತು. ಆ ಸಣ್ಣ ಹೋರಾಟಕ್ಕು ಸಹ ಕ್ರಿಸ್ಟೋಫರ್ಸ್ ಸೇವೆಯ ಅನುಕೂಲ ಪಡೆಯಲಾಯಿತು. ಬೃಹತ್ ಪ್ರಮಾಣದ ನಿಧಿ ಸಂಗ್ರಹಣೆಯನ್ನೂ ಮಾಡಲಾಯಿತು. ಆಂಧ್ರ ಅಕ್ಕಿ ವಹಿವಾಟಿಗೆ ಸಂಬಂಧಿಸಿದ ಆರೋಪಗಳು ಮತ್ತು ವಿಚಾರಣಾ ಆಯೋಗದ ವರದಿಯಲ್ಲಿನ ಅವಲೋಕನಗಳು, ವಿರೋಧ ಪಕ್ಷಗಳು, ಮಾಧ್ಯಮ ಮುಂತಾದವುಗಳನ್ನೆಲ್ಲವನ್ನೂ ಸರ್ಕಾರದ ವಿರುದ್ಧದ ತಮ್ಮ ಪ್ರಚಾರದಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಂಡವು. ವಿರೋಧಪಕ್ಷಗಳ ಪ್ರತಿಭಟನೆಗಳು, ಜಾತಿ–ಸಮುದಾಯ ಗುಂಪುಗಳ ಆಂದೋಲನಗಳು ಸರ್ಕಾರಕ್ಕೆ ಗಂಭೀರ ಬೆದರಿಕೆಯನ್ನು ಒಡ್ಡುವಷ್ಟು ಮಾತ್ರ ಬಲವಾಗಿತ್ತು.

ದೇವಿಕುಳಂ ಉಪಚುನಾವಣೆಯಲ್ಲಿ ಕಮ್ಯುನಿಸ್ಟ್ ಅಭ್ಯರ್ಥಿಯ ಗೆಲುವು, ವಿರೋಧಪಕ್ಷಗಳ ಮತ್ತು ಕೋಮುವಾದಿ ಗುಂಪುಗಳ ಆಕ್ರೋಷವನ್ನು ಕೆರಳಿಸಿತು. ಇದಾದ ನಂತರವೇ ಮುಖ್ಯಮಂತ್ರಿಗಳ ಪ್ರಸಿದ್ಧ 'ಕೊಯಮತ್ತೂರು ಭಾಷಣ' ನಡೆದಿದ್ದು. ಇದನ್ನು ಭಾರೀ ಪ್ರಮಾಣದಲ್ಲಿ ತಪ್ಪಾದ ಅರ್ಥೈಸುವಿಕೆಗೆ ಒಳಪಡಿಸಲಾಯಿತು. ಕೇರಳದ ರಾಜಕೀಯ ಚರ್ಚೆಗಳಲ್ಲಿ ಇದು ದೊಡ್ಡದಾಗಿ ಕಾಣುವ ರೀತಿಯಲ್ಲಿ, ವಿವಾದ ಸೃಷ್ಟಿಸಿದರು. ಸೀತಾರಾಮ್ ಮಿಲ್ ಕಾರ್ಮಿಕ ವಿವಾದವನ್ನು ವಿರೋಧಪಕ್ಷಗಳು ಸರ್ಕಾರದ ವಿರುದ್ಧ ಒಂದು ರಾಜಕೀಯ ಆಂದೋಲನವನ್ನಾಗಿ ಮಾರ್ಪಡಿಸಿದವು. ಈ ಸಂದರ್ಭದಲ್ಲಿ, ಸರ್ಕಾರಕ್ಕೆ ಸಾಧಕವಾಗಿಯೂ ಬಾಧಕವಾಗಿಯೂ ನಡೆದ ಅಭಿಯಾನಗಳು, ತ್ರಿಶೂರ್ ಪ್ರದೇಶದಲ್ಲಿ ಕ್ರೂರವಾದ ವರಂತರಪಿಲ್ಲಿ ಹತ್ಯೆಯಲ್ಲಿ ಅಂತ್ಯಗೊಂಡವು. ಅದೇ ದಿನ ವಿದ್ಯಾರ್ಥಿ ಸಂಘಟನೆಗಳು ನಡೆಸಿದ, 'ಒಂದಾಣೆ ದಂಗೆ'ಗೂ ಸಾಕ್ಷಿಯಾಯಿತು.

ಚಂದನತೋಪು ಮತ್ತು ಮುನ್ನಾರ್ ಪ್ರದೇಶಗಳಲ್ಲಿ ಕಾರ್ಮಿಕ ಮುಷ್ಕರಗಳು ಮತ್ತು ಪೋಲೀಸರ ಗುಂಡಿನ ದಾಳಿಗಳಿಂದಾಗಿ, ಸರ್ಕಾರದ ವಿರೋಧಿ ಪ್ರತಿಭಟನೆಗಳು

ತೀವ್ರಗೊಂಡವು. ಸರ್ಕಾರದ ಪೊಲೀಸ್ ನೀತಿ ಮತ್ತು ಜನತಾ ಆಂದೋಲನಗಳಲ್ಲಿ ಪೊಲೀಸರು ಮಧ್ಯಪ್ರವೇಶಿಸಬಾರದು ಎಂಬ ಸಲಹೆಯೂ ಪ್ರತಿಭಟನಾಕಾರರಿಗೆ ಉಪಯುಕ್ತವಾಗಿತ್ತು. ಆಂದೋಲನವನ್ನು ಬಲವಂತವಾಗಿ ಹತ್ತಿಕ್ಕಲು ಸರ್ಕಾರ ಹಿಂದೇಟು ಹಾಕಿತು. ಕಮ್ಯುನಿಸ್ಟ್ ಸರ್ಕಾರ ತಟಸ್ಥ ಪೊಲೀಸ್ ನೀತಿಯನ್ನು ಅನುಸರಿಸಿತು. ಆದಾಗ್ಯೂ, ಬಂಡವಾಳಶಾಹಿಗಳು ನಿವೃತ್ತ ಪೊಲೀಸ್ ಅಧಿಕಾರಿಗಳು, ವಿರೋಧ ಪಕ್ಷದ ನಾಯಕರು, ಕೇಂದ್ರ ಗುಪ್ತಚರ ಬ್ಯೂರೋದಂತಹ ಬಾಹ್ಯ ಶಕ್ತಿಗಳ ಪ್ರಭಾವಕ್ಕೆ ಪೊಲೀಸರು ಅನೇಕ ಸಂದರ್ಭಗಳಲ್ಲಿ ಶರಣಾಗಿದ್ದಾರೆ.

ಮನ್ನತ್ ಪದ್ಮನಾಭನ್ ಮತ್ತು ಎನ್‌ಎಸ್‌ಎಸ್‌ನ ಪ್ರತಿಭಟನೆಯು ಖಂಡಿತವಾಗಿಯೂ ಮೇಲ್ಜಾತಿಗಳ ಪಟ್ಟಭದ್ರ ಹಿತಾಸಕ್ತಿಗಳನ್ನು ರಕ್ಷಿಸುವ ಸಲುವಾಗಿಯೇ ಆಗಿತ್ತು. ಸರ್ಕಾರದ ಭೂಸುಧಾರಣಾ ಕ್ರಮಗಳಿಂದಾಗಿ, ಭೂಮಾಲೀಕ ನಾಯರುಗಳ ಮತ್ತು ಕ್ರಿಶ್ಚಿಯನ್ನರ ಹಿತಾಸಕ್ತಿಗಳ ನಡುವೆ ಸಂಘರ್ಷ ಅನಿವಾರ್ಯವಾಯಿತು. ಸ್ವಾಭಾವಿಕವಾಗಿಯೂ ಕೇರಳ ಕೃಷಿ ಸಂಬಂಧ ಮಸೂದೆಯನ್ನು ಶಕ್ತವಾಗಿ ವಿರೋಧಿಸಿದ್ದು, ಈ ಎರಡು ಸಮುದಾಯಗಳೇ ಆಗಿದ್ದವು.

ಜನರ ಕಾರ್ಯವಿಧಾನದಲ್ಲಿಯ ವಿವಾದಾತ್ಮಕ ರಾಜಕೀಯ ಬದಲಾವಣೆ, ಸರ್ಕಾರಕ್ಕೆ ಪರ ಮತ್ತು ವಿರುದ್ಧವೂ ಆಗಿ ಅವರು ಎರಡು ಬಣಗಳಾಗಿ ಸಂಘಟಿತರಾಗಿದ್ದು, 'ಕೇರಳದಲ್ಲಿ ಜನತಾ ಮುನ್ನಡೆ'ಯುಂಟಾಯಿತು ಎನ್ನುವ ವಾದಕ್ಕೆ ಬಲ ದೊರಕಿತು. ಪ್ರಧಾನಮಂತ್ರಿ ನೆಹರೂರವರು ಈ "ಜನತಾ ಚಳುವಳಿ ಅಥವಾ ಮುನ್ನಡೆ"ಯನ್ನೇ ಆಗಾಗ್ಗೆ ಉಲ್ಲೇಖಿಸುತ್ತಾ ಇದ್ದಿದ್ದು.

ಕಮ್ಯುನಿಸ್ಟ್ ಸರ್ಕಾರದ ಇತರ ಕೆಲವು ಸದುದ್ದೇಶದ ಕ್ರಮಗಳು ಸಹ ಕೆಲವು ವರ್ಗಗಳ ಜನರ ಕೋಪಕ್ಕೆ ಕಾರಣಗಳಾದವು. ಹೆಚ್ಚಾದ ಕೃಷಿ ಆದಾಯ ತೆರಿಗೆ ದರ, ತೋಟದ/ಎಸ್ಟೇಟ್ ಮಾಲೀಕರನ್ನು ಅತೃಪ್ತರನ್ನಾಗಿಸಿತು. ಸರ್ಕಾರದ ಉದ್ಯೋಗ ನೀತಿಯೂ ಅವರಿಗೆ ಅನುಕೂಲಕರವಾಗಿರಲಿಲ್ಲ. ಕಾರ್ಮಿಕ ಗುತ್ತಿಗೆ ಸೊಸೈಟಿಗಳ ರಚನೆಯಿಂದ ಲೋಕೋಪಯೋಗಿ ಇಲಾಖೆಯಲ್ಲಿ ಗುತ್ತಿಗೆದಾರರ ಏಕಸ್ವಾಮ್ಯಕ್ಕೆ ಧಕ್ಕೆಯಾಯಿತು. ಹಾಗಾಗಿ ಅವರು ಸಹ ಸರಕಾರದವಿರೋಧಿ ಚಟುವಟಿಕೆಗಳಲ್ಲಿ ತೊಡಗಿಕೊಂಡರು. ಕಳ್ಳು/ಸೇಂದಿ ಸಹಕಾರ ಸಂಘಗಳು ಕಾರ್ಯನಿರ್ವಹಿಸುವ ಪ್ರದೇಶಗಳಲ್ಲಿ ಕಳ್ಳು ಶಾಪ್‌ನ ಗುತ್ತಿಗೆದಾರರು, ತಮ್ಮ ಲಾಭವನ್ನು ಕಳೆದುಕೊಂಡರು. ಅಂಥ ಸೊಸೈಟಿಗಳು ಅಥವಾ ಸಹಕಾರ ಸಂಘಗಳನ್ನು ಸ್ಥಾಪಿಸಿದ ಸರ್ಕಾರದ ವಿರುದ್ಧ ಬೇಸರಗೊಂಡಿದ್ದರು.

ರಾಜ್ಯದಾದ್ಯಂತ ಹರಡಿಕೊಂಡಿರುವ ಭೂಮಾಲೀಕರಿಗೆ, ಮಧ್ಯಮ ವರ್ಗದವರ ಅಭಿಪ್ರಾಯವನ್ನು ರೂಪಿಸುವುದರಲ್ಲಿ ಗಮನಾರ್ಹವಾಗಿ ಪ್ರಭಾವಿಸಲು ಸಾಧ್ಯವಾಯಿತು. ಕೇರಳ ಕೃಷಿ ಸಂಬಂಧಗಳ ಮಸೂದೆಯಲ್ಲಿದ್ದ, ಕೆಲವು ಕಟ್ಟುನಿಟ್ಟಿನ ನಿಬಂಧನೆಗಳಿಂದಾಗಿ,

ಭೂಮಾಲೀಕರು ನಾಶದ ಅಂಚಿಗೆ ಸಾಗಿಬಿಟ್ಟಿದ್ದರು. ಸ್ವಾಭಾವಿಕವಾಗಿ ಕಮ್ಯುನಿಸ್ಟ್ ಸರ್ಕಾರದ ಕೃಷಿ ಸುಧಾರಣೆಗಳ ಬಗ್ಗೆ ಅವರಿಗೆ ಅನುಮಾನ ಮೂಡಿತು. ಅವರು ಸರ್ಕಾರವನ್ನು ಅಧಿಕಾರದಿಂದ ಕೆಳಕ್ಕಿಳಿಸಲು ಸಾಧ್ಯವಾಗುವುದೆಲ್ಲವನ್ನೂ ಮಾಡಿದರು. ಕಮ್ಯುನಿಸ್ಟ್ ಸರ್ಕಾರವನ್ನು ವಜಾ ಮಾಡುವವರೆಗೆ ತಮ್ಮ ಕೃಷಿ ಭೂಮಿಯನ್ನು ಪಾಳುಬೀಳುವಂತೆ ಮಾಡಲಾಗುವುದೆಂದು ಕುಟ್ಟನಾಡಿನ ದೊಡ್ಡ ಭೂಮಾಲೀಕರು ಬೆದರಿಕೆ ಹಾಕಿದರು. ಕೇರಳ ಶಿಕ್ಷಣ ಕಾಯಿದೆಯ ಪರಿಣಾಮವಾಗಿ ಶಾಲಾ ವ್ಯವಸ್ಥಾಪಕರು/ಮೇನೇಜ್ಮೆಂಟಿನವರು ಕೂಡ ಸರ್ಕಾರದ ವಿರುದ್ಧ ತಿರುಗಿಬಿದ್ದರು. ಋಣಬಾಧ್ಯತೆಯುಳ್ಳ ರೈತರೊಂದಿಗೆ ಸರ್ಕಾರವು ಅನುಸರಿಸಿದ ಉದಾರ ಮತ್ತು ಪರೋಪಕಾರಿ ನೀತಿಯು ಕೇರಳದ ಲೇವಾದೇವಿ ವಿಭಾಗವನ್ನು ಕೆರಳಿಸಿತು. ವಿವಿಧ ರಾಜಕಾರಣಿಗಳು, ಪಾದ್ರಿಗಳು, ಎಸ್ಟೇಟ್ ಮಾಲೀಕರು, ಬ್ಯಾಂಕರ್‌ಗಳು, ವಕೀಲರು, ಭೂಮಾಲೀಕರೇ ಮೊದಲಾದ ವರ್ಗಗಳನ್ನು ಒಳಗೊಂಡಿರುವ ದೊಡ್ಡ ಶ್ರೇಣಿಯು, ಸರ್ಕಾರದ ವಿರುದ್ಧದ ಪ್ರತಿಭಟನೆಯಲ್ಲಿ ಪಾಲ್ಗೊಂಡವು. ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಹೋರಾಟಕ್ಕೆ ಉತ್ತೇಜನ ನೀಡುವಲ್ಲಿ ಅವರು ವಹಿಸಿದ ಶಕ್ತಿಯುತವಾದ ಪಾತ್ರವನ್ನು ಕಡಿಮೆ ಅಂದಾಜು ಮಾಡಲು ಸಾಧ್ಯವಿಲ್ಲ. ದೊಡ್ಡ ಶಕ್ತಿ ಮತ್ತು ಪ್ರಭಾವವನ್ನು ಹೊಂದಿದ್ದ ಕ್ಯಾಥೋಲಿಕ್ ಚರ್ಚ್ ಅತ್ಯಂತ ಆಕ್ರೋಷಗೊಂಡಿತ್ತು. ಅದಕ್ಕೆ ಬೆಂಬಲವಾಗಿ ನಿಂತ ಇನ್ನೊಂದು ಸಮುದಾಯ ಹಿತಾಸಕ್ತಿ ಗುಂಪು ಎನ್ನುವುದು, ನಾಯರ್ ಸೇವಾ ಸೊಸೈಟಿಯಾಗಿತ್ತು. ಮೀಸಲಾತಿ ಸಮಸ್ಯೆ ಮತ್ತು ಭೂಸುಧಾರಣಾ ಕಾಯಿದೆ ಅವರನ್ನೂ ಕೆರಳಿಸಿತ್ತು.

ಕೇರಳದ ಇತರ ಎಲ್ಲಾ ರಾಜಕೀಯ ಪಕ್ಷಗಳು ಮೊದಲಿನಿಂದಲೂ ಕಮ್ಯುನಿಸ್ಟ್ ಸರ್ಕಾರದ ವಿರುದ್ಧವೇ ಇದ್ದವು. ಐಎನ್‌ಸಿ, ಪಿಎಸ್‌ಪಿ., ಐಯುಎಂಎಲ್, ಆರ್‌ಎಸ್‌ಪಿ ಪಕ್ಷಗಳು ಸರ್ಕಾರದ ವಿರುದ್ಧಸಡಿಲವಾದ 'ಐಕ್ಯರಂಗ'ವಾಗಿ ಕೆಲಸ ಮಾಡುತ್ತಿದ್ದವು. ಈ ಅವಕಾಶವನ್ನು ಅವರು ಹಿಂಸಾಚಾರಕ್ಕಾಗಿ ಬಳಸಿಕೊಂಡರು. ಈ ವಿಶೇಷ ಗುಂಪುಗಳ ಮೈತ್ರಿಯು ಕೇಂದ್ರ ಸರ್ಕಾರದ ಮೇಲೆ ತೀವ್ರ ಒತ್ತಡ ಹೇರಿತ್ತು. ರಾಜ್ಯ ಮತ್ತು ಸ್ಥಳೀಯ ಮಟ್ಟದಲ್ಲಿ ಹೇರಿದ ಕಠಿಣ ಒತ್ತಡತಂತ್ರಗಳು ಸರ್ಕಾರ ಮತ್ತು ಸಾರ್ವಜನಿಕರಲ್ಲಿ ತೀವ್ರ ಉದ್ವಿಗ್ನತೆಯನ್ನು ಸೃಷ್ಟಿಸಿತು. ಇದು ಹಿಂಸಾತ್ಮಕವಾದ ಪ್ರತ್ಯಕ್ಷ ಆಂದೋಲನ, ವಿಮೋಚನಾ ಹೋರಾಟ ಎನ್ನುವ ಹೆಸರಿನಲ್ಲಿ ಆರಂಭಿಸುವುದಕ್ಕೆ ಕಾರಣವಾಯಿತು. ಇದರ ಹಿಂದೆ ಆರ್ಥಿಕ ಪ್ರಭಾವವೂ ತೀವ್ರವಾಗಿಯೇ ಇತ್ತು.

ಆಂದೋಲನದಲ್ಲಿ ತೊಡಗಿರುವ ಜನರು ಮುಖ್ಯವಾಗಿ ಎರಡು ಗುಂಪುಗಳಿಗೆ ಸೇರಿದವರಾಗಿದ್ದರು. ಕ್ರಿಶ್ಚಿಯನ್ ಚರ್ಚ್, ಮುಸ್ಲಿಂ ಲೀಗ್, ನಾಯರ್ ಸರ್ವಿಸ್ ಸೊಸೈಟಿ ಸೇರಿದಂತೆ ಸಮುದಾಯ/ಜಾತಿ ಗುಂಪುಗಳು ಮೊದಲ ವರ್ಗದಲ್ಲಿದ್ದವು. ರಾಜಕೀಯ ಪಕ್ಷಗಳು ಮತ್ತು ಪಟ್ಟಭದ್ರ ಹಿತಾಸಕ್ತಿ ಗುಂಪುಗಳು ಎರಡನೆಯ ಸರಣಿಯಲ್ಲಿ ಒಳಗೊಂಡಿತ್ತು. ಎರಡೂ ಬಣಗಳು ಸರ್ಕಾರದ ವಿರುದ್ಧ "ಗೆಲುವು

ಇಲ್ಲವೇ ಮಡಿ" ಎಂದು ಘೋಷಿಸಿಕೊಂಡು ಹೋರಾಟ ಶುರುಮಾಡಿಕೊಂಡಿದ್ದವು. ನಗರ ಪ್ರದೇಶಗಳಲ್ಲಿ ಗಲಭೆಗಳಿಗೆ ಸಮಾನವಾದ ಸ್ಥಿತಿಯನ್ನು ಸೃಷ್ಟಿಸಿದವು. ಆದರೆ ರಾಜ್ಯದ ಗ್ರಾಮೀಣ ಪ್ರದೇಶಗಳು ಸಾಮಾನ್ಯವಾಗಿ ಶಾಂತವಾಗಿಯೇ ಇತ್ತು.

ಕೇರಳದ ವಿರೋಧ ಪಕ್ಷಗಳ ರಾಜಕೀಯ ನಾಯಕರು, ಕೇರಳದಲ್ಲಿ ಕೇಂದ್ರ ಸರ್ಕಾರವು ಮಧ್ಯಪ್ರವೇಶ ಮಾಡುವುದಕ್ಕಾಗಿ ನಿರಂತರ ಕೂಗನ್ನು ಹೆಚ್ಚಿಸಿತು. ಸದ್ಯದ ಕೇರಳದ ಪರಿಸ್ಥಿತಿಯು ಕೇಂದ್ರದ ಹಸ್ತಕ್ಷೇಪ ನಡೆಸುವುದನ್ನು ಸಮರ್ಥಿಸುತ್ತದೆ ಎಂಬ ಅಭಿಪ್ರಾಯವನ್ನು ಹರಡಲು ಕೆಲವು ಸಂದರ್ಭಗಳಲ್ಲಿ ದೆಹಲಿಯ ಕಾಂಗ್ರೆಸ್ ನಾಯಕರು, ಪಟ್ಟಭದ್ರ ಹಿತಾಸಕ್ತಿ ಹೊಂದಿರುವ ಮಾಧ್ಯಮಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲಾಯಿತು. ಕೇಂದ್ರ ಇಂಟೆಲಿಜೆನ್ಸ್ ಬ್ಯೂರೋ, ವಿಶೇಷವಾಗಿ, ಅದರ ನಿರ್ದೇಶಕ ಬಿ.ಎನ್. ಮಲ್ಲಿಕ್ ಮಂತ್ರಿಮಂಡಲದ ವಿಸರ್ಜನೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದರು.

ಆಗಿನ ಕೇರಳದ ಸಮಾಜ ವರ್ಗಸಂರಚನೆಯು, ಜನರ ಜೀವನದ ಗುಣಮಟ್ಟವು, 'ಜನತಾ ಚಳವಳಿ' ಎಂದು ಬಿಂಬಿಸಲಾದ ಬಹಿರಂಗ ಆಂದೋಲದೊಂದಿಗೆ ದೃಢವಾದ ಸಂಬಂಧವನ್ನಿಟ್ಟುಕೊಂಡಿತ್ತು. ಮಧ್ಯಕೇರಳದಲ್ಲೂ ಉತ್ತರ ತಿರುವಾಂಕೂರಿನಲ್ಲೂ ಮಧ್ಯಮ ವರ್ಗವು ಪ್ರಬಲವಾದ ಪ್ರಭಾವವನ್ನು ಹೊಂದಿದ್ದು, ಆಂದೋಲನವು ಸಂಪನ್ಮೂಲಗಳನ್ನು ವ್ಯಾಪಕವಾಗಿ ಬಳಸಿಕೊಂಡು, ಪ್ರೇರಕ ಶಕ್ತಿಯಾಗಿ ಕಾರ್ಯನಿರ್ವಹಿಸಿತು. ರಾಜ್ಯದ ನಿರುದ್ಯೋಗಿಗಳಾಗಿದ್ದ ಹೆಚ್ಚಿನ ಯುವಕರುಗಳು, ಪ್ರತಿಭಟನೆಯ ಪ್ರಮುಖ ಘಟಕವಾಗಿ ಬದಲಾಗಿದ್ದರು.

ವಾಸ್ತವವಾಗಿ, ಪ್ರತಿಭಟನಾರಂಗವು ಬೃಹತ್ ಪ್ರಮಾಣದಲ್ಲಿ ಹಣ ಸಂಗ್ರಹಣೆ ನಡೆಸಲಾಗಿತ್ತು. ಗಮನಾರ್ಹವಾದ ರೀತಿಯಲ್ಲಿ ಹಣ ವಿದೇಶಗಳಿಂದ ಹರಿದು ಬಂದಿತ್ತು. ವಿದೇಶಗಳಿಂದ ಬಂದಿದ್ದ, ಬೃಹತ್ ಮೊತ್ತವನ್ನು ಭಾರತದ ಕ್ರೈಸ್ತ ಚರ್ಚುಗಳ ಖಾತೆಗಳಿಗೆ ಜಮಾ ಮಾಡಲಾಯಿತು, ಎಂದು ಪ್ರಧಾನಿ ಜವರಲಾಲ್ ನೆಹರೂ ಅವರು ಸಂಸತ್ತಿನಲ್ಲಿ ಪ್ರಸ್ತಾಪಿಸಿದ್ದರು. ಕೇರಳದಲ್ಲಿ ಕಮ್ಯುನಿಸ್ಟ್ ವಿರೋಧಿ ಹೋರಾಟವನ್ನು ಅಮೇರಿಕದ ಬಂಡವಾಳಶಾಹಿಯು ಪ್ರಾಮಾಣಿಕತೆಯಿಂದ ಬೆಂಬಲಿಸಿ, ಯಥೇಚ್ಛವಾದ ಹಣವನ್ನು ಹರಿಸಿತ್ತು, ಎಂಬ ಅಂಶವು ಸಾಕ್ಷ್ಯ ಮತ್ತು ಬಹಿರಂಗಪಡಿಸುವಿಕೆಯ ಆಧಾರದ ಮೇಲೆ ವ್ಯಾಪಕವಾಗಿ ವರದಿಯಾಗಿದ್ದು, ಅದನ್ನು ದೃಡೀಕರಿಸಲಾಗಿದೆ. ಇಂತಹ ವಿವಿಧ ಅಂಶಗಳ ಜಂಟಿ ಚಟುವಟಿಕೆಗಳ ಪರಿಣಾಮವಾಗಿ, ಕೇರಳದ ರಾಜಕೀಯ ವಾತಾವರಣದಲ್ಲಿ ಹೊರಹೊಮ್ಮಿ ಬಂದ ಪ್ರತಿಹೋರಾಟದ ಬಿರುಗಾಳಿಯು, ಕಮ್ಯುನಿಸ್ಟ್ ಸರ್ಕಾರ ಹೊರಗಟ್ಟುವ ಪ್ರಕ್ರಿಯೆಯನ್ನು ಚುರುಕುಗೊಳಿಸಿತು.

ವಿಮೋಚನಾ ಹೋರಾಟದಲ್ಲಿ ಅಪಾರ ಹಣದ ಹರಿವು, ಅನೇಕ ವಿಚಾರಗಳನ್ನು ಸಹ ಬಹಿರಂಗಪಡಿಸುತ್ತದೆ. ವಿದೇಶದಿಂದ ಬಂದ ಲೆಕ್ಕವಿಲ್ಲದಷ್ಟು ಸಂಪತ್ತುಗಳ ಜೊತೆಗೆ, ಊಳಿಗಮಾನ್ಯ ಅಧಿಪತಿಗಳು, ಶ್ರೀಮಂತರು, ಖಾಸಗಿ ಬ್ಯಾಂಕಿನವರು,

ಇತರ ಹಣಕಾಸಿನ ವ್ಯವಹಾರಸ್ತರು, ಮದ್ಯದ ಲಾಬಿಗಾರರು, ಗುತ್ತಿಗೆದಾರರೆಲ್ಲರೂ ಸೇರಿ ಹಣದ ಹೊಳೆಯನ್ನೇ ಹರಿಸಿದರು. ಆ ಕಾಲದಲ್ಲಿ ಕೆಲವು ಸ್ಥಳೀಯ ಖಾಸಗಿ ಬ್ಯಾಂಕ್‌ಗಳು ಕುಸಿತಗೊಂಡಿದ್ದರ ಹಿನ್ನೆಲೆಯು, ಕೇರಳದ ಕೆಲವು ಮಾಧ್ಯಮ-ಕೈಗಾರಿಕಾ ವಾಣಿಜ್ಯ ವಲಯಗಳಲ್ಲಿ, ಕೆಲವು ಬೃಹತ್ ಏಕಸ್ವಾಮ್ಯಗಳಾಗಿ ವಿಸ್ತರಿಸಿಕೊಂಡಿದ್ದರ ಹಿನ್ನೆಲೆಯು ಹೆಚ್ಚಿನ ಅಧ್ಯಯನಕ್ಕೆ ಅರ್ಹವಾಗಿದೆ. ವಿಮೋಚನಾ ಹೋರಾಟದಲ್ಲಿ ನಡೆದ ಹಣದ ಹರಿವು, ಕೇರಳ ರಾಜಕೀಯದಲ್ಲಿ ಭ್ರಷ್ಟಾಚಾರದ ಒಳನುಸುಳುವಿಕೆಗೂ ಅವಕಾಶವನ್ನೊದಗಿಸಿತು. ನಂತರದಲ್ಲಿ ಆರ್ಥಿಕ ಅವ್ಯವಸ್ಥೆಯುಂಟಾಗಿ, ಧನ ಸಂಗ್ರಹವು, ಕೆಲವು ರಾಜಕೀಯ ಪಕ್ಷಗಳಿಗೆ ರಾಜಕೀಯದ ಮೂಲಕದ ಧನಸಂಪಾನೆಯ ಮಾರ್ಗವಾಗಿದ್ದಲ್ಲದೆ, ಕೆಲವು ನಾಯಕರಿಗೆ ವರದಾನವಾಗಿ ಪರಿಣಮಿಸಿತು. ಮದ್ಯದ ಸರಬರಾಜು, ಹಣ ಹಂಚಿಕೆ ಮುಂತಾದವುಗಳಿಂದಾಗಿ, ಆಂದೋಲನದ ಉತ್ಸಾಹವನ್ನು ಮದ್ಯದ ಅಮಲಿನಂತೆ ಹೆಚ್ಚಿಸಿತು. ಅದು ನಂತರದ ಚುನಾವಣಾ ರಾಜಕೀಯದಲ್ಲಿ, ಕೆಲವು ಪಕ್ಷಗಳ ಪ್ರಚಾರ ಚಟುವಟಿಕೆಗಳಲ್ಲಿ ಅಭ್ಯಾಸವಾಗಿಬಿಟ್ಟಿದ್ದು, ಒಂದು ಬಹಿರಂಗ ರಹಸ್ಯ.

ಆಂದೋಲನದ ಸಮಯದಲ್ಲಿ ಮಾಧ್ಯಮಗಳು ತೆಗೆದುಕೊಂಡ ನಿಲುವು ಸಹ ನಿರ್ಣಾಯಕವಾಗಿತ್ತು. ಅಸ್ತಿತ್ವದಲ್ಲಿದ್ದ, ಮುದ್ರಣ ಮಾಧ್ಯಮ ಸರ್ಕಾರದ ಬಗ್ಗೆ ಹೊಂದಿದ್ದ ವಿರೋಧಿತನವು, ದಿನಪತ್ರಿಕೆಗಳ ವರದಿಗಳು ಮತ್ತು ಸಂಪಾದಕೀಯಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಇದರೊಂದಿಗೆ 'ಪ್ರತಿಫಲಕ್ಕಾಗಿ ಸುದ್ದಿ' ಪ್ರಕಟಿಸುವ ವ್ಯವಸ್ಥೆಯನ್ನು ರಾಜ್ಯದಲ್ಲಿ ಅಸ್ತಿತ್ವಕ್ಕೆ ತರಲಾಯಿತು. ಅತ್ಯಂತ ಜನಪ್ರಿಯವಾದ ಅನೇಕ ಪತ್ರಿಕೆಗಳು ತಮ್ಮ ಸಂಪಾದಕೀಯ ಮತ್ತು ಇತರ ವರದಿಗಳ ಮೂಲಕ ಕಮ್ಯುನಿಸ್ಟ್ ನೇತೃತ್ವದ ಸರ್ಕಾರದ ವಿರುದ್ಧ ವಿಷಪೂರಿತ ಕಥೆಗಳನ್ನು ಪ್ರಕಟಿಸಿ, ಸರ್ಕಾರದ ಜನಪರ ಆಡಳಿತವನ್ನು ನಿಂದಿಸಿ, ಸರ್ಕಾರದ ವಿರುದ್ಧದ ಭಾವನೆಗಳನ್ನು ಹುಟ್ಟುಹಾಕಿದವು. ಆದರೆ ಹೆಚ್ಚಿನ ರಾಷ್ಟ್ರೀಯ ಪತ್ರಿಕೆಗಳು ಈ ದಿನಗಳಲ್ಲಿ, ತಮ್ಮ ಸಂಪಾದಕೀಯ ಮತ್ತು ವರದಿಗಳಲ್ಲಿ ವಿವೇಕಪೂರ್ಣವಾದ ನಿಷ್ಪಕ್ಷಪಾತವನ್ನು ಕಾಪಾಡಿಕೊಂಡಿತು

ನಾಗರಿಕ ಸಮಾಜದಲ್ಲಿ ಸಾಮಾನ್ಯ ಜನರಿಗೆ ಉತ್ತಮ ಜೀವನ ಸಂದರ್ಭಗಳನ್ನು ಮುಖ್ಯವಾಗಿಸುವ ಗುರಿಗೆ ಆದ್ಯತೆ ನೀಡುವ ಮೂಲಕ 1957ರ ಕಮ್ಯುನಿಸ್ಟ್ ಸರ್ಕಾರವು ಕಡಿಮೆ ಅವಧಿಯಲ್ಲಿ ಅನೇಕ ಕಾನೂನುಗಳು, ನಿಯಮಗಳು ಮತ್ತು ಆಡಳಿತ ಸುಧಾರಣಾ ಕ್ರಮಗಳನ್ನು ಜಾರಿಗೆ ತಂದಿತು. ವಿಳಂಬವಿಲ್ಲದೆ ಒಂದರ ನಂತರ ಒಂದರಂತೆ ಪರಿಚಯಿಸಲಾದ ಕಾನೂನುಗಳು, ನಿಯಮಗಳು ಮತ್ತು ಕ್ರಮಗಳು ಕೇರಳ ಸಮಾಜದಲ್ಲಿ ಬಹಳ ಕಾಲಗಗಳಿಂದಲೂ ಅಸ್ತಿತ್ವದಲ್ಲಿರುವ ಕೆಲವು ಮೂಲಭೂತ ಸಂಬಂಧಗಳನ್ನು ಕೆಡವಲಾದವು. ಕೃಷಿ ವಲಯದಲ್ಲಿ ಭೂಮಾಲೀಕ ಮತ್ತು ಗೇಣಿದಾರರ ಸಂಬಂಧಗಳು, ಕೈಗಾರಿಕಾ ಉತ್ಪಾದನೆಯಲ್ಲಿ ಬಂಡವಾಳಶಾಹಿ-ಕಾರ್ಮಿಕ ಸಂಬಂಧಗಳು, ಶಿಕ್ಷಣ ವಲಯದಲ್ಲಿ ವ್ಯವಸ್ಥಾಪಕ ಅಥವಾ ಮೇನೆಜ್ಮೆಂಟ್-ಶಿಕ್ಷಕರ

ಸಂಬಂಧಗಳು ಮತ್ತು ಕಾನೂನು ಮತ್ತು ಸುವ್ಯವಸ್ಥೆ ವಲಯದಲ್ಲಿ ಪೊಲೀಸ್ ಮತ್ತು ಸಾಮಾನ್ಯ ಜನರ ನಡುವಿನ ಸಂಬಂಧಗಳನ್ನು ಸಂಪೂರ್ಣವಾಗಿ ಕೆಡವಿ, ಹೊಸತುಗಳನ್ನು ಮರುಸೃಷ್ಟಿಸಲಾದವು. ಅಸ್ತಿತ್ವದಲ್ಲಿರುವ ಯಜಮಾನ-ಗುಲಾಮ ಎನ್ನುವ ದ್ವಂದ್ವವನ್ನು ಕೆಡವಲು ಮಾಡಿದ ಪ್ರಯತ್ನಗಳೆಲ್ಲವೂ ಕಾಲ ಕಾಲಗಳಿಂದ ಅಧಿಕಾರಗಳನ್ನು ಹೆಚ್ಚಿಸಿಕೊಂಡು ಬರುತ್ತಿದ್ದ ಆಳುವವರ್ಗಕ್ಕೆ ಭಾರಿ ಆಘಾತವನ್ನುಂಟು ಮಾಡಿದ್ದವು. ತಮ್ಮ ವಿಶೇಷ ಅಧಿಕಾರ, ಸವಲತ್ತುಗಳು, ಹಿತಾಸಕ್ತಿಗಳು, ಸ್ಥಾನಮಾನಗಳು, ಅಸ್ತಿತ್ವವು ಕೂಡ, ಸರ್ಕಾರದ ಇಂತಹ ನಡೆಗಳಿಂದಾಗಿ ಕುಸಿದು ಬೀಳಬಹುದೇನೋ ಎಂದು ಅವರು ಹೆದರಿದ್ದರು. ಸರ್ಕಾರದ ಕ್ರಮಗಳು ಸಾಮಾನ್ಯ ಜನರ ಜೀವನ ಗುಣಮಟ್ಟ ಸುಧಾರಿಸಿದಾಗ, ಅದು ಶ್ರೀಮಂತವರ್ಗಕ್ಕೆ ಹಾನಿಯನ್ನುಂಟು ಮಾಡುತ್ತಿತ್ತು. ವಿವಿಧ ಕ್ಷೇತ್ರಗಳಲ್ಲಿ ತಲೆಮಾರುಗಳಿಂದ ಪ್ರಾಬಲ್ಯ ಹೊಂದಿದ್ದ ಗಣ್ಯರ ವಿಶೇಷಾಧಿಕಾರಗಳು, ಸವಲತ್ತುಗಳು ಅಪ್ರಸ್ತುತವಾಗುವ ಪರಿಸ್ಥಿತಿಯಲ್ಲಿ, ಅವರು ಸರ್ಕಾರವನ್ನು ಹೊರಹಾಕಲು ಅಗತ್ಯವಿರುವ ಅನುಕ್ರಮ ನಡೆಗಳನ್ನು (Lin up moves) ಬಲಪಡಿಸಿದರು.

ಕಮ್ಯುನಿಸ್ಟ್ ಪಕ್ಷದ ಚಟುವಟಿಕೆಗಳು, ಸರ್ಕಾರದ ಕಾನೂನು-ನಿರ್ಮಾಣ-ಆಡಳಿತ ಸುಧಾರಣಾ ಕಾರ್ಯವಿಧಾನಗಳು, ಕೇರಳದಲ್ಲಿ ಅಸ್ತಿತ್ವದಲ್ಲಿದ್ದ ಸಾಮಾಜಿಕ ತಾರತಮ್ಯದ ಗಡಿರೇಖೆಗಳು, ಸಮಾಜದೊಳಗಿನ ಬೇಲಿಗಳೇ ಮುಂತಾದವುಗಳನ್ನು ಕೆಡವುದರ ಮೂಲಕ ಸಾಮಾನ್ಯ ಜನರಲ್ಲಿ ಸ್ವಾಭಿಮಾನವನ್ನು ಮೇಲಕ್ಕೆತ್ತಿ ಹಿಡಿಯಲಾಯಿತು. ಗುಲಾಮರು, ಕೆಳವರ್ಗದವರು, ದೀನದಲಿತರು ಬಡವರು ಮುಂತಾದವರೆಲ್ಲರೂ ಎಲ್ಲಾ ಕಾಲಗಳಲ್ಲೂ ಯಥಾಸ್ಥಿಯನ್ನು ಉಳಿಸಿಕೊಂಡು ಬರಬೇಕಾದವರೆಲ್ಲವೆಂದೂ ತಾವೆಲ್ಲರೂ ಇತರರಿಗೂ ಸಮಾನರೂ ಎನ್ನುವ ಪ್ರಜ್ಞೆ, ತೋಟ/ಎಸ್ಟೇಟ್ ಕಾರ್ಮಿಕರು, ಕೈಗಾರಿಕೆ-ಕೃಷಿಕಾರ್ಮಿಕರು, ಶಿಕ್ಷಕವರ್ಗದವರು, ವಿವಿಧ ಕುಶಲಕರ್ಮಿಗಳ ಉದ್ಯೋಗಗಳಲ್ಲಿ ತೊಡಗಿಕೊಂಡವರೆಲ್ಲರೆಲ್ಲೂ ತುಂಬಿ ತುಳುಕಾಡುತ್ತಿತ್ತು. ಅದು ಶ್ರೀಮಂತವರ್ಗವನ್ನು ಭಯಾನಕವಾದ ವಿಧದಲ್ಲಿ ಕಾಡುತ್ತಿರುವ ಭಯದ ಸಂಗತಿಯಾಗಿತ್ತು. ಜಾತಿ-ಜಮೀನುದಾರ-ಊಳಿಗಮಾನ್ಯ ವ್ಯವಸ್ಥೆಯ ಪ್ರಾಬಲ್ಯದಿಂದಾಗಿ ಆಳಲ್ಪಟ್ಟಿದ್ದ ಕೇರಳದ ಸಮಾಜಕ್ಕೆ, ಸಾಮಾನ್ಯ ಜನರ ಪ್ರಜ್ಞಾವಲಯದಲ್ಲಿ ಯಥಾಸ್ಥಿತಿವಾದದ್ದೂ ಮಾನವೀಯತೆಯದ್ದೂ ಆದ ಪ್ರಭಾವದ ತರಂಗಗಳಿಗೆ ರೂಪಕೊಡುವುದಕ್ಕಾಗಿ ಇಎಂಎಸ್ ಸರ್ಕಾರಕ್ಕೆ ಸಾಧ್ಯವಾಯಿತು ಎನ್ನುವುದು ಒಂದು ಮಹತ್ತಾದ ಸಂಗತಿಯೇ ಸರಿ.

ವಿಭಿನ್ನ ಹಿತಾಸಕ್ತಿಗಳನ್ನು ಹೊಂದಿರುವ ಜಾತಿ/ಸಮುದಾಯ ಸಂಘಟನೆಗಳು, ಒತ್ತಡಗುಂಪುಗಳು (Pressure Group), ಸ್ಥಾಪಿತ ಪಟ್ಟಭದ್ರ ಹಿತಾಸಕ್ತಿಗಳು, ರಾಜಕೀಯ ವಿರೋಧಪಕ್ಷಗಳು; ಬಹುತೇಕ ಪತ್ರಿಕೆಗಳು, 'ಕಮ್ಯುನಿಸ್ಟ್ ಸರ್ಕಾರವನ್ನು ತೊಲಗಿಸಿ' ಎನ್ನುವ ಏಕೈಕ ಅಜೆಂಡಾದ ಅಡಿಯಲ್ಲಿ ಒಟ್ಟುಗೂಡಿದ್ದರ ಮೂಲ ಕಾರಣಗಳಲ್ಲೊಂದು, ಸರ್ಕಾರದ ಕಾರ್ಯತಂತ್ರದ ಕೊರತೆಯಾಗಿತ್ತು. ವಿಶಾಲ

ಉದ್ದೇಶಗಳಿಗೆ ಪೂರಕವಾಗಿದ್ದ ಆಡಳಿತ-ಕಾನೂನು ನಿರ್ಮಾಣ ಕ್ರಮಗಳನ್ನು ಅನುಷ್ಠಾನಗೊಳಿಸುವ ಪ್ರಯತ್ನಗಳಲ್ಲಿ ಉಂಟಾದ ವಿಫಲತೆ, ತಪ್ಪು ನಿರ್ವಹಣೆ, ಅತಿಯಾದ ಉತ್ಸಾಹ ಮುಂತಾದವು ಸರ್ಕಾರಕ್ಕೆ ದೋಷಕರವಾಗಿ ಪರಿಣಮಿಸಿತು. ಅವರು ಸಾಂವಿಧಾನಿಕ ಚೌಕಟ್ಟಿನೊಳಗೆ, ಕೇರಳದಲ್ಲಿ ಮೂಲಭೂತ ಬದಲಾವಣೆಗಳನ್ನು ತರಲು ಪ್ರಾಮಾಣಿಕವಾಗಿ ಪ್ರಯತ್ನಿಸಿದಾಗ, ಇದ್ದಕ್ಕಿದ್ದಂತೆ ಮೇಲೆದ್ದು ಬಂದ, ವಿರೋಧದ ವ್ಯಾಪ್ತಿ ಮತ್ತು ತೀವ್ರತೆಯನ್ನು ಮುಂಗಡವಾಗಿ ಅರ್ಥಮಾಡಿಕೊಳ್ಳಲೋ ಸಾಕಷ್ಟು ಗೃಹಪಾಠ (Home work) ಮಾಡಿಕೊಳ್ಳಲೋ ಸರ್ಕಾರಕ್ಕೆ ಸಾಧ್ಯವಾಗಲಿಲ್ಲ. ಎದುರಾಳಿಗಳ ಶಕ್ತಿ, ಮೂಲ, ಸಂಪನ್ಮೂಲ ಕ್ರೋಢೀಕರಣಗಳ ಬಗ್ಗೆ, ಧಾರ್ಮಿಕ ಶಕ್ತಿಗಳು, ಭಕ್ತರ/ವಿಶ್ವಾಸಿಗಳ ಸಾಮರ್ಥ್ಯ ಮತ್ತು ದೌರ್ಬಲ್ಯಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಸರ್ಕಾರದ ವಿರುದ್ಧ ತಿರುಗಿಸಿ, ದಿಕ್ಕು ತಪ್ಪಿಸುವುದರ ಬಗ್ಗೆ, ಗಂಭೀರವಾಗಿ ಅಥವಾ ಒಳನೋಟದಿಂದ ನಿರ್ಣಯಿಸಲು ಕಮ್ಯುನಿಸ್ಟ್ ಪಕ್ಷ ಮತ್ತು ಸರ್ಕಾರಕ್ಕೆ ಸಾಧ್ಯವಾಗಲಿಲ್ಲ. ಸರ್ಕಾರದ ಕ್ರಮಗಳಲ್ಲಿ ಪ್ರಾಮಾಣಿಕತೆಯನ್ನು ತಿರಸ್ಕರಿಸುವ ಮೂಲಕ ಸರ್ಕಾರದ ವಿರುದ್ಧ, ವಿವಿಧ ಹಿತಾಸಕ್ತಿಗಳ ವಿವಿಧ ಶಕ್ತಿಗಳು ಒಟ್ಟುಗೂಡಿ ಎದುರಿಸುವಾಗ, ಅವರ ನಡುವಿನ ವೈರುಧ್ಯಗಳ ಲಾಭವನ್ನು ಪಡೆದುಕೊಳ್ಳುವ ಕುಟಿಲತಂತ್ರಗಾರಿಕೆಯು ಪ್ರಚಾರದಲ್ಲಿಲ್ಲದ ಕಾಲದಲ್ಲಿ, ಕಮ್ಯುನಿಸ್ಟ್ ಪಕ್ಷಕ್ಕೆ ಸಾಧ್ಯವಾಗದಿರುವುದು ಕಾರ್ಯತಂತ್ರದ ವೈಫಲ್ಯವೇ ಸರಿ. 'ಹಿಂದುಳಿದ''ಮುಂದುವರಿದ' ಎನ್ನುವುದರ ವ್ಯತ್ಯಾಸವಿಲ್ಲದೆ ಜಾತಿ/ಸಮುದಾಯದ ಮುಖಂಡರು, ವಿವಿಧ ಚರ್ಚ್ ಮುಖ್ಯಸ್ಥರು, ದೇವಸ್ಥಾನದ ಕೆಲಸದವರು, ಸ್ವಾಮಿ-ಮೌಲ್ವಿಗಳು, ಬಂಡವಾಳಶಾಹಿಗಳು, ಜಮೀನುದಾರರು, ಊರಿನ ಮುಖ್ಯಸ್ಥರು, ಶಾಲಾ ವ್ಯವಸ್ಥಾಪಕರು/ಮೇನೆಜ್ಮೆಂಟಿನವರು ಮುಂತಾದವರೆಲ್ಲರೂ ಅಸಾಧಾರಣವಾದ ಒಗ್ಗಟ್ಟನ್ನು ಪ್ರದರ್ಶಿಸಿ, ಸರ್ಕಾರದ ವಿರುದ್ಧ ಅವಿರತ ಹೋರಾಟ ಆರಂಭಿಸಿದ್ದು, ಕೇರಳದ ವಿಶಿಷ್ಟವಾದ ಸಾಮಾಜಿಕ ಮತ್ತು ರಾಜಕೀಯ ಅನಿಶ್ಚಿತತೆಗೆ ಕಾರಣವಾಯಿತು. ಆಡಳಿತಾತ್ಮಕ ಅನುಭವದ ಕೊರತೆಯಿಂದಾಗಿ, ಸಂಪೂರ್ಣವಾಗಿ ವಸ್ತುನಿಷ್ಠ ಉದ್ದೇಶಗಳೊಂದಿಗೆ ಆಡಳಿತ ನಡೆಸುತ್ತಿದ್ದ ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಸರ್ಕಾರದ ವಿರೋಧಿಗಳು, ಸೃಷ್ಟಿಸಿದ ಅತ್ಯಂತ ಪ್ರಚೋದನಕಾರಿ ಪರಿಸ್ಥಿತಿಗಳಲ್ಲಿ, ಸರ್ಕಾರ ಸಂಯಮದಿಂದ ವರ್ತಿಸಿ ನೆಲೆಗೊಂಡ ಸಂಗತಿ ಗಮನಾರ್ಹವಾದದ್ದು.

ಜಾತಿ ಮತ್ತು ಧರ್ಮಗಳು, ಇಲ್ಲಿನ ಜನರ ಜೀವನದ ಮೇಲೆ ಯಾವುದೆಲ್ಲ ರೀತಿಗಳಲ್ಲಿ ಪ್ರಭಾವ ಬೀರುತ್ತದೆ ಎನ್ನುವುದರ ಬಗ್ಗೆ, ಅನ್ವೇಷಣೆಗಳ/ಹುಡುಕಾಟವೆನ್ನುವುದು ಎಲ್ಲಾ ಕಾಲಗಳಿಗೂ ಪ್ರಸ್ತುತವಾಗಿವೆ. ನಂಬಿಕೆ ಮತ್ತು ಆಚರಣೆಗಳು ಅಪಾಯದಲ್ಲಿವೆಯೆಂದೂ ಪೂಜಾ ಸ್ಥಳಗಳು, ಧಾರ್ಮಿಕ ಸಂಸ್ಥೆಗಳು ಕೂಡ ಮುರಿದುಬೀಳುತ್ತವೆಯೆಂದೂ ಆದರಿಂದಾಗಿ, ಅವುಗಳೆಲ್ಲವನ್ನೂ ಸಂರಕ್ಷಿಸಲು, ಕಮ್ಯುನಿಸ್ಟ್ ಪ್ರಭುತ್ವದ ವಿರುದ್ಧ ಹೋರಾಟ ನಡೆಸುವುದು, ಪರಲೋಕದ ಮೋಕ್ಷಕ್ಕಾಗಿ ಕೂಡ ಅನಿವಾರ್ಯವಾದದ್ದು ಎಂಬ ಧಾರ್ಮಿಕ ಅಪಪ್ರಚಾರದಿಂದ, ಧಾರ್ಮಿಕ ಶಕ್ತಿಗಳ/ಪುರೋಹಿತ ಮುಖ್ಯಸ್ಥರ

ಮನವೊಲಿಸುವ ಚಟುವಟಿಕೆಗಳು, ಭಕ್ತರ/ನಂಬಿಕಸ್ಥ ಜನಸಾಮಾನ್ಯರನ್ನು ಪ್ರಬಲವಾಗಿ ಪ್ರಭಾವಿಸಿತು. ಅದೇ ಸಮಯದಲ್ಲಿ, ಸರ್ಕಾರವನ್ನು ಅಧಿಕಾರಕ್ಕೆ ತಂದ ಸಾಮಾನ್ಯ ಜನರ ಕಾರ್ಯನಿರ್ವಹಣಾ ಸಾಮರ್ಥ್ಯವನ್ನು, ವಿರೋಧಿಗಳ ಆಕ್ರಮಣಕಾರಿ ನಕಾರಾತ್ಮಕ ಹಿತಾಸಕ್ತಿಗಳಿಗೆ ವಿರುದ್ಧ ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ಸರ್ಕಾರಕ್ಕೆ ಸಾಧ್ಯವಾಗಲೂ ಇಲ್ಲ.

ಅಧಿಕಾರವು ಯಾರನ್ನಾದರೂ ಭ್ರಷ್ಟರನ್ನಾಗಿಸುತ್ತದೆ, ಎನ್ನುವ ನಾಣ್ಣುಡಿಯನ್ನು ಅನ್ವರ್ಥಗೊಳಿಸುವ ವಿಧದ ಕೆಲವು ಪ್ರವೃತ್ತಿಗಳೂ ಉಲ್ಲೇಖಾರ್ಹವೆನಿಸುತ್ತದೆ. ಅ ಸಂಸದೀಯ ಸಂಸ್ಥೆಗಳ ಆಕರ್ಷಕ ಅನುಕೂಲತೆಗಳನ್ನು ಅನುಭವಿಸಿಕೊಂಡು ಬರುತ್ತಿದ್ದ ಕೆಲವರಾದರೂ ಸಂಸದೀಯ ಭ್ರಮೆಗಳ ಪ್ರಭಾವಕ್ಕೆ ಒಳಗಾಗಿದ್ದರು. ಆದರಿಂದಾಗಿ, ಜನರ ಮಧ್ಯೆ ನಿರಂತರವಾಗಿ ನಡೆಸಬೇಕಾಗಿದ್ದ ಕೆಲಸಕಾರ್ಯಗಳು, ಅನೇಕ ಸಂದರ್ಭಗಳಲ್ಲಿ ದುರ್ಬಲಗೊಂಡುಬಿಟ್ಟವು. ಸರ್ಕಾರದ ನೀತಿ ಕಾರ್ಯಕ್ರಮಗಳ ಉದ್ದೇಶಿತ ಗುರಿಗಳ ಕುರಿತೂ ಅವುಗಳು ಮೂಲಭೂತ ಜನವಿಭಾಗದ ಜೀವನ ಪರಿಸ್ಥಿತಿಗಳಲ್ಲಿ ಉಂಟುಮಾಡುವ ಗುಣಾತ್ಮಕ ಬದಲಾವಣೆಗಳ ಕುರಿತೂ, ಆ ಮೂಲಕ ಸಮಾಜದಲ್ಲಿ ಉಂಟಾಗುವ ಪ್ರಗತಿಯ ಕುರಿತೂ ನಾಗರಿಕಸಮಿತಿಯಲ್ಲಿ ನಿರಂತರ ಪ್ರಚಾರ ಕಾರ್ಯಗಳನ್ನು ನಡೆಸುವಲ್ಲಿ ಉಂಟಾದ ಜಾಗರೂಕತೆಯ ಕೊರತೆಯು ಹಾನಿಕರವಾಗಿ ಪರಿಣಮಿಸಿತು.

ಕೇರಳ ಸಮಾಜದಲ್ಲಿ ವಿಮೋಚನಾ ಹೋರಾಟವು ನಿರಂತರವಾಗಿ ರಾಜಕೀಯ ಚರ್ಚೆ ಮತ್ತು ಸಂವಾದಗಳಿಗೆ ಅವಕಾಶಮಾಡಿಕೊಟ್ಟಿತು. ಹಾಗೆಯೇ ಜಾತಿ–ಧರ್ಮ–ಬಣ್ಣ–ವರ್ಗ–ವಯಸ್ಸು–ಲಿಂಗ, ನಗರ–ಗ್ರಾಮೀಣ–ಪ್ರಾದೇಶಿಕ ಎಂಬ ಭೇದ ಮತ್ತು ಪರಿಗಣನೆಗಳ ಪ್ರಭಾವಗಳಿಗೊಳಗಾಗದೆ, ಕೇರಳದ ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಬಲಪಡಿಸುವ ಪ್ರಕ್ರಿಯೆಯಲ್ಲಿ ಒಂದು ನಿಮಿತ್ತವಾಗಿ ಪರಿಣಮಿಸಿತು. ನಂತರದ ಕೇರಳ ರಾಜಕೀಯವನ್ನು ಆವರಿಸಿಕೊಂಡ ಅನೇಕ ಅನಿಷ್ಟ ಪ್ರವೃತ್ತಿಗಳು ಮೊಳೆತುಕೊಂಡಿದ್ದು, ಇದೇ ವಿಮೋಚನಾ ಹೋರಾಟದ ಮೂಲಕವೇ ಆಗಿತ್ತು. ಅದರಲ್ಲಿ ಅತ್ಯಂತ ಪ್ರತಿಗಾಮಿಯಾಗಿದ್ದು, ಧಾರ್ಮಿಕ ಮೂಲಭೂತವಾದಿ ಶಕ್ತಿಗಳಿಗೂ ಜಾತಿ/ಸಮುದಾಯದ ನಾಯಕರಿಗೂ ರಾಜಕೀಯ ವಲಯದಲ್ಲಿ ದೊರಕಿದ ಪ್ರಾಮುಖ್ಯತೆಯಾಗಿತ್ತು. ಆಡಳಿತ ಮತ್ತು ವಿರೋಧ ಪಕ್ಷಗಳ ನಡುವೆ ಆರೋಗ್ಯಕರ ಪರಸ್ಪರ ಗೌರವದಿಂದ ಟೀಕೆ ಮತ್ತು ಬಹಿರಂಗ ಪ್ರತಿಭಟನೆಗಳಿಗೆ ಬದಲಾಗಿ, ಹುಟ್ಟಿಕೊಂಡಿದ್ದು ಅಸಹಿಷ್ಣುತೆ, ಹಗೆತನ ಮತ್ತು ದ್ವೇಷದ ರಾಜಕಾರಣ. ಅದಕ್ಕೆ ಅವಕಾಶ ಮಾಡಿಕೊಟ್ಟಿದ್ದು ಮಾತ್ರ, ಜಾತಿ ಮತ್ತು ಧಾರ್ಮಿಕ ಕೋಮು ಶಕ್ತಿಗಳ ಅನುಚಿತ ಪ್ರಭಾವ. ವಿಮೋಚನಾ ಹೋರಾಟದಿಂದಾಗಿಯೇ ಜಾತಿ/ಸಮುದಾಯದ ನಾಯಕರು ಕೆಲವು ರಾಜಕೀಯ ಪಕ್ಷಗಳ ನಾಯಕತ್ವವನ್ನು ತಮ್ಮ ಇಚ್ಛಾನುಸಾರವಾಗಿ ನಿಯಂತ್ರಿಸುವ ಶಕ್ತಿಯನ್ನು ಪಡೆದುಕೊಂಡಿದ್ದು. ಕ್ರಿಶ್ಚಿಯನ್ ಚರ್ಚ್ ನಾಯಕರ, ನಾಯರ್–ಈಳವ/ಈಡಿಗ–ಮುಸ್ಲಿಂ ನಾಯಕರ ಹಿಡಿತಕ್ಕೆ

ಸಿಕ್ಕಿಕೊಂಡ ಕೆಲವು ರಾಜಕೀಯ ಪಕ್ಷಗಳಿಗೆ ತಮ್ಮ ನೈತಿಕ ರಾಜಕೀಯಕ್ಕೆ ಅನೇಕ ಸಲ ಕುಂದುಂಟುಮಾಡಿತು. ವಿಮೋಚನಾ ಹೋರಾಟ ಫಲದಿಂದಾಗಿಯೇ ಕೆಲವು ರಾಜಕಾರಣಿಗಳು ಕೋಮುಶಕ್ತಿಗಳ ಬೆಂಬಲ ಪಡೆದುಕೊಂಡಿದ್ದು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪ್ರಬಲ ಸಮುದಾಯಗಳು, ಭಾವಿಸಿದಾಗಲೆಲ್ಲ ಕೆಲವು ಮೈತ್ರಿ ರಂಗದ ಸರ್ಕಾರಗಳಿಗೆ, ಕೆಟ್ಟ ಸಂಪ್ರದಾಯಗಳನ್ನು ಸೃಷ್ಟಿಸುವುದಕ್ಕೂ ಕೋಮು ಶಕ್ತಿಗಳ ಧ್ರುವೀಕರಣಕ್ಕೂ ಕಾರಣಗಳಾಗಿವೆ. ಸ್ಥಾಪಿತ ಹಿತಾಸಕ್ತಿಯ ಮಾಧ್ಯಮಗಳ ಅವಕಾಶವಾದಿ ವರ್ತನೆ ಮತ್ತು ಬೆಂಬಲಗಳು, ಇದಕ್ಕೆ ವೇಗವರ್ಧಕವಾಗಿ ಕಾರ್ಯನಿರ್ವಹಿಸುತ್ತಿದೆ. ಇಂತಹ ಪ್ರತಿಗಾಮಿ ಚಟುವಟಿಕೆಗಳನ್ನು ಎದುರಿಸುವ ಛಲವನ್ನು ಎಡಪಕ್ಷಗಳು ಉಳಿಸಿಕೊಂಡಿವೆ ಎಂಬುದು ಸತ್ಯದ ಸಂಗತಿಯಾಗಿದೆ.

ಕೇರಳದ ಸಾಂಸ್ಕೃತಿಕ ರಂಗವನ್ನು ಕಲ್ಮಶಗೊಳಿಸಿದ ಕೆಲವು ಕೆಟ್ಟ ಪ್ರವೃತಿಗಳು ಸಹ ಈ ವಿಮೋಚನಾ ಹೋರಾಟದ ಒಂದು ಭಾಗವಾಗಿದ್ದವು. ಕರಪತ್ರಗಳು, ನೋಟಿಸುಗಳು, ಹಾಡಿನ ಪುಸ್ತಕಗಳು, ನಾಟಕಗಳು, ಅಸಭ್ಯ ಬರಹಗಳು, ಅಶ್ಲೀಲತೆ ಮತ್ತು ಸುಳ್ಳು ಪ್ರಚಾರಗಳು, ಭಾಷಣ, ಘೋಷಣೆಗಳ ರೂಪದಲ್ಲಿ ವೇದಿಕೆ ಪಡೆದುಕೊಂಡವು. ನೈತಿಕತೆಯನ್ನು ಬೋಧಿಸಿದವರು ತಮ್ಮ ನಂಬಿಕೆ ಮತ್ತು ಆಚರಣೆಗಳನ್ನು ಉಳಿಸಿಕೊಳ್ಳಲು ಆಧ್ಯಾತ್ಮಿಕ ಮಾರ್ಗಕ್ಕೆ ತಮ್ಮ ಜೀವನವನ್ನು ಮುಡಿಪಾಗಿಟ್ಟವರೆಂದೂ ಸದ್ಮಾರ್ಗಗಳನ್ನು ಆಚರಿಸುವವರೆಂದೂ ನಟಿಸುವ ಮತ್ತು ಅದರ ಹೆಸರಿನಲ್ಲಿ, ಬಿಸಿಲುಕಾಯಿಸಿಕೊಳ್ಳುವುದನ್ನೇ ಮಾಡುತ್ತಿದ್ದ ಧಾರ್ಮಿಕ ಸಮುದಾಯ ಪ್ರಮುಖರ ಪ್ರಭಾವದಿಂದಾಗಿಯೇ ಅಲ್ಲವೇ ಮುಷ್ಕರವನ್ನು ಕೊಂಡಾಡುತ್ತಾ ಇದ್ದಿದ್ದು. ಸಭ್ಯತೆಯ ಎಲ್ಲಾ ಗಡಿಗಳನ್ನು ಮೀರಿದ ಪಾಪರಾಜಿ/ಪಾಪರಾಸಿ ಬರಹಗಳು, ಅಶ್ಲೀಲತೆಯ ಅತಿಪ್ರಸರವಿದ್ದ ಘೋಷಣೆಗಳನ್ನು ಸಂಭ್ರಮಿಸಿದ್ದೆಲ್ಲವೂ ಆಧ್ಯಾತ್ಮಿಕತೆಯ ಕವಚದಲ್ಲಿರುವ ಜಾತಿ, ಧರ್ಮಗಳ ಮುಖಂಡರ ಆಶೀರ್ವಾದಿಂದಲೇ ನಡೆದಿದ್ದವು. ಈ ಹಂತದಲ್ಲಿ ವಿಪರ್ಯಾಸಕರವಾದ ವಿಚಾರವೆನ್ನುವುದು, ಪ್ರತಿಭಾಶಾಲಿಗಳಾದ ಒಂದಷ್ಟು ಅದ್ಭುತ ಚಿಂತಕರು ಮತ್ತು ಬರಹಗಾರರು ಈ ಕಮ್ಯುನಿಸ್ಟ್ ವಿರೋಧಿ ಆಂದೋಲನದ ಭಾಗವಾಗಿದ್ದು. ಅವರ ಬರಹಗಳು/ರಚನೆಗಳು, ಕಾರ್ಯ ಚಟುವಟಿಕೆಗಳು ವಿಮೋಚನಾ ಹೋರಾಟಗಾರರ ಚಟುವಟಿಕೆಗಳಿಗೆ ಒಂದು ಪರಿಧಿಯವರೆಗಾದರೂ ಅಧಿಕೃತತೆಯ ಮತ್ತು ಗೌರವದ ಮುಸುಕನ್ನೂ ಹೊದ್ದುಕೊಳ್ಳುವುದಕ್ಕೆ ಸಾಧ್ಯವಾಗಿಸಿತು. ಸಾಂಸ್ಕೃತಿಕ ವಲಯದಲ್ಲಿ 'ಸತ್ಯೋತ್ತರ'ದ ಮುಂಚೂಣಿಯಲ್ಲಿರಲು ನಿಯೋಜಿಸಲ್ಪಟ್ಟ ಅವರಲ್ಲಿ ಅನೇಕರು ಸೃಜನಶೀಲ ಕೃತಿಗಳು ಸಾಹಿತ್ಯಿಕ ಮೌಲ್ಯವನ್ನು ಪಡೆದುಕೊಂಡು ಮುಂಚೂಣಿಯಲ್ಲಿದ್ದರು. ಅವರಲ್ಲಿ ಕೆಲವು ಬರಹಗಾರರು ಕಾಲಕ್ಕೆ ತಕ್ಕಂತೆ ಬದಲಾವಣೆಗಳಿಗೂ ಒಳಗಾದರು. ಮತ್ತು ಕಮ್ಯುನಿಸ್ಟ್ ಸರ್ಕಾರದ ವಿರುದ್ಧ ಬರೆದು, ಉಪನ್ಯಾಸ ನೀಡಿದ ಅಂತಹ ಬರಹಗಾರರು, ಸಾಂಸ್ಕೃತಿಕ ಕಾರ್ಯಕರ್ತರು ವಿಮೋಚನಾ ಹೋರಾಟದ ನಂತರ ಬಲಪಂಥೀಯರ ಕಾರ್ಯಸೂಚಿಯಲ್ಲಿ ತಮ್ಮ ಸ್ಥಾನವನ್ನು

ಕಳೆದುಕೊಂಡರು. ಅನೇಕ ಸಾಹಿತಿಗಳು, ಸಾಂಸ್ಕೃತಿಕ ಕಾರ್ಯಕರ್ತರಲ್ಲಿ ಅನೇಕರಿಗೆ ತಮ್ಮ ಪೂರ್ವಕಾಲದ ಭ್ರಮೆಗಳ ಕುರಿತು, ಹಿಂದಿನ ನಿಲುವುಗಳ ಕುರಿತು, ಉಂಟಾದ ಮರುಚಿಂತನೆಗಳಿಂದಾಗಿರಬೇಕು, ಕ್ರಮೇಣ ಎಡಪಂಥೀಯ ಪ್ರಗತಿಪರ ಚಳುವಳಿಗಳ ಸಹ-ಪ್ರಯಾಣಿಕರಾಗಿ ಸಂಚರಿದ್ದನ್ನೂ ಕೇರಳಕ್ಕೆ ನೋಡಲು ಸಾಧ್ಯವಾಯಿತು.

ಸಾರ್ವಜನಿಕವಾದ ಕಲ್ಯಾಣಕರವಾದ ಆಡಳಿತ ಕ್ರಮಗಳನ್ನೂ ಪ್ರಜಾಪ್ರಭುತ್ವ ವ್ಯವಸ್ಥೆಯನ್ನೂ ಜನರ ಗುಂಪು ಹಿಂಸಾಚಾರಗಳಿಂದ ದುರ್ಬಲಗೊಳಿಸುವುದಕ್ಕೂ ಮತ್ತು ನಿಷ್ಪರಿಣಾಮಗೊಳಿಸುವುದಕ್ಕೂ ಸಾಧ್ಯವಾಗುತ್ತದೆ, ಎನ್ನುವ ವಿಚಾರ ವಿಮೋಚನಾ ಹೋರಾಟದಿಂದ ಬಹಿರಂಗಗೊಂಡಿತು. ಸಾಮಾನ್ಯ ಜನರಿಗೆ ಪ್ರಯೋಜನಕಾರಿಯಾಗುವ ಆಡಳಿತಾತ್ಮಕ ಕ್ರಮಗಳು, ತಮ್ಮ ಪಟ್ಟಭದ್ರ ಹಿತಾಸಕ್ತಿಗಳಿಗೆ ಹಾನಿಕಾರಕವಾಗುತ್ತದೆಯೆಂದು ಅವರು ಅರಿತುಕೊಂಡಾಗ, ಆ ಆಡಳಿತಾತ್ಮಕ ಕ್ರಮಗಳನ್ನು ಮಾತ್ರವಲ್ಲ, ಅವುಗಳನ್ನು ತಂದಂಥ ಸರ್ಕಾರವನ್ನೇ ನಾಶಗೊಳಸಲು, ಆ ಸರ್ಕಾರ ರಚಿಸಿದ ಸಾಂವಿಧಾನಿಕ ವ್ಯವಸ್ಥೆಯನ್ನು ಸಹ ಅಗೌರವಿಸುವ ನಡೆಗಳು ಸಹ ವಿಮೋಚನಾ ಹೋರಾಟಗಾರರಿಂದ ನಡೆಸಲ್ಪಟ್ಟವು. ಆಡಳಿತಾತ್ಮಕ ಪ್ರಕ್ರಿಯೆಗಳ ಫಲಾನುಭವಿಗಳ ಒಂದು ಗಣನೀಯ ವಿಭಾಗವನ್ನೇ ವಿಧ್ವಂಸಕ ಚಟುವಟಿಕೆಗಳಿಗಾಗಿ ಬಳಸಲು ಸಾಧ್ಯವಾಯಿತು, ಎನ್ನುವುದಾಗಿತ್ತು ಹೋರಾಟಗಾರರ ಮತ್ತೊಂದು ಹಿರಿಮೆ. ಅಧಿಕಾರಶಾಹಿವರ್ಗ ಮತ್ತು ಪೊಲೀಸರು ಸರ್ಕಾರದ ಸಾಧನಗಳಾಗಿದ್ದರೂ ಚಳವಳಿಗಾರರನ್ನು ನಿಗ್ರಹಿಸಲು ಹೇಳಲಾದ ಕಾರ್ಯವಿಧಾನಗಳನ್ನು ಇಎಂಎಸ್ ಸರ್ಕಾರ ಬಳಸದೇ ಇದ್ದಿದ್ದು, ಒಂದು ಮಾದರಿ ಸರ್ಕಾರಕ್ಕೆ ಉದಾಹರಣೆಯಾಗಿದ್ದು ಉಲ್ಲೇಖಾರ್ಹ ಸಂಗತಿ. ಶಾಲೆಗಳನ್ನು ಸುಡುವುದು, ಸಾರ್ವಜನಿಕ ಆಸ್ತಿಗಳನ್ನು ನಾಶಪಡಿಸುವುದು, ವಿಮೋಚನಾ ಹೋರಾಟಗಾರರು ಪೊಲೀಸರ ಮೇಲೆ ಹಲ್ಲೆ ನಡೆಸುವುದೂ ಸೇರಿದಂತೆ ಹಿಂಸಾಚಾರ, ವಿಧ್ವಂಸಕ ಕ್ರಮಗಳನ್ನು ಕೈಗೊಂಡ ಸಂದರ್ಭಗಳಲ್ಲಿ ಸಹ ಪೊಲೀಸರು ಪೂರ್ವ ನಿದರ್ಶನಗಳಿಲ್ಲದ ರೀತಿ, ಭಿನ್ನವಾಗಿ ಗರಿಷ್ಠ ಸಂಯಮವನ್ನು ಪ್ರದರ್ಶಿಸಿದ್ದು ಸಹ ಗಮನಾರ್ಹವಾದ ಮತ್ತೊಂದು ಸಂಗತಿ. ಅದರ ಮುಖ್ಯ ಕಾರಣ. ಇಎಂಎಸ್ ಸರ್ಕಾರದ ನೀತಿಗಳು, ವಿಶೇಷವಾಗಿ ಪೊಲೀಸ್ ನೀತಿಯು (ಆಡಳಿತಾತ್ಮಕವಾಗಿದ್ದ ದಬ್ಬಾಳಿಕಾ ಸಾಧನ), ಪೊಲೀಸ್ ಪಡೆಯ ಪರಂಪರಾಗತವಾದ ಸ್ವಭಾವವನ್ನು ಕೂಡ, ಮೂಲಭೂತವಾಗಿ ಬದಲಾವಣೆಗೊಳಿಸಿಕೊಂಡಿದ್ದರ ನಡವಳಿಕೆ ಕೂಡ ಆಗಿತ್ತು.

ಸತ್ಯವನ್ನು ತಿರುಚುತ್ತಾ, ವಕ್ರೀಕರಿಸುತ್ತಾ ಪ್ರಚಾರ ಮಾಡುವ ನಿಷೇದಾತ್ಮಕವಾದ ಶೈಲಿಗಿಂತಲೂ ವಾಸ್ತವತೆಗಳನ್ನು ಮುಚ್ಚಿಟ್ಟುಕೊಂಡು ವಾಸ್ತವಕ್ಕೆ ವಿರುದ್ಧವಾದ ವಿಚಾರಗಳನ್ನು ಅತಿಯಾದ ಭಾವೋದ್ರೇಕಗಳನ್ನು ಪ್ರದರ್ಶಿಸುತ್ತಾ, ಅದನ್ನು ಸ್ಥಾಪಿಸಲು ನಡೆಸುವ ತ್ವರತೆಯನ್ನು, ಕಮ್ಯುನಿಸ್ಟ್ ಸರ್ಕಾರದ ಕಾಲದಲ್ಲಿ, ವಿರೋಧಿಗಳು ನಡೆಸುತ್ತಿದ್ದ ಕಾರ್ಯ ಚಟುವಟಿಕೆಗಳುದ್ದಕ್ಕೂ ನೋಡಬಹುದಾಗಿತ್ತು. ಭಾರತದಲ್ಲಿ ಸತ್ಯಾನಂತರ,

ಕೇರಳದ ಮೊದಲ ಕಮ್ಯುನಿಸ್ಟ್ ಸರ್ಕಾರದ ವಿರುದ್ಧದ ಆಂದೋಲನದ ಸಮಯದಲ್ಲಿ, ರಾಜಕೀಯದ ಪರಿಣಾಮಕಾರಿ ಅನ್ವಯಿಸುವಿಕೆಯು ಪ್ರಾರಂಭವಾಯಿತು. ಪ್ರತಿಪಕ್ಷಗಳ ವಿವಿಧ ಪ್ರಕಟಣೆಗಳು ಮತ್ತು ಕಾರ್ಯಕರ್ತರ ಪ್ರಚಾರ ಚಟುವಟಿಕೆಗಳು ಮಾತ್ರವಲ್ಲದೆ, ಬಹುತೇಕ ಪತ್ರಿಕೆಗಳ ಸುದ್ದಿ ಮತ್ತು ಸಂಪಾದಕೀಯಗಳು ಕೂಡ ಸುಳ್ಳು ಪ್ರಚಾರಗಳಿಂದ ತುಂಬಿಕೊಂಡಿದ್ದವು. ಖೈದಿಗಳಿಗೆ ಕ್ಷಮಾದಾನದ ಸಮಸ್ಯೆಯಿಂದ ಪ್ರಾರಂಭಿಸಿ, ಅಭದ್ರತೆಯ ಕೂಗು, ಸೆಲ್ ಆಡಳಿತ ಅಥವಾ ಪಕ್ಷವೇ ಆಡಳಿತ ನಡೆಸುತ್ತಿದೆ ಎನ್ನುವ ಕಟ್ಟುಕಥೆಯ ಮೂಲಕ ಆರಂಭಿಸಿ ನಂತರದ ಪ್ರತಿಯೊಂದು ಘಟನೆಯ ಬಗ್ಗೆ ಸುಳ್ಳು ಪ್ರಚಾರ ನಡೆಸಿಕೊಂಡು ಬಂದಿದ್ದನ್ನು, ಸತ್ಯಾನಂತರದ ರಾಜಕೀಯವನ್ನು ಅಂತಿಮವಾಗಿ ಬಹಿರಂಗ ಆಂದೋಲನ ಮತ್ತು 'ಭಾರತ ಉಳಿಸಿ' ಅಭಿಯಾನದಲ್ಲಿ ಕಾಣಬಹುದಾಗಿದ್ದು, ಇದುವೇ ನಿಖರವಾದ ಅನ್ವಯಿಸುವಿಕೆಯಾಗಿದೆ.

ವಿರೋಧಿ ಭಾವನೆಯ ಉನ್ಮಾದದಲ್ಲಿ ಕೆರಳಿದ ಜನಸಮೂಹವು, ಜನಪ್ರಿಯ/ಜನಪರ ಸರ್ಕಾರದ ಕಾರ್ಯವೈಖರಿಯನ್ನು ಬುಡಮೇಲು ಮಾಡುವ ಸ್ಥಿತಿಯನ್ನು ಸೃಷ್ಟಿಸಿತು. ಈ ವಿಲಕ್ಷಣ ಪರಿಸ್ಥಿತಿಯನ್ನು 'ಇದ್ದಕ್ಕಿದ್ದಂತೆ ಆಸ್ಫೋಟಿಸಿದ ಜನತಾ ಆಂದೋಲನ' (Mass upsurge) ಎಂದು ಉಲ್ಲೇಖಿಸುವ ಮೂಲಕ ಪ್ರಧಾನಿ ನೆಹರೂ ಅವರು ಸಾಮಾನ್ಯೀಕರಿಸಿದ್ದು, ಅಸಡ್ಡೆಯನ್ನು ಎತ್ತಿ ತೋರಿಸಿತು. ಇದು ನಂತರದ ಅವಧಿಯುದ್ದಕ್ಕೂ ನಡೆದಂಥ ಭಾರತದ ಪ್ರಜಾಪ್ರಭುತ್ವದ ಅವನತಿಗಳಿಗೆ ಆರಂಭವೆನ್ನುವುದು, ವಿಮೋಚನಾ ಹೋರಾಟ ಮತ್ತು ಅದರ ಭಾಗವಾಗಿ ಕೇಂದ್ರ ನಡೆಸಿದ ಹಸ್ತಕ್ಷೇಪ. ನಂತರ ದೇಶದ ವಿವಿಧ ಭಾಗಗಳಿಗೆ ಹರಡಿದ, ವಿವಿಧ ಹಂತದ ಪ್ರತ್ಯೇಕತಾವಾದಿ ಮತ್ತು ವಿಧ್ವಂಸಕ ಚಟುವಟಿಕೆಗಳಿಗೆ ಪೂರ್ವಭಾವಿ ಅಥವಾ ಪರೋಕ್ಷವಾಗಿ, ಕೇರಳದ ವಿಮೋಚನಾ ಹೋರಾಟವು ಪ್ರಚೋದನೆಯಾಗಿದ್ದವು.

ಹಿಂದಿನ ಆಡಳಿತ ವ್ಯವಸ್ಥೆಗೆ ಹೋಲಿಸಿದರೆ, ಕಮ್ಯುನಿಸ್ಟ್ ಸರಕಾರದ ಆಡಳಿತವೆನ್ನುವುದು ಶ್ಲಾಘನೀಯವಾಗಿತ್ತು. ಈ ಕಾಲಘಟ್ಟವು ಸಮಗ್ರ ಅಭಿವೃದ್ಧಿಯ ಕಾರ್ಯವಿಧಾನಕ್ಕೆ ಸಾಕ್ಷಿಯಾಯಿತು. ಈ ಕಾರ್ಯವಿಧಾನಗಳು ಆಡಳಿತಾತ್ಮಕ ಮತ್ತು ಸಾಮಾಜಿಕ ಅಭಿವೃದ್ಧಿಯ ನವೀನ ಮಾರ್ಗವನ್ನು ಸುಗಮಗೊಳಿಸಿತು. ಅಭಿವೃದ್ಧಿಗಾಗಿ ಸರ್ಕಾರವು ಒತ್ತು ನೀಡಿಕೊಂಡು, ಹಲವು ಪ್ರಗತಿಪರ ನೀತಿಗಳನ್ನು ರೂಪಿಸಿಕೊಂಡು, ಕಾರ್ಯಕ್ರಮಗಳನ್ನು ಜಾರಿಗೆ ತರಲಾದವು. ಆದರೆ ವಿರೋಧಪಕ್ಷಗಳ, ಜಾತಿ/ಸಮುದಾಯಗಳ ನಾಯಕರ ನೇತೃತ್ವದ ಬೃಹತ್ ಸರ್ಕಾರಿ ವಿರೋಧಿ ಚಳುವಳಿಗಳು ಮತ್ತು ಹಿಂಸಾತ್ಮಕ ಪ್ರತಿಭಟನೆಗಳಿಂದಾಗಿ ನಿರೀಕ್ಷಿತ ಫಲಿತಾಂಶ ಕಾಣಲಿಲ್ಲ. ಕೇರಳದ ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಪ್ರತಿಗಾಮಿ ಚಟುವಟಿಕೆಗಳಲ್ಲಿ ತೊಡಗಿರುವ ಕೋಮುವಾದಿ ಗುಂಪುಗಳು, ವಿರೋಧಪಕ್ಷಗಳು ಮತ್ತು ಅದರ ಪ್ರಭಾವದಿಂದ ಕ್ರೋಢೀಕರಿಸಿದ ಅಪಾರ ಸಂಪನ್ಮೂಲಗಳು, ಕೇರಳದಲ್ಲಿ ರಾಜಕೀಯವೂ ಆರ್ಥಿಕವೂ ಆದ ವಲಯಗಳಲ್ಲಿ ಅವುಗಳ ತತ್ವರಹಿತವಾದ ವಿನಿಯೋಗದಿಂದಾಗಿಯೇ. ಕಮ್ಯುನಿಸ್ಟ್

ಸರ್ಕಾರದ ಪತನದ ಹಿಂದಿರುವ ಮುಖ್ಯ ಕಾರಣ. ಬಡ ರೈತರು ಮತ್ತು ದಲಿತರು ಹಿಂದುಳಿದ ವರ್ಗಗಳು ಸೇರಿದಂತೆ ಹೆಚ್ಚಿನ ದುಡಿಯುವ ಜನರು ಕೇರಳದ ಮೊದಲ ಜನತಾ ಸರ್ಕಾರವನ್ನು ಬೆಂಬಲಿಸಿದರು. ಆದರೆ ಅವರ ಬೆಂಬಲವು ಸಾಕಷ್ಟು ಪ್ರತ್ಯಕ್ಷವೋ ಸಾಕಷ್ಟು ಮಹತ್ವದ್ದೋ ಆಗಲು ಸಾಧ್ಯವಾಗಲಿಲ್ಲ.

20ನೇ ಶತಮಾನದ ಮಧ್ಯಭಾಗದಲ್ಲಿ, ಕೇರಳದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅಭೂತಪೂರ್ವವಾದ ಜಾಗೃತಿ ಮೂಡಿಬಂದಿತು. ಈ ಜಾಗೃತಿಯ ಫಲವಾಗಿ, ಅನುರಣನಗಳಾಗಿ ಹೊರಹೊಮ್ಮಿದ ಬೆಳವಣಿಗೆಗಳು,ತೊಂದರೆಗೊಳಗಾದ ಸಾಮಾಜಿಕ ಕ್ರಮಗಳನ್ನು ಎದುರಿಸಲು ಸಾಮರ್ಥ್ಯವಿರುವ ಹೊಸ ನಾಗರಿಕ ಸಮಾಜದ ಹುಟ್ಟಿಗೆ ಕಾರಣವಾಯಿತು. ಈ ನಾಗರಿಕ ಸಮಾಜದಲ್ಲಿ ಹುಟ್ಟಿಕೊಂಡ ಸಂಘರ್ಷಗಳು, ರಾಜಕೀಯ ಸಮಾಜದಲ್ಲಿ ಸಂಯೋಜನೆಗೊಂಡಿತು ಎಂದು ಈ ಅಧ್ಯಯನ ಪ್ರಕ್ರಿಯೆಯ ಮೂಲಕ ಪರಿಶೀಲಿಸಲಾಗಿರುತ್ತದೆ. ಈ ಸಂಘರ್ಷಗಳು, ಸಾಮಾಜಿಕ ಬದಲಾವಣೆಯ ಹಲವು ಅಂಶಗಳೊಂದಿಗೆ ಸೇರಿಕೊಂಡು ದೃಢೀಕರಿಸಲಾಗಿದೆ. ಅಂತಹ ಸಾಮಾಜಿಕ ಪರಿವರ್ತನೆಗಳಲ್ಲಿ ತುಳಿತಕ್ಕೊಳಗಾದ ಜಾತಿಗಳ ಸಾಮಾಜಿಕ ಉನ್ನತಿಯೆನ್ನುವುದು ಗಮನಾರ್ಹ ಸಂಗತಿಯಾಗಿದೆ. ಸಾಮಾಜಿಕಾಧಿಕಾರದ ಬಾಹ್ಯರೇಖೆಯ ಪುನರ್ ಹೊಂದಾಣಿಕೆಗಾಗಿ, ಊಳಿಗಮಾನ್ಯ ವಿರೋಧಿ ಸಿದ್ಧತೆಗಳ ಮುಂದುವರಿಕೆಯನ್ನು ನಾವು ಇಲ್ಲಿ ನೋಡಬಹುದು. ಪ್ರಬಲ ಜಾತಿಗಳು, ವರ್ಗಗಳು, ತುಳಿತಕ್ಕೊಳಗಾದ ಜಾತಿಗಳ ಗುಲಾಮಗಿರಿಯನ್ನು ಖಚಿತಪಡಿಸಕೊಳ್ಳ ಬಯಸಿದವು. ತುಳಿತಕ್ಕೊಳಗಾದ ಜಾತಿಗಳ ವಿರುದ್ಧ ಅವಹೇಳನಕಾರಿ ಅಭಿವ್ಯಕ್ತಿಗಳು ಮತ್ತು ಸಂಬೋಧನೆಗಳು, ಕಮ್ಯುನಿಸ್ಟ್ ವಿರೋಧಿ ನಾಯಕರ ಘೋಷಣೆಗಳಲ್ಲಿ ಕಠೋರತೆಗಳು ರೂಪುಗೊಂಡವು. ಇದರ ಅತ್ಯುತ್ತಮ ಅಭಿವ್ಯಕ್ತಿ ಘೋಷಣೆ ಹೀಗಿದೆ:

> "ದಲಿತ ಚಾತ ನೆಲ ಊಳಲಿ; ಚಾಕೋ ನಾಡನ್ನು ಆಳಲಿ. "ನನ್ನನ್ನು ಯಜಮಾನನೆಂದು ಕರೆಸಿಕೊಳ್ಳುವೆ, ಅವರಿಗೆ ಅಡಕೆಹಾಳೆಯಲ್ಲಿ ಗಂಜಿ ಕುಡಿಸುವೆ." (ಇಎಂಎಸ್ ಮಂತ್ರಿಮಂಡಲದಲ್ಲಿ 'ಚಾತ' ಎನ್ನುವ ದಲಿತವರ್ಗಕ್ಕೆ ಸೇರಿದ ಮಂತ್ರಿ, ಹಾಗೆಯೇ 'ಚಾಕೋ' ಎನ್ನುವ ಕ್ರೈಸ್ತ ಸಮುದಾಯದ ವಿರೋಧಪಕ್ಷದ ನಾಯಕರಿದ್ದರು.)

ಈ ಘೋಷಣೆಗಳು ಕೀಳುಜಾತಿಗೆ ಸೇರಿದವರ ಪರಾಧೀನತೆಯನ್ನು ಪ್ರಕಟಗೊಳಿಸುವ ಸಂಕೇತಗಳಾಗಿದ್ದವು. ಜಾತಿ–ಧರ್ಮ–ವರ್ಣ–ವರ್ಗದ ಮೇಲುಗೈ ವಿರುದ್ಧ ಕೆಲಸಕಾರ್ಯ ನಡೆಸುವ–ಸಮಾಜದಲ್ಲಿನ ಮೇಲು–ಕೀಳು ಎನ್ನುವ ಪ್ರಜ್ಞೆಗಳು, ಅಸಮಾನತೆಗಳನ್ನು ಕೊನೆಗೊಳಿಸುವುದಕ್ಕೆ ಎನ್ನುವ ಉದಾತ್ತವಾದ ಗುರಿಯೊಂದಿಗೆ ಮುನ್ನಡೆಯುತ್ತಿರುವ ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಆಡಳಿತ ಎನ್ನುವನೇರ ಬೆದರಿಕೆ ಸನ್ನಿಹಿತವಾಸ ಸಾಮಾಜಿಕ ಪರಿವರ್ತನೆಗೆ ಅನುಕೂಲಕರವಾದ ವಾತಾವರಣವನ್ನು ಸೃಷ್ಟಿಸಿತು. ಶ್ರೀಮಂತರ ಮತ್ತು ಮೇಲ್ವರ್ಗಕ್ಕೇ ಸೇರಿದ ಜಾತಿಗಳ ಅಧಿಕಾರ ಕಳೆದುಕೊಳ್ಳುವುದು ಅನಿವಾರ್ಯವಾಯಿತು.

ಇದು ಮೂಲತಃ ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಗೆ ಆಂತರಿಕವಾದ ಸಂಘರ್ಷಗಳ ಮತ್ತು ವೈರುಧ್ಯಗಳ ಸುದೀರ್ಘವಾದ ಪ್ರಕ್ರಿಯೆಗಳ ಸ್ವಾಭಾವಿಕ ಫಲಿತಾಂಶ ಮಾತ್ರವಾಗಿತ್ತು. ಆದಾಗ್ಯೂ, ಸಾಂಪ್ರದಾಯಿಕ ರೀತಿಯ ಸಾಮಾಜಿಕ ಕ್ರಮದ ಕೆಲವು ಅಂಶಗಳು ಸರಳ ಬದಲಾವಣೆಗಳೊಂದಿಗೆ ಮುಂದುವರಿಯುತ್ತಿದ್ದವು. 1957ರಲ್ಲಿ ಕೇರಳದಲ್ಲಿ ಮೊದಲ ಜನಪ್ರಿಯ ಸರ್ಕಾರದ ರಚನೆಯು, ಒಂದು ಅರ್ಥದಲ್ಲಿ ಹಳೆಯದು ಮತ್ತು ಹೊಸತು ಆದ, ಸಾಮಾಜಿಕ-ಆರ್ಥಿಕ ಕ್ರಮಗಳ ನಡುವಿನ ಅನಿವಾರ್ಯವಾದ ಸಂಘರ್ಷದ ಪರಾಕಾಷ್ಠೆಯಾಗಿತ್ತು. ಸರ್ಕಾರದ ಉಪಕ್ರಮಗಳು ಮತ್ತು ಕ್ರಮಗಳು ಚಾಲ್ತಿಯಲ್ಲಿರುವ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯಲ್ಲಿ ಅಂತರ್ಗತವಾಗಿರುವ ಅನುಕೂಲ ಮತ್ತು ಅನಾನುಕೂಲಗಳನ್ನು ನಿವಾರಿಸುವ ಉದ್ದೇಶವನ್ನಿಟ್ಟುಕೊಂಡಿತ್ತು. ದೇಶದ ಪ್ರಜಾಸತ್ತಾತ್ಮಕ ಸಂವಿಧಾನದ ವಿಶಾಲ ಚೌಕಟ್ಟಿನೊಳಗಿದ್ದುಕೊಂಡು, ರಾಜಕೀಯ-ಸಾಮಾಜಿಕ ಕ್ರಮಗಳಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ತರಲು ಇಎಂಎಸ್ ನಂಬೂದಿರಿಪಾಡ್ ನೇತೃತ್ವದ ಸರ್ಕಾರ ಪ್ರಾಮಾಣಿಕ ಪ್ರಯತ್ನ ಮಾಡಿತು. ಹಳೆಯ ಸಾಮಾಜಿಕ ಕ್ರಮಗಳ ವಕ್ತಾರರ ಹಿತಾಸಕ್ತಿಗಳಿಗೆ, ವಿರುದ್ಧವೂ ಹಾನಿಕಾರವೂ ಆಗಿತ್ತು, ಕಮ್ಯುನಿಸ್ಟರು ರೂಪಿಸಿದ ನೀತಿಗಳು, ಕಾರ್ಯಕ್ರಮಗಳು. ಇದು ಸ್ವಾಭಾವಿಕವಾಗಿಯೂ ಹಿಂಸಾತ್ಮಕವೂ ಸುದೀರ್ಘವೂ ಆದ ಆಂದೋಲನವನ್ನು ಕೆರಳುವಂತೆ ಮಾಡಿತು. ಕಮ್ಯುನಿಸ್ಟರ ನೇತೃತ್ವದ ಸರ್ಕಾರ ಮತ್ತು ಕಮ್ಯುನಿಸ್ಟ್ ವಿರೋಧಿಗಳು ತಮ್ಮ ನಡುವಿನ ಹಿತಾಸಕ್ತಿಯ ಸಂಘರ್ಷದಲ್ಲಿಯೇ ವಾಸ್ತವವಾಗಿ, ಕೇರಳದ ವಿಮೋಚನಾ ಹೋರಾಟದ ಬೇರುಗಳು ಆಳವಾಗಿ ಊರಿಕೊಂಡಿರುವುದು. ಅದರ ಮೂಲವಿಶ್ವ ಕ್ಯಾಥೋಲಿಕ್ ಅಧಿಕಾರಶ್ರೇಣಿಯು ಕಮ್ಯುನಿಸ್ಟ್ ಚಳುವಳಿಯೊಂದಿಗೆ, ಆ ತತ್ವಸಂಹಿತೆಯ ಆರಂಭ ಕಾಲಗಳಿಂದಲೂ ಇದ್ದಂಥ ಕುರುಡು ಹಗೆತನದಲ್ಲಿ ಸೇರಿಕೋಡಿತ್ತು. ಹೀಗೆ ರಾಜ್ಯದ ಪ್ರಥಮ ಜನತಾ ಸರ್ಕಾರದ ಹಡಗನ್ನು, ವಿರೋಧಿಗಳು ರೂಪಿಸಿ, ಕಾರ್ಯಗತಗೊಳಿಸಿದ ವಿಧ್ವಂಸಕ ಕೃತ್ಯಗಳ ಬಿರುಗಾಳಿಯಲ್ಲಿ ಸಿಲುಕಿಸಿ, ವ್ಯವಸ್ಥಿತವಾಗಿ ಧ್ವಂಸಗೊಳಿಸಲಾಯಿತು.

●

# 9

# ಚರ್ಚ್ ಮತ್ತು ಕಮ್ಯುನಿಸ್ಟ್ ಪಕ್ಷ – ಬದಲಾದ ಪರಿಕಲ್ಪನೆಗಳು

ಕಮ್ಯುನಿಸ್ಟ್ ಸಿದ್ಧಾಂತವು ಯುರೋಪಿನಾದ್ಯಂತ ರ್ಯಾಡಿಕಲ್ ಪ್ರಕಟಣೆಗಳ ಮೂಲಕ ಹರಡಲು ಪ್ರಾರಂಭಗೊಂಡಿದ್ದರಿಂದ, 1840ರ ದಶಕದ ಆರಂಭದಲ್ಲಿ, ಕ್ಯಾಥೋಲಿಕ್ ಚರ್ಚ್ ಜಗತ್ತಿನಾದ್ಯಂತ ಕಮ್ಯುನಿಸ್ಟ್ ವಿರೋಧಿ ನಿಲುವನ್ನು ತೆಗೆದುಕೊಳ್ಳಲು ಪ್ರಾರಂಭಿಸಿತು. ಆದಾಗ್ಯೂ, ಕೇರಳದ ಅನೇಕ ಕ್ರಿಶ್ಚಿಯನ್ನರು ಕಮ್ಯುನಿಸ್ಟ್ ಆದರ್ಶಗಳ ಸದ್ಗುಣಗಳನ್ನು ಗುರುತಿಸಿದರು ಮತ್ತು ಅವರು ಕಮ್ಯುನಿಸ್ಟ್ ಚಳುವಳಿಯೊಂದಿಗೆ ಸ್ವತಃಕೈಜೋಡಿಸಿಕೊಂಡರು. ಜೊತೆಗೆ, ಸಹಿಷ್ಣುತೆ ಮತ್ತು ಮುಕ್ತ ಮನಸ್ಸಿನವರಾಗಿರಲು ಪ್ರಯತ್ನಿಸಿದ ಅವರು, ಕ್ರಿಶ್ಚಿಯನ್–ಕಮ್ಯುನಿಸ್ಟ್ ಸಹಕಾರಕ್ಕಾಗಿ ಕರೆ ನೀಡಿದರು. ಶೀತಲ ಸಮರದ ನಂತರದ ವಿಶ್ವಕ್ರಮದಲ್ಲಿ ಕ್ಯಾಥೋಲಿಕ್ ಚರ್ಚ್ ತನ್ನ ಕಮ್ಯುನಿಸ್ಟ್ ವಿರೋಧಿ ನಿಲುವನ್ನು ದುರ್ಬಲಗೊಳಿಸಿಕೊಂಡಿತು. ಎಲ್ಲಾ ವಿಶ್ವಾಸಿಗಳು ಮಾತ್ರವಲ್ಲದೆ, ಧರ್ಮದ ಪ್ರತಿಪಾದಕರು ಮತ್ತು ಅದರ ವಿರೋಧಿಗಳು, ಬಡತನವನ್ನು ಗುರುತಿಸಿ, ಅರ್ಥಮಾಡಿಕೊಳ್ಳುತ್ತಾರೆ. ಮಾರ್ಕ್ಸ್‌ನ ದೃಷ್ಟಿಕೋನವು ಬಡತನವನ್ನು ನಿರ್ಮೂಲನೆ ಮಾಡಲು ಸಮಗ್ರ ವಿಧಾನವನ್ನು ಒದಗಿಸುತ್ತದೆ.

ನಿಕೊಲಾಯ್ ಅಲೆಕ್ಸಾಂಡ್ರೊವಿಚ್ ಬರ್ಡಿಯಾವ್ (1874–1948), ರಷ್ಯಾದ ಧಾರ್ಮಿಕ ತತ್ವಜ್ಞಾನಿ, ಹೇಳಿದ್ದೇನೆಂದರೆ,'ನಾನು ಹಸಿದಿದ್ದರೆ, ಅದು ಭೌತಿಕ ಸಮಸ್ಯೆಯಾಗುತ್ತದೆ; ಬೇರೊಬ್ಬರು ಹಸಿದಿದ್ದರೆ, ಅದು ಆಧ್ಯಾತ್ಮಿಕ ಸಮಸ್ಯೆಯಾಗುತ್ತದೆ.' (ಕೆಲವು ಭಾಷಾಂತರಗಳು ಹೀಗೆ ಸಹ ಹೇಳುತ್ತವೆ, ಬ್ರೆಡ್ ನನಗೆ ಎನ್ನುವುದು ಭೌತಿಕ ಪ್ರಶ್ನೆಯಾದರೆ, ನನ್ನ ನೆರೆಯವರಿಗೆ ಬ್ರೆಡ್ ಎನ್ನುವುದು, ಆಧ್ಯಾತ್ಮಿಕವಾಗಿದೆ). ಮನುಷ್ಯ ಮತ್ತು ಅವನ ನೆರೆಹೊರೆಯವರಿಬ್ಬರಿಗೂ ರೊಟ್ಟಿ ಇಲ್ಲದೆ,ಅವರು ಹಸಿವಿನಿಂದ ಬಳಲುತ್ತಿದ್ದಾಗ, ಅವರು ಸಮಾಜದ ಭಾಗವಾಗಿರುವುದರಿಂದ, ಅವರ ಹಸಿವು ಸಾಮಾಜಿಕ ಸಮಸ್ಯೆಯಾಗುತ್ತದೆ. ಹೀಗೆ, ಬಡ ಸಾಮಾನ್ಯರ ಜೀವನೋಪಾಯದ ಸಮಸ್ಯೆಗಳನ್ನು ಪರಿಹರಿಸಲು ಯತ್ನಿಸಿದ ಈ ಕಮ್ಯುನಿಸ್ಟ್ ಸಿದ್ಧಾಂತವು, ಶ್ರೀಮಂತರು ಮತ್ತು ನಿರ್ಗತಿಕರ ನಡುವಿನ ಅಂತರ ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ,ಐತಿಹಾಸಿಕವಾಗಿ ಪ್ರಸ್ತುತವಾದ

ಒಂದು ಸಿದ್ಧಾಂತವಾಗಿದೆ. ಕ್ಯಾಥೋಲಿಕ್ ಚರ್ಚ್ 21ನೇ ಶತಮಾನದ ಎರಡನೇ ದಶಕದ ವೇಳೆಗೆ, ಮಾರ್ಕ್ಸ್ ಸಿದ್ಧಾಂತದ ಕಲ್ಪನೆಗಳಿಗೆ ಸಮಾನಾಂತರವಾದ ಅನೇಕ ಸಾಮಾಜಿಕ ಉಪಕ್ರಮಗಳನ್ನು ಅಳವಡಿಸಿಕೊಂಡಿತು.

2020ರ ಅಕ್ಟೋಬರ್ ಮೂರರಂದು ಪೋಪ್ ಫ್ರಾನ್ಸಿಸ್ ಅವರು ಭ್ರಾತೃತ್ವ ಮತ್ತು ಸಾಮಾಜಿಕ ಸ್ನೇಹಕ್ಕಾಗಿ ಬಿಡುಗಡೆ ಮಾಡಿದ ಎನ್ಸೈಕ್ಲಿಕಲ್ ಫ್ರಾಟೆಲ್ಲಿ ಟುಟ್ಟಿ (ಎಲ್ಲಾ ಸಹೋದರರು) ಪ್ರಪಂಚದಾದ್ಯಂತದ ಸಾಮಾಜಿಕ-ರಾಜಕೀಯ ವಲಯಗಳಲ್ಲಿ ಹೆಚ್ಚಿನ ಚರ್ಚೆ ಮತ್ತು ಸಂವಾದಗಳನ್ನು ಹುಟ್ಟುಹಾಕಿತು. 2019ರ ಡಿಸೆಂಬರ್‌ನಲ್ಲಿ ಚೀನಾದ ವುಹಾನ್‌ನಲ್ಲಿ ಸ್ಫೋಟಗೊಂಡ ಕೋವಿಡ್-19 ಪ್ರಪಂಚದಾದ್ಯಂತ ವೇಗವಾಗಿ ಹರಡುತ್ತಿದ್ದು, ವಿಶ್ವಾದ್ಯಂತ ವಿಪತ್ತು ಮತ್ತು ಸಂಕಟವನ್ನು ಉಂಟುಮಾಡುತ್ತಲೇ ಇದೆ.ಈ ಸುತ್ತೋಲೆಯು ಇಂದು ಜಗತ್ತು ಎದುರಿಸುತ್ತಿರುವ ಸಮಸ್ಯೆಗಳಿಗೆ ಬಂಡವಾಳಶಾಹಿ ಮತ್ತು ಜಾಗತೀಕರಣ ಕಾರಣವಾಗಿದೆ ಎಂದು ಸ್ಪಷ್ಟಪಡಿಸುವುದಲ್ಲದೆ, ಪ್ರಪಂಚದ ಸಮಸ್ಯೆಗಳನ್ನು ಪರಿಹರಿಸಲು ನಿರಾಕರಿಸುವ ನೀತಿ, ಮನುಷ್ಯರಲ್ಲಿ ಸಹೋದರತ್ವದ ಕೊರತೆ, ಪರಿಸರ ಕಾಳಜಿಯ ಬಗ್ಗೆ ಅಸಡ್ಡೆ, ವಸತಿಯಿಲ್ಲದವರ, ಬಡವರ ಪರಕೀಯತೆ ಮುಂತಾದವುಗಳ ಬಗ್ಗೆಯೂ ಗಮನ ಹರಿಸುತ್ತದೆ.

ಕೋವಿಡ್-19 ಸಾಂಕ್ರಾಮಿಕ ರೋಗಕ್ಕಿಂತಲೂ ಮೊದಲೇ ಲಾಭ-ಚಾಲಿತ ಬಂಡವಾಳಶಾಹಿ ವ್ಯವಸ್ಥೆಯು ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿದೆಯಂದೂ ಅಸ್ತಿತ್ವದಲ್ಲಿರುವ ಸಾಮಾಜಿಕ-ರಾಜಕೀಯ ಆರ್ಥಿಕ ಸಂಸ್ಥೆಗಳಿಗೆ ಸುಧಾರಣೆಯ ಅಗತ್ಯವಿದೆಯೆಂದೂ ಪೋಪ್ ಫ್ರಾನ್ಸಿಸ್ ಟೀಕಿಸಿದ್ದಾರೆ. ಭ್ರಾತೃತ್ವ ಮತ್ತು ಭ್ರಾತೃತ್ವದ ಸಾರ್ವತ್ರಿಕ ಆದರ್ಶಕ್ಕೆ ಒತ್ತು ನೀಡಿದ ಪೋಪ್, ಕೋವಿಡ್-19 ಸಾಂಕ್ರಾಮಿಕ ರೋಗವು, ತನ್ನಲ್ಲಿ ತುಂಬಿರುವ ಮೌಲ್ಯಗಳು ಮತ್ತು ನಂಬಿಕೆಗಳನ್ನು ಬಲಪಡಿಸಲು ಮತ್ತು ದೃಢೀಕರಿಸಲು ಸಾಕಷ್ಟು ಕೊಡುಗೆ ನೀಡಿದೆ ಎಂದು ಒತ್ತಿ ಹೇಳಿದರು.

ಸಮಾಜದಲ್ಲಿ ವ್ಯಾಪಿಸಿರುವ ಹತಾಶೆ ಮತ್ತು ಮನುಷ್ಯರಲ್ಲಿ ಹೆಚ್ಚುತ್ತಿರುವ ಅಸಮಾನತೆಯನ್ನು, ಆರ್ಥಿಕ ಸಂಪನ್ಮೂಲಗಳ ಸಮಾನ ಹಂಚಿಕೆಯ ಮೂಲಕ ಪರಿಹರಿಸಲಾಗುವುದು ಎಂದು ಪೋಪ್ ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಸಹಕಾರ, ಸಹಿಷ್ಣುತೆ ಮತ್ತು ಭ್ರಾತೃತ್ವವು ಮೇಲುಗೈ ಸಾಧಿಸಬೇಕಾದ,ಸಾಮಾನ್ಯ ಒಳಿತಿನ ರಾಜಕೀಯ ಮತ್ತು ಸಂಘರ್ಷ ಮುಕ್ತ ಸಾಮಾಜಿಕ ವ್ಯವಸ್ಥೆಗಾಗಿ ಅವರು ಕರೆ ನೀಡಿದರಲ್ಲದೆ, ಯುದ್ಧ, ರೋಗ, ಬಡತನ, ಶೋಷಣೆ ಮುಂತಾದವುಗಳಿಗೆ ಭಯಪಡದ ಒಂದು ಹೊಸ ವಿಶ್ವವ್ಯವಸ್ಥೆ ಸೃಷ್ಟಿಯಾಗಬೇಕು, ಎಂದು ಹೇಳಿದರು. ಪೋಪ್ ಫ್ರಾನ್ಸಿಸ್ ಅವರ ಈ ಮಾತುಗಳು, ಸಮಾಜವಾದಿ-ಕಮ್ಯುನಿಸ್ಟ್ ಪರಿಕಲ್ಪನೆಗಳೊಂದಿಗೆ ಗಮನಾರ್ಹ ಹೋಲಿಕೆಯನ್ನು ತೋರಿಸುತ್ತವೆ. ಪ್ರಮುಖವಾಗಿ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಪರಿಸರ ವಿಷಯಗಳ ಬಗ್ಗೆ ವ್ಯಾಟಿಕನ್ ನಿಲುವು ಪೋಪ್ ಅವರ ಮಾತುಗಳಲ್ಲಿ

ಸ್ಪಷ್ಟವಾಗಿ ಕಾಣಸಿಗುತ್ತವೆ. ಫ್ರಾಟೆಲ್ಲಿ ತುಟ್ಟಿ ಎಂಬುದು ಒಂದು ಸುತ್ತೋಲೆಯಾಗಿದ್ದು, ಅದು ರಾಜಕೀಯ ವಿಷಯಗಳ ಬಗ್ಗೆ, ಚರ್ಚ್‌ಗೆ ಹೊಸ ದಿಕ್ಕನ್ನು ನೀಡುವಲ್ಲಿ ಸಹಕಾರಿಯಾಗಿದೆ. 173 ವರ್ಷಗಳ ಹಿಂದೆ 'ಕಮ್ಯುನಿಸ್ಟ್ ಪ್ರಣಾಳಿಕೆ' ಬಿಡುಗಡೆಯಾದ ಸಮಯದಿಂದ ಕಮ್ಯುನಿಸಂ ಬಗ್ಗೆ ಜಾಗತಿಕ ಚರ್ಚ್‌ನ ಧೋರಣೆಯಲ್ಲಿ ಆಗಿರುವ ಭಾರಿ ಬದವಾವಣೆಯು ಇಲ್ಲಿ ಬಹಿರಂಗವಾಗಿದೆ.

ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಕಮ್ಯುನಿಸ್ಟ್ ಮ್ಯಾನಿಫೆಸ್ಟೋವನ್ನು ಮೊದಲು 21 ಫೆಬ್ರವರಿ 1848ರಂದು ಪ್ರಕಟಿಸಲಾಯಿತು. ಈ ದಿನಾಂಕದ ಹಿಂದಿನ ವರ್ಷಗಳಲ್ಲಿ, ಕಮ್ಯುನಿಸಂನ ಪರಿಕಲ್ಪನೆಗಳು ಯುರೋಪಿನ ಭೌತಿಕ ಸಾಮಾಜಿಕ ವಲಯಗಳ ಗಮನವನ್ನು ಸೆಳೆದಿದ್ದವು. ಅದೇ ಅವಧಿಯಲ್ಲಿ, ಜಾಗತಿಕ ಚರ್ಚ್, ಕಮ್ಯುನಿಸಂ ಬಗ್ಗೆಯ ತನ್ನ ನಿಲುವನ್ನು ಬಹಿರಂಗಪಡಿಸಿತ್ತು. ಪೋಪ್ ಪಿಯಸ್ IX, 9 ನವೆಂಬರ್ 1846ರಂದು, 'ಕ್ವಿ ಪ್ಲೂರಿಬಸ್' (ನಂಬಿಕೆ ಮತ್ತು ಧರ್ಮದ ಕುರಿತು) ಎಂಬ ಶೀರ್ಷಿಕೆಯ ತನ್ನ ಮೊದಲ ಸುತ್ತೋಲೆ ಅಥವಾ ಎನ್ಸೈಕ್ಲಿಕಲ್‌ನ್ನು ಹೊರತಂದರು, ಇದು ಸಮಾಜವಾದ ಮತ್ತು ಕಮ್ಯುನಿಸಂನ ತತ್ವಚಿಂತನೆಗಳ ವಿರೋಧಿ ದೃಷ್ಟಿಕೋನಗಳನ್ನು ಒಳಗೊಂಡಿತ್ತು. ಪೋಪ್ ಲಿಯೋ XIII, 28 ಡಿಸೆಂಬರ್ 1878ರಂದು, ಕ್ವಾಡ್ ಅಪೋಸ್ಟೋಲಿಕ್ ಮುನಿರಿಸ್ ಎಂಬ ತಮ್ಮ ಸುತ್ತೋಲೆ ಅಥವಾ ಎನ್ಸೈಕ್ಲಿಕಲ್‌ನಲ್ಲಿ, ಸಮಾಜವಾದಿ ಸಿದ್ಧಾಂತದ ವಿರುದ್ಧದ ಚರ್ಚ್‌ಗಳ ದಾಳಿಯನ್ನು ಬಲಪಡಿಸಿದರು.

ಜರ್ಮನಿಯ ಮೈನ್ಸ್‌ನ ಬಿಷಪ್ ಬ್ಯಾರನ್ ವಿಲ್ಹೆಲ್ಮ್ ಇಮ್ಯಾನುಯೆಲ್ ವಾನ್ ಕೆಟೆಲರ್‌ರವರು, ಸಾಮಾಜಿಕ ವಿಮರ್ಶಕರೂ ಸುಧಾರಕರೂ ಆಗಿದ್ದು, ಅವರ ಭಾಷಣಗಳು, ವಿಶೇಷವಾಗಿ ಅವರ ಪುಸ್ತಕ, 'ದಿ ಲೇಬರ್ ಕ್ವೆಶ್ಚನ್ ಅಂಡ್ ಕ್ರಿಶ್ಚಿಯಾನಿಟಿ' (1864), ಸಾಮಾಜಿಕ ಸಮಸ್ಯೆಗಳ ಮೇಲೆ,ಕ್ಯಾಥೋಲಿಕ್ ಚರ್ಚ್‌ನ ಗಮನ ಕೇಂದ್ರೀಕರಿಸಿತು. ಇದು ಯುರೋಪಿನಾದ್ಯಂತ ಕಮ್ಯುನಿಸ್ಟ್ ವಿಚಾರಗಳ ಉದಯದೊಂದಿಗೆ, 1891ರಲ್ಲಿ ಪೋಪ್ ಲಿಯೋ XIIIರ ಎನ್ಸೈಕ್ಲಿಕಲ್, ರೆರಮ್ ನೊವರಮ್ (ಬಂಡವಾಳ ಮತ್ತು ಕಾರ್ಮಿಕರ ಮೇಲಿನ) ಹಿನ್ನೆಲೆಯನ್ನು ರೂಪಿಸಿತು. ಈ ಸುತ್ತೋಲೆಯು ಮಾರ್ಕ್ಸ್‌ವಾದದ ಪರಿಕಲ್ಪನೆಗಳನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತದೆಯೆಂದು ತೋರುತ್ತದೆಯಾದರೂ ಆಳವಾಗಿ ಪರೀಕ್ಷೆ ಮಾಡಿ ನೋಡುವಾಗ, ಇದು ವಾಸ್ತವವಾಗಿ ಮಾರ್ಕ್ಸ್‌ನ ಸಾಮಾಜಿಕ ವಿಶ್ಲೇಷಣೆಯನ್ನು ಒಪ್ಪಿಕೊಳ್ಳುತ್ತದೆ.

ಈ ಅವಧಿಯಲ್ಲೇ ಯುರೋಪಿನ ಕಾರ್ಮಿಕ ವರ್ಗದ ಮೇಲೆಮಾರ್ಕ್ಸ್‌ವಾದಿ ಪರಿಕಲ್ಪನೆಗಳ ಪ್ರಭಾವವು ಬೆಳೆಯುತ್ತಾ ಬರುತ್ತಿರುವುದನ್ನು ಗಮನಿಸಬಹುದು. ಚರ್ಚ್‌ನ ನಾಯಕತ್ವವು ಇದನ್ನು ಗುರುತಿಸುವುದಲ್ಲದೆ, ಬಹುಶಃ ಅದಕ್ಕಾಗಿಯೇ ಇರಬೇಕು, ಸುತ್ತೋಲೆಯು ಕಾರ್ಮಿಕ ವರ್ಗಗಳ ಸ್ಥಿತಿಯು ಆ ಸಮಯದ ಪ್ರಮುಖ

ವಿಷಯವಾಗಿದೆ, ಎಂದು ಸ್ಪಷ್ಟಪಡಿಸಿದ್ದು. ಕ್ಯಾಥೋಲಿಕ್ ಚರ್ಚ್, ಅಲ್ಲಿಯವರೆಗೆ ಶತಮಾನಗಳ ಊಳಿಗಮಾನ್ಯ ಪದ್ಧತಿ ಮತ್ತು ಭೂಮಾಲೀಕತ್ವದಿಂದ ಪೋಷಿಸಲ್ಪಟ್ಟ ತನ್ನ ಸಾಮಾಜಿಕ ದೃಷ್ಟಿಕೋನದಲ್ಲಿ ಜಡತ್ವವನ್ನು ಬೆಳೆಸಿಕೊಂಡಿದ್ದು,ಮಾರ್ಕ್ಸ್‌ವಾದಕ್ಕೆ ಅದರ ಪ್ರತಿಕ್ರಿಯೆಯೊಂದಿಗೆ, ಕನಿಷ್ಠ ತಾತ್ಕಾಲಿಕವಾಗಿಯಾದರೂ ಸಕ್ರಿಯವಾಗಲು ಪ್ರಾರಂಭಿಸಿತು.

ಮೊದಲನೆಯ ಮಹಾಯುದ್ಧದ ನಂತರ, ವ್ಯಾಟಿಕನ್ ಫ್ಯಾಸಿಸಂಗೆ ಅನುಕೂಲಕರವಾದ ಮನೋಭಾವವನ್ನು ಅಳವಡಿಸಿಕೊಂಡಿತ್ತು. ಇಟಲಿಯಲ್ಲಿ ಅಧಿಕಾರವನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿ ಈ ಚರ್ಚ್ ಮುಸೊಲಿನಿಯನ್ನು ಬೆಂಬಲಿಸಿದ್ದಲ್ಲದೆ, ಫ್ಯಾಸಿಸ್ಟರಿಂದ ಕಮ್ಯುನಿಸ್ಟರಿಗೆ ಆಗುತ್ತಿದ್ದ ಕಿರುಕುಳದ ಬಗ್ಗೆ ಕಣ್ಣು ಮುಚ್ಚಿ ಕುಳಿತಿತ್ತು. ಆಧುನಿಕ ಕಾಲದಲ್ಲಿ ಯಾವುದೇ ರಾಜಕೀಯ ಸಂಸ್ಥೆ ಅಥವಾ ಶಕ್ತಿಯು ಕ್ಯಾಥೋಲಿಕ್ ಚರ್ಚ್‌ನಿಂದ ಮುಸೊಲಿನಿಯಷ್ಟು ಬೆಂಬಲ ಮತ್ತು ಸಹಾಯವನ್ನು ಪಡೆದಿರುವುದಿಲ್ಲ. ಸ್ಪಾನಿಷ್ ಅಂತರ್ಯುದ್ಧದ (ನಾಗರಿಕ ಯುದ್ಧ) ಸಮಯದಲ್ಲಿ, ಕ್ಯಾಥೋಲಿಕ್ ಚರ್ಚ್, ರಿಪಬ್ಲಿಕನ್‌ನ ಎಡಶಕ್ತಿಯನ್ನು ಬಲವಾಗಿ ವಿರೋಧಿಸಿತು. ಜನರಲ್ ಫ್ರಾಂಕೋ ಮತ್ತು ರಾಷ್ಟ್ರೀಯವಾದಿಗಳು ರಿಪಬ್ಲಿಕನ್ನರ ವಿರುದ್ಧದ ಹೋರಾಟವನ್ನು 'ಪವಿತ್ರ ಯುದ್ಧ'ವೆಂದು ಚಿತ್ರಿಸಿ, ಜನರಲ್ ಫ್ರಾಂಕೋನ ಪಡೆಗಳಿಗೆ ಸಹಾಯ ಮಾಡಲು 'ಕ್ರಿಸ್ಟೋಫರ್ ಆರ್ಮಿ' ರಚನೆಗೆ ಚರ್ಚ್ ನೆರವು ನೀಡಿತು. ಪೋಪ್ ಪಿಯಸ್ XI, ತನ್ನ ಎನ್ಸೈಕ್ಲಿಕಲ್ ಡಿವೈನಿ ರಿಡೆಂಪ್ಟೋರಿಸ್ (Promise of a Divine Radeemer), 19 ಮಾರ್ಚ್ 1937ರಲ್ಲಿ, ಕಮ್ಯುನಿಸಂ ಮೇಲೆ ಕ್ಯಾಥೋಲಿಕ್ ಚರ್ಚ್‌ಪ್ರಬಲ ದಾಳಿಯನ್ನು ಪ್ರಾರಂಭಿಸಿತು.

ಕ್ಯಾಥೋಲಿಕ್ ಚರ್ಚ್‌ನ ಮತ್ತೊಬ್ಬ ನೆಚ್ಚಿನ ವ್ಯಕ್ತಿ, ಅಡಾಲ್ಫ್ ಹಿಟ್ಲರ್. ಯಹೂದಿ ಜನಾಂಗವನ್ನು ನಾಶಮಾಡಲು ಹಿಟ್ಲರನ ಕ್ರೂರ ಯೋಜನೆಗೆ ಚರ್ಚ್ ಕಣ್ಣುಮುಚ್ಚಿ ಕುಳಿತಿತ್ತು. ಎರಡನೆಯ ಮಹಾಯುದ್ಧದ ಸಮಯದಲ್ಲಿ ಜರ್ಮನಿ ರಷ್ಯಾದ ಮೇಲೆ ದಾಳಿ ಮಾಡಿದಾಗ,ಆ ಕೃತ್ಯವನ್ನು ಕಮ್ಯುನಿಸಂ ವಿರುದ್ಧ ಹಿಟ್ಲರ್‌ನ ಪವಿತ್ರ ಕಾರಣವೆಂದು ವ್ಯಾಖ್ಯಾನಿಸಿತು ಮತ್ತು ಅದನ್ನು ಪೂರ್ಣ ಹೃದಯದಿಂದ ಬೆಂಬಲಿಸಿತು.

ಎರಡನೆಯ ಮಹಾಯುದ್ಧದ ಸಮಯದಲ್ಲಿ ಪೋಪ್ ಪಯಸ್ XII ಅದರ ಮುಖ್ಯಸ್ಥರಾಗಿದ್ದು, ಕ್ಯಾಥೋಲಿಕ್ ಚರ್ಚ್, ಸೋವಿಯತ್ ಒಕ್ಕೂಟದ ಸಂಪೂರ್ಣ ನಾಶವನ್ನು ಬಯಸಿತು. ನಾಜಿ ಮಿಂಚುದಾಳಿಯನ್ನು ಪರಿಶೀಲಿಸಲು ಸೋವಿಯತ್ ಒಕ್ಕೂಟಕ್ಕೆ ಶಸ್ತ್ರಾಸ್ತ್ರಗಳು ಮತ್ತುಮದ್ದುಗುಂಡುಗಳ ರೂಪದಲ್ಲಿ ನೆರವು ಕಳುಹಿಸಲು ಅಮೇರಿಕ ಯೋಜಿಸಿದಾಗ, ಪೋಪ್ ಅವರನ್ನು ತಡೆಯಲು ವಾಷಿಂಗ್ಟನ್‌ಗೆ ನಿಯೋಗವನ್ನು ಕಳುಹಿಸಿದ್ದರು. ಅಧ್ಯಕ್ಷ ರೂಸ್ವೆಲ್ಟ್ ಅವರು ಫ್ಯಾಸಿಸ್ಟರನ್ನು ಬೆಂಬಲಿಸುವ ಮತ್ತು ಸೋವಿಯತ್ ಒಕ್ಕೂಟದ ಕಡೆಗೆ ಅವರ ವಿರೋಧದ

ನಿಲುವನ್ನು ಮರುಪರಿಶೀಲಿಸುವಂತೆ ಪೋಪ್ ಅವರನ್ನು ಕೇಳಿಕೊಂಡಾಗ, ಪೋಪ್ ಅದನ್ನು ಕಡೆಗಣಿಸಿದ್ದರು. ಬದಲಿಗೆ, ಪೋಪ್, ಚರ್ಚ್‌ಗಳ ಕಮ್ಯುನಿಸ್ಟ್ ವಿರೋಧಿ ನೀತಿಯನ್ನು ಪುನರುಚ್ಚರಿಸಿದ್ದರಲ್ಲದೆ, ಫ್ಯಾಸಿಸ್ಟ್ ಶಕ್ತಿಗಳನ್ನು ಬೆಂಬಲಿಸಿದರು.

1, ಜುಲೈ 1949ರಂದು, ಪೋಪ್ ಪಿಯಸ್ XII, ಕಮ್ಯುನಿಸಂ ವಿರುದ್ಧದ ತೀರ್ಪು (Decree against Communism) ಎಂಬ ಶೀರ್ಷಿಕೆಯ ಬಹಿಷ್ಕಾರ ಆದೇಶವನ್ನು ಅನುಮೋದಿಸಿದ್ದು, ಇದು ಇತಿಹಾಸದಲ್ಲೇ ಕಮ್ಯುನಿಸಂ ವಿರುದ್ಧ ಕ್ಯಾಥೋಲಿಕ್ ಚರ್ಚ್‌ಗಳು ಅತ್ಯಂತ ಪರಿಣಾಮಕಾರಿ ಅಸ್ತ್ರ, ಎಂದು ಸಾಬೀತಾಯಿತು. ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿರುವ ಅಥವಾ ಕಮ್ಯುನಿಸ್ಟ್ ಸಿದ್ಧಾಂತದ ಕಡೆಗೆ ಒಲವು ತೋರಿದ ಅಥವಾ ಕಮ್ಯುನಿಸ್ಟ್ ಸಿದ್ಧಾಂತವನ್ನು ಓದುವ ಮತ್ತು ಪ್ರಚಾರ ಮಾಡುವ ಯಾವುದೇ ಕ್ಯಾಥೋಲಿಕ್‌ನನ್ನು ಕ್ಯಾಥೋಲಿಕ್ ನಂಬಿಕೆಯಿಂದ ಬಹಿಷ್ಕರಿಸಲಾಗುವುದೆಂದು ಆ ಆದೇಶವು ಘೋಷಿಸಿತು.

1958ರಲ್ಲಿ ಚರ್ಚ್‌ನ ಅಧಿಕಾರವನ್ನು ವಹಿಸಿಕೊಂಡ ಪೋಪ್ ಜಾನ್ XXIII, ವ್ಯಾಟಿಕನ್‌ನ ಕಮ್ಯುನಿಸ್ಟ್ ವಿರೋಧಿ ನಿಲುವನ್ನು ಗಮನಾರ್ಹವಾಗಿ ದುರ್ಬಲಗೊಳಿಸಿದರು. ಅವರ ಮೊದಲ ಎನ್ಸೈಕ್ಲಿಕಲ್ ಶೀರ್ಷಿಕೆಯ ಮೇಟರ್ ಎಟ್ ಮ್ಯಾಜಿಸ್ಟ್ರಾ (ತಾಯಿ ಮತ್ತು ಶಿಕ್ಷಕಿ), 15 ಮೇ 1961ರಂದು ಬಿಡುಗಡೆಯಾಯಿತು. ಕಮ್ಯುನಿಸಂ ಕಡೆಗೆ ಮೃದುವಾದ ಮತ್ತು ಸೌಮ್ಯವಾದ ವಿಧಾನವನ್ನು ಸುತ್ತೋಲೆಯಲ್ಲಿ ಕಂಡುಕೊಳ್ಳಬಹುದಾಗಿದ್ದು, ಇದು 1846ರಲ್ಲಿ ಡಿವೈನಿ ರಿಡೆಂಪ್ಟೋರಿಸ್‌ನೊಂದಿಗೆ ಪ್ರಾರಂಭವಾಗಿ ಪ್ರಪಂಚದ ಗಮನವನ್ನು ಸೆಳೆದಿದ್ದ ಮತ್ತು ಪೋಪ್ ಪಿಯಸ್ XIIರ ಅವಧಿಯಲ್ಲಿ ಉತ್ತುಂಗಕ್ಕೇರಿದ್ದ, ಕ್ಯಾಥೋಲಿಕ್‌ನ ಚರ್ಚ್‌ನ ನಿಷ್ಠುರ ಮತ್ತು ಕಠಿಣ ಕಮ್ಯುನಿಸ್ಟ್ ವಿರೋಧಿ ನೀತಿಗಳಿಗೆ ವಿರುದ್ಧವಾಗಿತ್ತು. ಪೋಪ್ ಜಾನ್‌ರವರ ಸಾವಿಗೆ ಮುನ್ನ 1963ರಲ್ಲಿ ಬಿಡುಗಡೆಯಾದ ಅವರ ಎನ್ಸೈಕ್ಲಿಕಲ್ ಪೇಸೆಮ್ ಇನ್ ಟೆರಿಸ್ (ಪೀಸ್ ಆನ್ ಅರ್ಥ್), ಕ್ಯಾಥೋಲಿಕ್ ಚರ್ಚ್‌ನ ಕಮ್ಯುನಿಸ್ಟ್ ವಿರೋಧಿ ನೀತಿಯನ್ನು ಮತ್ತಷ್ಟು ನಿರಾಕರಿಸಲು ಪ್ರಯತ್ನಿಸಿತು. ಈ ಎನ್ಸೈಕ್ಲಿಕಲ್, ಚರ್ಚ್‌ನ ದೃಷ್ಟಿಕೋನದಲ್ಲಿ ಬದಲಾವಣೆಯನ್ನು ತಂದಂಥ ಪರಿಸ್ಥಿತಿಗಳನ್ನು ಪ್ರತಿಬಿಂಬಿಸಿ, ಪರಿಶೀಲಿಸಿ, ಕಮ್ಯುನಿಸಂ ಬಗ್ಗೆ ಹೆಚ್ಚು ಸ್ವೀಕಾರಾರ್ಹವಾಗುವಂತೆ ಮಾಡಿತು.

ಪೋಪ್ ಜಾನ್ XXIIರ ಮರಣದ ನಂತರ ಅಧಿಕಾರ ವಹಿಸಿಕೊಂಡ ಪೋಪ್ ಪಾಲ್ VIರವರು, ಡಿಸೆಂಬರ್ 1965ರಲ್ಲಿ ಐತಿಹಾಸಿಕವಾಗಿ ಮಹತ್ವದ ಎರಡನೇ ವ್ಯಾಟಿಕನ್ ಕೌನ್ಸಿಲ್ ಅನ್ನು ಕರೆದಿದ್ದು, ಕಮ್ಯುನಿಸಂ ಕಡೆಗೆ ಕ್ಯಾಥೋಲಿಕ್ ಚರ್ಚಿನ ವಿಧಾನ ಮತ್ತು ನೀತಿಗಳ ಕುರಿತು ಸುದೀರ್ಘವಾಗಿ ಚರ್ಚೆ ನಡೆಸಿದೆ, ಎಂದು ವರದಿಯಾಗಿದೆ. ಆದರೆ, ಇದರ ಫಲಿತಾಂಶದ ಕುರಿತು ಅಧಿಕೃತ ಅಥವಾ ಆಧಾರಪೂರ್ವಕವಾದ ಯಾವುದೇ ವರದಿಗಳು ಹೊರಬಂದಿರುವುದಿಲ್ಲ. ಪೋಪ್

ಪಾಲ್ VIರ ವಿಧಾನವು ಅವರ ಹಿಂದಿನವರದಂತೆ ಸೌಮ್ಯವಾಗಿಲ್ಲದಿದ್ದರೂ, ಅವರು ಕ್ರಿಶ್ಚಿಯನ್-ಕಮ್ಯುನಿಸ್ಟ್ ಸಂವಾದವು ನಡೆಯುತ್ತಲೇ ಇರಬೇಕೆಂದು ಸ್ಪಷ್ಟವಾದ ನಿಲುವನ್ನು ತೆಗೆದುಕೊಂಡರು. ಅವರು 6 ಆಗಸ್ಟ್ 1964ರಂದು ತಮ್ಮ ಎನ್ಸೈಕ್ಲಿಕಲ್ ಶೀರ್ಷಿಕೆಯಾದ, ಎಕ್ಲೆಸಿಯಮ್ ಸುಮ್ (ಅವರ ಚರ್ಚ್) ನಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ. 26 ಮಾರ್ಚ್ 1967ರಂದು ಬಿಡುಗಡೆಯಾದ ಅವರ ಎನ್ಸೈಕ್ಲಿಕಲ್, ಪಾಪ್ಯುಲೋರಮ್ ಪ್ರೋಗ್ರೆಸ್ಸಿಯೊ (ಜನರ ಅಭಿವೃದ್ಧಿಯ ಕುರಿತು), ಪೋಪ್ ಪಾಲ್ VIರವರು ಶೋಷಣೆಯಂತಹ ವಿಷಯಗಳ ಬಗ್ಗೆ ಪ್ರಸ್ತಾಪಿಸಿದ್ದಲ್ಲದೆ, ಬಂಡವಾಳಶಾಹಿ ವ್ಯವಸ್ಥೆ, ಲಾಭದ ಉದ್ದೇಶ, ಉತ್ಪಾದನೆಯ ಖಾಸಗಿ ಮಾಲೀಕತ್ವ, ಸಂಪತ್ತಿನ ಕಡೆಗೆ ಪ್ರಜ್ಞಾಶೂನ್ಯ ಓಟ, ಮುಂತಾದವುಗಳನ್ನು ಟೀಕಿಸಿರುತ್ತಾರೆ. ಇದನ್ನು ಪಶ್ಚಿಮದ ಕಮ್ಯುನಿಸ್ಟ್‌ನ ಪ್ರಮುಖ ಮಾಧ್ಯಮಗಳು ಮಾತ್ರವಲ್ಲದೆ, ಬಂಡವಾಳಶಾಹಿ ಒಲವಿನ ನಿಯತಕಾಲಿಕೆಗಳಾದ 'ವಾಲ್ ಸ್ಟ್ರೀಟ್ ಜರ್ನಲ್','ಟೈಮ್ ಮ್ಯಾಗಜೀನ್'ಗಳು ಕಮ್ಯುನಿಸಂ ಬಗ್ಗೆ ವ್ಯಾಟಿಕನ್ ಮತ್ತು ಕ್ಯಾಥೋಲಿಕ್ ಚರ್ಚ್‌ಗಳ ಬದಲಾಗುತ್ತಿರುವ ಮನೋಭಾವದ ಸಂಕೇತ, ಎಂದು ಪರಿಗಣಿಸಿದವು.

ಮೇ 1971ರಲ್ಲಿ ಬರೆದ ತನ್ನ ಅಪೋಸ್ಟೋಲಿಕ್ ಪತ್ರದಲ್ಲಿ, ಪೋಪ್ ಪಾಲ್ VI, ಕಮ್ಯುನಿಸಂನೊಂದಿಗೆ ಸಹೋದರತ್ವದ ವಿಧಾನವನ್ನು ಪ್ರಸ್ತುತಪಡಿಸುತ್ತಾರೆ. ಆದಾಗ್ಯೂ, ಅವರು ಅನಿಯಂತ್ರಿತ ವೈಯಕ್ತಿಕ ಸ್ವಾತಂತ್ರ್ಯದ ಲಿಬರಲ್ ಸಿದ್ಧಾಂತವನ್ನು ತಿರಸ್ಕರಿಸಿದರು, ಏಕೆಂದರೆ, ಅದು ಶೋಷಣಾ ಸಂದರ್ಭಗಳಿಗೆ ಕಾರಣವಾಗುತ್ತದೆ, ಎನ್ನುವ ದೃಷ್ಟಿಕೋನ ಅವರು ಹೊಂದಿದ್ದರು. ವಿಶ್ವದ ಸಾಮಾಜಿಕ-ರಾಜಕೀಯ ವಾಸ್ತವಗಳ ವಿಮರ್ಶಾತ್ಮಕ ಪರೀಕ್ಷೆ ಮತ್ತು ವಿಶ್ಲೇಷಣೆಗೆ ಮಾರ್ಕ್ಸ್‌ವಾದವು ಉಪಯುಕ್ತ ಸಾಧನವಾಗಿದೆ ಎಂಬ ಅವರ ಹೇಳಿಕೆಗಳು, ವ್ಯಾಪಕವಾಗಿ ಗಮನ ಸೆಳೆದವು. ಈ ಅಪೋಸ್ಟೋಲಿಕ್ ಪತ್ರವು ವ್ಯಾಟಿಕನ್-ಕಮ್ಯುನಿಸ್ಟ್ ಸಂಬಂಧಗಳ ನಿರ್ಮಾಣದಲ್ಲಿ ಪ್ರಮುಖ ಹೆಜ್ಜೆ, ಎಂದು ಪರಿಗಣಿಸಲಾಗಿದೆ.ಇದು ಶೀತಲ ಸಮರದ ಸಮಯದಲ್ಲಿ ಕ್ಯಾಥೋಲಿಕ್ ಚರ್ಚ್, ಕ್ಯಾಪಿಟಲಿಸ್ಟಿಕ್ ವೆಸ್ಟರ್ನ್ ಬ್ಲಾಕ್ ಅಥವಾ ಸೋಷಿಯಲಿಸ್ಟ್ ಈಸ್ಟರ್ನ್ ಬ್ಲಾಕ್ ಮುಂತಾದವುಗಳ ಕಡೆ ವಾಲುವುದನ್ನು ನಿರಾಕರಿಸುವಂತೆ ತಾನು ಅಳವಡಿಸಿಕೊಂಡಂಥ, ಅಲಿಪ್ತ ನಿಲುವಿನ ಪ್ರಾರಂಭದ ಹಂತವಾಗಿದೆ. ಕ್ಯಾಥೋಲಿಕ್ ಚರ್ಚ್, ತನ್ನ ವಿಶ್ವಾಸಿಗಳ/ಭಕ್ತರ ವೈಯಕ್ತಿಕ ಆಯ್ಕೆ ಮತ್ತು ತಾರ್ಕಿಕತೆಯ ಆಧಾರದ ಮೇಲೆ ತಮ್ಮದೇ ಆದ ರಾಜಕೀಯ ಸಿದ್ಧಾಂತಗಳನ್ನು ಆಯ್ಕೆ ಮಾಡಲು ಇದುವರೆಗೆ ಕೇಳಿರದಂಥ ನೀತಿಯನ್ನು ಸಹ ಅಳವಡಿಸಿಕೊಂಡಿತು.

1960 ಮತ್ತು 70ರ ದಶಕದಲ್ಲಿ, ಕ್ಯಾಥೋಲಿಕರು ಕಮ್ಯುನಿಸಂನ್ನು ಬೆಂಬಲಿಸುವ ವ್ಯಾಪಕ ವಿದ್ಯಮಾನಕ್ಕೊಳಗಾಗಿದ್ದರೂ ಅದೇ ಸಮಯದಲ್ಲಿ ಅವರ ಕ್ರಿಶ್ಚಿಯನ್ ನಂಬಿಕೆಗಳಲ್ಲೂ ದೃಢವಾಗಿ ಬೇರೂರಿದ್ದರು. ಈ ಅವಧಿಯಲ್ಲಿ, ಕ್ರಿಶ್ಚಿಯನ್ ತತ್ವಜ್ಞಾನಿಗಳು

ಮತ್ತು ಧಾರ್ಮಿಕ ವಿದ್ವಾಂಸರ ಪ್ರಯತ್ನದ ಪರಿಣಾಮವಾಗಿ, ಜಿನೀವಾ ಮತ್ತು ಇತರ ಸ್ಥಳಗಳಲ್ಲಿ ಕ್ರಿಶ್ಚಿಯನ್-ಮಾರ್ಕ್ಸ್‌ವಾದಿ ಪ್ರವಚನಗಳಿಗೆ ಅನುಕೂಲವಾಗುವಂತೆ ಸಮ್ಮೇಳನಗಳು ನಡೆದವು. ಈ ಸಮ್ಮೇಳನಗಳ ಮತ್ತು ಚರ್ಚೆಗಳ ಅಂತಿಮ ಫಲಿತಾಂಶವೆಂದರೆ, ಚರ್ಚ್‌ನ ರಾಜಕೀಯ ವಿಧಾನದಲ್ಲಿ ಗಮನಾರ್ಹ ಮತ್ತು ತೀವ್ರ ಬದಲಾವಣೆಗಳಾಗಿದ್ದು.

1960ರ ದಶಕದ ಆರಂಭದವರೆಗೂ ಬಂಡವಾಳಶಾಹಿ ಬಲಪಂಥೀಯ ಸಿದ್ಧಾಂತವನ್ನು ತನ್ನ ರಾಜಕೀಯ ವಿಧಾನದಲ್ಲಿ ಪೂರ್ಣ ಹೃದಯದಿಂದ ಬೆಂಬಲಿಸಿದ್ದ ಕ್ಯಾಥೋಲಿಕ್ ಚರ್ಚ್, ಬದಲಾವಣೆ ಮತ್ತು ಸಾಮಾಜಿಕ ಸುಧಾರಣೆಗೆ ಕರೆ ನೀಡುವ ಎಡಪಂಥೀಯ ದೃಷ್ಟಿಕೋನಗಳಿಂದ ಪ್ರಭಾವಿತವಾಗಲು ಪ್ರಾರಂಭಿಸಿತು. ಕ್ರಮೇಣ, ಕಮ್ಯುನಿಸಂಗೆ ಚರ್ಚ್‌ನ ವಿರೋಧ ಕಡಿಮೆಯಾಯಿತು. ಕ್ಯಾಥೋಲಿಕ್ ಚರ್ಚಿನ ಹಲವು ಗುರಿಗಳು ಮತ್ತು ಉದ್ದೇಶಗಳು ಕಮ್ಯುನಿಸಂನಂತೆಯೇ ಇರುತ್ತವೆ ಎಂದು ಚರ್ಚ್ ಅಧಿಕಾರಿಗಳು ಗುರುತಿಸತೊಡಗುತ್ತಾರೆ. 1975ರಲ್ಲಿ, ಫ್ರೆಂಚ್ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿ ಜಾರ್ಜ್ ಮಾರ್ಕ್ವೆಜ್ ಅವರ ಹೇಳಿಕೆಯು, ಕಮ್ಯುನಿಸ್ಟ್ ಚಳುವಳಿ ಮತ್ತು ಕ್ಯಾಥೋಲಿಕ್ ಚರ್ಚ್ ಇವೆರಡರ ಉದ್ದೇಶಗಳಲ್ಲಿರುವಂಥ ಸಾಮ್ಯತೆಗಳನ್ನು ಎತ್ತಿ ತೋರಿಸುವುದಲ್ಲದೆ, ಅವರು ಕೈಜೋಡಿಸಬಹುದಾದ ಸಂದರ್ಭಗಳು ವ್ಯಾಪಕ ಗಮನ ಸೆಳೆಯುವಂತವುಗಳಾಗಿವೆ. ಅದೇ ರೀತಿ, ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ, ತನ್ನ ಅನುಯಾಯಿಗಳ ಧಾರ್ಮಿಕ ಸಿದ್ಧಾಂತಗಳ ವಿಚಾರಗಳಿಗೆ ಸಂಬಂಧಿಸಿದಂತೆ, ಸ್ಪಷ್ಟವಾದ ಜಾತ್ಯತೀತ ನಿಲುವನ್ನು ತೆಗೆದುಕೊಂಡಿರುತ್ತದೆ.

ಇದು 1950 ಮತ್ತು 1960ರ ದಶಕದಲ್ಲಿ, ಲ್ಯಾಟಿನ್ ಅಮೇರಿಕಾದಲ್ಲಿ ನಡೆದ ಸಾಮ್ರಾಜ್ಯಶಾಹಿ ವಿರುದ್ಧದ ದಂಗೆಗಳು, ಎಡಪಂಥೀಯ ಕ್ರಾಂತಿಕಾರಿ ಚಳುವಳಿಗಳಿಂದ ನೇತೃತ್ವ ವಹಿಸಲ್ಪಟ್ಟಿದ್ದಲ್ಲದೆ, ಆ ಬಿಷಪ್‌ಗಳ ವಿಮೋಚನಾ ದೈವಶಾಸ್ತ್ರವು/ಲಿಬರೇಶನ್ ಥಿಯೋಲಜಿ, ವ್ಯಾಟಿಕನ್‌ನ ರಾಜಕೀಯ ಧೋರಣೆಯ ಮೇಲೆ ಪ್ರಭಾವವನ್ನೂ ಬೀರಿದವು. ಈ ಸಂದರ್ಭಗಳಲ್ಲಿ ಪೋಪ್ ಜಾನ್ XXIII ಸ್ವಾಭಾವಿಕವಾಗಿ, ಆರ್ಥಿಕ-ರಾಜಕೀಯ-ಸಾಂಸ್ಕೃತಿಕ ಸಾಮ್ರಾಜ್ಯಶಾಹಿ ಮತ್ತು ಪಾಶ್ಚಿಮಾತ್ಯ ಪ್ರಾಬಲ್ಯದ ಕಡೆಗೆ ನಿರಾಕರಣಾ ಧೋರಣೆಗಳನ್ನು ಅಳವಡಿಸಿಕೊಳ್ಳತೊಡಗಿದರು. ಲ್ಯಾಟಿನ್ ಅಮೇರಿಕಾದಲ್ಲಿನ ರೋಮನ್ ಕ್ಯಾಥೋಲಿಕ್ ಚರ್ಚುಗಳಲ್ಲಿ ಹರಡಿರುವ ವಿಮೋಚನಾ ದೈವಶಾಸ್ತ್ರವು, ಹೆಸರೇ ಸೂಚಿಸುವಂತೆ, ತುಳಿತಕ್ಕೊಳಗಾದ ಜನರ ನೋವಿನ ವಿಮೋಚನೆ ಮತ್ತು ಪುನರುಜ್ಜೀವನದ ಮೇಲೆ ಕೇಂದ್ರೀಕರಿಸುವ ಕ್ರಿಶ್ಚಿಯನ್ ದೈವಶಾಸ್ತ್ರದ ಒಂದು ವಿಧಾನವಾಗಿದೆ. ಇದು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸಮಾನತೆ, ನ್ಯಾಯ ಮುಂತಾದವುಗಳು ಅಗತ್ಯವಿರುವ, ಅಂಚಿನಲ್ಲಿರುವ ಸಮುದಾಯಗಳ ಸಮಸ್ಯೆಗಳು ಮತ್ತು ಆತಂಕಗಳನ್ನು ತಿಳಿಸುವ ಧಾರ್ಮಿಕ ತತ್ವಶಾಸ್ತ್ರವನ್ನು ಸೂಚಿಸುತ್ತದೆ.

ಈ ವಿಮೋಚನಾ ದೈವಶಾಸ್ತ್ರವು/ಲಿಬರೇಶನ್ ಥಿಯೋಲಜಿ, ಪ್ರಪಂಚದಾದ್ಯಂತದ ಪ್ರಮುಖ ಕ್ಯಾಥೋಲಿಕ್ ಸಮುದಾಯಗಳ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಕ್ಯಾಥೊಲಿಕ್ ಮತ್ತು ಕಮ್ಯುನಿಸಂನ ಅಂಶಗಳನ್ನು ವಿಲೀನಗೊಳಿಸಿದ ಈ ದೈವಶಾಸ್ತ್ರವು ಲ್ಯಾಟಿನ್ ಅಮೇರಿಕನ್ ಪ್ರದೇಶಗಳಲ್ಲಿ ಎಡ ಚಳುವಳಿಗಳಿಗೆ ಪ್ರಯೋಜನಕಾರಿಯಾಗಿವೆ. ಸಿಎಫ್‌ಎಸ್(ಕ್ರಿಶ್ಚಿಯನ್ ಫಾರ್ ಸೋಷಿಯಲಿಸಂ) ಅನ್ನು, 1972ರಲ್ಲಿ ಚಿಲಿಯಲ್ಲಿ ಸಾಲ್ವಡಾರ್ ಅಲೆಂಡೆಯ ಎಡ ಸರ್ಕಾರವನ್ನು ಬೆಂಬಲಿಸಲು ರಚಿಸಲಾಯಿತು.

ಇದರೊಂದಿಗೆ ಲ್ಯಾಟಿನ್ ಅಮೇರಿಕಾದಲ್ಲಿ ಲಿಬರೇಶನ್ ಥಿಯಾಲಜಿಯ ಪ್ರಾಯೋಗಿಕ ಅನ್ವಯವು ಅದರ ಸಾಧ್ಯತೆಗಳಿಗೆ ಏರಲು ಪ್ರಾರಂಭಿಸಿತು. ವಿಮೋಚನೆ, ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯದಂತಹ ವಿಷಯಗಳ ಮೇಲೆ ವಿಮೋಚನಾ ದೈವಶಾಸ್ತ್ರಜ್ಞರು, ಪ್ರಗತಿಪರ ಚಿಂತಕರು, ಸಿಎಫ್‌ಎಸ್ ಮುಂತಾದವರ ಗಮನವು, ಚರ್ಚ್ ನಾಯಕರ ಮತ್ತು ಲ್ಯಾಟಿನ್ ಅಮೇರಿಕದ ಬಿಷಪ್‌ಗಳ ಮೇಲೆ ಪ್ರಭಾವ ಬೀರುವಂತೆ ಮಾಡಿದ್ದಲ್ಲದೆ, ವ್ಯಾಟಿಕನ್‌ನ ನೀತಿ ಮತ್ತು ವಿಧಾನಗಳ ಮೇಲೆ ಪ್ರತಿಫಲಿಸುವಂತೆಯೂ ಮಾಡಿತು.

1978ರಿಂದ 2005ರವರೆಗಿನ ವಿಸ್ತೃತ ಅವಧಿಗೆ ಕ್ಯಾಥೋಲಿಕ್ ಚರ್ಚ್‌ನ ಮುಖ್ಯಸ್ಥರಾಗಿದ್ದ ಪೋಪ್ ಜಾನ್ ಪಾಲ್ IIರ ವಿಧಾನವು ಅವರ ಪೂರ್ವವರ್ತಿಗಳಾದ ಪೋಪ್ ಪಾಲ್ VI ಮತ್ತು ಪೋಪ್ ಜಾನ್ XXIIIರ ವಿಧಾನಗಳಿಗಿಂತ ತೀವ್ರವಾಗಿ ಭಿನ್ನವಾಗಿತ್ತು. ಅಧ್ಯಕ್ಷ ರೊನಾಲ್ಡ್ ರೇಗನ್ ಅವರ ಅಮೇರಿಕನ್ ಸಾಮ್ರಾಜ್ಯಶಾಹಿ ವಿಧಾನದ ಜೊತೆಗೆ ಅವರ ಪಾತ್ರ ಮತ್ತು ಚಟುವಟಿಕೆಗಳು ಸಹ ಯುರೋಪ್ ಮತ್ತು ಸೋವಿಯತ್ ಒಕ್ಕೂಟದಲ್ಲಿನ ಸಮಾಜವಾದಿ ಸರ್ಕಾರಗಳ ಕುಸಿತದಲ್ಲಿ, ಇತರ ಅಂಶಗಳೊಂದಿಗೆ ಪ್ರಮುಖವೆಂದು ಸಾಬೀತಾಯಿತು. ಪೋಪ್ ಜಾನ್ ಪಾಲ್ IIರ ಸಮಯದಲ್ಲಿ, ಲಿಬರೇಶನ್ ಥಿಯಾಲಜಿಯನ್ನು ತ್ಯಜಿಸಲು ಮತ್ತು ಕಮ್ಯುನಿಸ್ಟ್ ಸಿದ್ಧಾಂತಗಳ ಆಧಾರದ ಮೇಲೆ ಕ್ರಾಂತಿಕಾರಿ ಹೋರಾಟಗಳಿಂದ ಚರ್ಚ್‌ನ್ನು ದೂರವಿಡುವ ಪ್ರಯತ್ನಗಳೂ ನಡೆದವು.

2005 ರಿಂದ 2013 ರವರೆಗೆ ಪೋಪ್ ಆಗಿದ್ದ ಬೆನೆಡಿಕ್ಟ್ XI ಅವರು, ತಮ್ಮ ಹಿಂದಿನವರ ನಿಲುವಿನಷ್ಟು ತೀವ್ರವಾಗಿರದಿದ್ದರೂ ಮುಂದುವರಿಸಿದ್ದರು. 2013ರಲ್ಲಿ ಅಧಿಕಾರ ಸ್ವೀಕರಿಸಿದ ಪೋಪ್ ಫ್ರಾನ್ಸಿಸ್, ತನಗಿಂತ ಹಿಂದಿನ ಪೋಪ್‌ಗಳಿಗೆ ಹೋಲಿಸಿದರೆ ವಿಭಿನ್ನ ನೀತಿಯನ್ನು ಅಳವಡಿಸಿಕೊಂಡಿದ್ದರು. ಅರ್ಜೆಂಟೀನಾದಲ್ಲಿ ಹುಟ್ಟಿ ಬೆಳೆದ ಪೋಪ್, ತನ್ನ ಪುರೋಹಿತಶಾಹಿ ಕರ್ತವ್ಯಗಳ ವಿವಿಧ ಹಂತಗಳಲ್ಲಿ, ಲ್ಯಾಟಿನ್ ಅಮೇರಿಕದ ಸ್ವಾತಂತ್ರ್ಯ ಹೋರಾಟಗಳೊಂದಿಗೆ ಸಂಪರ್ಕಕ್ಕೆ ಬಂದಿದ್ದರಲ್ಲದೆ, ಬಂಡವಾಳೀಕರಣ, ಆಧುನಿಕ ಕೈಗಾರಿಕೀಕರಣ ಮತ್ತು ತಂತ್ರಜ್ಞಾನ ಮುಂತಾದವುಗಳು ಪರಿಸರದ ಮೇಲೆ ಉಂಟುಮಾಡುವ ಪ್ರತಿಕೂಲ ಪರಿಣಾಮಗಳನ್ನು ಸಹ

ಅರ್ಥಮಾಡಿಕೊಂಡಿದ್ದರು. ಅವರು ತಮ್ಮ ಎನ್ಸೈಕ್ಲಿಕಲ್‌ಗಳಲ್ಲಿ ಈ ವಿಷಯಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆ.

ಪೋಪ್ ಫ್ರಾನ್ಸಿಸ್‌ರವರ ಕಡೆಯಿಂದ ಬಂದಂತಹ ನಿಖರತೆ ಮತ್ತು ಸ್ಪಷ್ಟತೆಗಳಿಂದ ಕೂಡಿದಂಥ ನೀತಿಗಳು ಹಿಂದೆಂದೂ ವ್ಯಾಟಿಕನ್‌ನಲ್ಲಿ ಮಂಡಿತವಾಗಿರಲಿಲ್ಲ. ಕಮ್ಯುನಿಸಂ ಕಡೆಗಿನ ವ್ಯಾಟಿಕನ್ ನಿಲುವನ್ನು ನಾಲ್ಕು ಹಂತಗಳಾಗಿ ವರ್ಗೀಕರಿಸಬಹುದು. ಮೊದಲ ಹಂತವು 1840 ಮತ್ತು 1961ರ ನಡುವೆ, ನಿರಾಕರಣೆಯ ಮನೋಭಾವದಿಂದ ಗುರುತಿಸಲ್ಪಟ್ಟಿದೆ, ಕಳೆದ ಮೂರು ದಶಕಗಳಲ್ಲಿ ಅವು ಬಹಿರಂಗ ಹಗೆತನದಿಂದ ಕೂಡಿದ್ದವು. ಎರಡನೇ ಹಂತ, 1962 ಮತ್ತು 1978ರ ನಡುವಿನದು, ಮುಕ್ತ ವಿಧಾನ ಮತ್ತು ಸ್ನೇಹಕ್ಕಾಗಿ ಆಗಿತ್ತು. ಈ ಅವಧಿಯಲ್ಲಿಯೇ ಲಿಬರೇಶನ್ ಥಿಯಾಲಜಿ ಕ್ಯಾಥೋಲಿಕ್ ಚರ್ಚ್ ಮೇಲೆ ಪ್ರಭಾವ ಬೀರಲು ಪ್ರಾರಂಭಿಸಿದ್ದು. 1979 ರಿಂದ 2013ರವರೆಗಿನ ಮೂರನೇ ಹಂತವು ಮತ್ತೊಮ್ಮೆ ಕಮ್ಯುನಿಸಂಗೆ ಪ್ರತಿಕೂಲವಾಗಿತ್ತು. ನಾಲ್ಕನೇ ಹಂತದಲ್ಲಿ, 2013ರಿಂದ, ವ್ಯಾಟಿಕನ್‌ನ ರಾಜಕೀಯ ನಿಲುವು, ವಿಶೇಷವಾಗಿ ಎಡ–ಸಿದ್ಧಾಂತಗಳ ಕಡೆಗಿನ ಪರಸ್ಪರದ ವಾದದಾಗಿತ್ತು.

ಕೇರಳದ ಕ್ಯಾಥೋಲಿಕ್ ಚರ್ಚುಗಳು, 1960ರವರೆಗೆ, ಕಮ್ಯುನಿಸ್ಟ್ ಚಳುವಳಿಯ ಕಡೆಗೆ ಒಂದು ತರಹದ ನಿಲುವನ್ನು ತೆಗೆದುಕೊಂಡಿತು, ಇದು ವಿಶ್ವಾದ್ಯಂತ ಕ್ಯಾಥೋಲಿಕ್ ಚರ್ಚ್ ವರ್ತನೆಗಳನ್ನು ಪ್ರತಿಬಿಂಬಿಸುತ್ತಿತ್ತು, ಪ್ರತಿಫಲನಗೊಳ್ಳುತ್ತಿತ್ತಲ್ಲದೆ, ವರ್ಧಿಸುತ್ತಲೂ ಇತ್ತು. ಕೇರಳದ ಕ್ಯಾಥೋಲಿಕ್ ಚರ್ಚುಗಳು ತಮ್ಮ ಕಮ್ಯುನಿಸ್ಟ್ ವಿರೋಧಿ ನೀತಿಯಲ್ಲಿ ಹೆಚ್ಚು ತೀವ್ರವಾಗಿದ್ದವು. 1962ರಿಂದ 1978ರವರೆಗಿನ ಅವಧಿಯಲ್ಲಿ, ಕಮ್ಯುನಿಸಂ ಕಡೆಗಿನ ವ್ಯಾಟಿಕನ್ ದೃಷ್ಟಿಕೋನದಲ್ಲಿ ಬದಲಾವಣೆ ಕಂಡುಬಂದಿದ್ದರೂ, ಕೇರಳದಲ್ಲಿ ಕಮ್ಯುನಿಸಂ ಕಡೆಗಿನಚರ್ಚ್‌ಗಳ ತಿರಸ್ಕರಿಸುವ ಮನೋಭಾವದಲ್ಲಿ ಯಾವುದೇ ಗಮನಾರ್ಹ. ಬದಲಾವಣೆ ಕಂಡುಬಂದಿರಲಿಲ್ಲ.

ಆದಾಗ್ಯೂ, ಈ ಅವಧಿಯಲ್ಲಿ, ಮತ್ತು ನಂತರ, ತತ್ವಶಾಸ್ತ್ರ ಮತ್ತು ಅದರ ಚಟುವಟಿಕೆಗಳಿಗೆ ಸಂಬಂಧಿಸಿದ,ಪ್ರಖ್ಯಾತ ಕ್ರಿಶ್ಚಿಯನ್ ವ್ಯಕ್ತಿಗಳಾದ ಡಾ. ಎಂ.ಎಂ. ಥಾಮಸ್, ಫಾ. ಸೆಬಾಸ್ಟಿಯನ್ ಕಪ್ಪನ್ ಮತ್ತು ಬಿಷಪ್ ಪೌಲೋಸ್ ಮಾರ್ ಪೌಲೋಸ್ ಮುಂತಾದವರು, ಕ್ರಿಶ್ಚಿಯನ್–ಕಮ್ಯುನಿಸ್ಟ್ ಸಹಕಾರದ ಕಡೆಗಿನ ದೃಷ್ಟಿಯನ್ನು ಬಹಿರಂಗವಾಗಿ ಘೋಷಿಸಿದರು. ಕೇರಳದಲ್ಲಿ ಎಡ ಸರ್ಕಾರಗಳು ಜಾರಿಗೆ ತರಲು ಪ್ರಯತ್ನಿಸಿದ ಶಿಕ್ಷಣದಲ್ಲಿನ ಪ್ರಗತಿಪರ ಸುಧಾರಣೆಗಳ ಬಗ್ಗೆ, ಪೂರ್ವಾಗ್ರಹ ಪೀಡಿತ ಪ್ರತಿರೋಧವನ್ನು ಚರ್ಚ್ ವ್ಯಕ್ತಪಡಿಸಿತು.

ಚುನಾವಣೆಯ ಸಮಯದಲ್ಲಿ, ವಿವಿಧ ಚರ್ಚ್‌ಗಳು, ಪಂಗಡಗಳು ತಮ್ಮ ರಾಜಕೀಯ ನಿಲುವನ್ನು ಬಹಿರಂಗಪಡಿಸುವ ಪಾದ್ರಿಗಳ ಕರಪತ್ರಗಳನ್ನು ಪ್ರಸಾರ ಮಾಡಿದವು. ಇಂಟರ್‌ಚರ್ಚ್ ಕೌನ್ಸಿಲ್ ಆಫ್ ಕೇರಳ, ವಿವಿಧ ಡಯಾಸಿಸ್ ಮುಂತಾದವುಗಳ

ಜಂಟಿ ಹೇಳಿಕೆಗಳಲ್ಲಿ, ವಿಶ್ವಾಸಿಗಳ–ರ್‍ಯಾಲಿಗಳಲ್ಲಿ, ಪಾದ್ರಿಕರಪತ್ರಗಳೇ ಮುಂತಾದವುಗಳಲ್ಲಿ ಎಡಪಕ್ಷಗಳ ವಿರುದ್ಧ ಬಲವಾದ ವಿರೋಧವನ್ನು ಅಳವಡಿಸಿಕೊಂಡಿದ್ದವು. ಆದಾಗ್ಯೂ, ಈ ಹೇಳಿಕೆ, ಪತ್ರಗಳ ಮಾತುಗಳಲ್ಲಿ, ಉಪಯೋಗಿಸುವ ಶಬ್ದಗಳಲ್ಲಿ ಗಮನಾರ್ಹ ಬದಲಾವಣೆಗಳನ್ನು ಇಂದು ಕಾಣಬಹುದಾಗಿದೆ. ಹೊಸ ವಿಶ್ವಕ್ರಮದಲ್ಲಿ ವ್ಯಾಟಿಕನ್‌ನ ಸಾಮಾಜಿಕ–ರಾಜಕೀಯ ನಿಲುವು ಈ ಬದಲಾವಣೆಯನ್ನು ತರುವಲ್ಲಿ ಪ್ರಮುಖ ಪಾತ್ರ ವಹಿಸಿತ್ತು.

ಫ್ಯಾಸಿಸ್ಟ್ ಮತ್ತು ವರ್ಣಭೇದ ನೀತಿಯ ಬಗ್ಗೆ ಕಮ್ಯುನಿಸಂನ ಸ್ಪಷ್ಟ ನಿಲುವುಗಳು ಈ ಬದಲಾವಣೆಗಳ ಮೇಲೆ ಪ್ರಭಾವ ಬೀರಿತು. ಪ್ರಸ್ತುತ ಸನ್ನಿವೇಶದಲ್ಲಿ, ಕೇರಳದ ಕ್ರಿಶ್ಚಿಯನ್ ಸಮುದಾಯವು ಇತರ ಸಾಮಾಜಿಕ ಸಮುದಾಯಗಳಂತೆ ಪ್ರಗತಿಪರ ಚಳುವಳಿಯೊಂದಿಗೆ ಸಹಕರಿಸಲು ಪ್ರಾರಂಭಿಸಿದೆ. ಉದಾರವಾದಿ ದಂಗೆಗಳ ಸ್ಥಳಗಳಲ್ಲಿ, ಹೋರಾಟದಲ್ಲಿ ತೊಡಗಿರುವ ಬಹುಪಾಲು ಸಮುದಾಯಗಳು ಊಳಿಗಮಾನ್ಯ ಧಾರ್ಮಿಕ ರಂಗವನ್ನು ತೊರೆದು ಪ್ರಗತಿಪರ ಚಳುವಳಿಗಳೊಂದಿಗೆ ಕೆಲಸ ಮಾಡಲು ಪ್ರಾರಂಭಿಸಿರುವುದು ಶುಭ ಸಂಕೇತವಾಗಿದೆ.

ಈ ಬದಲಾವಣೆಯು ಮಾನವ ಜೀವನದಲ್ಲಿ ಪ್ರಾರ್ಥನೆಗಳು ಮತ್ತು ಆಚರಣೆಗಳು ಆಧ್ಯಾತ್ಮಿಕ ಜೀವನವನ್ನು ಪೋಷಿಸಲು ಮೌಲ್ಯಯುತವಾಗಿರಬೇಕೆನ್ನುವಷ್ಟೇ, ಭೌತಿಕ ಜೀವನವು ಸಹ ಬಹಳ ಮುಖ್ಯವಾಗಿದ್ದು, ಅವುಗಳ ಪರಿಸ್ಥಿತಿಗಳು ಸುಧಾರಣೆ, ಸಂರಕ್ಷಣೆ, ಹಾಗೆಯೇಪ್ರಕೃತಿ/ಪರಿಸರ ಸಂರಕ್ಷಣೆ, ಶಾಂತಿಯುತ ಸಾಮಾನ್ಯ ಸಹಬಾಳ್ವೆ ಮುಂತಾದವುಗಳನ್ನು ಬೆಂಬಲಿಸಬೇಕು ಎನ್ನುವುದು ಕ್ಯಾಥೋಲಿಕ್ ಚರ್ಚ್‌ನ ತಿಳುವಳಿಕೆಯಾಗಿರುತ್ತದೆ.

ಈ ಹಿನ್ನೆಲೆಯಲ್ಲಿ 3 ಅಕ್ಟೋಬರ್ 2020ರಂದು ಪೋಪ್ ಫ್ರಾನ್ಸಿಸ್ ಬಿಡುಗಡೆ ಮಾಡಿದ ಎನ್ಸೈಕ್ಲಿಕಲ್ ಫ್ರಾಟೆಲ್ಲಿ ಟುಟ್ಟಿ (ಎಲ್ಲಾ ಸಹೋದರರು)ನ ಪ್ರಸ್ತುತತೆಯನ್ನು ಕ್ರಿಶ್ಚಿಯನ್ ಸಮುದಾಯ ಮತ್ತು ಸಾರ್ವಜನಿಕರು ಅರ್ಥಮಾಡಿಕೊಂಡಿದ್ದಾರೆ. ಪಾದ್ರಿಗಳು ಯಾವಾಗಲೂ ಮಾರ್ಕ್ಸ್‌ವಾದವನ್ನು ವಿರೋಧಿಸುವಾಗ ನಂಬಿಕೆಯ ವಿಷಯವನ್ನು ಎತ್ತಿ ಹಿಡಿದಿದ್ದರು. ಪಿ.ಗೋವಿಂದಪಿಳ್ಳೆಯವರು ಈ ಬಗ್ಗೆ ಬರೆದಿರುವುದು ಗಮನಾರ್ಹವಾಗಿದೆ:

> "ಮಾರ್ಕ್ಸ್‌ವಾದವು ಸಂಪೂರ್ಣವಾಗಿ ಧರ್ಮಕ್ಕೆ ವಿರುದ್ಧವಾದ ತತ್ವಶಾಸ್ತ್ರ ಮತ್ತು ಚಳುವಳಿ ಎನ್ನುವ ಕಲ್ಪನೆಯು ಪ್ರಚಲಿತದಲ್ಲಿದೆ. ಆದರೆ, ಇದು ಸಂಪೂರ್ಣ ಸುಳ್ಳಿಗಿಂತಲೂ ಹೆಚ್ಚಾಗಿ ಅಪಾಯಕಾರಿಯಾದ ಅರ್ಧ ಸತ್ಯವಾಗಿದೆ. ಮಾರ್ಕ್ಸ್‌ವಾದದ ಸದ್ಗುಣವೆಂದರೆ ಧರ್ಮವನ್ನು ಕುರುಡಾಗಿ ಸ್ವೀಕರಿಸುವ ಅಥವಾ ವಿರೋಧಿಸುವ ಬದಲು, ಅದು ವಿಮರ್ಶಾತ್ಮಕ ತರ್ಕದ ಮಸೂರದ ಮೂಲಕ ಧರ್ಮವನ್ನು ಒಪ್ಪಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದೆ. ಯಾತ್ರಿಕ ಭೌತವಾದ (ಮೆಕ್ಯಾನಿಸ್ಟಿಕ್ ಮೆಟೀರಿಯಲಿಸಂ) ದಂತೆಯೇ ಮಾರ್ಕ್ಸ್‌ವಾದವು

ಧರ್ಮದ ಬಗ್ಗೆ ಪ್ರತಿಕೂಲವಾದ ಮನೋಭಾವವನ್ನು ಅಳವಡಿಸಿಕೊಳ್ಳುವುದಿಲ್ಲ. ಹಾಗಿದ್ದರೂ, ಚಾಲ್ತಿಯಲ್ಲಿರುವ ಸಂದರ್ಭಗಳಲ್ಲಿ ಹೆಚ್ಚು ಮುಖ್ಯವಾದುದು, ಅಂತಹ ವಿಚಾರಗಳ ಬಗೆಗಿನ ವಿವರಗಳ ಮೇಲೆ ಅವಲಂಬಿತರಾಗುವ ಬದಲು, ಪ್ರತಿಯೊಬ್ಬರೂ ಸಮೃದ್ಧವಾಗಿ ಬದುಕಲು ಅನುವು ಮಾಡಿಕೊಡುವ ಭೌತಿಕ ಪರಿಸ್ಥಿತಿಗಳನ್ನು ಒದಗಿಸುವ ಪ್ರಯತ್ನ ಮತ್ತು ವಿಶ್ಲೇಷಣೆಗಳನ್ನು ಮಾಡಬೇಕು".

ಈ ನಿಟ್ಟಿನಲ್ಲಿ, ಭಾರತದಲ್ಲಿ ಎಡರಂಗ, ಮತ್ತು ವಿಶೇಷವಾಗಿ ಕೇರಳದಲ್ಲಿ ಅಧಿಕಾರಕ್ಕೆ ಬಂದ ಎಡಪಂಥೀಯ ಸರ್ಕಾರಗಳು ದೂರದೃಷ್ಟಿಯ ನೀತಿಗಳನ್ನು ಅಳವಡಿಸಿಕೊಂಡವು ಮತ್ತು ಸಾಪೇಕ್ಷ ಪರಿಪೂರ್ಣತೆಯೊಂದಿಗೆ ಅವುಗಳನ್ನು ಕಾರ್ಯಗತಗೊಳಿಸಿದವು. ಬಹುಶಃ ಈ ಸತ್ಯಗಳ ಅರಿವಿನಿಂದಾಗಿಯೇ ಇರಬೇಕು, ಇತ್ತೀಚಿನ ದಿನಗಳಲ್ಲಿ ಕೇರಳ ಚರ್ಚ್ ಎಡಪಂಥೀಯ ಸರ್ಕಾರದ ನೀತಿಗಳು ಮತ್ತು ಕ್ರಮಗಳನ್ನು ಅನುಮೋದಿಸುತ್ತಾ ಇರುವುದು.



# ಉಲ್ಲೇಖಗಳು


1 Jyothi Basu (Ed); 'Documents of the Communist Movement in India'; Calcutta; Vol.1-1997

2 E M S Namboodiripad; 'Indian Communist Movement 1920-1998' Tiruvanantapuram 1998'

3 Reba Som; 'Differences within Consensus- The Left Right Divide in the Congress-1929-39'; Orient Longman; New Delhi; 1995

4 R Palme Dutt; 'India Today'; Calcutta; 1986(7th reprint)

5 N C Shekhar; 'Agniveethigal' Autobiography; Kannur; 1988

6 M P Manmathan; 'K Kelappan' Biography; Current Books; Trishur; 1984

7 Periodicals: Mathrubhoomi

8 A K Gopalan; 'My Life Story"; Chinta; Tiruvantapuram; 1999

9 Andalat; 'Sakhakkale Munnott - P Krishna Pillayude Sampoorna Krithigal'; Vol2

10 T J Nossiter; 'Communism In Kerala – A study of Political-Adaptation"; Oxford University Press; New Delhi; 1982

11 A K Poduval; 'A Brief History of the Kerala Farmers Movement'; Tiruvanantapuram; 1969

12 E M S Namboodiripad; 'Communist Party in Kerala'; Chintha Publishers; Tiruvanantapuram; Vol.1-1984, Vol.2-1984

13 E M S Namboodiripad; 'Reminiscences of An Indian Communist'; New Delhi; 1987

14 N E Balaram; 'The Communist Movement in Kerala'; Prabhat Book House; Tiruvanantapuram; Vol.1-1973

15 E M S Namboodiripad; 'Aathmakatha'; 1970

16 Andalat; 'Keraththile Thozhilali Vargaththinte Piravi'; Thiruvananthapuram; 1989

17 E M S Namboodiripad; 'Jeeval Sahithyavum Soundarya Bodhamvum'; Chintha; Thiruvananthapuram; 1971

18 K C Gorge; ' Ente Jeevitha Yaathra (Athmakatha)'

19 M Rasheed; 'K Damodaran' Biography'; Malayalam; Kottayam

20 Andalat; 'Rekhayillaththa Chithram Thiruvananthapuram'; 1999

21 E M S Namboodiripad; 'Quitinthya Samaravum kamyunistkaarum Chintha Publishers'; Thiruvananthapuram; 1992

22 K K N Kuruppu; 'Kayyur Riots Sandhya Publications'; Kozhikode; 1978

23 M N Kurup; 'A V Kunzhambu Biography (Malayalam)'

24 Jyothi Basu (Ed); 'Documents of the Communist Movement in India'; National Book Agency; Calcutta; Vol.4-1998

25 KC Gorge; 'Punnapravayalar'; Prasad book House; Thiruvananthapuram; 1972

26 PJ Cherian; 'Punnapra Vayalar Prakshobham A Research Work '

27 K Damodaran; 'Memoir of an Indian Communist'; Prabhat; Tiruvananthapuram; 1990

28 K G Gopala Krishnan; 'Vimochana Samaram-Oru Pattanam '; Nakshathra Books; Attingal; 1994

29 `Strategies and Tactics for Peoples Democratic Revolution'; Vol.1orVol.4

30 Gene D Overstreet, Marshall Windmiller; 'Communism in India'; University of California Press; 1960

31 Jyothibasu (Ed) 'Documents of the Communist Movement in India."; Calcutta; Vol 4; 1998

32 Periodicals: (Malayalam) Malayalam Manorama

33 Periodicals: (Malayalam) Janayugam

34 P Rajeev(ED); '1957 EMS Cabinet - History and Politics'

35 Joseph Mundasseri; 'Kozhinzha Elkal (Fallen Leaves) Autobiography'; Current Books; Trishur; 1978

36 Mannaththinte Sampoorna Krithikal; Kottayam; 1977

37 Puthupalli Raghavan; 'Viplava Smaranagal Vol 5'; D C Books; Kottayam; 1996

38 A Valsalan; 'Formation Of Kerala-Problems and Perspectives'; unpublished PhD Thesis; University of Calicut; 2010

39 A K Gopalan; 'Kerala: Past and Present'; London; 1957

40 Periodicals: New Age

41 K C John; 'Kerala Rashtreeyam Orasambandhanaatakam'; Aluva; 1999

42 Jitendra Singh; 'Communism in Kerala' selection 24. Red World in Tumult edited by B.E Pentony'; Chandler Publishing Co.; San Francisco; 1962

43 Victor M Fic; 'Kerala The Yenan of India'; Bombay; 1970

44 R Ramakrishnan Nair; 'How Communist Came to Power in Kerala'; Tiruvanantapuram; 1965

45 E M S Namboodiripad; 'Selected Writings'; NBA; Calcutta; Vol.2-1985

46 Father Vadakkan; 'Ente Kuthippum Kithappum (Athmakatha)'; Kottayam; 1974

47 Joseph Vadakkan; 'A Priests Encounter with Revolution'; The Christian Literature Society (CISRS); Banglore; 1974

48 H D Malaviya; 'Kerala A Report to the Nation'; New Delhi,1959

49 'Kerala on the March'; Kerala Government; 1958

50 Periodicals: Indian Express

51 Father Vadakkan; 'Maskovil Pokunna Mukhyamanthriyod'; 2005

52 Kunjananthan Nair; 'Polichcheluth Autobiography'; Kozhikkod; 2005

53 E M S Namboodiripad; 'Conflicts and Crisis - Political India 1974'; NBA; Calcutta; Vol.2-1985

54 M Abdul Aziz; 'Rise of Muslims in Kerala Politics'; CBH Publications; Thiru'puram; 1992

55 K M Seethisahib; 'The Muslim Leage in Kerala souvenir'; 1959

56 K K Muhammad Abdul Karim; 'Sher-e-Kerala Seethisahib'; 1960

57 M C Vadakar; 'C H Muhammad Koya - A Political Biography'; Kolikkod; 1996

58 Father Vadakkan; 'Kerala Chuvannathengane'; ACF Publishers; Trishur; 1959

59 Periodicals: Asian Survey

60 G K Lieten; 'The First Communist Ministry in Kerala-1957-59'

61 T J Nossiter-`Marxist State Governments in India: Politics'; Economics and society; London; 1988

62 C N Somrajan; 'Aspects of Kerala Society and Politics'; Quilon; 1983

63 Periodicals: Samadarsi

64 K B Menon; 'Muslim Minority in Kerala State-K.B. Menon Papers'; NMML; New Delhi.

65 K C John; 'Kerala Rashtreeyam Orasambandhanaatakam'; Aluva; 1999

66 Periodicals: The Statesman; 'NMML'; New Delhi

67 Periodicals: (Malayalam) Malayala Manorama; Kottayam

68 Periodicals: Cross Roads

69 K Rajeshwari; 'Communist Rule and Liberation Struggle'; Aluva; 2005

70 T O Mathew; 'Brother Vadakkan A Pen- Portrait'; Thrissur; 1955

71 N JoseChandar (ed); 'Dynamics of State Politics – Kerala'; Sterling Publishers; New Delhi; 1996

72 Babulal Fadia; 'State Politics in India'; New Delhi; Vol.2-1995

73 C Achut Menon; 'A Master Plan for Kerala-Pamphlet'; Prabhat Book House; 1957

74 K Damodaran; 'Inthyayum Soshyalisavum'; Prabhatham; Ernakulam; 1958

75 'Statements on Kerala- Information document'; Communist group in Parliament

76 K G Krishna Moorthy and G Lakshmana Rao; 'Political Preferences in Kerala'; Radhakrishna; Delhi; 1968

77 Prof S A H Haqqi (ed ) 'Democracy; 'Pluralism and Nation Building"; Delhi; 1984

78 K M Joseph; 'False Anti-Communism'; Kottayam; 1958

79 'Political India 1974'; Orient Longman; 1974

80 Andalat; 'The Battle of April 5'; 1957

81 Periodicals: (Malayalam) Madhyama

82 Father Vadakkan; 'The Controversial priest of India'; Codi International Institute; Canada; 1965

83 Periodicals: The Examiner( Bombay)

84 Periodicals: The Hindu

85 K B Menon; 'Record of the Communist rule in Kerala'; No.27; NMM&L; New Delhi

86 Periodicals: Economic Weekly

87 Periodicals: The New Leader (Weekly) (Madras)

88 R Velayudhan; 'Kerala the Red Rain Land'; New Delhi; 1958

89 K K Pilla; 'Congressum Keralavum'; 1986

90 Periodicals: Blitz (Weekly)(Bombay)

91 Father Vadakkan; 'Communist Virudhdamunnani Muthal Communist Sahakaranam vare'; kristhyan revalutionary friend; Thrishur; 1959

92 Cheriyan Philip; 'Kaal Noottand'

93 D Jaydev Das; 'Profile of the Indian Church- a politico-social analysis'; Thiruvananthapuram; 1979

94 'True Picture of the Situation in Kerala'; Department Of Public Relations; Thiruvananthapuram; 1958

95 K G Gopalakrishanan; 'Liberation Struggle : A Study'

96 Kainikkara Padmanabha Pillai; 'Communist Rule in Kerala'; KPCC; Tiruvanathapura; 1959

97 E M S Namboodiripad; 'Complete Works'

98 'Pattapusthakangalude Thaniniram (Malayalam Laghulekha) '; All Kerala Catholic Congress Working Committee

99 'Kerala Stay of Eviction Proceedings Ordinance, 1957 Gazette Extra Ordinary No. 34'

100 'KPCC.Memorandum to the The President of India'; New Delhi; 1959

101 George Mathew; 'Communal Road to Secular Kerala'; New Delhi; 1989

102 'Legislative debates, procedings'

103 'Kerala Governments reply to KPCC Memorandum'; Department of Public Relations, Government of Kerala; Thiruvananthapuram, Kollam; 1959

104 Periodicals: (Malayalam) Kerala Janata

105 S Gopal; 'Jawaharalal Nehru: A Biography 1956-1964'; New Delhi; Vol 3 - 1984

106 K A Rameshan Nair; 'Police Encyclopedia'; Prashanti Publishers; Thiruvananthapuram; 2004

107 Periodicals: (Malayalam) Deshabhimani

108 Periodicals: The Deepika

109 Periodicals: The Statesman(Calcutta)

110 "True Picture of the Situation in Kerala"; Department of Public Relations, Government of Kerala; 1958

111 S C Joseph; 'Kerala: the Communist State'; Madras; 1959

112 H D Malaviya; 'A Report for the State of Kerala'; KSSP; Trishur; 2007

113 V R Krishna Iyyer; 'Daniel Come to Judgment'; Ernakulam; 1959

114 Periodicals: The Economic Weekly Yearly

115 Periodicals: Weekly Kerala (Published by Democratic Research Service); Ernakulam)

116 Father Vadakkan; 'Janadhipathyamunnaniyude Ullukallikal '; ACF; Thrishur; 1960

117 N Jose Chander; "The Legislative Process in Kerala"; Thiruvananthapuram; 1981

118 Periodicals: Economic and Political weekly

119 M K Kamalasanan; 'Kuttanadum Karshaka Tholilali prasthanavum '; Kottayam

120 C Achyutha Menon; 'Communist Governmente Kaarshika vikasana Pravarthanangal'; Ernakulam; 1959

121 E M S Namboodiripad; 'Who is Out of Tune -Chief Minister Answers to Sri Dhebar '; Thiruvananthapuram; 1959

122 'Niyama Nirmanaththinte Ambath Varsham.'; Kerala Niyama Sabha; Thiruvananthapuram; 2007

123 B N Mallik; 'My Years with Nehru'; 1973

124 'Legislative Procedures, Thiruvananthapuram'; 1960

125 'The Kerala Agrarian Relations Bill 1957, L.A. Bill No 51 of 1957'

126 E Gopala Krishna Menon; 'Kaarshika billum Prathipaksha Partikalum '; Ernakulam; 1959

127 S Gopal; 'Jawaharlal Nehru A Biography (1956-1964)'; New Delhi; Vol.3 - 1985

128 'The Kerala situation'; All India Congress Committee; New Delhi; 1959

129 Periodicals: (Malayalam) Kerala Kaumudi

130 P K Chaththan; 'Harijanakshemapravarththanangal (Laghulekha)'; 1959

131 Pope Pius XI; 'Encyclical Letter on Atheistic Communism'; Dublin; 1937

132 K C Varki; 'Signor Mussolini'; Mannanam; Kottayam; 1929

133 Father Ildephanos OCD; 'Socialism Bolshevism Communism'; Alwaye; 1938

134 Periodicals: The New York Times

135 E L Karran; 'Facts about Communism'; Hooston; 1935

136 S H League; 'Workers In Soviet Russia 2 Volumes'; Aluva; 1940

137 Thozhilali; 'Kerala Liberation Struggle Souvenir'; Thrissur; 1959

138 J B Kripalani; 'Communists in Kerala- Charges against Government-Centers Right to Intervene'; New Delhi; 1959

139 P. V. Solaman; 'Bill Virudhaprakshopanam ini Engott ? '; Ernakulam; 1957

140 Periodicals: (Malayalam) Samaja Vijzanani

141 'Opposition preparation for violent overthrow of the Government'; Government of Kerala; 1959

142 Harindranatha Kurup; 'Mannath Padmanabhan-Karmayogiyaya kulapathi'; 1997

143 Periodicals: (Malayalam) Malayala Rajyam

144 M K Kumaran; 'R Shankar-Jeevacharitram '; Department Of Public Relations; Thiruvanthapuram; 1953

145 N K Kamalasan; 'Communist Porali Kalyanakrishnan Nair'; Kottayam; 2008

146 Periodicals: Social Scientist

147 Father Augustine Chempilakunnel; 'Legion of Mary'; S.H. League.; Alwai; 1951

148 Dominic Cherian; 'Legion of Mary '; Kanzhirapalli; 1951

149 T V SatyaMoorthy; 'India since independence'; Vol.1

150 'Pathram, Charithram, Pavanan'; Thrishur; 1992

151 F Engels; 'Anti- During'; Moscow; 1969

152 'Kumbhakonangalude kumbhamela'; Democratic Publications; Ernakulam; 1959

153 Sri Peter John Kallada; 'Vidyalaya Prakshobhana Charitram'; Kottayam; Vol.1-1957

154 Periodicals: (Malayalam) Navayuga

155 Kidangoor P N Gopalakrishna Pillai Edittucheytha; 'Mannaththinte Sampoornakrithigal Enna Pusthakththile Mannaththinte dayarikuruppugal'; changanassery; 1977

156 Periodicals: (Malayalam) Keralas Shabdam Weekly

157 Thoppil Baasi; 'Olivile Ormmagalkk Shesham '

158 Harindranatha Kurup; 'NSS Charithram'; Vol.2-1994

159 K Damodaran; 'Vidyabhyasaththinu Nere (Laghu Lekha)'; Ernakulam; 1959

160 'Mannath Padmanabhante Prasangangal'; Changanassery; 1982

161 K M. Chandi; 'Mannavum Vimochanasamaravum,--Mannam, Shathaabhi -shekopahaaram enna Krithigal'; Panthalam; 1960

162 T M Savan Kutti; 'Seethisahib Biography'; Tiruvanathapuram; 1992

163 Periodicals: (Malayalam) Chandrika; 'Kozhikkod.'

164 E M S Namboodiripad & C Unniraja; 'Bhakshyakaaryaththil vivechanamille (Laghulekha) 1950'

165 Taya Zinkin; 'Repoting India'; London; 1962

166 Sunil Guha; 'Indias Food Problem New Delhi'; 1957

167 C Unniraja; 'Kerala A Master Plan - A Study'; Tiruvanantapuram; 1958

168 Jitandra Singh; 'Communist Rule in Kerala'; New Delhi; 1959

169 H Austin; 'Anatomy of the Kerala Coup'; New Delhi; 1959

170 'Kerala Gazette Extra ordinary (The Education Bill)'

171 Kainikkara Padmanabha Pillai; 'The Red Interlude In Kerala'; KPCC; 1959

172 'Vidyabhyasa Billum Vimarshanangalum (LaghuLekha)'; Muvaattupuzha; 1957

173 'A Brief Report of the activities of the Privace School'; Defense Committee and the Kerala Education Action Committee; Kottayam

174 Father Jacob Mannanal; 'Statement of Kerala School Managers Association'; Kottayam

175 'Patapusthakangalude Thaniniram (Malayalam Laghulekha) '; All Kerala Catholic Congress Working Committee; 1958

176 'Mukya Manthrikk Samarppichcha Memorandom (Laghulekha)'; Akhila Kerala Kyatholik Congress; 1958

177 Department of Public Relations; 'Vidyabhyasa Niyamavum Athinte Ethiralikalum'; Government of Kerala

178 'Statement, The Rise Deal Inquiry Commission Report'; Government of Kerala; Thiruvananthapuram; 1959

179 Periodicals: (Malayalam) Kala Kaumudi Weekly

180 Periodicals: (Malayalam) Kaumudi

181 Periodicals: (Malayalam) Prabhata

182 Periodicals: (Malayalam) Sarvajanika

183 C Unniraja; 'Bhakshyaprashnam Deshiyaprashnam (Laghulekha)'; Kottayam; 1958

184 P Raamunni Kurup; 'Athmakatha-Ente Naatinte Katha Enteyum SPCS'; Kottayam; 1955

185 Report of the Administrative reforms Committee; 'Government of Kerala'; Thiruvananthapuram

186 'The agitation in Kerala: Its real nature and reactions of the national press '; Department of Public Relations, Government of Kerala

187 C Achyutha Menon; '28 Masaththe Communist Bharanam Ernakulam';

188 Panthalam P R Madhavan Pillai; 'Kaarshikabandha billinu Bhedagathiyo...? (Laghulekha)'; 1959

189 A K Pothuval; 'Keralththile karshaka Prasthaanam ( Moonnam Pathipp)'; Prabhatham Printing & Publishing; Thiruvananthapuram; 1976

190 V K S Nair; 'Communal Interest Groups in Kerala'; South Asian Politics and Religion; Donald Eugene Smith (ed ) Princeton University Press; 1996

191 Periodicals: The Hindustan Times

192 'Presidents Proposed Amendments to Kerala Bills...(Pamphlet)'; Navakeralam

193 Periodicals: Times of India

194 Periodicals: The Weekly Kerala; Ernakulam

195 S Ramachandran, P Balan; 'Tharalaththa Poraali Jeevacharithram'; Kottayam; 2000

196 Bhaskavanal; 'Minnaaminung Memoirs'; Kaladi; 2002

197 Kuryas Kumapakuli; 'Vimochana Samaram '; Kolikkod; 2010

198 A C Mathew; 'Ormachakrangal Biography'; Kottayam; 1995

199 C K Musad; 'Kelappan the Great Man Biography'; Kottayam; 1982

200 T M Thomas Issac; 'Vimachonasamaraththinte kaanappurangal'; 2008

201 Srikala M S; 'Beyond the News 1957-59'; Thiruvanathapuram; 2010

202 Periodicals: (Malayalam) Malayali

203 Periodicals: (Malayalam) Deshabandhu

204 'The Agitation in Kerala '

205 'Preparedness of Opponents to Overthrow Government Violently: Department of Public Relations'; Government of Kerala; 1959

206 Kuryas Kumapakuli; 'Liberation Struggle'; 2010

207 D R Mankekar; 'The Red Riddle of Kerala'; Bombay; 1965

208 Periodicals: (Malayalam) Morning

209 K Damodaran; 'The Meaning of the Landlord Bill'; Ernakulam; 1958



**ಡಾ. ಪಿ ಎಂ ಸಲಿಂ**

ಮಂಜೇಶ್ವರಂ ಗೋವಿಂದ ಪೈ ಸ್ಮಾರಕ ಸರ್ಕಾರಿ ಕಾಲೇಜಿನ ಇತಿಹಾಸ ವಿಭಾಗದಲ್ಲಿ ಪ್ರಾಧ್ಯಾಪಕರು. ತಳಿಪರಂಬ್ ಸರ್ ಸೈಯದ್ ಕಾಲೇಜು, ಪೇರಾಂಬ್ರ ಸರ್ಕಾರಿ ಕಾಲೇಜು, ಮಾನಂತವಾಡಿ ಸರ್ಕಾರಿ ಕಾಲೇಜು, ಕಾಸರಗೋಡ್ ಸರ್ಕಾರಿ ಕಾಲೇಜು ಮುಂತಾದ ಕಡೆಗಳಲ್ಲಿ ಅಧ್ಯಾಪಕರಾಗಿದ್ದರು.

ಹುಟ್ಟಿದ್ದು, ಕಣ್ಣೂರು ಜಿಲ್ಲೆಯ ಉದಯಗಿರಿಯಲ್ಲಿ. ತಂದೆ, ಪೂಳಿಕ್ಕಾಲಾಯಿಲ್ ಮುಹಮ್ಮದ್ ಕುಂಞ್ ರಾವುತ್ತರ್. ತಾಯಿ, ಆಯಿಷ. ಕಾರ್ತಿಕಪುರಂ ಸರ್ಕಾರಿ ಹೈಸ್ಕೂಲ್, ತಳಿಪರಂಬ್ ಸರ್ ಸೈಯದ್ ಕಾಲೇಜು, ಆಲಪ್ಪುಳ ಬಿ.ಎಡ್.ಸೆಂಟರ್, ಕೋಳಿಕೋಡ್ ವಿಶ್ವವಿದ್ಯಾಲಯ ಇತಿಹಾಸ ವಿಭಾಗ, ಮುಂತಾದ ಕಡೆಗಳಲ್ಲಿ ಶಿಕ್ಷಣ ಪಡೆದಿರುತ್ತಾರೆ. ವಿದ್ಯಾಭ್ಯಾಸ, ಇತಿಹಾಸದ ಅಧ್ಯಯನದ ಸೆಮಿನಾರುಗಳಲ್ಲಿ ಹಲವಾರು ಪ್ರಬಂಧಗಳು ಮಂಡಿಸಿರುತ್ತಾರೆ. ಹಲವಾರು ಸಂಶೋಧನಾ ಅಧ್ಯಯನಗಳನ್ನು ಪ್ರಕಟಿಸಿರುತ್ತಾರೆ.

ಈಗ ಕಾಸರಕೋಡ್ ಜಿಲ್ಲೆಯ ತೃಕರಿಪುರದಲ್ಲಿ ನೆಲೆಸಿರುತ್ತಾರೆ.



**ಕೆ ಪ್ರಭಾಕರನ್**

ಕೆಪಿಟಿಸಿಎಲ್‌ನಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಆಗಿ ನಿವೃತ್ತಿ ಹೊಂದಿದ ಇವರು ಕೇರಳ ಮೂಲದ ಕನ್ನಡಿಗರು. ಸಮುದಾಯ ಕರ್ನಾಟಕ, ಸಾಂಸ್ಕೃತಿಕ ಸಂಘಟನೆಯಲ್ಲಿ ಸುಮಾರು ಮೂವತ್ತು ವರ್ಷಗಳಿಂದಲೂ ತೊಡಗಿಕೊಂಡಿದ್ದು, ಇದೀಗ ಶಿವಮೊಗ್ಗದಲ್ಲಿ ನಿವೃತ್ತಿ ಜೀವನ ನಡೆಸುತ್ತಿದ್ದಾರೆ.

ನಿವೃತ್ತಿಯ ನಂತರ ಅನುವಾದದ ಕೆಲಸಗಳಲ್ಲಿ ತೊಡಗಿಕೊಂಡಿದ್ದು, ಸಮುದಾಯ ಕರ್ನಾಟಕ ಇದಕ್ಕೆ ಸೇರಿದ ಸಾಹಿತ್ಯ ಸಮುದಾಯ, ಶಿವಮೊಗ್ಗ, ಇದರ ಕಾರ್ಯದರ್ಶಿಯಾಗಿದ್ದಾರೆ. ಈಗಾಗಲೇ ಮಲಯಾಳಂನ ಅನೇಕ ಪ್ರಮುಖ ಲೇಖಕರ ಸಾಹಿತ್ಯಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕೆಲವು ಇಂಗ್ಲಿಷ್ ಲೇಖನಗಳನ್ನು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಮತ್ತು ಮಲಯಾಳಂ ಸಾಹಿತ್ಯ ಚರಿತ್ರೆಯ ಕೆಲವು ಭಾಗಗಳನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡ ಸಾಹಿತ್ಯ ಮತ್ತು ಸಮಾಜಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದುಕೊಂಡಿದ್ದಾರೆ.

# ನಮ್ಮ ಪ್ರಕಟಣೆಗಳು

## ವೈಚಾರಿಕ

| | | | |
|---|---|---|---|
| ಚಾರ್ವಾಕನಿಂದ ಮಾರ್ಕ್ಸ್‌ವರೆಗೆ | ಪ್ರಭಾಕರ್ ಸಂಝಗಿರಿ ಅನು:ಚಂದ್ರಕಾಂತ ಪೋಕಳೆ | 2009 | 70 |
| ಗಾಂಧಿ-ನೆಹರು ಬಳುವಳಿ | ಇಎಂಎಸ್ ನಂಬೂದಿರಿಪಾಡ್ | 2010 | 20 |
| ಬಯಲ ಬೆಳಕು - ವೈಚಾರಿಕ ಲೇಖನಗಳು | ಡಾ. ಬಸವರಾಜ ಸಬರದ | 2020 | 300 |
| ಕನ್ನಡ ಪ್ರಜ್ಞೆಯ ಸುತ್ತಮುತ್ತ : ನಾಡು-ನುಡಿ-ಚಿಂತನೆ | ಸಂ: ಡಾ.ಗೀತಾ ಡಿ.ಸಿ., ನಾಗರೇಖಾ ಗಾಂವ್‌ಕರ್ | 2021 | 400 |
| ಮಹಾಭಾರತ : ಭೂಮಕಾವ್ಯ ಮತ್ತು ಭಾರತ ರಾಷ್ಟ್ರ | ಜಿ.ಎನ್.ದೇವಿ ಅನು:ಎಂ.ಜಿ. ಹೆಗಡೆ | 2022 | 130 |

## ವ್ಯಕ್ತಿ ವಿಚಾರ

| | | | |
|---|---|---|---|
| ವಿಮೋಚನೆಯ ಸಮರದಲ್ಲಿ - ಮೇಜರ್ ಜಯಪಾಲ್ ಸಿಂಗ್ ನೆನಪುಗಳು | ಅನು: ವಿಶ್ವ ಕುಂದಾಪುರ | 2009 | 80 |
| ಡಾ. ಬಿ. ಆರ್. ಅಂಬೇಡ್ಕರ್ ಜೀವನ ಮತ್ತು ಹೋರಾಟ ಒಂದು ಅಧ್ಯಯನ | ಪ್ರಭಾಕರ್ ಸಂಝಗಿರಿ ಅನು:ಸಬಿತಾ ಶರ್ಮ | 2009 | 15 |
| ಅಪ್ರತಿಮ ಹೋರಾಟಗಾರ್ತಿ ಗೋದಾವರಿ ಪರುಳೇಕರ್ | ಡಾ.ಅಶೋಕ ಧವಳೆ ಅನು: ಕೃಷ್ಣಪ್ಪ ಕೊಂಚಾಡಿ | 2009 | 15 |
| ಒಬ್ಬ ಭಾರತೀಯ ಕಮ್ಯೂನಿಸ್ಟನ ನೆನಪುಗಳು | ಇಎಂಎಸ್ ನಂಬೂದಿರಿಪಾಡ್, ಅನು:ಬಿ.ಮಾಧವ | 2010 | 150 |
| ಇಎಂಎಸ್ - ದಟ್ಟದರಿದ್ರರ ದತ್ತುಮಿತ್ರ | ವಿ.ಜೆ.ಕೆ.ನಾಯರ್ | 2010 | 20 |
| ಅಮರ ಕ್ರಾಂತಿಕಾರಿ ಭಗತ್‌ಸಿಂಗ್ | ಡಾ.ಅಶೋಕ ಧವಳೆ ಅನು: ಕೃಷ್ಣಪ್ಪ ಕೊಂಚಾಡಿ | 2010 | 20 |
| ಡಾ. ಬಿ.ಆರ್.ಅಂಬೇಡ್ಕರ್ - ಲೈಫ್ ಅಂಡ್ ವರ್ಕ್(ಆಂಗ್ಲ) | ಪ್ರಭಾಕರ್ ಸಂಝಗಿರಿ | 2012 | 30 |
| ಶಹೀದ್ ಭಗತ್ ಸಿಂಗ್ - ಎನ್ ಇಮ್ಮೋರ್ಟಲ್ ರೆವಲ್ಯೂಷನರಿ(ಆಂಗ್ಲ) | ಡಾ.ಅಶೋಕ ಧವಳೆ | 2012 | 40 |
| ದಂತಕತೆಯಾದ ಅಮೀರ್ ಹೈದರ್ ಖಾನ್ | ಮಹಮ್ಮದ್ ಅಮೀನ್ ಅನು: ಟಿ. ಯಶವಂತ | 2014 | 140 |
| ನನ್ನ ಜೀವನ ಕಥನದ ನೆನಪಿನಂಗಳದಲ್ಲಿ | ಕೆ.ಆರ್.ಶ್ರೀಯಾನ್ | 2017 | 200 |
| ಕ್ಯಾಸ್ಟ್ರೋ ಕತೆ | ಕೆ.ಪ್ರಕಾಶ್ | 2017 | 225 |
| ಸಂವಿಧಾನದ ಕಾಲಾಳು ತೀಸ್ತ ಸೆತಲ್ವಾಡ್ | ತೀಸ್ತ ಸೆತಲ್ವಾಡ್ ಅನು:ಸತ್ಯಾ | 2018 | |
| ಫ್ಯಾಸಿಸಂ, ಹಿಂದುತ್ವ ಮತ್ತು ಭಾರತದ ಪ್ರಜಾಪ್ರಭುತ್ವ | ಬಿ. ಶ್ರೀಪಾದ ಭಟ್ | 2019 | 35 |
| ಭಾರತದ ಭಾಷಿಕ ಸನ್ನಿವೇಶ - ಅಂಬೇಡ್ಕರ್ ಭಾಷಿಕ ಚಿಂತನೆಗಳು | ಮೇಟಿ ಮಲ್ಲಿಕಾರ್ಜುನ | 2019 | 120 |

| | | | |
|---|---|---|---|
| ಗೌರೀಶ್ ಕಾಯ್ಕಿಣಿ – ವಿಚಾರ ಸಾಹಿತ್ಯ | ಎಂ. ಜಿ. ಹೆಗ್ಡೆ | 2019 | 80 |
| ಹಲ್ಲಾ ಬೋಲ್ – ಸಫ್ದರ್ ಹಾಶ್ಮಿ ಸಾವು ಮತ್ತು ಬದುಕು | ಸುಧನ್ವ ದೇಶಪಾಂಡೆ ಅನು:ಎಂ.ಜಿ.ವೆಂಕಟೇಶ್ | 2020 | 200 |
| ಚೆ – ಸಮಾಜವಾದ ಮತ್ತು ಅಂತರ್ರಾಷ್ಟ್ರೀಯತೆ | ಅರ್ನೆಷ್ಟೋ ಚೆ ಗೆವಾರ, ಮರಿಯಾ ಡೆಲ್ ಕಾರ್ಮೆನ್ ಏರಿಯಟ್ ಗಾರ್ಸಿಯಾ, ಐಜಾಜ್ ಅಹ್ಮದ್ ಮತ್ತು ವಿಜಯ ಪ್ರಶಾದ್ ಅನು: ಟಿ.ಎಲ್. ಕೃಷ್ಣೇಗೌಡ, ಎಸ್. ಕೆ.ಗೀತಾ, ಸಿ.ಆರ್.ಶಾನಭಾಗ, ವೇದರಾಜ ಎನ್.ಕೆ. | 2020 | 70 |

## ಹೋರಾಟಗಳು

| | | | |
|---|---|---|---|
| ವೀರ ತೆಲಂಗಾಣ | ಪಿ.ಸುಂದರಯ್ಯ ಅನು:ಕೆ. ಎಸ್.ವಿಮಲ | 2012 | 125 |
| ಭಾರತದ ರೈತ ಚಳುವಳಿಗಳು 1920-1950 | ಪ್ರೊ.ಡಿ.ಎನ್.ಧನಗೆರೆ ಅನು:ರಾಮಚಂದ್ರ ಉಡುಪ, ಅನಂತ ಕೃಷ್ಣ ಹೆಬ್ಬಾರ, ಪ್ರದೀಪ ಶೆಟ್ಟಿ | 2012 | 230 |
| ಸ್ವಾತಂತ್ರ್ಯ ಸಮರದಲ್ಲಿ ವಿದ್ಯಾರ್ಥಿಗಳ ಪಾತ್ರ | ವಿಶ್ವ ಕುಂದಾಪುರ | 2014 | 125 |
| ತಾಷ್ಕೆಂಟನಿಂದ ಕಾನ್ಪುರದವರೆಗೆ | ಕೃಷ್ಣಪ್ಪ ಕೊಂಚಾಡಿ | 2015 | 20 |
| ಚಿತ್ತಗಾಂಗ್ ಶಸ್ತ್ರಾಗಾರ ಧಾಳಿ | ಸುಭೋದ್ ರಾಯ ಅನು:ವಿಶ್ವ ಕುಂದಾಪುರ | 2017 | 120 |
| ಕರ್ನಾಟಕದ ರೈತ ಚಳುವಳಿ | ಕೆ.ಆರ್.ಶ್ರೀಯಾನ್ | 2019 | 140 |
| ಮಾನವ ಎಚ್ಚೆತ್ತಾಗ | ಗೋದಾವರಿ ಪರುಳೇಕರ್ ಅನು: ಸರಸ್ವತಿ ರಿಸಬುಡ್ | 2019 | 150 |
| ಮಹಾಡ್ ಕೆರೆ ಸತ್ಯಾಗ್ರಹ – ದಲಿತ ಚಳುವಳಿಗಳ ಒರೆಗಲ್ಲು | ರಾಮಚಂದ್ರ ಬಾಬಾಜಿ ಮೋರೆ, ಆನಂದ ತೇಲ್ತುಂಬ್ಡೆ ಅನು: ಪ್ರೊ.ಅಬ್ದುಲ್ ರಹಮಾನ್ ಪಾಷಾ | 2020 | 180 |
| ಮಹಾಡ್ ದಲಿತ ಬಂಡಾಯ | ಆನಂದ ತೇಲ್ತುಂಬ್ಡೆ ಅನು: ಪ್ರೊ.ಅಬ್ದುಲ್ ರಹಮಾನ್ ಪಾಷಾ | 2020 | 200 |
| ಕದನ ಕಣ | ಹೆಚ್ ಆರ್ ನವೀನ್ ಕುಮಾರ್ | 2021 | 120 |
| ಸಾಮ್ರಾಜ್ಯಶಾಹಿಯ ಮೇಲೆ ರೈತರ ವಿಜಯ | ಪ್ರೊ.ಪ್ರಭಾತ್ ಪಟ್ನಾಯಕ್ ಅನು:ಕೆ.ಎಂ.ನಾಗರಾಜ್ | 2021 | 75 |
| ಸಮಬಾಳಿನ ಸಂಘರ್ಷ – ಕರ್ನಾಟಕದಲ್ಲಿ ಕಮ್ಯುನಿಷ್ಟ್ ಚಳುವಳಿಯ ಒಂದು ನೋಟ | ಡಾ.ಪ್ರಕಾಶ್ ಕೆ | 2021 | 320 |

| ರಾಜಕೀಯ | | | |
|---|---|---|---|
| ಭಯೋತ್ಪಾದನೆ-ಸಿ.ಐ.ಎ. ಜಿಹಾದಿ ಹಿಂದುತ್ವ ಇತ್ಯಾದಿ | ಪ್ರಕಾಶ್ ಕೆ. | 2009 | 20 |
| ಏನಿದು ಹಿಂದೂ ರಾಷ್ಟ್ರ | ಸೀತಾರಾಂ ಯೆಚೂರಿ | 2009, 2019 | 50 |
| ಮಾವೋವಾದ | ಸಂ:ಪ್ರಸೇನ್ ಜಿತ್ ಬೋಸ್ ಅನು:ವಿಶ್ವ ಕುಂದಾಪುರ | 2010 | 100 |
| ಸಮಕಾಲೀನ ಭಾರತ ಮಾರ್ಕ್ಸ್‌ವಾದಿ ಕಣ್ಣೋಟ - ಭಾಗ 1 | ವಿ.ಕೆ.ರಾಮಚಂದ್ರನ್, ವೆಂಕಟೇಶ್ ಅತ್ರೇಯ, ಇರ್ಫಾನ್ ಹಬೀಬ್, ಅಮರ್ ಫರೂಕಿ ಅನು:ವಿಶ್ವ ಕುಂದಾಪುರ, ಜಿ.ಎಸ್.ಮಣಿ | 2012 | 50 |
| ಐಡೆಂಟಿಟಿ ರಾಜಕೀಯ | ಪ್ರಕಾಶ್ ಕಾರಟ್ ಅನು:ವೇದರಾಜ ಎನ್. ಕೆ.,ಮಹಾಬಲೇಶ್ವರ ರಾವ್ | 2012 | 70 |
| ಢಬ್ಲ್ಯು ಎಫ್ ಟಿ ಒ 70 ಇಯರ್ಸ್ | | 2012 | 70 |
| ಸಮಕಾಲೀನ ಭಾರತ ಮಾರ್ಕ್ಸ್ ವಾದಿ ಕಣ್ಣೋಟ - 2 | ಪ್ರಭಾತ್ ಪಟ್ನಾಯಕ್, ಸಿ.ಪಿ.ಚಂದ್ರಶೇಖರ್, ಪ್ರಬೀರ್ ಪುರಕಾಯಸ್ಥ ಅನು:ಜೈಕುಮಾರ್, ಕೆ.ಎಂ.ನಾಗರಾಜ್, ಡಿ.ಅಂತೋಣಿಸ್ವಾಮಿ | 2013 | 50 |
| ಆದರ್ಶ ಕಮ್ಯುನಿಷ್ಟನಾಗುವ ಬಗೆ | ಲಿವು ಶಾವೊಕಿ ಅನು: ಆರ್. ಕೆ.ಹುಡಗಿ | 2014 | 65 |
| ಕಾರ್ಮಿಕ ವರ್ಗದ ಪಕ್ಷ | ವಿ.ಜೆ.ಕೆ. ನಾಯರ್ | 2014 | 55 |
| ಈ ಬಾರಿ ಕೋಮುದಳ್ಳುರಿ | ಸೀತಾರಾಮ್ ಯೆಚೂರಿ | 2014 | 85 |
| ಬಹುಸಂಖ್ಯಾತವಾದ ಚಿಂತಕರು ಕಂಡಂತೆ | ಜಿ. ಶ್ರೀಪಾದ | 2015 | 65 |
| ಸಂಘ ಪರಿವಾರದ ಇಟಾಲಿಯನ್ ಕನೆಕ್ಷನ್ | ಎ ಜಿ ನೂರಾಣಿ, ಮಾರ್ಜಿಯಾ ಕಾಸೋಲರಿ ಅನು:ಟಿ ಯಶವಂತ | 2015 | 80 |
| ಎಂದಿನವರೆಗೆ ಸಮಾನತೆಯ ನಿರಾಕರಣೆ | ಡಾ। ಬಿ.ಆರ್.ಅಂಬೇಡ್ಕರ್ ಅನು: ಕೆ.ಪಿ.ಶಮೀಮಾ | 2015 | 20 |
| ಜೆಎನ್ ಯು ಮೇಲೆ ಧಾಳಿ -ಭಾರತದ ಮೇಲೆ ಧಾಳಿ | ಸಂಪಾದಕರು : ಕೆ. ನೀಲಾ | 2016 | 70 |
| ಸಮತೆಯ ನಾಡಿನ ಉದಯಕ್ಕಾಗಿ | ಹರ್ಕಿಶನ್‌ಸಿಂಗ್ ಸುರ್ಜಿತ್ ಅನು: ವಿಶ್ವ ಕುಂದಾಪುರ | 2016 | 175 |
| ನರಕದ ಗರ್ಭಗುಡಿಯೊಳಗೆ | ಸುಧೀಶ್ ಮಿನ್ನಿ ಅನು: ಪಿ.ಕೆ.ಪಿ. ಕೃಷ್ಣನ್ | 2016 | 120 |
| ಆರ್ ಎಸ್ ಎಸ್ ಅಂತರಂಗ | ಎ ಕೆ ಸುಬ್ಬಯ್ಯ | 2017 | 40 |

| | | | |
|---|---|---|---|
| ರಾಷ್ಟ್ರೀಯವಾದ ಹಿಂದುತ್ವ ಮತ್ತು ಪ್ರಜಾಪ್ರಭುತ್ವ | ಪ್ರಭಾತ್ ಪಟ್ನಾಯಕ್ ಅನು: ಕೆ.ಎಂ.ನಾಗರಾಜ್, ವೇದರಾಜ ಎನ್.ಕೆ | 2017 | 30 |
| ಇಂಡಿಯನ್ ಮುಸ್ಲಿಂ ಸಾಧಕರ ಹಾದಿ | ಸುನೈಸ್ ವಿಠ್ಲ.ಚೇತನಾ ತೀರ್ಥಹಳ್ಳಿ.ನವೀನಕುಮಾರ ಹಾಸನ.ಇರ್ಷಾದ್ ಉಪ್ಪಿನಂಗಡಿ | 2017 | 80 |
| ಭಾರತದ ಮುಸ್ಲಿಮರು-ಬೆಳಕು ಬೀರುವ ಭಾಷಣಗಳು | ಸುನೈಸ್ ವಿಠ್ಲ.ಚೇತನಾ ತೀರ್ಥಹಳ್ಳಿ.ನವೀನಕುಮಾರ ಹಾಸನ.ಇರ್ಷಾದ್ ಉಪ್ಪಿನಂಗಡಿ | 2019 | 90 |
| ಜೆಎನ್‌ಯು ಅಂಗಳದಲ್ಲಿ ರಾಷ್ಟ್ರೀಯವಾದದ ಕ್ಲಾಸುಗಳು | ಸಂಪಾದಕ ಮಂಡಳಿ : ಜಾನಕಿ ನಾಯರ್, ರೋಹಿತ್ ಆಜಾದ್, ಮೊಹಿಂದರ್ ಸಿಂಗ್, ಮಲ್ಲಾರಿಕಾ ಸಿನ್ಹಾ ರಾಯ್ ಅನು: ಬಿ. ಶ್ರೀಪಾದ್ | 2020 | 180 |
| ಕಮ್ಯುನಿಸಂ ಅಂದರೇನು ಮತ್ತು ಇತರ ಪ್ರಶ್ನೆಗಳು | ಫ್ರೆಡ್ರಿಕ್ ಏಂಗೆಲ್ಸ್ ಇಂಗ್ಲಿಷ್ ಅನುವಾದ: ಪಾಲ್ ಸ್ವೀಝಿ ಕನ್ನಡಕ್ಕೆ : ಟಿ. ಸುರೇಂದ್ರ ರಾವ್ | 2021 | 40 |
| ಪ್ಯಾರಿಸ್ ಕಮ್ಯೂನ್ 150 – ವಿಜಯಪ್ರಶಾದ್ ಅವರ ಪ್ರಸ್ತಾವನೆಯೊಂದಿಗೆ | ಕಾರ್ಲ್ ಮಾರ್ಕ್ಸ್, ಐ ವಿ ಲೆನಿನ್, ಬರ್ಟೋಲ್ಟ್ ಬ್ರೆಕ್ಟ್ ಅನು: ವಸಂತರಾಜ ಎನ್.ಕೆ, ವಿಶ್ವ ಕುಂದಾಪುರ, ಬಿ.ಪೀರ್ ಬಾಷಾ, ಕೆ ನೀಲಾ | 2021 | 100 |
| ನವ ಉದಾರವಾದಿ ನೀತಿಗಳು ಮತ್ತು ದುಡಿಯುವ ವರ್ಗಗಳು | ಡಾ.ಕೆ ಹೇಮಾವತಿ, ಪ್ರೊ.ವಿ.ಕೆ.ರಾಮಚಂದ್ರ ಅನು: ಸಿ.ಆರ್.ಶಾನಭಾಗ, ಟಿ.ಯಶವಂತ | 2021 | 70 |
| ಅಖಿಲ ಭಾರತ ಕಿಸಾನ್ ಸಭಾ – ಒಂದು ಸಂಕ್ಷಿಪ್ತ ಚರಿತ್ರೆ | ಹನನ್ ಮುಲ್ಲಾ ಅನು:ವಾಸುದೇವ ಉಚ್ಚಿಲ್ | 2021 | 160 |
| | **ಅರ್ಥಶಾಸ್ತ್ರ** | | |
| ಕುಣಿವ ಕಾಂಚಾಣದ ಬೆನ್ನು ಹತ್ತಿ | ಅಮಾನುಲ್ಲಾ ಖಾನ್ ಅನು:ರಾಘವೇಂದ್ರ ಆಯಿ, ಬಿ.ಎನ್.ಪೂಜಾರಿ | 2010 | 50 |
| ನೋಟು ರದ್ದತಿ ಮತ್ತು ಜಿಎಸ್‌ಟಿ | ಪ್ರಭಾತ್ ಪಟ್ನಾಯಕ್ ಅನು: ಕೆ.ಎಂ.ನಾಗರಾಜ್, ವೇದರಾಜ ಎನ್.ಕೆ | 2017 | 50 |
| ಬಂಡವಾಳ ಸಂಪುಟ – 1 ಸಾದಾ ಪ್ರತಿ | ಕಾರ್ಲ್ ಮಾರ್ಕ್ಸ್ ಅನುವಾದ ಸಂಪಾದನೆ : ವಸಂತರಾಜ ಎನ್.ಕೆ | 2019 | 1200 |

| | | | |
|---|---|---|---|
| ಬಂಡವಾಳ ಸಂಪುಟ - 1 ಕ್ಯಾಲಿಕೋ ಪ್ರತಿ | ಕಾರ್ಲ್ ಮಾರ್ಕ್ಸ್ ಅನುವಾದ ಸಂಪಾದನೆ : ವಸಂತರಾಜ ಎನ್.ಕೆ | 2019 | 1250 |
| ನವ ಉದಾರವಾದಿ ನೀತಿಗಳು ಮತ್ತು ದುಡಿಯುವ ವರ್ಗಗಳು | ಡಾ.ಕೆ ಹೇಮಾವತಿ, ಪ್ರೊ.ವಿ.ಕೆ.ರಾಮಚಂದ್ರ ಅನು: ಸಿ.ಆರ್.ಶಾನಬಾಗ, ಟಿ.ಯಶವಂತ | 2021 | 70 |
| | **ಶಿಕ್ಷಣ** | | |
| ಎಲ್ಲರಿಗೂ ಶಿಕ್ಷಣದ ಕನಸು | ಪ್ರೊ. ಅನಿಲ್ ಸದ್ಗೋಪಾಲ್, ಪ್ರೊ. ಅಮಿಯ ಕುಮಾರ್ ಬಾಗ್ಚಿ, ಡಾ. ಮಹಾಬಲೇಶ್ವರ ರಾವ್, ಸಂ.: ಡಾ. ಮಹಾಬಲೇಶ್ವರ ರಾವ್ | 2015 | 85 |
| ಉನ್ನತ ಶಿಕ್ಷಣದ ಮೇಲೆ ಗದಾಪ್ರಹಾರ | ಪ್ರಭಾತ್ ಪಟ್ನಾಯಕ್ | 2018 | |
| ಅಸಾಲ್ಟ್ ಆನ್ ಹೈಯರ್ ಎಜುಕೇಶನ್ | ಪ್ರಭಾತ್ ಪಟ್ನಾಯಕ್ | 2018 | |
| ಕ್ಯಾಂಪಸ್ ಕಥನಗಳು - ಹಲ್ಲೆಗಳನ್ನು ಮೆಟ್ಟಿನಿಂತ ಪ್ರತಿರೋಧಗಳು | ಅನು:ಸತ್ಯಾ ಎಸ್, ನಟರಾಜು | 2019 | 80 |
| | **ಸಾಮಾಜಿಕ** | | |
| ಜನಸಂಸ್ಕೃತಿ (ಸಮುದಾಯ) | ಇಎಂಎಸ್ ನಮೂದಿರಿಪ್ಪಾಡ್ ಅನು: ಡಾ.ಭಾಸ್ಕರ ಮಯ್ಯ ಮತ್ತು ವಾಸುದೇವ ಉಚ್ಚಿಲ್ | 2011 | 5 |
| ಒಡಲಾಳದ ಕಥನಗಳು | ಮಹಾಂತೇಶ್ ಕೆ | 2018 | |
| ನಿನ್ನ ದಾಖಲೆ ಯಾವಾಗ ನೀಡುತ್ತೀ - ಎನ್‌ಆರ್‌ಸಿ ಗೆ ಕಾವ್ಯ ಪ್ರತಿರೋಧ | ಸಂ. ಯಮುನಾ ಗಾಂವ್ಕರ | 2019 | 50 |
| ಹೊನ್ನಾರು ಒಕ್ಕಲು - ರೈತ ಆಂದೋಲನದ ಕವಿತೆಗಳು | ಸಂ. ಡಾ.ಕೆ.ಷರೀಫಾ, ಯಮುನಾ ಗಾಂವ್ಕರ | 2021 | 125 |
| ಬಯಲಿಗೂ ಬಾಗಿಲು | ಡಾ.ಕೆ.ಷರೀಫಾ | 2021 | 150 |
| ನೇತ್ರಾವತಿಯಲ್ಲಿ ನೆತ್ತರು | ನವೀನ್ ಸೂರಿಂಜೆ | 2022 | 185 |
| | **ಆರೋಗ್ಯ** | | |
| ವೈದ್ಯೆಯೊಬ್ಬರ ನೆನಪಿನಂಗಳದಿಂದ | ಡಾ. ಕೆ. ಸುಶೀಲಾ | 2019 | 150 |
| | **ಮಹಿಳೆ** | | |
| ಅಡ್ಡಗೋಡೆಗಳನ್ನೊಡೆದು | ಪಾರ್ವತಿ ಮೆನನ್ ಅನು:ಡಾ. ಎನ್. ಗಾಯತ್ರಿ | 2011 | 90 |
| | **ವಿದೇಶ** | | |
| ಚೈತನ್ಯದ ಹಾದಿಯಲ್ಲಿ ದಿಗ್ಬಂಧನದ ಮುಳ್ಳು | ಅನು:ಎಲ್.ಸಿ.ನಾಗರಾಜ್ | 2009 | 15 |

| | | | |
|---|---|---|---|
| ಕ್ಯಾಸ್ಟ್ರೊ-ಚೆ ಕ್ಯೂಬಾ | ವಸಂತರಾಜ ಎನ್.ಕೆ., ವೇದರಾಜ ಎನ್.ಕೆ | 2010 | 80 |
| ರಷ್ಯಾದ ಕ್ರಾಂತಿ – ವಾಸ್ತವವಾಗಿ ನಡೆದದ್ದೇನು | ಅನು: ಮುರಳ | 2014 | 110 |
| ವಿಜ್ಞಾನ | | | |
| ಸೃಷ್ಟಿಯೋ ವಿಕಾಸವಾದವೋ | ಜಿ.ವಿ.ಶ್ರೀರಾಮರೆಡ್ಡಿ | 2010 | 30 |
| ಮರು ಓದು ಮಾಲಿಕೆ | | | |
| ಗೆಲ್ಲಲೊಂದು ಜಗತ್ತೇ ಇದೆ | ಮಾರ್ಕ್ಸ್ ಮತ್ತು ಎಂಗೆಲ್ಸ್ ಪ್ರವೇಶಿಕೆ ಮತ್ತು ಅನುವಾದ: ವೇದರಾಜ ಎನ್.ಕೆ | 2013 | 40 |
| ಸಾಮ್ರಾಜ್ಯಶಾಹಿ – ಬಂಡವಾಳಶಾಹಿಯ ಅತ್ಯುನ್ನತ ಘಟ್ಟ | ವಿ.ಐ. ಲೆನಿನ್ ಪ್ರವೇಶಿಕೆ ಮತ್ತು ಅನುವಾದ: ವಸಂತರಾಜ ಎನ್. ಕೆ | 2013 | 100 |
| ಮಾರ್ಕ್ಸ್ ವಾದ ಎಂದರೇನು | ವಿ.ಐ. ಲೆನಿನ್ ಪ್ರವೇಶಿಕೆ: ವಸಂತರಾಜ ಎನ್.ಕೆ. ಮತ್ತು ಅನುವಾದ:ಎ.ಎಸ್.ಆಚಾರ್ಯ | 2013 | 50 |
| ಕೂಲಿ ಕೆಲಸ ಮತ್ತು ಬಂಡವಾಳ | ಕಾರ್ಲ್ ಮಾರ್ಕ್ಸ್ ಪ್ರವೇಶಿಕೆ ಮತ್ತು ಅನುವಾದ: ಸಿ.ಆರ್. ಶಾನಭಾಗ | 2013 | 40 |
| ಪ್ರಭುತ್ವ ಮತ್ತು ಕ್ರಾಂತಿ | ವಿ.ಐ. ಲೆನಿನ್ ಪ್ರವೇಶಿಕೆ ಮತ್ತು ಅನುವಾದ: ವಸಂತರಾಜ ಎನ್. ಕೆ. | 2013 | 125 |
| ಶೋಷಣೆಯ ಮೂಲ | ಕಾರ್ಲ್ ಮಾರ್ಕ್ಸ್ ಪ್ರವೇಶಿಕೆ ಮತ್ತು ಅನುವಾದ: ಸಿ.ಆರ್.ಶಾನಭಾಗ | 2013 | 80 |
| ಸಮಾಜವಾದ – ಕಾಲ್ಪನಿಕ ಮತ್ತು ವೈಜ್ಞಾನಿಕ | ಫ್ರೆಡರಿಕ್ ಎಂಗೆಲ್ಸ್ ಪ್ರವೇಶಿಕೆ:ಸಿ. ಆರ್.ಶಾನಭಾಗ ಅನುವಾದ: ಎ.ಎಸ್.ಆಚಾರ್ಯ | 2014 | 95 |
| ಕಾರ್ಮಿಕ ವರ್ಗದ ಲೋಕದೃಷ್ಟಿ | ಜೆ.ವಿ.ಸ್ಟಾಲಿನ್ ಪ್ರವೇಶಿಕೆ: ಎಚ್.ಎಸ್.ಜಯಕುಮಾರ್ ಮತ್ತು ವಸಂತರಾಜ ಎನ್.ಕೆ. ಅನುವಾದ: ಕೆ.ಪ್ರಕಾಶ | 2014 | 45 |
| ಕ್ರಾಂತಿಕಾರಿ ನವರತ್ನಮಾಲೆ | | | |
| ಪಿ ಸುಂದರಯ್ಯ | ಸಂಗ್ರಹಾನುವಾದ: ಕೆ.ಎಸ್.ವಿಮಲ | 2013 | 30 |
| ಹರಿಕಿಶನ್ ಸಿಂಗ್ ಸುರ್ಜಿತ್ | ಸಂಗ್ರಹಾನುವಾದ: ಲಿಂಗರಾಜು | 2013 | 30 |
| ಪಿ ರಾಮಮೂರ್ತಿ | ಎನ್. ರಾಮಕೃಷ್ಣನ್ ಅನು: ಕೆ.ಮಹಾಂತೇಶ | 2014 | 50 |

## ಅಕ್ಟೋಬರ್ ಕ್ರಾಂತಿ 100

| | | | |
|---|---|---|---|
| ಅಕ್ಟೋಬರ್ ಕ್ರಾಂತಿಯ ಚಿರಂತನ ಮಹತ್ವ | ಸೀತಾರಾಂ ಯೆಚೂರಿ, ಪ್ರಕಾಶ್ ಕಾರಟ್, ಪ್ರಭಾತ್ ಪಟ್ನಾಯಕ್, ಬೃಂದಾ ಕಾರಟ್, ಎಂ.ಎ.ಬೇಬಿ, ಪ್ರಬೀರ್ ಪುರಕಾಯಸ್ಥ | 2017 | 35 |
| ಅಕ್ಟೋಬರ್ ಕ್ರಾಂತಿ ಮನುಕುಲಕ್ಕೆ ಹೊಸ ಹಾದಿ | ಪ್ರವೇಶಿಕೆ ಮತ್ತು ಅನುವಾದ: ಎಂ.ಜಿ. ವೆಂಕಟೇಶ್ ಮತ್ತು ವೇದರಾಜ ಎನ್.ಕೆ. | 2017 | 30 |
| ನೆನೆ ನೆನೆ ಆ ದಿನಗಳ | | 2017 | 30 |
| 10 ಸೋವಿಯೆತ್ ಅದ್ಭುತಗಳು | | 2017 | 70 |

## ಬೆಳಕಿನ ಬೆಳೆ

| | | | |
|---|---|---|---|
| ಜಿ.ಎನ್.ದೇವಿ ಅವರ ಆಯ್ದ ಬರಹಗಳು | ಅನು: ಡಾ.ಎಂ.ಜಿ.ಹೆಗಡೆ | 2021 | 220 |

## ನಮ್ಮ ಇ–ಪುಸ್ತಕಗಳು

| | | | |
|---|---|---|---|
| ಸಫ್ದರ್ ಹಾಶ್ಮಿ – ಸಾವು ಮತ್ತು ಬದುಕು | ಸುಧನ್ವ ದೇಶಪಾಂಡೆ ಅನುವಾದ: ಎಂ.ಜಿ. ವೆಂಕಟೇಶ್ | 2020 | *ರೂ.150 |
| ಮಹಾಡ್ ಕೆರೆ ಸತ್ಯಾಗ್ರಹ – ದಲಿತ ಚಳುವಳಿಗಳ ಒರೆಗಲ್ಲು | ಆನಂದ ತೇಲ್ತುಂಬ್ಡೆ ಅನುವಾದ: ಅಬ್ದುಲ ರೆಹಮನ್ ಪಾಷಾ | 2020 | *ರೂ.135 |
| ಮಹಾಡ್ – ಮೊದಲ ದಲಿತ ಬಂಡಾಯ | ಆನಂದ ತೇಲ್ತುಂಬ್ಡೆ ಅನುವಾದ: ಅಬ್ದುಲ ರೆಹಮನ್ ಪಾಷಾ | 2020 | *ರೂ.150 |
| ಪ್ಯಾರಿಸ್ ಕಮ್ಯೂನ್ 150 | ಕಾರ್ಲ್ ಮಾರ್ಕ್ಸ್, ವಿ.ಐ.ಲೆನಿನ್, ಬೆರ್ಟೋಲ್ಟ್ ಬ್ರೆಕ್ಟ್, ಯುಜಿನ್ ಪೊಟಿಯೆರ್, ತಿಂಗ್ಸ್ ಚಾಕ್ ಅನುವಾದ : ವಸಂತರಾಜ ಎನ್.ಕೆ, ವಿಶ್ವ ಕುಂದಾಪುರ, ಬಿ ಪೀರ್ ಬಾಷಾ, ಕೆ ನೀಲಾ | 2021 | *ರೂ.70 |

* ಬೆಲೆ ಬದಲಾಗುತ್ತಿರುತ್ತದೆ

